## ದೊಡ್ಡರಂಗೇಗೌಡರ ಜೀವನ ವಿವರಗಳು

ಜನನ : ಕುರುಬರಹಳ್ಳಿ, ಮಧುಗಿರಿ (ತಾ)
ತುಮಕೂರು (ಜಿ)

ತಂದೆ ತಾಯಿ : ಶ್ರೀ ಕೆ. ರಂಗೇಗೌಡ
ಶ್ರೀಮತಿ ಅಕ್ಕಮ್ಮ

ಪದವಿ : ಎಂ. ಎ. 1972 (ಬೆಂ.ವಿ.ವಿ.)

ವೃತ್ತಿ : ಕನ್ನಡ ಪ್ರವಾಚಕರು
ಎಸ್. ಎಲ್. ಎನ್. ಕಾಲೇಜು
ಬೆಂಗಳೂರು

### ಪ್ರಶಸ್ತಿ

1972 - **'ಕಣ್ಣು ನಾಲಗೆ ಕಡಲು'** ಕಾವ್ಯಕೃತಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ

1982 - **'ಆಲೆಮನೆ'** ಚಿತ್ರದ ಹಾಡಿಗಾಗಿ ಮತ್ತು
1991 - **'ಗಣೇಶನ ಮದುವೆ'** ಚಿತ್ರದ ಹಾಡಿಗಾಗಿ ಕರ್ನಾಟಕ ರಾಜ್ಯ ಸರ್ಕಾರದ 'ಅತ್ಯುತ್ತಮ ಗೀತರಚನಕಾರ' ಪ್ರಶಸ್ತಿಗಳು

1991 - **'ಪ್ರೀತಿ ಪ್ರಗಾಥ'** ಕೃತಿಗೆ ರತ್ನಾಕರವರ್ಣಿ ಮುದ್ದಣ ಕಾವ್ಯ ಪ್ರಶಸ್ತಿ (ಕ.ಸಾ.ಪ)

1992/93 **'ಅಮೇರಿಕನ್ ಬಯಾಗ್ರಫಿಕಲ್ ಸೆಂಟರ್'** **'ಮೋಸ್ಟ್ ಅಡ್ಮೆರ್ಡ್ ಮೆನ್ ಆಫ್ ಇಯರ್'** ನಲ್ಲಿ ಉಲ್ಲೇಖ

1994 - ಎ.ಬಿ.ಐ. ನಾರ್ತ್ ಕರೋಲಿನಿಂದ **'ಮೆನ್ ಆಫ್ ಅಚೀವ್ ಮೆಂಟ್'** ದಾಖಲೆ ಪತ್ರ

ಶ್ರೀಃ

ಕವಿ ದೊಡ್ಡರಂಗೇಗೌಡರು ಐವತ್ತು ವಸಂತಗಳನ್ನು ಕಂಡ
ಸವಿನೆನಪಿಗಾಗಿ ಅರ್ಪಿಸಿದ ಅಭಿನಂದನಾ ಗ್ರಂಥ

ನಲ್ಮೆಯ ಹಿರಿಯರಾದ
ಶ್ರೀ ಬಿ. ವಿ. ವೆಂಕಟರಮಣಯ್ಯ ಅವರಿಗೆ
ಪ್ರೀತಿಯಿಂದ - [illegible]

# ಸೃಜನ ಸಂಪನ್ನ

*ಸಂಪಾದಕ*

**ಬುಕ್ಕಾಪಟ್ಣ ವಾಸು**




## ಅನುಷ ಪ್ರಕಾಶನ

೭೫೦, ಆಶೀರ್ವಾದ, ಭಾಷ್ಯಂ ಸರ್ಕಲ್
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

SRUJANA SAMPANNA : A Felicitation Volume in honour of popular poet Sri Doddarange Gowda Edited by Bukkapatna Vasu Published by G. L. Chandrashekar, Anusha Prakashana, Rajajinagar, Bangalore - 560 010



Pages : XVI + 262

Fist Impression : April 1995

Price : Rs. 45.00 (Forty Five Only)

Cover Page Photo By : Bukkapatna Vasu

Designed By : M Vishwanath

*DTP By :*
Comprint Media
Opp. Sampige Talkies
Malleshwaram, Bangalore - 3

*Printed By:*
P.T. Govinda Raj
G.U. Graphics, Bangalore - 10

# ಮುನ್ನುಡಿ

ನನ್ನ ತರುಣ ಮಿತ್ರರಾದ ಶ್ರೀ ದೊಡ್ಡರಂಗೇಗೌಡರ ೫೦ನೆಯ ಹುಟ್ಟುಹಬ್ಬದಂದು ಅವರನ್ನು ಸನ್ಮಾನಿಸಿ ಒಂದು ಗೌರವ ಗ್ರಂಥವನ್ನು ಅರ್ಪಿಸುವ ಏರ್ಪಾಡನ್ನು ಮಾಡಿರುವುದು ನನಗೆ ತುಂಬ ಸಂತೋಷದ ವಿಚಾರ. ಅವರು ವಿದ್ಯಾರ್ಥಿಯಾಗಿದ್ದಾಗಲೇ ಲೇಖನ ವ್ಯವಸಾಯದಲ್ಲಿ ತೊಡಗಿದ್ದುದನ್ನು ನಾನು ಗಮನಿಸಿದ್ದೆ. ಅವರ ಬರಹದಲ್ಲಿ ಆಗಲೇ ಕಾಣತೊಡಗಿದ್ದ ಹೊಸತನವು ಮುಂದೆ ತನ್ನತನವನ್ನು ಸಾಬೀತು ಮಾಡಬಲ್ಲ ಬನಿಯುಳ್ಳದ್ದೆಂದು ನಾನು ಭಾವಿಸಿದ್ದು ಸುಳ್ಳಾಗಲಿಲ್ಲ. ಈ ಕೆಳಗಿನ ಕೆಲವು ಸಾಲುಗಳನ್ನು ಮೊದಲು ಓದಿದಾಗ ದೊಡ್ಡರಂಗೇಗೌಡರ ಸತ್ವದ ಪರಿಚಯವಾಗಿತ್ತು.

ಕುಡಿಯೊಡೆದಿತ್ತು ಬವಣೆ ಪರ್ವದಲಿ ಭರವಸೆತನ

* * *

ಬೇನೆ ಚಿಗುರಿದೆ
ತೊನ್ನು ನೆಲದ ಹುತ್ತದಲ್ಲಿ

* * *

ಒಂದೊಂದೆ ಪಕಳೆಗಳ ಕಿತ್ತು
ವಿಷಯ ಸಮುದ್ರದೊಳಗೆ
ಅನುಭವಲಂಗರು ಹಾಕಿ ಬರಹವನು ನಿಲಿಸುವಾಸೆ

* * *

ಎತ್ತ ತಿರುಗಲಿ ನಾವು, ಅಲ್ಲಿ ನೀತಿ ಬೇಲಿ

* * *

ಮನೆ ತುಂಬಾ ಜಿರಲೆಗಳು ಹರಿದಾಡಿದಂತೆ
ಸಂಕಟದ ಘಳಿಗೆಗಳು

ಇಂಥ ಸಾಲುಗಳು ಸಹಜ ಕವಿಯಲ್ಲದವನ ಲೇಖನಿಯಿಂದ ಮೂಡಿ ಬರಲಾರವು.

ಭಾಷೆಯ ಪ್ರಯೋಗದಲ್ಲಿಯೂ ನವೀನತೆಯನ್ನು ಸಾಧಿಸಿ ಗೆಲ್ಲುವ ಸತ್ವ ಯಾರಿಗಾದರೂ ಕಾಣಬರುತ್ತದೆ.

ಇದನ್ನೆಲ್ಲ ದೂರದಿಂದಲೇ ಕಂಡು ನಾನು ಸಂತೋಷಗೊಳ್ಳುತ್ತಿದ್ದ ದಿನಗಳಲ್ಲಿ ಇದ್ದಕ್ಕಿದ್ದಂತೆ ಅವರು ನನ್ನನ್ನು ಕಂಡ ಸೌಜನ್ಯ ಇಂದಿಗೂ ಅವರಲ್ಲಿ ಜೀವಂತವಾಗಿ ಉಳಿದಿದೆ. ಬರಹಗಾರರಾಗಿ, ಕವಿಗಳಾಗಿ, ಅವರು ತಮ್ಮ ಸ್ಥಾನವನ್ನು ಗಟ್ಟಿಮಾಡಿಕೊಂಡಿದ್ದಾರೆ. ಉಪಾಧ್ಯಾಯರಾಗಿ ವಿದ್ಯಾರ್ಥಿಗಳ ಮತ್ತು ಸಹಾಧ್ಯಾಪಕರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ.

ಸಮಾಜದ ಬೇಲಿಯನ್ನು ಜಗಿದು, ಸಂಸಾರವಂದಿಗರಾಗಿ ಸಮಾಜದ ಗೌರವವನ್ನು ಗಳಿಸಿದ್ದಾರೆ.

ಸಾರ್ವಜನಿಕ ಜೀವನದಲ್ಲಿ ಪ್ರಗತಿಪರ ಧೋರಣೆಗಳನ್ನು ದೃಷ್ಟಾಂತ ಪಡಿಸಿದ್ದಾರೆ. ಚಿತ್ರರಂಗದಲ್ಲಿ ಹಣಗಳಿಸದಿದ್ದರೂ ಕೀರ್ತಿಯನ್ನು ಬೆಳಸಿಕೊಂಡಿದ್ದಾರೆ. ಪ್ರಾಮಾಣಿಕವಾದ ಬಾಳಿಗೆ ತಮ್ಮನ್ನು ತೆತ್ತುಕೊಂಡಿದ್ದಾರೆ.

ಇವೆಲ್ಲ ಒಬ್ಬ ವ್ಯಕ್ತಿಯ ಸಾಧನೆಯ ಪ್ರತೀಕಗಳು. ಇಂಥವರ ಸನ್ಮಾನದಲ್ಲಿ ಭಾಗಿಯಾಗಿ ಸೇರಿಸಿಕೊಳ್ಳುವುದು ನನಗೆ ಅತ್ಯಂತ ಹರ್ಷದಾಯಕವಾದ ಕಾರ್ಯ.

ಚಿತ್ರರಂಗದಲ್ಲಿ ಅವರು ರಚಿಸಿ ಹಾಡಿಸಿರುವ ಜನಪ್ರಿಯ ಗೀತೆಗಳನ್ನೆಲ್ಲಾ ಬಿಟ್ಟರೂ ಅವರು ರಚಿಸಿರುವ ಅನೇಕ ಕವನ ಸಂಕಲನಗಳಲ್ಲಿ ನನಗೆ ಪ್ರಿಯವಾದ ಅನೇಕ ಕವನಗಳಿವೆ. **"ಪ್ರೀತಿ ಪ್ರಗಾಥ"** ಒಂದೇ ಸಾಕು ಅವರನ್ನು ಶಕ್ತ ಕವಿಯೆಂದು ಗೌರವಿಸುವುದಕ್ಕೆ.

**'ಸೃಜನ ಸಂಪನ್ನ'** ಎಂಬ ಈ ಗೌರವ ಗ್ರಂಥದ ಹೆಸರು ಅದರ ಪ್ರಾಸದ ಪರಿಣಾಮವಾಗಿ ಮತ್ತು ಅದು ಒಳಗೊಂಡಿರುವ ನೂರಾರು ವಿಶ್ವಾಸದ ಆತ್ಮೀಯ ಲೇಖನಗಳಿಂದ ಶಾಶ್ವತವಾಗಿ ಉಳಿಯುವ ಗೌರವಗ್ರಂಥವಾಗುತ್ತದೆ ಅದು.

ಐವತ್ತರ ಐಸಿರಿ ಬೆಳೆಯುತ್ತಾ ಹೋಗಲಿ ನೂರರ ಮೇರೆ ಮೀರಿ ದಾಖಲೆಯನ್ನು ಸಾಧಿಸಲಿ "ದೊಡ್ಡ" ಎಂಬ ಹೆಸರು ರಂಗೇಗೌಡರಿಗೆ ಅನ್ವರ್ಥವಾಗಲಿ ಎಂದು ನಾನು ಹಾರೈಸುತ್ತೇನೆ.

ಬೆಂಗಳೂರು **ಪ್ರೊ. ಜಿ.ವೆಂಕಟಸುಬ್ಬಯ್ಯ**
೨೫-೪-೧೯೯೫





## ಸಂಪಾದಕನ ಮಾತು

ಹೊಸ ಹೊಸ ಭಾವಗಳನ್ನು ಕಾಣುವ, ಕಟ್ಟುವ ಪ್ರಜ್ಞೆಯೇ ಪ್ರತಿಭೆ. ಈ ಪ್ರತಿಭೆಯ ಉಸಿರಿನಿಂದ ಜೀವತುಂಬಿ ವರ್ಣಿಸಬಲ್ಲ ನಿಪುಣನೇ ಕವಿ. ಕವಿ ಕರ್ಮವೇ ಕಾವ್ಯ. ಹೀಗೆ, ಕವಿ ಸೃಷ್ಟಿಯ ರಹಸ್ಯವೆಲ್ಲ "ಪ್ರತಿಭೆ" ಎಂದು ಕವಿ-ಕಾವ್ಯದ ಬಗ್ಗೆ ಆಧುನಿಕ ಕನ್ನಡ ಸಾರಸ್ವತ ಲೋಕದ ದಿಗ್ಗಜರೆನಿಸಿದ ಕವಿ ತೀ.ನಂ.ಶ್ರೀ ಅವರು ಬಹಳ ಸ್ಪಷ್ಟವಾಗಿ ಕಾವ್ಯ ವಿಮರ್ಶೆಯನ್ನು ಬಣ್ಣಿಸಿದ್ದಾರೆ.

ಪ್ರತಿಭೆ ನಿಜವಾಗಿ ಒಂದು ರೀತಿಯ ದೃಷ್ಟಿ. ಅದು ಬುದ್ಧಿಯ ಕಣ್ಣಲ್ಲ; ಹೃದಯದ ಕಣ್ಣು. ಕವಿಯ ಈ ಒಳಗಣ್ಣು ತೆರೆದಾಗ ವಿಶ್ವದ ಹೃದಯವೇ ಅವನಿಗೆ ತೆರೆಯುತ್ತದೆ. ಅದಕ್ಕೆಂದೇ "ರವಿ ಕಾಣದನ್ನು ಕವಿ ಕಂಡ" ಎಂದು ಹೇಳುವುದುಂಟು. ಈ ಮಾತಿಗೆ ಪೂರಕವಾಗಿಯೇ ಋಷಿಯಲ್ಲದವರು ಕವಿಯಲ್ಲ ಎನ್ನುವರು; ದರ್ಶನವುಳ್ಳವನು ತಾನೆ ಋಷಿ? ಜಗತ್ತಿನ ವಿವಿಧ ವಸ್ತುಗಳ ಧರ್ಮಾಂಶದ ತತ್ತ್ವವನ್ನು ಕಾಣುವುದೇ ದರ್ಶನ.

ಈ ತತ್ವದರ್ಶನವನ್ನು, ಭಾರತದಂತಹ ವೈವಿಧ್ಯ ಪೂರ್ಣದೇಶದಲ್ಲಿ ಅನೇಕ ಮಹನೀಯರು ವರ್ಣಿಸಿ ಮಹೋನ್ನತ ಸಂಸ್ಕೃತಿಯ ಔನ್ನತ್ಯವನ್ನು ಎತ್ತಿಹಿಡಿದಿದ್ದಾರೆ. ಅಂಥ ಹಿರಿಯರನ್ನು ಆದರ್ಶವಾಗಿರಿಸಿಕೊಂಡು ನಾಡಿನ ಕೀರ್ತಿ ಬೆಳಗಲು ಕೆಲವರಾದರೂ ಶ್ರಮಿಸಿದ್ದಾರೆ. ಅಂಥವರಲ್ಲಿ ನಮ್ಮ ನಡುವಿನ ಕವಿ ಶ್ರೀ ದೊಡ್ಡರಂಗೇಗೌಡರು ಒಬ್ಬರು.

ದೊಡ್ಡರಂಗೇಗೌಡರಂಥ ವ್ಯಕ್ತಿಗಳು ಈಗ ನಿಜಕ್ಕೂ ಅಪರೂಪ. ಸರಳತೆ, ಸಜ್ಜನಿಕೆ, ಸ್ನೇಹಪರತೆ, ಸಹೃದಯತೆ, ಸೃಜನಶೀಲತೆ, ಸ್ವಂತಿಕೆಗಳಿಂದ ಬದುಕಿನದ್ದಕ್ಕೂ ಮೌಲ್ಯಬದ್ಧ ಮಹತ್ವದ ತತ್ವಗಳನ್ನು ಉಸಿರಾಗಿಸಿಕೊಂಡು, ಸನ್ನಡತೆಯಲ್ಲೇ ಪ್ರತಿ ಹೆಜ್ಜೆಯಿಟ್ಟು ನಾಡಿನ ಏಳಿಗೆಯ ಕೈಂಕರ್ಯಕ್ಕೆ ತಮ್ಮ ಜೀವಮಾನ ಪೂರ ತನ್ನ ಪ್ರತಿಭಾ ಶಕ್ತಿಯನ್ನು ಸಮರ್ಪಿಸಿಕೊಂಡ ಭಾವಜೀವಿ.

ಈ ಭಾವಜೀವಿ ಭಾವುಕ ಕವಿಯೂ ಹೌದು. ಸಮಾಜದಜಲ್ಲಿನ ಅನ್ಯಾಯಗಳನ್ನು ಕಂಡಾಗ ಸಿಡಿದೇಳುತ್ತಾರೆ, ಅಂಕುಡೊಂಕುಗಳನ್ನು ಕಂಡಾಗ ತಿದ್ದಿ ಎಚ್ಚರಿಸುತ್ತಾರೆ. ಸೌಂದರ್ಯ ಕಂಡಾಗ ಮುಕ್ತವಾಗಿ ಹಾಡಿ ನಲಿದು ನಲಿಸುತ್ತಾರೆ. ತಮ್ಮ ಜೀವನದ ಅನುಭವಗಳು ವಿಸ್ತಾರಗೊಂಡತೆಲ್ಲಾ ಕಾವ್ಯದ ತಿರುಳನ್ನು ಸುಂದರವಾಗಿ ಬಣ್ಣಿಸುತ್ತಾ ಬಂದಿದ್ದಾರೆ.

ಕಾವ್ಯ ಸುಂದರವಾದಷ್ಟು ಕವಿಯೂ ಶುಚಿಯಾಗಿ ಸರಳ ಉಡುಪಿನಲ್ಲೂ ಸೌಂದರ್ಯದಿಂದ ಬೀಗುತ್ತಾರೆ, ಹೃದಯ ಶ್ರೀಮಂತಿಕೆ "ಕವಿಯ ಸ್ವಭಾವ ಹೇಗಿರುತ್ತದೋ ಕಾವ್ಯ ಅದಕ್ಕೆ ಅನುರೂಪವಾಗಿರುತ್ತದೆ" ಎಂದು ಅರ್ಥೈಸುತ್ತಾರೆ.

ಹೀಗೆ ಬದುಕು ಬರಹಗಳೆರಡರಲ್ಲೂ ಸದಾ ಶ್ರದ್ಧೆ ಅಚ್ಚುಕಟ್ಟು ಸದಭಿರುಚಿಯಿಂದ ಹಿರಿಯ ಸಾಹಿತಿಗಳ ಸಂಪರ್ಕವಿರಿಸಿಕೊಂಡು, ಸತ್ ಚಿಂತನೆಗಳ ಬೆಳೆಸಿಕೊಂಡು ಸಾವಿರಾರು ವಿದ್ಯಾರ್ಥಿಗಳ ನೆಚ್ಚಿನ ಮೇಷ್ಟ್ರಾಗಿ, ಚತುಷ್ಕೋಟಿ ಕನ್ನಡ ರಸಿಕರ ಮೆಚ್ಚಿನ ಸಾಹಿತಿಯಾಗಿ, ಎಲ್ಲಕ್ಕೂ ಮೊದಲು ಆದರ್ಶ ವ್ಯಕ್ತಿಯಾಗಿ ಬದುಕಿನ ಬನದಲ್ಲಿ ಐವತ್ತರಲ್ಲರಳಿದ ಹೂವಾಗಿ ಪರಿಮಳ ಚೆಲ್ಲಿದ್ದಾರೆ.

ದೊರಂಗೌ ಅವರ ಜೀವನದ ಈ ಚಿನ್ನದ ಹಬ್ಬದ ಸಂದರ್ಭಕ್ಕೆಂದು ನಾನು ಅವರನ್ನು ಸಂದರ್ಶಿಸಲು ಹೋದಾಗ ಹೊಳೆದದ್ದೇ ಈ ಅಭಿನಂದನಾ ಕೃತಿ "ಸೃಜನಸಂಪನ್ನ" ಮತ್ತು ಸೃಜನಸಂಪನ್ನರ ಅಭಿನಂದನಾ ಸಮಾರಂಭ.

ದೊರಂಗೌ ಅವರಿಗೆ ಈ ಅಭಿನಂದನಾ ಸಮಾರಂಭ ಏರ್ಪಟ್ಟ ಘಟನೆಯಂತೂ ಬಹಳ ಸ್ವಾರಸ್ಯಕರವಾಗಿದೆ. ನಾನು ಪತ್ರಿಕೋದ್ಯಮ ವಿದ್ಯಾರ್ಥಿಯಾದ್ದರಿಂದ "ತರಂಗ" ಪತ್ರಿಕೆಗೆ ಸ್ವತಂತ್ರ ಸಂದರ್ಶನ ಲೇಖನ ಬರೆದು ಕಳಿಸೋಣವೆಂದು ಯೋಚಿಸಿ ನನ್ನ ಮೆಚ್ಚಿನ ಗುರುಗಳಾದ ದೊಡ್ಡರಂಗೇಗೌಡರ ಬಳಿ ಹೋದೆ. ದೊರಂಗೌ "ಸಮಾಜದ ವ್ಯಕ್ತಿ"ಯಾದ್ದರಿಂದ ಪ್ರತಿನಿತ್ಯ ಯಾವುದಾದರೊಂದು ಸಭೆ ಸಮಾರಂಭ ಒಪ್ಪಿಕೊಂಡು ಪಾಲ್ಗೊಳ್ಳುತ್ತಿದ್ದರು, ಆದ್ದರಿಂದ ನನಗೆ ಐದಾರುಸಾರಿ ಹೋದಾಗ ಸಂದರ್ಶನ ಸಿಗಲೇ ಇಲ್ಲ. ಆಗ ಪ್ರಶ್ನೆಗಳನ್ನು ಬರೆದು ದೊರಂಗೌ ಅವರ ಕೈಗೆ ಕೊಟ್ಟು ಬಿಡುವಿನ ವೇಳೆಯಲ್ಲಿ ಉತ್ತರ ಬರೆದುಕೊಡಿ ಎಂದು ಕೇಳಿಕೊಂಡೆ, ಮತ್ತೊಂದು ದಿನ ಬಿಡುವಾಗಿ ಅವರು ಸಿಕ್ಕಾಗ ಟೇಪ್ ರೆಕಾರ್ಡನಲ್ಲಿ ಸಂದರ್ಶನವನ್ನು ಧ್ವನಿ ಮುದ್ರಿಸಿಕೊಂಡೆ ನಂತರ ಸಂದರ್ಶನ ಸಿದ್ಧಪಡಿಸಿದೆ. ಸಂದರ್ಶನ ಬಹಳ ದೀರ್ಘವಾಗಿ ಉತ್ತಮವಾಗೇ ಬಂತು.

ನಂತರ ನನ್ನ ಗೆಳೆಯರೊಬ್ಬರು ಇದನ್ನು ಗಮನಿಸಿ ನನಗೆ "ನಿನ್ನ ಈ ಸಂದರ್ಶನ ಲೇಖನ ದೊರಂಗೌ ಬಗ್ಗೆ ಒಂದು ಕಿರು ಹೊತ್ತಗೆಯೆ ಆಗುತ್ತದೆ ಎಂದರು. ಆಗಲೇ ಹೊಳೆದದ್ದು "ಹೌದು ದೊರಂಗೌ ಅವರಿಗೆ ಈಗ ೫೦ ನೇ ವರ್ಷ. ಜೊತೆಗೆ ಚಲನ ಚಿತ್ರ ಸಾಹಿತಿಯಾಗಿ ೨೦೦ ಚಿತ್ರಕ್ಕೆ ४०० ಗೀತೆಗಳನ್ನು ಪೂರೈಸಿದ್ದಾರೆ. ಮತ್ತು ಇದೇ ವರ್ಷಕ್ಕೆ ಸರಿಯಾಗಿ ಮೂರುದಶಕಗಳ ನಿರಂತರ ಕಾವ್ಯ ಕೃಷಿಯ ಫಲವಾಗಿ ೨೦ನೇ ಕೃತಿ ಪ್ರಕಟಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ನನ್ನ ನೆಚ್ಚಿನ ಗುರುಗಳಿಗೆ ಏಕೆ ಈ ಸಂದರ್ಶನ ಲೇಖನವನ್ನೆ ಸಮಗ್ರವಾಗಿ ಬರೆದು ಅವರಿಗೆ ಅರ್ಪಿಸಬಾರದು?

ನನ್ನ ಕೆಲವು ಗೆಳೆಯರ ಜೊತೆ ಈ ವಿಷಯ ಪ್ರಸ್ತಾಪಿಸಿದಾಗ ಅವರೆಲ್ಲಾ ನನಗೊಂದು ಸಲಹೆಕೊಟ್ಟರು. ನಿನ್ನ ಈ ಬರಹದ ಜೊತೆಗೆಬೇರೆ ಯಾರಾದರೂ ಇಬ್ಬರು ಹಿರಿಯ ಲೇಖನವನ್ನು ಬರೆಸಿ ಬಳಸಿಕೋ ಆಗ ಅಭಿನಂದನಾ ಸಮಾರಂಭ ಏರ್ಪಡಿಸಿ ಇದನ್ನೆ ಅಭಿನಂದನಾ ಕೃತಿಯಾಗಿ ಅರ್ಪಿಸೋಣ ಎಂದರು.

ದೊರಂಗೌ ಅವರಿಗೆ ಈ ವಿಷಯ ತಿಳಿದಾಗ ಅವರು ಇದೆಲ್ಲಾ ಏಕೆ? ಬೇಡ ಎಂದರು. ಆ ವೇಳೆಗೆ ಅವರ ಹಲವಾರು ಅಭಿಮಾನಿಗಳಿಗೆ ಈ ವಿಷಯ ತಿಳಿದಿತ್ತು. ಕಡೆಗೆ ಅನೇಕ ಅಭಿಮಾನಿಗಳ ಒತ್ತಾಯಕ್ಕೆ ದೊರಂಗೌ ಕಟ್ಟುಬಿದ್ದು ಮುಜುಗರದಿಂದ ಒಪ್ಪಿದರು.

ನಂತರ ದೊರಂಗೌ ಅವರ ಎಲ್ಲಾ ಅಭಿಮಾನಿಗಳಿಗೂ ಲೇಖಕರೂ ವಿಷಯ ತಿಳಿದಾಗ, ಲೇಖನಗಳ ಮಹಾಪೂರವೇ ಹರಿದು ಬಂತು. ದೊರಂಗೌ ಅವರ ವೃತ್ತಿ ಜೀವನ ಮತ್ತು ಸಾಮಾಜಿಕ ಬದುಕಿನಲ್ಲಿ ಗಳಿಸಿದ ಸಂಪತ್ತೆಂದರೆ ಅವರ ಅಪಾರ ಅಭಿಮಾನಿ ಬಳಗ ಎಂದು ಈ ಅಭಿನಂದನಾ ಕೃತಿಯೇ ಸಾರುತ್ತದೆ.

ದೊರಂಗೌ ಅವರ ಅಭಿನಂದನಾ ಕೃತಿಯ ಸ್ವಾರಸ್ಯದಂತೆ ಅವರ ಬದುಕಿನಲ್ಲೂ ಅನೇಕ ಸ್ವಾರಸ್ಯ ಘಟನೆಗಳಿವೆ.

- *ದೊರಂಗೌ ಬಾಲ್ಯದಲ್ಲಿ ತನ್ನ ತಂದೆ ನಾಟಕಗಳಲ್ಲಿ ಕೃಷ್ಣನ ಪಾತ್ರದಲ್ಲಿ ಅಭಿನಯಿಸುವುದನ್ನು ನೋಡುತ್ತಾ ನೋಡುತ್ತಾ ತಾವು ಒಮ್ಮೆ ಮುಖಕ್ಕೆ ಬಣ್ಣ ಹಚ್ಚಿ ಕಲಾಪ್ರಪಂಚಕ್ಕೆ ಆಗಲೇ ಮೈಯೊಡ್ಡಿ "ಕೃಷ್ಣ ಗಾರುಡಿ" ನಾಟಕದಲ್ಲಿ ಬಾಲಕೃಷ್ಣನಾಗಿ ಮಿನುಗಿದ್ದುಂಟು.*
- *೫ನೇ ತರಗತಿಯಲ್ಲಿ ಓದುತ್ತಿದ್ದಾಗ, ಆಗಸ್ಟ್ ೧೫ ಸ್ವಾತಂತ್ರ್ಯ ದಿನಾಚರಣೆಯಂದು ಮುಖ್ಯ ಅತಿಥಿಗಳ ಭಾಷಣದ ನಂತರ ದೊರಂಗೌ ಆಗಲೇ ೧೦ ನಿಮಿಷಗಳ ಕಾಲ ಭಾಷಣ ಮಾಡಿದ್ದುಂಟು*
- *೮ನೇ ತರಗತಿಯಲ್ಲಿ ಓದುತ್ತಿದ್ದಾಗ ಒಮ್ಮೆ ಉಪಾಧ್ಯಾಯರು ನಿಮಗೆ ತೋಚಿದೆಲ್ಲಾ ಬರೆಯಿರಿ ಎಂದಾಗ ಕ್ಲಾಸ್ ರೂಂನಲ್ಲಿ ಕುಳಿತು "ಅಪ್ಪಾಜಿಯ ತೀರ್ಪು" ಎಂಬ ಕಥೆ ಬರೆದದ್ದುಂಟು ನಂತರ ಉಪಾಧ್ಯಾಯರು ಶಾಲೆಯಲ್ಲಿ ಎಲ್ಲರೆದುರು ಕಥೆಯನ್ನು ಓದಿಸಿ ಬೆನ್ನು ತಟ್ಟಿ ವಾರ್ಷಿಕ ಸಂಚಿಕೆಯಲ್ಲಿ ಹಾಕಿದರು. ಇದು ದೊರಂಗೌ ಬರಹದ ಮೊದಲು ಪ್ರಕಟಣೆ.*
- *ಪಿ.ಯು.ಸಿ. ಓದುತ್ತಿದ್ದಾಗ Free Ship Application Form ನಲ್ಲಿ Caste ಅನ್ನುವ ಕಡೆ Indian ಎಂದು ಬರೆದು ಗುಮಾಸ್ತರ ಕೋಪಕ್ಕೆ ಗುರಿಯಾದದ್ದು ಉಂಟು; ಗುಮಾಸ್ತರು ಅದನ್ನು ಹೊಡೆದು ಹಾಕಿ ನಿಮ್ಮ ಜಾತಿ ಯಾವುದು ಬರೆಯಿರಿ ಎಂದು ಹೇಳಿದಾಗ ಮತ್ತೆ ದೊರಂಗೌ ಕನ್ನಡದಲ್ಲಿ ಅದನ್ನೇ "ಭಾರತೀಯ" ಎಂದು ಬರೆದು ಎಲ್ಲರ ಗಮನಸೆಳೆದದ್ದುಂಟು. ಈ ವರ್ತನೆ ಆ ದಿನಗಳಲ್ಲೆ ದೊರಂಗೌ ಅವರ ಚಿಂತನೆ ಏನೆಂಬುದನ್ನು ಸ್ಪಷ್ಟಪಡಿಸಿತ್ತು*
- *ಸಾಹಿತ್ಯ, ಸಂಗೀತ, ಕಲೆ ಇವುಗಳಿಂದ ಜೀವನ ನಡೆಯೋಲ್ಲವೆಂಬ ತಂದೆಯವರ ಆದೇಶಕ್ಕೆ ಒಳಪಟ್ಟು ವಿಜ್ಞಾನದ ವಿದ್ಯಾರ್ಥಿ ಆಗಿದ್ದುಂಟು, ವಿಜ್ಞಾನದ ವಿದ್ಯಾರ್ಥಿಯಾದರೂ ಸಾಹಿತ್ಯದ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಸಾಹಿತ್ಯವನ್ನು ತಂದೆಯವರಿಗೆ ತಿಳಿಯದಂತೆ "ಮನುಜ" ಕಾವ್ಯನಾಮದಲ್ಲಿ ಬರೆದುದ್ದುಂಟು.*
- *ಮೊದಲ ಬಾರಿಗೆ ಬಾನುಲಿ ಕೇಂದ್ರದಿಂದ ತಮ್ಮ ಕವನ ಪ್ರಸಾರವಾಗುತ್ತದೆ ಎಂದು ತಿಳಿದಾಗ ತಮ್ಮ ಬಳಿ ರೇಡಿಯೋ ಇಲ್ಲದೆ ಚಡಪಡಿಸಿ, ಗೆಳೆಯನೊಂದಿಗೆ ಹೋಟೆಲ್‌ಗೆ ಹೋಗಿ ಬೈಟು ಟೀ ಕುಡಿಯುತ್ತಾ, ಹೋಟೆಲ್ ಮಾಲೀಕರಲ್ಲಿ ಪ್ರಾರ್ಥಿಸಿಕೊಂಡು ರೇಡಿಯೋ ಹಾಕಿಸಿಕೊಂಡು ಪ್ರಸಾರವಾದ ತಮ್ಮ ಕವನ ಕೇಳಿ ಸಂತೋಷಿಸಿದ್ದುಂಟು.*
- *ಒಮ್ಮೆ ಸೆನೆಟಹಾಲ್‌ನಲ್ಲಿ ಬೇಂದ್ರೆಯವರ ಬಗ್ಗೆ ಪ್ರಬಂಧ ಮಂಡಿಸಿ ಚಲನಚಿತ್ರ ನಿರ್ದೇಶಕರ ರವೀ ಕಣ್ಣಿಗೆ ಬಿದ್ದು ಚಲನ ಚಿತ್ರ ಸಾಹಿತಿಯಾಗಿದ್ದೂ ಸಾರಸ್ಯವೇ..*

ಹೀಗೆ ಬದುಕಿನುದ್ದಕ್ಕೂ ದೊರಂಗೌ ಸ್ವಾರಸ್ಯದಲ್ಲೆ ತುಂಬಿದ್ದಾರೆ, ಬಾಲ್ಯದಿಂದ ಪ್ರವರ್ಧಮಾನಕ್ಕೆ ಬರುವವರೆಗೂ ಸಾವಿರ ರೀತಿಯ ಸಂಕಷ್ಟ ಸವೆಸಿ ಆಶಾವಾದಿತ್ವದ ಪ್ರತೀಕವಾಗಿದ್ದಾರೆ. ಇಂತಹ ವ್ಯಕ್ತಿಯನ್ನು ಕಂಡು ಹಿರಿಯ ಕಲಾವಿದರೊಬ್ಬರು "ಸಾರಸ್ವತ ಸಾಲಿಗ್ರಾಮ" ಎಂದು ಬಣ್ಣಿಸಿದ್ದಾರೆ.

ದೊರಂಗೌ ಆಧುನಿಕ ಕನ್ನಡದ ಶ್ರೇಷ್ಠ ಕವಿಗಳ ಗುಂಪಿನಲ್ಲಿ ಸೇರಿ ತಮ್ಮ ಸಾರ್ಥಕ ಬದುಕಿನ ನಲವತ್ತೊಂಬತ್ತು ವರ್ಷಗಳನ್ನು ಕಳೆದು (ಜನನ ೭.೨.೧೯೪೬) ಐವತ್ತಕ್ಕೆ ಕಾಲಿಡುತ್ತಿದ್ದಾರೆ. ಈ ಸಂದರ್ಭದಲ್ಲಿ "ಸೃಜನಸಂಪನ್ನ" ಎಂಬ ಈ ಕೃತಿಯ ಹೆಸರು ದೊರಂಗೌ ಅವರ ಅಭಿನಂದನಾ ಗ್ರಂಥಕ್ಕೆ ಉಚಿತವೆಂದು ಭಾವಿಸಿದ್ದೇನೆ.

'ಅಜಾತಶತ್ರು' ಎನ್ನಿಸಿದ ದೊರಂಗೌ ಅವರ ಅಭಿನಂದನಾ ಗ್ರಂಥ ಇನ್ನೂ ದೊಡ್ಡ ಪ್ರಮಾಣದಲ್ಲಿರಬೇಕಿತ್ತು ಮತ್ತು ಅಭಿನಂದನಾ ಸಮಾರಂಭವೂ ಇನ್ನು ಹೆಚ್ಚು ವೈಭವದಿಂದ ನಡೆಯಬೇಕಿತ್ತು; ಆದರೆ ನಮ್ಮ ಮುಂದಿದ್ದ ಸಮಯ ಮತ್ತು ನಮಗೆ ಲಭ್ಯವಿದ್ದ ಕಡಿಮೆ ಆರ್ಥಿಕ ಬೆಂಬಲಗಳಿಂದ ಇಷ್ಟನ್ನಾದರೂ ಮಾಡಲು ಸಾಧ್ಯವಾಯಿತೆಂಬ ತೃಪ್ತಿ ನಮಗೆ. ಮುಂದೆ ಬೃಹತ್ ಅಭಿನಂದನಾ ಸಂಪುಟ ಹೊರ ಬರಲು ಈ ಗ್ರಂಥ ನಾಂದಿಯಾಗಲಿ ಎಂದು ಪ್ರಾರ್ಥಿಸುತ್ತೇನೆ.

ಈ ಕೃತಿಗೆ ಮುನ್ನುಡಿ ಬರೆದುಕೊಟ್ಟು ಹರಿಸಿದ ಕನ್ನಡದ ಹಿರಿಯ ಚೇತನ ಪ್ರೊ॥ ಜಿ. ವೆಂಕಟಸುಬ್ಬಯ್ಯನವರಿಗೂ, ಕಡಿಮೆ ಕಾಲದಲ್ಲಿ ನನ್ನ ಕೋರಿಕೆ ಮನ್ನಿಸಿ ಲೇಖನಗಳನ್ನು ಬರೆದು ಕೊಟ್ಟ ಎಲ್ಲಾ ಬರಹಗಾರರಿಗೂ ನಮ್ಮ ಈ ಕಾರ್ಯಕ್ಕೆ ಸಂಪೂರ್ಣ ಬೆಂಬಲ ನೀಡಿ ಈ ಅಭಿನಂದನಾ ಕೃತಿ ಪ್ರಕಾಶಿಸಲು ಮುಂದೆ ಬಂದ "ಅನುಷ" ಪ್ರಕಾಶನದ ಶ್ರೀ ಜಿ. ಎಲ್. ಚಂದ್ರಶೇಖರ್ ಅವರಿಗೂ, ಕಡಿಮೆ ಕಾಲಾವಕಾಶದಲ್ಲಿ ಸುಂದರವಾಗಿ ಡಿ.ಟಿ.ಪಿ. ಸಿದ್ಧಪಡಿಸಿದ ಕಾಂಪ್ರಿಂಟ್ ಮೀಡಿಯಾ ಸಿಬ್ಬಂದಿ ವರ್ಗದವರಿಗೂ, ಅತ್ಯಂತ ಶ್ರಮವಹಿಸಿ ಸಕಾಲಕ್ಕೆ ಈ ಕೃತಿ ಮುದ್ರಿಸಿಕೊಟ್ಟ ಗೋವಿಂದರಾಜು ಅವರಿಗೂ, ಈ ಕೃತಿಗೆ ಬಿಳಿಯ ಹಾಳೆಯನ್ನು ಉದಾರವಾಗಿ ದಾನ ಮಾಡಿದ ಪ್ರಖ್ಯಾತ ವಾಣಿಜ್ಯೋದ್ಯಮಿ ಕವಿ ಶ್ರೀ ಹರಿಖೋಡೆ ಅವರಿಗೂ, ಕರಡನ್ನು ತಿದ್ದಿ, ನನ್ನ ಜೊತೆ ಸಂಪೂರ್ಣ ಬೆಂಬಲಿಸಿದ ಅಧ್ಯಾಪಕರಾದ ಶ್ರೀ ಎಂ. ಎನ್. ಅಶ್ವತ್ಥ್ ಮತ್ತು ಶ್ರೀ ನಾಗೇಂದ್ರ ಪ್ರಸಾದ್ ಅವರಿಗೂ, ಮುಖ ಪುಟವನ್ನು ವಿನ್ಯಾಸಗೊಳಿಸಿದ ಕಲಾವಿದರಾದ ಶ್ರೀ ಎಲ್. ವಿಶ್ವನಾಥ್ ಅವರಿಗೂ, ಅಭಿನಂದನಾ ಸಮಿತಿಯ ಅಧ್ಯಕ್ಷರಾದ ಶ್ರೀ ಕೆ. ವಿ. ಚಂದ್ರಣ್ಣಗೌಡ ಮತ್ತು ಸಮಿತಿಯ ಸದಸ್ಯರಿಗೆ ಈ ಅಭಿನಂದನಾ ಸಮಾರಂಭಕ್ಕೆ - ಕೃತಿಗೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯಮಾಡಿ ಬೆಂಬಲಿಸಿದ ಎಲ್ಲರಿಗೂ ಹಾಗೂ ಈ ಎಲ್ಲದರ ಕೇಂದ್ರ ಬಿಂದುವಾದ ಶ್ರೀ ದೊಡ್ಡರಂಗೇಗೌಡರಿಗೂ ನನ್ನ ಹೃದಯಪೂರ್ವಕ ವಂದನೆಗಳು.

ದಿನಾಂಕ - ೨೮.೪.೧೯೯೫
ಬೆಂಗಳೂರು - ೫೬೦ ೦೭೯

**ಬುಕ್ಕಾಪಟ್ಣ ವಾಸು**

# ವಂದನೆಗಳು

* ಈ ಕೃತಿಗೆ ಮುನ್ನುಡಿ ಬರೆದುಕೊಟ್ಟು ಶುಭ ಹಾರೈಸಿದ ಹಿರಿಯ ವಿದ್ವಾಂಸರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ,

* ಈ ಕೃತಿಯನ್ನು ಪ್ರಕಾಶಿಸಲು ಮುಂದೆ ಬಂದ "ಅನುಷ ಪ್ರಕಾಶನದ" ಪ್ರಕಾಶಕರಾದ ಶ್ರೀ ಜಿ. ಎಲ್. ಚಂದ್ರಶೇಖರ ಅವರಿಗೆ,

* ಈ ಕೃತಿಯನ್ನು ನಾನು ಸಂಕಲಿಸುವಾಗ ನನ್ನ ಜೊತೆಗಿದ್ದು ಕರಡನ್ನು ತಿದ್ದಿ ಸಂಪೂರ್ಣ ಸಹಕಾರ ನೀಡಿದ ಅಧ್ಯಾಪಕರಾದ ಶ್ರೀ ಎಂ. ಎನ್. ಅಶ್ವತ್ಥ್ ಮತ್ತು ನಾಗೇಂದ್ರಪ್ರಸಾದ್ ಅವರುಗಳಿಗೆ,

* ಈ ಕೃತಿಯ ರಕ್ಷಾಪುಟದ ಕಲೆ ಮತ್ತು ವಿನ್ಯಾಸವನ್ನು ಅಂದವಾಗಿ ಮಾಡಿಕೊಟ್ಟ ಶ್ರೀ ಎಂ. ವಿಶ್ವನಾಥ್ ಅವರಿಗೆ,

* ಸಕಾಲಕ್ಕೆ ಲೇಖನಗಳನ್ನು ನೀಡಿ ಸಹಕರಿಸಿದ ಎಲ್ಲಾ ಲೇಖಕ-ಲೇಖಕಿಯರಿಗೆ,

* ಈ ಕಾರ್ಯಕ್ರಮಕ್ಕೆ ಉದಾರವಾಗಿ ಹಣಸಹಾಯ ಮಾಡಿದ ಪಶುಸಂಗೋಪನಾ ಮಂತ್ರಿಗಳಾದ ಶ್ರೀ ಬಿ. ಎನ್. ಬಚ್ಚೇಗೌಡರಿಗೂ ಮತ್ತು ಅವರ ವಿಶೇಷ ಅಧಿಕಾರಿಗಳಾದ ತಾ. ನಂ. ಕುಮಾರಸ್ವಾಮಿ ಅವರಿಗೆ, ವಿಶೇಷ ಜಿಲ್ಲಾಧಿಕಾರಿಗಳಾದ ಶ್ರೀ ಸೋಮಶೇಖರ್, ಚಲನಚಿತ್ರ ಕಲಾವಿದರಾದ ಶ್ರೀ ಕುಮಾರ ಬಂಗಾರಪ್ಪ ಮತ್ತು ಯುವ ಬರಹಗಾರರಾದ ಶ್ರೀ ತಾ. ಸಿ. ತಿಮ್ಮಯ್ಯ ಅವರುಗಳಿಗೆ,

* ಅಭಿನಂದನಾ ಸಮಾರಂಭದಲ್ಲಿ ಹೆಚ್ಚಿನ ಖರ್ಚುಗಳಲ್ಲಿ ಭಾಗಿಯಾದ ಶ್ರೀ ಕೆ. ವಿ. ಚಂದ್ರಣ್ಣಗೌಡ, ಶ್ರೀ ಲಯನ್ ಅಶೋಕ್‌ಕುಮಾರ್, ಶ್ರೀ ಚಂದ್ರಶೇಖರ್ ಶ್ರೀ ವಿ. ವೆಂಕಟೇಶ್ ಮೂರ್ತಿ ಅವರುಗಳಿಗೆ.

* ಸತತವಾಗಿ ನಮ್ಮ ಜೊತೆಯಿದ್ದು ಶ್ರಮವಹಿಸಿ ದುಡಿದ ಶ್ರೀ ರಾಘವೇಂದ್ರ, ಶ್ರೀ ಎಸ್. ಕೆ. ನಾಗರಾಜ್, ಶ್ರೀ ಜಿ. ಪ್ರಭಾಕರ ಗಂಗೊಳ್ಳಿ, ಶ್ರೀ ಕೋ. ವೆಂ. ರಾಮಕೃಷ್ಣೇಗೌಡ, ಮುನಿರಾಜು, ಶ್ರೀ ನಾಗರಾಜು, ಶ್ರೀ ಶಂಕರ್ ಅವರುಗಳಿಗೆ,

* ಕಡಿಮೆ ಅವಧಿಯಲ್ಲಿ ಸುಂದರವಾಗಿ ಡಿ.ಟಿ.ಪಿ. ಸಿದ್ಧಪಡಿಸಿದ ಕಾಂಪ್ರಿಂಟ್ ಮೀಡಿಯಾದ ಸಿಬ್ಬಂದಿ ವರ್ಗದವರಿಗೆ,

* ಅತ್ಯಂತ ಶ್ರಮವಹಿಸಿ ಬಹಳ ಕಡಿಮೆ ಅವಧಿಯಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ ಜಿ. ಯು. ಗ್ರಾಫಿಕ್ಸನ ಮುದ್ರಕರಾದ ಶ್ರೀ ಪಿ. ಟಿ. ಗೋವಿಂದರಾಜು ಅವರಿಗೆ,

* *ಅಭಿನಂದನಾ ಸಮಿತಿಯ ಎಲ್ಲಾ ಸದಸ್ಯರುಗಳಿಗೆ ಮತ್ತು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯ ಮಾಡಿ ಸಹಕರಿಸಿದ ಎಲ್ಲಾ ಮಹನೀಯರುಗಳಿಗೆ.*

* *ನಮ್ಮ ಕೋರಿಕೆಯನ್ನು ಮನ್ನಿಸಿ ಈ ಸತ್ಕಾರ್ಯಕ್ಕೆ ಒಪ್ಪಿಗೆ ನೀಡಿದ ಕೇಂದ್ರ ಬಿಂದು ಶ್ರೀ ದೊಡ್ಡರಂಗೇಗೌಡರಿಗೂ ಮತ್ತು ಕುಟುಂಬದವರಿಗೂ ನನ್ನ ಹೃದಯ ಪೂರ್ವಕ ವಂದನೆಗಳು.*

**ಬುಕ್ಕಾಪಟ್ನ ವಾಸು**
*ದೊರಂಗೌ ಅಭಿನಂದನಾ ಸಮಿತಿ*
*ಪರವಾಗಿ*

**ಈ ಕೃತಿಗೆ**
**ಬಳಿಕಾಗದವನ್ನು**
**ಉದಾರವಾಗಿ**
**ದಾನ ಮಾಡುವ ಮೂಲಕ**
**ಸಹಾಯ ಮಾಡಿದ**
**ಸಹೃದಯ ಕವಿಗಳಾದ**

**ಶ್ರೀ ಹರಿಖೋಡೆಸ್ ಅವರಿಗೆ**

**ಹೃದಯ ಪೂರ್ವಕ ವಂದನೆಗಳು.**

**ಅಭಿನಂದನಾ ಸಮಿತಿ**

# ದೊರಂಗೌ ಅಭಿನಂದನಾ ಸಮಿತಿ

ನಂ. ೫೫, ಪೋಲೀಸ್ ಠಾಣೆ ರಸ್ತೆ, ಕಾಮಾಕ್ಷಿಪಾಳ್ಯ, ಬೆಂಗಳೂರು - ೫೬೦ ೦೭೯

*ಪೋಷಕರು*

**ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು**

*ಅಧ್ಯಕ್ಷರು*

**ಕೆ. ವಿ. ಚಂದ್ರಣ್ಣಗೌಡ**

*ಉಪಾಧ್ಯಕ್ಷರುಗಳು*

**ಜಿ. ಎಲ್. ಚಂದ್ರಶೇಖರ್**
**ವಿ. ವೆಂಕಟೇಶ ಮೂರ್ತಿ**
**ಲಯನ್ ಅಶೋಕ್ ಕುಮಾರ್**
**ಡಿ. ಚಂದ್ರಶೇಖರ್**

*ಪ್ರಧಾನ ಕಾರ್ಯದರ್ಶಿಗಳು*

**ಬುಕ್ಕಾಪಟ್ಟ ವಾಸು**
**ಎಂ. ಎನ್. ಅಶ್ವತ್ಥ್**

*ಕೋಶಾಧಿಕಾರಿಗಳು*

**ವಿ. ರಾಘವೇಂದ್ರ**

*ಸದಸ್ಯರುಗಳು*

**ಪ್ರೊ. ಎಂ. ಹೆಚ್. ವಿಜಯೇಂದ್ರ : ಕೋಡಿ ಹೊಸಳ್ಳಿ ರಾಮಣ್ಣ**
**ಬೈರಮಂಗಲ ರಾಮೇಗೌಡ : ಸ. ಜಗನ್ನಾಥ : ಕಾ. ವೆಂ. ಶ್ರೀನಿವಾಸಮೂರ್ತಿ**
**ವಿ. ನಾಗರಾಜು : ನಾಗೇಂದ್ರ ಪ್ರಸಾದ್ : ಕೊ. ವೆಂ. ರಾಮಕೃಷ್ಣೇಗೌಡ**
**ಎನ್. ಶಂಕರ್ : ಎಸ್. ನಾಗರಾಜು : ಬಿ. ಮುನಿರಾಜು**
**ಕೆ. ಎಂ. ನಾರಾಯಣ : ಎನ್. ಬಸವರಾಜು : ಪಿ. ಸಿ. ರಾಜಣ್ಣ**
**ಡಾ. ನಾಗೇಂದ್ರ ಪ್ರಸಾದ್ : ಶಿವಣ್ಣ ಮನ್ವಾಚಾರ್ : ಜಯಮ್ಮ ಕರಿಯಣ್ಣ**
**ಜಿಬಿಕೋಟೆ ಅನಂತು : ಮಂಜುಳಾ ಶಿವಾನಂದ್ ಡಾ. ವಿ. : ಜನಾರ್ಧನ್**
**ನರಸಿಂಹ ಶೆಟ್ಟಿ : ಮೇಜರ್. ಡಿ. ಮುದ್ದೇಗೌಡ : ಎಂ. ಚಂದ್ರರಾಜು**
**ಹನುಮಂತೇಗೌಡ ಸಿ. : ಡಾ. ಡಿ. ವಿ. ಪರಮಶಿವಮೂರ್ತಿ : ಸಿ. ಜೋಸೆಫ್**
**ಜೆ. ಜಿ. ಪದ್ಮನಾಭ : ರಾಜಣ್ಣ ಶೆಟ್ಟಿ, ಜೆ. ಎಂ. : ವೆಂಕಟೇಶ್**
**ಬಿ. ಜಿ. ಜನಾರ್ಧನ : ಎನ್. ಗೋಪಾಲ್ : ಆನಂದ್ ಕುಮಾರ್**
**ರಮೇಶ್ ಮತ್ತು ಬಿ. ಆರ್. ಚೆನ್ನಪ್ಪಾಜಿ.**

# ಪ್ರಕಾಶಕರ ಮಾತು

ಸಾಂಸ್ಕೃತಿಕ ಜಗತ್ತೇ ಒಂದು ವಿಶಿಷ್ಟ ಲೋಕ. ಇಲ್ಲಿ ಎಲ್ಲರಿಗೂ ಮುಕ್ತ ಅವಕಾಶ. ಆದರೆ ಇಲ್ಲಿ ಭದ್ರಾವತಿ ನೆಲೆಯೂರಿ ನಿಲ್ಲುವುದು ಎಲ್ಲರಿಗೂ ಸಾಧ್ಯವಿಲ್ಲ. ಪ್ರತಿಭೆ ಇದ್ದವರು ಮಾತ್ರ ತಮ್ಮ ಸ್ವೋಪಜ್ಞತೆಯನ್ನು ಮೆರೆದು ಅಕ್ಷರಲೋಕದ ಅರಮನೆಯಲ್ಲಿ ಶಾಶ್ವತ ಸ್ಥಾನಗಳಿಸಿ ನೆಲೆ ನಿಂತು ಬಿಡುತ್ತಾರೆ.

ಈ ಪರಂಪರೆಗೆ ಸೇರಿದ ಅಭಿಜಾತ ಕವಿ ದೊ.ರಂ.ಗೌ. ನಿಮ್ಮ ಕೈಯಲ್ಲಿರುವ 'ಸೃಜನ ಸಂಪನ್ನ' ದೊರಂಗೌ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿ. "ಆಧುನಿಕ ಸಾಹಿತ್ಯಾಧ್ಯಯನ ಸಾಂದ್ರತೆ, ಔಚಿತ್ಯಪ್ರಜ್ಞೆಯಿಂದ ಕೂಡಿದ ದೊರಂಗೌ ತಾತ್ವಿಕ ಕ್ಲೀಷೆಗೂ ಸಿಲುಕದೆ ಲೌಕಿಕ ಮೌಲ್ಯಗಳನ್ನು ಬಾಚಿ ತಬ್ಬಿಕೊಂಡು ಮಾನವೀಯ ಮೌಲ್ಯಗಳ ಸಮಪಾತಳೀಯ ಮೇಲೆ ರಾರಾಜಿಸುತ್ತಾರೆ. ಇದಕ್ಕೆ ನಿಮ್ಮ ಮುಂದಿರುವ ಈ ಕೃತಿಯೇ ಉಜ್ವಲ ಸಾಕ್ಷಿ"

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಳೆದ ೩೦ ವರ್ಷಗಳಿಂದಲೂ ಕಾವ್ಯ ಕೃಷಿಕರಾಗಿ ಬೆಳೆದಿರುವ ದೊರಂಗೌ ಅವರಿಗೆ ೫೦ ತುಂಬುತ್ತಿರುವ ಈ ಸಂದರ್ಭದಲ್ಲಿ ಅವರ ಅಭಿಮಾನಿಗಳು ಸೇರಿ 'ಸೃಜನ ಸಂಪನ್ನ' ಕೃತಿಯನ್ನು ಅರ್ಪಿಸುತ್ತಿರುವುದು ನಿಜಕ್ಕೂ ಅರ್ಥಪೂರ್ಣ.

ಈ ದಿಕ್ಕಿನಲ್ಲಿ 'ಸೃಜನ ಸಂಪನ್ನ' ಕೃತಿಯ ಸಂಪಾದಕನ ಹೊಣೆಹೊತ್ತು ಅಭಿನಂದನಾ ಗ್ರಂಥ ಹೊರತರುವ ಪ್ರಯತ್ನಕ್ಕೆ ಕೈ ಹಾಕಿದ ಬುಕ್ಕಾಪಟ್ಟಣ ವಾಸು ಅವರ ಸಾಹಸ ಮೆಚ್ಚಲೇಬೇಕಾದುದು. ಕನ್ನಡದ ಶ್ರೇಷ್ಠ ಕವಿಯೊಬ್ಬರಿಗೆ ಅರ್ಪಿತವಾಗುತ್ತಿರುವ 'ಸೃಜನ ಸಂಪನ್ನ' ಕೃತಿಯನ್ನು ನಾವು ಪ್ರಕಟಿಸುತ್ತಿರುವುದು ನಮ್ಮ ಪ್ರಕಾಶನಕ್ಕೇ ಹೆಮ್ಮೆಯ ಸಂಗತಿ.

**ಜಿ. ಎಲ್. ಚಂದ್ರಶೇಖರ್**
ಅನುಪ ಪ್ರಕಾಶನ

**ಹೆಚ್. ಡಿ. ದೇವೇಗೌಡ**
ಮುಖ್ಯಮಂತ್ರಿಗಳು
ಕರ್ನಾಟಕ ರಾಜ್ಯ ಸರ್ಕಾರ

ದಿನಾಂಕ - ೨೬.೪.೧೯೯೫

# ಸಂದೇಶ

ಕವಿ ದೊಡ್ಡರಂಗೇಗೌಡ ಅವರಿಗೆ ೫೦ ತುಂಬಿದ ಸಂದರ್ಭದಲ್ಲಿ ಅವರ ಪ್ರಿಯ ವಿದ್ಯಾರ್ಥಿಗಳು ಹಾಗೂ ಅಭಿಮಾನಿಗಳು ಸನ್ಮಾನ ಏರ್ಪಡಿಸಿ "ಸೃಜನ ಸಂಪನ್ನ" ಎಂಬ ಅಭಿನಂದನಾ ಗ್ರಂಥ ಸಮರ್ಪಿಸುತ್ತಿರುವುದು ಹರ್ಷದ ವಿಚಾರ.

ತಮ್ಮ ಗೇಯ ಗೀತೆಗಳ ಮೂಲಕ ಜನಮನವನ್ನು ಗೆದ್ದಿರುವ ದೊಡ್ಡರಂಗೇಗೌಡರು ಗ್ರಾಮೀಣ ಕವಿಯೆಂದು ಖ್ಯಾತರಾಗಿದ್ದಾರೆ.

ನಾಡು ಮತ್ತು ನುಡಿಗೆ ಗಮನಾರ್ಹ ಸೇವೆ ಸಲ್ಲಿಸುತ್ತಿರುವ ಶ್ರೀ ದೊಡ್ಡರಂಗೇಗೌಡ ಅವರು ತಮ್ಮ ಕಾವ್ಯ ಕೃಷಿಯನ್ನು ಮತ್ತಷ್ಟು ಹುರುಪಿನಿಂದ ಮುಂದುವರಿಸಲು ಈ ಅಭಿನಂದನಾ ಸಮಾರಂಭ ಇಂಬುಗೊಡಲೆಂದು ಆಶಿಸುತ್ತೇನೆ.

# ಅಂತರಂಗ

# ಆಶೀರ್ವಾದ

✍ ಶ್ರೀ ಬಾಲಗಂಗಾಧರನಾಥಸ್ವಾಮಿಗಳು
*ಆದಿಚುಂಚನಗಿರಿ ಮಠ*

ಜನರನ್ನು ಸುಧಾರಿಸಿ ಸುಸಂಸ್ಕೃತರನ್ನಾಗಿ ಮಾಡುವ ಹಿಂದಿಗಿಂತ ಇಂದು ಜನತೆಗೆ ಅಗತ್ಯವಾಗಿ ಬೇಕಾಗಿದೆ. ನಾನಾವಿಧ ಕುಸುಮಗಳ ಸಪರಿಮಳ ಮಕರಂದವನ್ನು ಹೀರಿ ಭ್ರಮರಗಳ ಜೇನ್ಗೂಡಗಳಲ್ಲಿ ಶೇಖರಿಸುವಂತೆ ಬರಹಗಾರನು ಸರ್ವ ಸಾಹಿತ್ಯ ಪ್ರಕಾರಗಳ ಸಾರವನ್ನು ತನ್ನ ವಿವೇಕ ನಿಕಷದಲ್ಲಿ ತೀಡಿ, ನೋಡಿ ಯುಗಪ್ರಜ್ಞೆಯಲ್ಲಿ ಎರಕೆಹೊಯ್ದು ಸುಂದರ ಸುಮಧುರಗೊಳಿಸಿ ತನ್ನ ಕೃತಿರತ್ನಗಳಲ್ಲಿ ಸಂಗ್ರಹಿಸಿಡಬೇಕು. ಪ್ರತಿಭಾವಂತರಾದ ಸ್ವೋಪಜ್ಞರ ಕೃತಿಗಳು ಆನಂದ ಆದರ್ಶಗಳೆರಡನ್ನು ಲೋಕಕ್ಕೆ ನೀಡುತ್ತವೆ. ಸಮರ್ಥ ಬರಹಗಾರನ ಲೇಖನಿಯಿಂದ ನಿರರ್ಗಳವಾಗಿ ಮೂಡಿಬಂದ ಕೃತಿಗಳಲ್ಲಿ ಆಕರ್ಷಣೀಯ ಸೊಗಡಿರುತ್ತದೆ. ಇಂತಹ ಬರಹಗಾರರು ಮಾತ್ರ ಸಾರಸ್ವತ ಲೋಕದಲ್ಲಿ ಸದಾಕಾಲ ತಾರೆಗಳಂತೆ ಬೆಳಗಲು ಸಾಧ್ಯ. ಕೀಳು ಅಭಿರುಚಿಯ ಕೃತಿಗಳಿಂದ ಲೋಕಕ್ಕೆ ಹಾನಿಯಾಗುತ್ತದೆ; ಅವು ದೀರ್ಘಕಾಲ ಉಳಿಯುವುದೂ ಇಲ್ಲ.

ನಮ್ಮ ಶ್ರೀ ಕ್ಷೇತ್ರದ ಅಭಿಮಾನಿಗಳಾದ ಶ್ರೀಯುತ ದೊಡ್ಡರಂಗೇಗೌಡರು ನಮಗೆ ಚಿರಪರಿಚಿತರು. ಅವರು ಸಚ್ಚಿಂತನ, ಸದಭಿರುಚಿ, ಸೌಜನ್ಯಗಳಿಂದ ಜನಪ್ರಿಯರಾಗಿದ್ದಾರೆ. ಅವರ ಹಾಡುಗಬ್ಬಗಳ ಜಾಡು ಓಟ, ಮಾಟಗಳು ಮೋಹಕವಾಗಿವೆ. ಅವರ ಒಂದೊಂದು ಹಾಡೂ ಶಿವಪ್ರಿಯವಾದ ಮಂದಾರ ಕುಸುಮ. ಅವರ ಹೃದಯತುಂಬಿ ಹರಿದ ಭವ್ಯ ಭಾವವನ್ನು ಅಭಿವ್ಯಂಜನಗೊಳಿಸಲು ಅರ್ಹ ಪದಗಳು ತಾವಾಗಿ ಓಡಿಬಂದು ಕವನದಲ್ಲಿ ಸ್ಥಾನವನ್ನು ಅಲಂಕರಿಸುವಂತೆ ತೋರುತ್ತದೆ. ಕರ್ನಾಟಕದಲ್ಲಿ ಶ್ರೀ ದೊಡ್ಡರಂಗೇಗೌಡರ ಹೆಸರು ಮನೆಮಾತಾಗಿದೆ. ಚಿತ್ರರಂಗದವರು ಅವರ ಹಾಡುಗಳನ್ನು ಬಳಸಿಕೊಳ್ಳುತ್ತಿದ್ದಾರೆ. ರಾಗ, ತಾಳ, ಲಯಬದ್ಧವಾದ ಅವರ ಕವನಗಳನ್ನು ಓದಿ ಕೇಳಿ ಸವಿದು ಸಂತಸಗೊಳ್ಳದವರಿಲ್ಲ. ಹಳ್ಳಿಯ ರೈತನ ಮಗನಾಗಿ ಜನಿಸಿ, ಶಾಲಾ ಕಾಲೇಜುಗಳಲ್ಲಿ ಅಧ್ಯಯನ ಮಾಡಿ ವಿಶ್ವವಿದ್ಯಾಲಯದ ಪದವಿ ಪಡೆದು ಸಕಲ ಕನ್ನಡಿಗರ ಕಣ್ಮಣಿಯಾದುದು ಹೆಮ್ಮೆಯ ವಿಷಯ. ಇಂತಹ ವ್ಯಕ್ತಿಯನ್ನು ಗುರುತಿಸಿ ಗೌರವಿಸುವುದು ಸಾರ್ವಜನಿಕರ ಮತ್ತು ಸರ್ಕಾರದ ಕರ್ತವ್ಯ. ಅವರಿಗೆ ಐವತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಅವರ ಶಿಷ್ಯರು ಮತ್ತು ಅಭಿಮಾನಿವೃಂದ "ಸೃಜನ ಸಂಪನ್ನ" ಎಂಬ ಅಭಿನಂದನಾ ಗ್ರಂಥವನ್ನರ್ಪಿಸಿ ಅವರನ್ನು ಸನ್ಮಾನಿಸುತ್ತಿರುವುದನ್ನು ತಿಳಿದು ಬಹಳ ಹರ್ಷಗೊಂಡೆವು. ಭಗವಂತನ ಕರುಣೆಯಿಂದ ಅವರ ಸಾರಸ್ವತ ಸೇವಾಕಾರ್ಯ ಸತತ ನಿರಾತಂಕವಾಗಿ ನಡೆಯಲೆಂದೂ, ಆಯುರಾರೋಗ್ಯಾದಿ ಸಕಲ ಸನ್ಮಂಗಳಗಳು ಅವರಿಗೆ ದೊರೆಯಲೆಂದೂ ತುಂಬು ಹೃದಯದಿಂದ ಹಾರೈಸುತ್ತೇವೆ.

# ಶ್ರೀ ಸಿದ್ಧೇಶ್ವರ ಸ್ತುತಿ ಭಕ್ತಿಗೀತೆಗಳನ್ನು ಕುರಿತು

✍ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ

ಕವಿ ದೊಡ್ಡರಂಗೇಗೌಡರು ಬರೆದ "ಶ್ರೀ ಸಿದ್ಧೇಶ್ವರ ಸ್ತುತಿ" (ಭಕ್ತಿ ಗೀತೆಗಳ ಸಂಕಲನ) - ಕರ್ನಾಟಕದ ಪುಣ್ಯ ಕ್ಷೇತ್ರಗಳಲ್ಲಿ ಒಂದಾದ ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕಿನ ಶ್ರೀ ಸಿದ್ಧರ ಬೆಟ್ಟದ ಅಧಿದೇವತೆಯಾದ ಶ್ರೀ ಸಿದ್ದೇಶ್ವರನನ್ನು ಕುರಿತು ರಚಿತವಾಗಿರುವ ಭಕ್ತಿ ಕೃತಿ. ದೊಡ್ಡರಂಗೇಗೌಡರ ಈ ಕೃತಿಯಲ್ಲಿನ ಗೀತೆಗಳು ಭಕ್ತಿ ಭಾವದಿಂದ ಅರಳಿದ ಆತ್ಮ ಕುಸುಮಗಳಾಗಿವೆ.

"ಎಲ್ಲಿಂದ ಬಂದೆಯಪ್ಪ ಸಿದ್ದೇಶ ಸ್ವಾಮಿ?
ನೀ ನಿಂತ ನೆಲವಲ್ಲ ಬಂಗಾರು ಭೂಮಿ"

ಜಗದ ವಿರಾಗಿ, ಸಿದ್ದೇಶ್ವರನನ್ನು ಕುರಿತು ಪ್ರಾರ್ಥಿಸಿದ್ದಾರೆ.

"ಯಾಚಕ ನಾನು ಈವನು ನೀನು
ನಿನ್ನೆದುರು ತೃಣ ಕಾಣೋ ಈ ಮಾನವ"

ಎಂದು ಹೇಳುತ್ತಾ ಮನುಷ್ಯರ ಇತಿ-ಮಿತಿಗಳನ್ನು ಒಪ್ಪಿಕೊಳ್ಳುತ್ತಾರೆ.

"ನಿನ್ನ ಸ್ಮರಣೆ ನನಗೆಂದೂ ಸಂತೋಷದೌತಣವೇ" ಎಂದು ಹಾಡುತ್ತಾ ಅವತಾರ ಪುರುಷನ ಸ್ಮರಣೆಯಲ್ಲಿ "ಶ್ರೀ ಕ್ಷೇತ್ರದ ದೇವದೇವತೆ"ಗಳನ್ನು ಕವಿ ದೊರಂಗೌ ಪುಣ್ಯ ತಾಣಕ್ಕೆ ಬಂದಾಗ ನೆನೆಯುತ್ತಾರೆ.

ಶ್ರೀ ಸಿದ್ಧಗಿರಿ "ಆಧ್ಯಾತ್ಮದ ಚಿಲುಮೆ" ಎಂಬುದನ್ನು ಕಂಡರಿಸಿದ್ದಾರೆ. ಸುಸಂಸ್ಕೃತ ಮನಸ್ಸಿನ ಒಳನೋಟವನ್ನು ಇಲ್ಲಿ ಕಾಣಬಹುದು. ಇಂಥ ಭಕ್ತಿಗೀತೆಗಳನ್ನು ರಚಿಸಿದ ಕವಿ ಶ್ರೀ ದೊಡ್ಡರಂಗೇಗೌಡರಿಗೆ ಶ್ರೀ ಸಿದ್ದೇಶ್ವರರು ಸಕಲ ಸನ್ಮಂಗಳಗಳನ್ನುಂಟು ಮಾಡಲಿ ಎಂದು ಹಾರೈಸುತ್ತೇವೆ.

# ಸಂದೇಶ

✍ ಬಿ. ಎನ್. ಬಚ್ಚೇಗೌಡ
*ಪಶು ಸಂಗೋಪನಾ ಮಂತ್ರಿಗಳು*

ಶ್ರೀ ದೊಡ್ಡರಂಗೇಗೌಡರನ್ನು ನೇರವಾಗಿ ಬಲ್ಲೆ. ಅವರೊಬ್ಬ ಸಂಪನ್ನು ವ್ಯಕ್ತಿ. ನಾನೇನು ಕವಿಯಲ್ಲ. ಆದರೆ ಕವಿ ಹೃದಯವನ್ನು ಅರಿಯ ಬಲ್ಲೆ. ಅವರೊಬ್ಬ ಸಾಮಾನ್ಯ ಜನರ ಕವಿ. ಮಣ್ಣಿನ ಮಗ. ಕೃತಿಯ ಮೂಲಕ ಅವರ ಕಾವ್ಯದಲ್ಲಿ ಸರ್ವಜ್ಞನ, ಸೋಪಜ್ಞತೆಯನ್ನು ಮಂಕು ತಿಮ್ಮನ ಕಗ್ಗದ ವೈಚಾರಿಕತೆಯನ್ನು ವೇಮನ ಆಧ್ಯಾತ್ಮಿಕತೆಯನ್ನು ಅನುಭವಿಸಿದ್ದೇನೆ. ದೊಡ್ಡರಂಗೇಗೌಡರು ನನ್ನ ಸ್ವಂತ ಕ್ಷೇತ್ರವಾದ ಹೊಸಕೋಟೆಯಲ್ಲಿ ವಾಸವಾಗಿದ್ದಾರೆ ಎನ್ನುವುದೇ ನನಗೆ ಹೆಮ್ಮೆಯ ವಿಷಯ. ಅವರಿಗೆ ೫೦ ವರ್ಷ ತುಂಬಿದ ನೆನಪಿಗಾಗಿ "ಸೃಜನ ಸಂಪನ್ನ" ಎಂಬ ಅಭಿನಂದನಾ ಕೃತಿಯನ್ನು ಅಭಿಮಾನಿ ಬಳಗದವರು ಹೊರ ತರುತ್ತಿರುವುದು ಸಮಯೋಚಿತವಾಗಿದೆ. ಈ ಶುಭ ಸಂದರ್ಭದಲ್ಲಿ ಅವರಿಗೆ ನಾಡು -ನುಡಿ ಸೇವೇ ಸಲ್ಲಿಸುವ ಅಪಾರ ಸ್ಫೂರ್ತಿ ಮತ್ತು ಆರೋಗ್ಯವನ್ನು ದಯಾಮಯನು ದಯಪಾಲಿಸಲೆಂದು ಆಶಿಸುತ್ತೇನೇ

# ಭಾವುಕ ಕವಿಗೆ ಅಕ್ಕರೆಯ ಆಶೀರ್ವಾದ

✍ ಡಾ|| ಪು.ತಿ.ನ.
ಕನ್ನಡದ ಶ್ರೇಷ್ಠ ಕವಿಗಳು

ಶ್ರೀಮಾನ್ ದೊಡ್ಡರಂಗೇಗೌಡರು ಬರೀ ಸಿನಿಮಾಕ್ಕೆ ಸಂಗೀತಕ್ಕೆ ಸಂದರ್ಭಕ್ಕೆ ಸರಿಯಾಗಿ ಮಾತುಗಳನ್ನು ಜೋಡಿಸುವುದರಲ್ಲಿ ಮಾತ್ರ ನಿಪುಣರಾಗಿಲ್ಲ . ಅವರು ಕವಿಗಳೂ ಹೌದು ಅಂದರೆ ಸಂಗೀತ ಇಲ್ಲದೇನೇ ಅವರ ಕವಿತೆಗಳನ್ನು ಓದಿದರೆ ನಮಗೆ ಅದರಿಂದ ಸಂತೋಷ ಉಂಟಾಗುತ್ತದೆ. ಮಾತಿನಿಂದ ಅರ್ಥ, ಅರ್ಥದಿಂದ ಭಾವ, ಅದಕ್ಕೆ ಮೂರಕ್ಕೂ ಅದು ಪ್ರವೇಶ ಮಾಡುತ್ತದೆ. ಆದ್ದರಿಂದ ದೊಡ್ಡರಂಗೇಗೌಡರನ್ನು ಕಂಡರೆ ನನಗೆ ತುಂಬಾ ಅಭಿಮಾನವಿದೆ. ಅವರು ಕವಿಗಳಾಗಬಲ್ಲರು.

ಯಾವ ಸಂಗೀತವೂ, ಯಾವ ಸಂಗೀತಗಾರನೂ ಇಲ್ಲದೇನೇ ಬರೀ ನಾವು ಮೂಕವಾಗಿ ಓದಿದರೆ ಅದರಿಂದ ಏನೋ ಒಂದು ಭಾವ ನಮಗೆ ಉಂಟಾಗುತ್ತೋ, ಅಂತಹ ಭಾವುಕವಾದ ಕವಿತೆಗಳನ್ನು ದೊಡ್ಡರಂಗೇಗೌಡರು ಬರೆದು ಅವರು ಮೆಲ್ಲಗೆ ಕವಿಗಳ ಗೋಷ್ಠಿಗೆ ಸೇರುತ್ತಾ ಇದ್ದಾರೆ. ಅದು ನನಗೆ ತುಂಬಾ ಸಂತೋಷವನ್ನು ಉಂಟುಮಾಡುತ್ತದೆ. ಒಳ್ಳೆ ಕವಿತೆಯಾದರೆ ಅದು ವಿದ್ವಾಂಸರು ಒಳ್ಳೆದೂಂತ ಸ್ವೀಕರಿಸಿದರೆ ಅದು ಪುನರ್ಭವವಾಗುತ್ತದೆ. ಮುಂದಿನ ಪೀಳಿಗೆ ಕೂಡ ಅದನ್ನು ಸ್ವೀಕರಿಸುತ್ತದೆ. ಆದ್ದರಿಂದ ಒಳ್ಳೆಯ ನಯಗಾರಿಕೆ ಇಟ್ಟುಕೊಂಡು ಒಡನಾಡುತ್ತದೆ.

ದೊಡ್ಡರಂಗೇಗೌಡರ ಮಾತೂ ಬಹಳ ಚೆನ್ನಾಗಿದೆ ಅವರ ಮಾತನ್ನು ಕೇಳಿದ್ದು ನಾನು ಗಿರಿನಗರದ ಒಂದು ಸಮಾರಂಭದಲ್ಲಿ ಅವರು ಬಹಳ ಚನ್ನಾಗಿ ಮಾತನಾಡಿದರು ಆ ಹೊತ್ತಿನಿಂದ ನನಗೆ ಅವರನ್ನು ಕಂಡರೆ ತುಂಬಾ ಪ್ರೀತಿ - ಮಮತೆ ಇದೆ. ಬಹಳ ಒಳ್ಳೆಯವರು, ನನ್ನನ್ನು ಕಂಡರೆ ಅಭಿಮಾನ ಇಟ್ಟುಕೊಂಡಿದ್ದಾರೆ. ಬಹಳ ಸಜ್ಜನರೂ ಬಹು ಶ್ರುಶ್ರೂತರೂ ಆಗಿರುವ ದೊಡ್ಡರಂಗೇಗೌಡರ ಪಾಠ ಕೇಳುವ ಪುಣ್ಯ ವಿದ್ಯಾರ್ಥಿಗಳಿಗೆ ದೊರೆತಿರುವುದು ಒಂದು ಅದೃಷ್ಟಕೂಡ.

ವಿದ್ಯಾರ್ಥಿಗಳೇ ಸೇರಿ ಇಂತಹ ಒಳ್ಳೆಯವರಿಗೆ, ವಿದ್ವಾಂಸರಾಗಿಯೂ, ಸಜ್ಜನರಾಗಿಯೂ, ವಿಮರ್ಶಕರಾಗಿಯೂ ಇರತಕ್ಕಂತಹ ಗುರುಗಳಿಗೆ ಸನ್ಮಾನ ಮಾಡತಕ್ಕಂತಹುದು ನನ್ನಂತಹವನ ಮನಸ್ಸಿಗೆ ಬಹಳ ಸಂತೋಷವನ್ನು ಉಂಟುಮಾಡಿದೆ.

ಅವರಿಗೆ ಸಮಸ್ತ ಸನ್ಮಂಗಳವನ್ನೂ, ವಂದನೆಗಳನ್ನೂ ನಾನು ಬಯಸುತ್ತೇನೆ.

# ಹಾರ್ದಿಕ ಹಾರೈಕೆಗಳು

✍ ಡಾ|| ಎಚ್. ನರಸಿಂಹಯ್ಯ
ಶಿಕ್ಷಣ ತಜ್ಞರು

ಶ್ರೀ ದೊಡ್ಡರಂಗೇಗೌಡ ಅವರನ್ನು ನಾನು ಸುಮಾರು ೨೦ ವರ್ಷಗಳಿಂದ ಬಲ್ಲೆ. ಅವರು ಉತ್ತಮ ಕವಿಗಳು, ಸಾಹಿತಿಗಳು ಮತ್ತು ಅಧ್ಯಾಪಕರು. ಚಲನಚಿತ್ರ ಕ್ಷೇತ್ರದಲ್ಲಿ ಅವರು ರಚಿಸಿರುವ ನೂರಾರು ಹಾಡುಗಳು ತುಂಬಾ ಜನಪ್ರಿಯವಾಗಿವೆ.

ಸಾಹಿತಿಗಳಾಗಿ ಹಲವು ಪುಸ್ತಕಗಳನ್ನು ಬರೆದಿದ್ದಾರೆ. ಸಾಕಷ್ಟು ಕನ್ನಡ ಸಮಾವೇಶಗಳಲ್ಲಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ.

ಅವರಿಗೆ ೫೦ ವರ್ಷ ತುಂಬಿದ ಸಂದರ್ಭದಲ್ಲಿ ಒಂದು ಅಭಿನಂದನಾ ಸಮಾರಂಭ ಏರ್ಪಡಿಸಿ 'ಸೃಜನ ಸಂಪನ್ನ' ಎಂಬ ಅಭಿನಂದನಾ· ಗ್ರಂಥವನ್ನು ಬಿಡುಗಡೆ ಮಾಡುತ್ತಿದ್ದಾರೆ ಎಂದು ಕೇಳಿ ಸಂತೋಷವಾಯಿತು.

ಶ್ರೀ ದೊಡ್ಡರಂಗೇಗೌಡರು ಆರೋಗ್ಯವಂತರಾಗಿ ಇನ್ನು ೫೦ ವರ್ಷ ಬಾಳಿ ಬದುಕಿ ಅವರು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸುತ್ತಿರುವ ಸೇವೆಗೆ ಅವ್ಯಹಾತವಾಗಿ ಸಾಗಲಿ ಎಂದು ಹಾರೈಸುತ್ತೇನೆ.

# ಆಶೀರ್ವಾದಗಳು

✍ ಡಾ|| ಜಿ. ಎಸ್. ಶಿವರುದ್ರಪ್ಪ
ನಿವೃತ್ತ ಪ್ರಾಧ್ಯಾಪಕರು

ಕನ್ನಡ ಚಲನಚಿತ್ರ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ತಮ್ಮ ವ್ಯಕ್ತಿತ್ವದ ಮುದ್ರೆಯನ್ನು ಒತ್ತಿರುವ ಶ್ರೀ ದೊಡ್ಡರಂಗೇಗೌಡರು ಅತ್ಯಂತ ಪ್ರಿಯವಾಗಬಲ್ಲ ತಮ್ಮ ಸರಳತನ ಮತ್ತು ಸಜ್ಜನಿಕೆಗಳಿಂದ ನನ್ನ ಪ್ರೀತಿ - ವಿಶ್ವಾಸಗಳಿಗೆ ಪಾತ್ರರಾದವರಲ್ಲಿ ಒಬ್ಬರು.

ಅವರಿಗೆ ಐವತ್ತು ತುಂಬಿದ ಈ ಹೊತ್ತಿನಲ್ಲಿ ಅವರಿಗೆ ಶುಭವನ್ನು ಹಾರೈಸುವುದು ಅವರು ಮೇಸ್ಟ್ರಾದ ನನಗೆ ತುಂಬಾ ಸಂತೋಷದ ಸಂಗತಿಯಾಗಿದೆ.

# ಶುಭ ಹಾರೈಕೆಗಳು

✍ ಡಾ|| ಎಂ. ಚಿದಾನಂದ ಮೂರ್ತಿ
ಅಧ್ಯಕ್ಷರು ಕನ್ನಡ ಶಕ್ತಿ ಕೇಂದ್ರ

ಶ್ರೇಷ್ಠ ಕವಿ ಅಧ್ಯಾಪಕ ಶ್ರೀ ದೊಡ್ಡರಂಗೇಗೌಡ ಅವರನ್ನು ಅವರ ಪತ್ನಿಯನ್ನು ನಾನು ಹತ್ತಿರದಿಂದ ಬಲ್ಲೆ. ಒಳ್ಳೆಯ ಅಭಿರುಚಿಯ, ಸಮಾನ ಮನೋಧರ್ಮದ ಅನುರೂಪ ದಾಂಪತ್ಯ ಅವರದು.

ಶ್ರೀ ದೊಡ್ಡರಂಗೇಗೌಡ ಕನ್ನಡ ಕಾವ್ಯ ಕ್ಷೇತ್ರದಲ್ಲಿ ತಮ್ಮ ಹೆಸರನ್ನು ಅಂಕಿತಗೊಳಿಸಿದ್ದಾರೆ. ಅಂತೆಯೇ ಸಿನಿಮಾ ಕ್ಷೇತ್ರದಲ್ಲಿಯೂ ಅಷ್ಟೇ ದೊಡ್ಡ ಹೆಸರು ಅವರದು. ಅವರ ಹಾಡುಗಳು ಸಿನಿಮಾ ಕ್ಷೇತ್ರಕ್ಕೆ ಕನ್ನಡ ಕಾವ್ಯದ ಮೆರುಗನ್ನು ನೀಡಿವೆ. ಅನೇಕರು ಸಾಹಿತ್ಯ ಕ್ಷೇತ್ರದಲ್ಲಿ ದೂರಕ್ಕೆ ದೊಡ್ಡವರಾಗಿ ಕಾಣುವಷ್ಟು ಹತ್ತಿರದಿಂದ ಕಾಣುವುದಿಲ್ಲ. ಅವರದು ಇಬ್ಬಗೆಯ ಬದುಕು ಆದರೆ ನಿಷ್ಕಲ್ಮಶ ಶುಚೀ ಸ್ವಭಾವದ ಶ್ರೀ ದೊಡ್ಡರಂಗೇಗೌಡ ವೈಯಕ್ತಿಕ ಜೀವನದಲ್ಲೂ ಶಬಿ ಉಳಿಸಿಕೊಂಡವರು ಅವರು ಒಳ್ಳೆಯ ಮೇಷ್ಟು ಆಗಿ ತಮ್ಮ ವಿದ್ಯಾರ್ಥಿಗಳಲ್ಲಿ ಜನಪ್ರಿಯರಾಗಿದ್ದಾರೆ. ಅಲ್ಲದೆ, ಕನ್ನಡ ಚಳುವಳಿಗೆ ಬಂದು ನನ್ನ ಜೊತೆ ಅನೇಕ ಪಾಠಕಾರ್ಯಕ್ರಮಗಳಲ್ಲಿ ಸಂತೋಷದಿಂದ ಭಾಗವಹಿಸಿ ನನ್ನಂಥವನಿಗೆ ಉತ್ಸಾಹ ತಂದಿದ್ದಾರೆ. ಆ ದಂಪತಿಗಳಿಬ್ಬರಿಗೂ ನಾನು ಶುಭವನ್ನು ಕೋರುವುದಕ್ಕಿಂತ ಹೆಚ್ಚಿನ ಸಂತೋಷ ಮತ್ತೇನಿದೆ?

# ಸಂದೇಶ

✍ ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ
ನಿವೃತ್ತ ಪ್ರಾಧ್ಯಾಪಕರು

ಚಲನ ಚಿತ್ರಗಳಿಗೆ ಹಾಡುಗಳನ್ನು ಬರೆದು ವಿಸ್ಮಯಕರವಾದ ಯಶಸ್ಸು ಗಳಿಸಿರುವ ಶ್ರೀ ದೊಡ್ಡರಂಗೇಗೌಡರು ಸಾಹಿತ್ಯ ಕ್ಷೇತ್ರದ ಲೇಖಕರ ನಡುವೆಯೂ ಒಂದು ವಿಶ್ವಾಸ ಜನಕ ಹೆಸರಾಗಿ ಉಳಿದಿದ್ದಾರೆ. ಅವರು ಶಿಕ್ಷಕರಾಗಿಯೂ ನಮ್ಮ ಯುವ ಪೀಳಿಗೆ ಸಂಪರ್ಕವನ್ನು ಹೊಂದಿರುವುದು ಅವರ ಬದುಕು ಆರೋಗ್ಯ ಪೂರ್ಣವಾಗಿ ಉಳಿಯಲು ಕಾರಣವಾಗಿದೆ.

ಅವರ ಯಶಸ್ಸು ಇದುವರೆಗೆ ದುರುಪಯೋಗವಾಗದಿರುವುದಕ್ಕೆ ಮುಖ್ಯವಾಗಿ ಕಾರಣವೆಂದರೆ ಅವರ ಸ್ವಭಾವದಲ್ಲಿನ ವಿನಯ. ಇದು ಸಾಹಿತ್ಯೋಪಾಸಕನಲ್ಲಿ ಇರಬೇಕಾದ ಒಂದು ಅತ್ಯಮೂಲ್ಯ ಸದ್ಗುಣ.

# ದೊಡ್ಡ ಮನುಷ್ಯ: ದೊಡ್ಡ ಲೇಖಕ

✍ ಡಾ|| ಹಂಪ ನಾಗರಾಜಯ್ಯ

ಕೆಲವು ಮನೆಗಳಿಗೆ ಕುಟುಂಬ ವೈದ್ಯ - ಫ್ಯಾಮಿಲಿ ಡಾಕ್ಟರರು ಇರುತ್ತಾರೆ. ದೊಡ್ಡರಂಗೇಗೌಡರ ಮನೆಗೆ ನಾನು ಕುಟುಂಬದ ಮೇಷ್ಟ್ರು, ಫ್ಯಾಮಿಲಿ ಟೀಚರ್! ದೊಡ್ಡರಂಗೇಗೌಡ, ಅವರ ಮಡದಿ ರಾಜೇಶ್ವರಿ ಮತ್ತು ಮಗ ಡಿ. ಭರತ್ ಮೂವರು ನನ್ನ ಶಿಷ್ಯರೆಂಬುದು ಒಂದು ಅಪರೂಪದ ಅನುಭವ, ಪ್ರಸಂಗ.

ದೊಡ್ಡರಂಗೇಗೌಡರನ್ನು ಸುಮಾರು ಮೂರುದಶಕಗಳಿಂದ ಬಲ್ಲೆ. ನನ್ನ ಕಣ್ಣ ಮುಂದೆ ಕಲಿತರು; ದೊಡ್ಡಮನುಷ್ಯರಾದರು, ದೊಡ್ಡ ಲೇಖಕರಾಗಿ ಬೆಳೆದರು. ಅವರಲ್ಲಿ ನಾನು ಇಷ್ಟ ಪಟ್ಟ ಮುಖ್ಯ ಗುಣ ತಾಟಸ್ಥ್ಯ ನೀತಿ. ಆ ಪಂಥ, ಈ ಗುಂಪು ಎಂದು ಗುಂಪುಗಾರಿಕೆಯಲ್ಲಿ ಕಳೆದು ಹೋಗಲಿಲ್ಲ. ಬರೆಯುವ ದಾರಿ ತನ್ನದೆಂದು ನಂಬಿದರು. ಆದರಿಂದ ಸೃಷ್ಟಿ ಶಕ್ತಿಯ ಸೆಲೆ ಬತ್ತದೆ, ಬಗಡುಗೊಳ್ಳದೆ ಉಕ್ಕುತ್ತಲೇ ಇದೆ. ಕಾವ್ಯ ಅವರ ಮುಖ್ಯ ನೆಲೆ; ಚಲನಚಿತ್ರ, ಹಾಡು, ವಿಮರ್ಶೆ - ಇಂಥ ಉಳಿದ ಪ್ರಕಾರಗಳಿಗೂ ಸ್ಪಂದಿಸಿದ್ದಾರೆ.

ಅವರಿಗೆ ೫೦ ತುಂಬಿದ (ಹುಡುಗ ಹಾಗೆ ಕಾಣುವುದಿಲ್ಲ) ಈ ಸಂದರ್ಭದಲ್ಲಿ ನಾನು ಮತ್ತು ನನ್ನಾಕೆ ಡಾ. ಕಮಲಾ ಹಂಪನಾ ಸೇರಿ ಸಾಹಿತಿ ಮಿತ್ರ ದೊಡ್ಡರಂಗೇಗೌಡರಿಗೆ ಶುಭ ಕಾಮನೆಗಳನ್ನು ತಿಳಿಸಲು ಹರ್ಷಿಸುತ್ತೇವೆ. ಅವರಿಗೆ 'ಸೃಜನ ಸಂಪನ್ನ' ಎಂಬ ನೆನಪಿನ ಬಾಗಿನ ಅರ್ಪಿಸಲಿರುವುದು ಯೋಗ್ಯವಾಗಿದೆ, ಔಚಿತ್ಯ ಪೂರ್ಣವಾಗಿದೆ; "ಸೃಜನ ಸಂಪನ್ನ" ಅವರಿಗೆ ಒಪ್ಪುವ ನನ್ನಿಯ ಮಾತು.

# ಶುಭಾಶಯಗಳು

✍ ಪ್ರೊ॥ ಎಲ್. ಎಸ್. ಶೇಷಗಿರಿರಾವ್

ಶ್ರೀ ದೊಡ್ಡರಂಗೇಗೌಡರಿಗೆ ಅವರ ವಿದ್ಯಾರ್ಥಿಗಳು ಅಭಿಮಾನಿಗಳೂ ಗೌರವ ಗ್ರಂಥವನ್ನು ಅರ್ಪಿಸುವ ಸಂದರ್ಭವು ಅವರ ಕಾವ್ಯ ರಜತ ಮಹೋತ್ಸವವೂ ಆಗಿರುವುದು ಸಂತೋಷದ ಸಂಗತಿ. ಅವರು ವಿದ್ಯಾರ್ಥಿಯಾಗಿದ್ದಾಗ ೧೯೬೯ರಲ್ಲಿ ಮೊದಲನೆಯ ಸಂಕಲನ "ಜಗಲಿ ಹತ್ತಿ ಇಳಿದು" ಪ್ರಕಟವಾಯಿತು ಅದರ ಒಂದು ಕವನದಲ್ಲಿ

ಎರವಲೊಂದಿಷ್ಟನ್ನು ತರದಿರುವ ಪ್ರತಿ ಆಸೆ
ಎಚ್ಚರದ ಬೆಚ್ಚುನುಡಿ, ಗಟ್ಟಿ ಒತ್ತಾಸೆ.

ಭಿನ್ನತೆಗೆ ಬೆಲೆಕೊಟ್ಟು ಬದುಕುವ ಬಯಕೆಗಳನ್ನು ನೋಡಿಕೊಂಡಿದ್ದ ದೊಡ್ಡರಂಗೇಗೌಡರು ಬಹು ಮಟ್ಟಿಗೆ ತಮ್ಮ ಬಯಕೆಯನ್ನು ಕೈಗೂಸಿಕೊಂಡಿದ್ದಾರೆ. ಇರುವ ಮನೆ ಭದ್ರ ಮಾಡಬೇಕು ಎಂದು ಕಂಡುಕೊಂಡಿದ್ದಾರೆ

ತಮಗೆ ಸಹಜವಾಗಿ ಬಂದ ಶಕ್ತಿ ಸಾಮರ್ಥ್ಯಗಳಿಗೆ ಅಧ್ಯಯನ ಶಿಸ್ತುಗಳನ್ನು ಸೇರಿಸಿದ್ದಾರೆ. ಬದುಕಿನ ಅನುಭವ ಅವರಿಗೆ ಸಮೃದ್ಧವಾಗಿ ಬಂದಿದೆ, ಈ ಅನುಭವವನ್ನು ಅರಗಿಸಿಕೊಂಡ ಚಿಂತನೆಯು ರೂಪದಲ್ಲಿ 'ಮಣ್ಣಿನ ಮಾತು'ಗಳಾಗೆ ಹೊರಕ್ಕೆ ಚಿಮ್ಮಿದೆ.

ಸುಗಮ ಸಂಗೀತಕ್ಕೆ ಶ್ರೀ ದೊಡ್ಡರಂಗೇಗೌಡರ ಕೊಡುಗೆ ಹಿರಿದು. ಅವರ ರಚನೆಗಳು ಸಾಹಿತ್ಯ-ಸಂಗೀತ ಪ್ರಿಯರನ್ನು ಸಂತೋಷಗೊಳಿಸಿವೆ ಬದುಕಿನಲ್ಲಿ ಬಡತನವನ್ನು ಕಂಡು ಹಲವು ಸವಾಲುಗಳನ್ನು ಎದುರಿಸಿದ ದೊಡ್ಡರಂಗೇಗೌಡರು, "ನೆನಪು ಕುಣಿದಾಗೆಲ್ಲ ದುಃಖಿ, ಹಿಗ್ಗು, ಮಿಲನ ವಿರಹಗಳ - ಸಾಕಷ್ಟು ಹೆಕ್ಕಿ" ಹತ್ತಾರ ಅಲ್ಲ ನೂರಾರು ಚೇತನದ ಹರ್ಷಹನಿ ಚೆಲ್ಲಿದ್ದಾರೆ.

ಅಧ್ಯಾಪಕರಾಗಿ ವಿಧ್ಯಾರ್ಥಿಗಳ ಪ್ರೀತಿ ಗೌರವಗಳನ್ನು ಗೆದ್ದಿದ್ದಾರೆ. ಬಹು ವಿನಯದ ಮತ್ತು ಬದುಕನ್ನು ಸಂತೋಷಮಯ ಮಾಡುವ ಸಂಕಲ್ಪ ಧೈರ್ಯಗಳ ಅವರ ಶ್ರೀಮತಿಯವರನ್ನು ನಾನು ಬಲ್ಲೆ. ಇಬ್ಬರೂ ಬಹುಕಾಲ ಸಂತೋಷದಿಂದ ಬಾಳಲಿ, ಅವರ ಸಹಜ ಸಾಮರ್ಥ್ಯಗಳು ಬೆಳೆದು ಪ್ರಕಟವಾಗಲು ಅವರಿಗೆ ಎಲ್ಲ ಅವಕಾಶ ಲಭ್ಯವಾಗಲಿ ಎಂದು ಹಾರೈಸುತ್ತೇನೆ.

# ಶುಭಹಾರೈಕೆಗಳು

✍ ಗೊ. ರು. ಚನ್ನಬಸಪ್ಪ
ಅಧ್ಯಕ್ಷರು, ಕ.ಸಾ.ಪ.

ನನ್ನ ಆತ್ಮೀಯರಾದ ಶ್ರೀ ದೊಡ್ಡರಂಗೇಗೌಡ ಅವರ ಐವತ್ತನೆಯ ವರ್ಷದ ಸಂದರ್ಭದಲ್ಲಿ ಅವರ ಹಿತೈಷಿಗಳು ಮತ್ತು ವಿದ್ಯಾರ್ಥಿ ಬಳಗದವರು 'ಸೃಜನ ಸಂಪನ್ನ' ಎಂಬ ಅಭಿನಂದ ಗ್ರಂಥವನ್ನು ಸಮರ್ಪಿಸುವ ವಿಷಯ ಅತ್ಯಂತ ಹರ್ಷವೆನಿಸಿತು. ಅಭಿನಂದನಾಗ್ರಂಥಕ್ಕೆ ಇಟ್ಟಿರುವ ಹೆಸರು ಶ್ರೀ ದೊಡ್ಡರಂಗೇಗೌಡರ ವ್ಯಕ್ತಿತ್ವಕ್ಕೆ ತುಂಬ ಒಪ್ಪುತ್ತದೆ.

ಶ್ರೀ ದೊಡ್ಡರಂಗೇಗೌಡರು ತಮ್ಮ ಸೃಜನಶೀಲತೆಯಿಂದ ನಾಡಿಗೆ ಹೆಸರಾಗಿದ್ದಾರೆ. ಅವರು ಒಳ್ಳೆಯ ಪ್ರಭಾವಪೂರ್ಣ ವಾಗ್ಮಿಗಳು. ಅವರ ಕವನಗಳಲ್ಲಿ ಗ್ರಾಮೀಣ ಬದುಕಿನ ಸೊಗಡು ತುಂಬಿಕೊಂಡಿರುತ್ತದೆ. ಅಧ್ಯಾಪಕರಾಗಿ ಅಪಾರ ಶಿಷ್ಯ ಬಳಗ ಹೊಂದಿರುವ ದೊಡ್ಡರಂಗೇಗೌಡರು ಬೋಧನೆಯನ್ನು ಒಂದು ಪವಿತ್ರ ಕಾಯಕವೆಂದು ಭಾವಿಸಿದವರು.

ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ನಿಕಟ ಸಂಪರ್ಕವಿಟ್ಟುಕೊಂಡಿರುವ ಶ್ರೀ ದೊಡ್ಡರಂಗೇಗೌಡರದು ಸಹಜ ಸಜ್ಜನಿಕೆ, ಸರಳ ನಡವಳಿಕೆ, ಸ್ನೇಹ ಸಂಬಂಧಕ್ಕೆ ಹೇಳಿ ಮಾಡಿದ ವ್ಯಕ್ತಿತ್ವ. ಇಂತಹ ಆತ್ಮೀಯರಿಗೆ ಈಗ ಐವತ್ತು ತುಂಬಿದೆ. ಇನ್ನೂ ಐವತ್ತುತುಂಬಲಿ.

# ಸದಾಶಯ ಸಂದೇಶ

✍ ಲಯನ್ ಅಶೋಕ್ ಕುಮಾರ್
ಮುದ್ರಕರು ಮತ್ತು ಪ್ರಕಾಶಕರು

ಹೊಸಗನ್ನಡ ಸಾಹಿತ್ಯದಲ್ಲಿ ಭಾವಗೀತೆಗಳಿಗೆ ಬೆಡಗನ್ನು, ಜೀವಂತಿಕೆಯನ್ನು, ಮೋಹಕತೆಯನ್ನು ತಂದುಕೊಟ್ಟ ಕವಿಗಳಲ್ಲಿ ಪ್ರಮುಖರಾದ ದೊಡ್ಡರಂಗೇಗೌಡರನ್ನು ಸನ್ಮಾನಿಸುವ ಕೆಲಸ ಎಂದೋ ಆಗಬೇಕಿತ್ತು, ಯಾವ ಗುಂಪಿಗೂ ಸೇರದೆ, ಯಾರನ್ನು ಕಾಡಿಬೇಡಿ ವಿಮರ್ಶೆ ಬರೆಸಿಕೊಳ್ಳದೆ ತಮ್ಮಷ್ಟಕ್ಕೆ ತಾವು ಕವಿತೆ ಬರೆದುಕೊಂಡು ತೃಪ್ತಿಯನ್ನನುಭವಿಸುವ ದೊಡ್ಡರಂಗೇಗೌಡರಿಗೆ ಈಗಲಾದರೂ ಸನ್ಮಾನ ನಡೆಯುತ್ತಿರುವುದು ಸಂತಸದ ಸಂಗತಿಯಾಗಿದೆ, ಈ ಸಮಾರಂಭದ ಯಶಸ್ಸಿಗೆ ಹೃತ್ಪೂರ್ವಕವಾಗಿ ಶುಭಕೋರುತ್ತೇನೆ.

# ಶುಭ - ಹಾರೈಕೆ

✍ ಡಾ॥ ದ್ವಾರಕಾನಾಥ್ ಹೆಚ್. ಕಬಾಡಿ

ಸಿರಿಗನ್ನಡದ ಸುಂದರ ನೆಲದಲ್ಲಿ ಕಾವ್ಯ ಕಾವೇರಿಯಂತೆ ಜನಮನವ ತಲುಪಿ ತಮ್ಮ ಮನಮುಟ್ಟುವ ಕವಿತೆಗಳಿಂದಲೂ ಮತ್ತು ಚಿತ್ರಗೀತೆಗಳಿಂದಲೂ ತಮ್ಮದೇ ಆದ ವಿಶಿಷ್ಟಸ್ಥಾನವನ್ನು ಸಂಪಾದಿಸಿರುವ ಶ್ರೀಯುತ ದೊಡ್ಡರಂಗೇಗೌಡರದು ಗಾಂಭೀರ್ಯದಿಂದ ಕೂಡಿದ ಸರಳ ಸ್ನೇಹಮಯ ವ್ಯಕ್ತಿತ್ವ.

ಬದುಕಿನ ದಾರಿಯಲ್ಲಿ ಪಟ್ಟ ಅನೇಕ ನೋವುಗಳನ್ನು ನವನೀತದಂತೆ ಸ್ವೀಕರಿಸಿ ಅದರಿಂದ ಧೃತಿಗೆಟ್ಟು ವಿಮುಖರಾಗುವಬದಲು ಅದರಿಂದ ತರ ತರನ ಪ್ರಕಾರದ ಕಾವ್ಯವನ್ನು ಸೃಷ್ಟಿಸಿ ಭಾವಾಮೃತದಂತೆ ಜನರೆದುರಿಗೆ ಬಡಿಸಿದ ಇವರ ಸಾಹಸ ಅನುಕರಣೀಯ.

ಗಾನ ಗಾರುಡಿಗರಾದ ಇವರು ವಾಮನತ್ವದಿಂದ ತ್ರಿವಿಕ್ರಮರಂತೆ ಬೆಳೆದು ನಿಂತದ್ದು ವಿಸ್ಮಯಪಡುವಂತಹುದು.

ಪ್ರಣಯ ಇವರ ಜೀವನದ ಮತ್ತು ಕಾವ್ಯ ರಚನೆಯ ಪ್ರಮುಖವಾಹಿನಿ ಎಂದು ಹೇಳಬಹುದು. ಉಂಟಾದ ನೂರಾರು ಅಡೆತಡೆಗಳ ಮಧ್ಯೆಯೂ ಧೃತಿಗೆಡದೆ ಮೆಚ್ಚಿದ ಮುಗುದೆಯನ್ನು ಜೀವನ ಸಂಗಾತಿಯಾಗಿ ಪಡೆದ ಇವರ ದಿಟ್ಟತನ ಅನೇಕ ಪ್ರೇಮಜೀವಿಗಳಿಗೆ ಆದರ್ಶಮಯ.

ಕಾವ್ಯದಾಗಸದಲ್ಲಿ ಅಪ್ರತಿಮ ತಾರೆಯಂತೆ ಚಿರಕಾಲ ಮಿನುಗುತ್ತ ಕನ್ನಡ ಜನತೆಯ ಪ್ರೀತಿಯ ಕವಿಯಾಗಿ ಬೆಳೆದು ಸಫಲತೆಯ ಶಿಖರವನ್ನು ಪಡೆಯಲಿ ಎಂದು ಹಾರೈಸಿ, ಭಗವಂತನ ಕೃಪೆ ಇವರ ಮೇಲೆ ಸದಾ ಇದ್ದು ಇವರಿಗೆ ಸಲ್ಲಬೇಕಾದ ಎಲ್ಲ ಗೌರವಗಳು ಇವರಿಗೆ ದೊರೆತು ಕೀರ್ತಿ ಶಾಲಿಗಳಾಗಲೆಂದು ಮನತುಂಬಿ ಕೋರುವ.

# ಅಪೂರ್ವ ಗುಣಗಳ ಗಣಿ

✍ ಟಿ. ಆರ್. ಮಹಾದೇವಯ್ಯ

ಶ್ರೀ ದೊಡ್ಡರಂಗೇಗೌಡರು ನನಗೆ ವಿದ್ಯಾರ್ಥಿಯಾದಾಗಿನಿಂದ ಪರಿಚಯ ಅವರು ನಾನು ತುಮಕೂರಿನಲ್ಲಿ ಓದುತ್ತಿದ್ದಾಗ, ಆತನು-ವಸತಿಗಳಿಗೆ ಆಶ್ರಯಿಸಿದ್ದ ಕೃಪಾ ಚಿತ್ರದಲ್ಲೇ - ಲೋಕಸೇವಾನಿತ ಶ್ರೀ ಜಿ. ಎಂ. ಸಿದ್ಧರಾಮಣ್ಣ ವಿಧ್ಯಾರ್ಥಿ ನಿಲಯದಲ್ಲೇ ಇದ್ದು ಓದಿದವರು, ಅಲ್ಲಿ ನಾನು ಆರಂಭಿಸಿದ ಸಾಂಸ್ಕೃತಿಕ ಚಟುವಟಿಕೆಗಳನ್ನು ಮುಂದುವರಿಸಿದವರು; ಅವರು ನಮ್ಮ ಜಿಲ್ಲೆಯ ಬಡತನದ ನಡುವೆ ಸ್ವಸಾಮರ್ಥ್ಯದಿಂದ ಮೇಲೇರಿ ಬಂದವರು ಮೇಲೇರಿ ನಿಂತಾಗಲೂ ಕೆಳಗಿನವರನ್ನು ಮರೆಯದ ಅಪರೂಪದವರು - ಇಂಥ ಹಲವಾರು ಕಾರಣಗಳು ನಾನು ಅವರ ಬಗ್ಗೆ ಅಭಿಮಾನ ತಳೆಯುವಂತೆ ಮಾಡಿವೆ.

ಹುಟ್ಟು ಕವಿಯಾದ ಶ್ರೀ ದೊಡ್ಡರಂಗೇಗೌಡರು ಸಿನಿಮಾ ಜಗತ್ತಿನ ಮೂಲಕ ಜನಪ್ರಿಯರಾಗುವ ಮೊದಲೇ ಆಧುನಿಕ ಕನ್ನಡ ಸಾಹಿತ್ಯದ ಒಳ್ಳೆ ಕವಿಯೆಂದು ಹೆಸರುಗಳಿಸಿದ್ದರು. ದೊಡ್ಡರಂಗೇಗೌಡರು ದೊಡ್ಡವರಾಗಿ ಕಾಣುವುದು ಅವರ ಹೃದಯ ಶ್ರೀಮಂತಿಕೆಯಿಂದ ಅವರ ಸರಸ ಸಜ್ಜನಿಕೆಗಳು ಅವರ ಬಂಗಾರದ ಹೂವಿನಂಥ ವ್ಯಕ್ತಿತ್ವಕ್ಕೆ ಪರಿಮಳ ಕಟ್ಟಿಕೊಟ್ಟಿದೆ.

ಶ್ರೀ ಗೌಡರು ಒಳ್ಳೆಯ ಅಧ್ಯಾಪಕರೆಂದು ಹೆಸರುಗಳಿಸಿದ್ದಾರೆ. ಅವರ ಮಾತುಗಾರಿಗೆ ಆಕರ್ಷಕವಾದುದು ಅವರ ವಿಷಯ ಪ್ರತಿಪಾದನೆ ರೀತಿಯಂತೂ ಚಿತ್ತಾಕರ್ಷಕ. ಹೀಗಾಗಿ ಅವರೊಬ್ಬ ಶ್ರೇಷ್ಠ ಭಾಷಾ ಸಾಹಿತ್ಯ ಭೋಧಕ ಇವೆಲ್ಲಕ್ಕಿಂತ ಮುಕುಟ ಮಣಿಯಾಗಿ ಕಾಣುವ ಅಂಶವೆಂದರೆ ಅವರೊಬ್ಬ ಸ್ನೇಹಜೀವಿ. ಅವರು ಮಾನವತೆಯ ಮೇಲೆ ಅರಳಿದ ಮಂದಾರ. ತಮ್ಮ ಲೋಹಚುಂಬಿತ ಅಂತಃಕರಣದಿಂದ ಎಲ್ಲರನ್ನು ತನ್ನವರನ್ನಾಗಿಸಿಕೊಳ್ಳುವ ಅಪೂರ್ವ ಕಲೆ ಅವರಿಗೆ ಸಿದ್ಧಿಸಿದೆ

ಇಂಥ ಅನೇಕ ಅಪೂರ್ವ ಗುಣಗಳ ಗಣಿಯಾದ ಗೌಡರಿಗೆ ಐವತ್ತು ತುಂಬಿದ ಸಂದರ್ಭದಲ್ಲಿ ಎಲ್ಲ ಲೇಸುಗ ಅವರ ಬದುಕನ್ನು ತುಂಬಲೆಂದು ಹಾರ್ದಿಕವಾಗಿ ಹಾರೈಸುತ್ತೇನೆ.



# ಸನ್ಮಿತ್ರರನ್ನು ಕುರಿತು ಎರಡು ಮಾತು

✍ ಬಿ. ವಿ. ದಕ್ಷಿಣಾ ಮೂರ್ತಿ

ಸನ್ಮಾನ್ಯ ಶ್ರೀ ದೊಡ್ಡರಂಗೇಗೌಡರು ಕನ್ನಡ ನಾಡಿನ ಒಬ್ಬ ಜನಪ್ರಿಯ ಕವಿಗಳಾಗಿ ಜನತೆಯ ಮನವನ್ನು ಸೆಳೆದಿದ್ದಾರೆ. ಅವರ ಕವಿತೆಗಳನ್ನು ಓದಿದಾಗ ಸರಳ ಸುಂದರವಾದ ಗ್ರಾಮೀಣ ಜೀವನ, ಸಂಸ್ಕೃತಿ ಮತ್ತು ಪರಿಸರಗಳ ಪ್ರತಿಮೆಗಳು ಮೈತಾಳಿ ನಮ್ಮ ಕಣ್ಣ ಮುಂದೆ ನಿಲ್ಲುವುದು ನಮ್ಮ ಅನುಭವಕ್ಕೆ ಬರುತ್ತದೆ. ಕವಿತೆಯ ಸಾಲುಗಳಲ್ಲಿ ಮೂಡಿ ಬರುವ ಇಂತಹ ಹಲವಾರು ಜೀವಂತ ಚಿತ್ರಗಳು ಜಾನಪದ ಸಂಸ್ಕೃತಿಯ ಸೊಗಡನ್ನು ಮತ್ತು ಪರಿಮಳವನ್ನು ಬೀರುತ್ತವೆ. ಶ್ರೀಯುತರು ಕನ್ನಡ ಚಲನ ಚಿತ್ರ ಕ್ಷೇತ್ರದಲ್ಲಿ ಇಂಪಾಗಿ ಹಾಡಲಾಗುವಂತಹ ಗೀತೆಗಳನ್ನು ರಚಿಸಿ ರಸಿಕ ಪ್ರೇಕ್ಷಕರ ಮನವನ್ನು ಸೆಳೆದಿದ್ದಾರೆ.

ಸರಳತೆ ಸ್ನೇಹಪರತೆ ಹಾಗೂ ಸಜ್ಜನಿಕೆಗಳು ಅವರ ವ್ಯಕ್ತಿತ್ವದಲ್ಲಿ ಎದ್ದು ಕಾಣವು ಗುಣಗಳು. ಅವರು ವಿದ್ಯಾರ್ಥಿ ವೃಂದದಲ್ಲಿ ಶ್ರೇಷ್ಠ ಮಟ್ಟದ ಅಧ್ಯಾಪಕರಾಗಿ ಹೆಸರನ್ನು ಗಳಿಸಿ ಅವರ ಗೌರವ, ಅಭಿಮಾನಗಳಿಗೆ ಪಾತ್ರರಾಗಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಅವರಿಂದ ಇನ್ನೂ ಹೆಚ್ಚಿನ ಗಣನೀಯ ಸೇವೆ ಸಲ್ಲುವಂತಾಗಿ ಅದರ ಸಿರಿವಂತಿಕೆ ಹೆಚ್ಚುವಂತಾಗಲಿ ಎಂದು ನಾವೆಲ್ಲ ಹಾರೈಸೋಣ.

# ಶುಭ ಹಾರೈಕೆಗಳು

✍ ವಿಶಾಲಾಕ್ಷಿ ದಕ್ಷಿಣಾ ಮೂರ್ತಿ

ಶ್ರೀ|| ದೊಡ್ಡರಂಗೇಗೌಡರ ಪರಿಚಯ ನನಗೆ ಅನೇಕ ಸಭೆ ಸಮಾರಂಭಗಳಲ್ಲಿ ಆಗಿದೆ. ಅವರದು ಸರಳ ಸೌಜನ್ಯದ ವ್ಯಕ್ತಿತ್ವ. ತುಂಬು ಮನಸ್ಸಿನ ಸಂಭಾಷಣೆ. ವೇದಿಕೆಯ ಮೇಲೆ ನಿಂತಾಗ ಅವರದು ನಿರರ್ಗಳ ಮಾತುಗಾರಿಕೆ. ಅವರು ತಮ್ಮ ಕವಿತೆಗಳಿಂದ ಕನ್ನಡ ನಾಡಿಗೆ ಈಗಾಗಲೇ ಸಾಕಷ್ಟು ಪರಿಚಿತರಾಗಿದ್ದಾರೆ. ಅಷ್ಟೇಅಲ್ಲ ಚಲನಚಿತ್ರಕ್ಷೇತ್ರಕ್ಕೂ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಭಾವಗೀತೆಗಳು ಪ್ರಸಿದ್ಧವಾಗಿವೆ. ಅವರ ಗೀತೆಗಳಲ್ಲಿ ಜಾನಪದದ ಸೊಗಡಿದೆ. ಗ್ರಾಮೀಣತೆಯ ಭಾವವಿದೆ. ಮಣ್ಣಿನ ವಾಸನೆಯ ಮೆರುಗನ್ನು ಹೊತ್ತು ತಮ್ಮ ಕಂಪನ್ನು ಪರಿಸರಿಸುತ್ತಿವೆ . ಹಳ್ಳಿಯ ಬದುಕಿನ ಆಳವನ್ನು ನಾಡಿನಲ್ಲೆಲ್ಲಾ ಪಸರಿಸುವ ಅವರ ಕವಿತೆಯಾದ ದನಿಯನ್ನು ನಾಡಿನ ಜನತೆ ಮೆಚ್ಚುತ್ತಲೇ ಇರುತ್ತಾರೆ.

ಇಂತಹ ಒಬ್ಬ ಸತ್ವಶಾಲಿ ಕವಿಯಿಂದ ಜನತೆ ಏನೆಲ್ಲವನ್ನೂ ನಿರೀಕ್ಷಿಸಬಹುದೋ ಆ ಎಲ್ಲ ಶಕ್ತಿಗಳನ್ನೂ ಕನ್ನಡ ರಾಜರಾಜೇಶ್ವರಿಯು ಅವರಿಗೆ ದಯಪಾಲಿಸಲಿ ಎಂದು ನಾನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ಸೌಜನ್ಯ ಶೀಲ ; ದೊರಂಗೌ

✍ ಬರಗೂರು ರಾಮಚಂದ್ರಪ್ಪ
ಪ್ರಾಧ್ಯಾಪಕರು

ಶ್ರೀ ದೊಡ್ಡರಂಗೇಗೌಡರು ಮತ್ತು ನಾನು ಬಾಲ್ಯ ಸ್ನೇಹಿತರು. ನನ್ನ ಹುಟ್ಟೂರಾದ ಬರಗೂರು ದೊಡ್ಡರಂಗೇಗೌಡರ ತಾಯಿಯ ತವರುಮನೆ. ಆಗಾಗ್ಗೆ ನಮ್ಮೂರಿಗೆ ಬರುತ್ತಿದ್ದ ದೊಡ್ಡರಂಗೇಗೌಡರ ಜೊತೆಗಿನ ಪುಸ್ತಕಗಳ ರಾಶಿಯನ್ನು ಅವರಿಗಿಂತ ಸ್ವಲ್ಪ ಚಿಕ್ಕವನಾದ ನಾನು ಬೆರಗುಗಣ್ಣುಗಳಿಂದ ನೋಡಿದ್ದೇನೆ. ಗೌರವದಿಂದ, ಸಂಕೋಚದಿಂದ ಮಾತು ಪ್ರಾರಂಭಿಸಿ ಸ್ನೇಹ ಬೆಳೆಸಿದ್ದೇನೆ. ನನಗಿಂತ ಮುಂಚೆಯೇ ಸಾಹಿತ್ಯ ಕೃಷಿಯನ್ನು ಆರಂಭಿಸಿ ನಿರಂತರವಾಗಿ ಬೆಳೆ ಬೆಳೆಯುತ್ತಲೇ ಇರುವ ಈ ಗೆಳೆಯ ನಮ್ಮ ನಡುವಿನ ಒಬ್ಬ ಸೌಜನ್ಯ ಶೀಲ. ಇವರ ಸ್ನೇಹದಿಂದ ನಾನು ನಿಜಕ್ಕೂ ಕೆಲವು ಉತ್ತಮ ನೆನಪುಗಳನ್ನು ಉಳಿಸಿಕೊಂಡಿದ್ದೇನೆ. ಇವರನ್ನು ಕಂಡಕೂಡಲೇ ಬಾಲ್ಯದ ನೆನಪಂತೂ ನುಗ್ಗಿ ಬರುತ್ತದೆ.

ಸಾಹಿತ್ಯ ಮತ್ತು ಸಿನಿಮಾ ಎರಡೂ ಕ್ಷೇತ್ರಗಳಲ್ಲೂ ತಮ್ಮ ರಚನೆಗಳಿಂದ ಪ್ರಸಿದ್ಧರಾಗಿರುವ ಗೆಳೆಯ ದೊಡ್ಡರಂಗೇಗೌಡರಿಗೆ 'ಸೃಜನ ಸಂಪನ್ನ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸುತ್ತಿರುವುದು ನನಗೆ ಸಹಜವಾಗಿಯೇ ಸಂತೋಷದ ಸಂಗತಿ. ಸ್ನೇಹಿತರೊಬ್ಬರಿಗೆ ಸಲ್ಲುತ್ತಿರುವ ಈ ಗೌರವಕ್ಕಾಗಿ ಹೆಮ್ಮೆ ಪಡುತ್ತೇನೆ; ಶುಭ ಹಾರೈಸುತ್ತೇನೆ.



# ಸ್ನೇಹ ಜೀವಿ
# ಶ್ರೀ ದೊಡ್ಡರಂಗೇಗೌಡರು

✍ ಸಿ. ಸೋಮಶೇಖರ್
ವಿಶೇಷ ಜಿಲ್ಲಾಧಿಕಾರಿಗಳು

ಶ್ರೀ ದೊಡ್ಡರಂಗೇಗೌಡರು ಮೂಲತಃ ಸ್ನೇಹ ಜೀವಿಗಳು. ಕವಿಗಳಾಗಿ ಅವರು ರಚಿಸಿದ ಕವಿತೆಗಳು ಬಹಳ ಕಾಲ ಕನ್ನಡ ಸಾಹಿತ್ಯದಲ್ಲಿ ಉಳಿಯುವಂತಹುದು. ಚಿತ್ರ ಸಾಹಿತ್ಯಕ್ಷೇತ್ರಕ್ಕೆ ಕಾಲಿರಿಸಿ ನೂರಾರು ಚಿತ್ರಗಳಿಗೆ ಗೀತೆಗಳನ್ನು ರಚಿಸುವ ಮೂಲಕ ಕನ್ನಡ ಚಲನಚಿತ್ರಗಳಿಗೆ ಜಾನಪದ ಸ್ಪರ್ಶ ನೀಡಿದ ಹಿರಿಮೆ ಶ್ರೀ ದೊಡ್ಡರಂಗೇಗೌಡರದು.

ಒಂದೇ ರೀತಿಯ ಏಕತಾನತೆಯ ಚಿತ್ರ ಸಾಹಿತ್ಯವನ್ನೇ ಅನುಭವಿಸುತ್ತಿದ್ದ ಕನ್ನಡ ಚಿತ್ರ ರಸಿಕರಿಗೆ ಶ್ರೀ ದೊಡ್ಡರಂಗೇಗೌಡರ ಚಿತ್ರರಂಗ ಪ್ರವೇಶ, ನಿಜವಾಗಿಯೂ ಒಂದು ರೀತಿಯ ಹೊಸ ಅನುಭವವನ್ನೇ ನೀಡಿತು ಎಂದರೆ ಅತಿಶಯೋಕ್ತಿಯಲ್ಲ.

ಶ್ರೀ ದೊಡ್ಡರಂಗೇಗೌಡರನ್ನು ನಾನು ಸುಮಾರು ಎರಡೂವರೇ ದಶಕಗಳಿಂದ ಬಲ್ಲೆ. ಅವರ ಪತ್ನಿ ಶ್ರೀಮತಿ ರಾಜೇಶ್ವರಿಯವರನ್ನು ಕೂಡ. ಅವರಿಬ್ಬರದು ತುಂಬಾ ಅನುರೂಪದ ದಾಂಪತ್ಯ.

ಶ್ರೀ ದೊಡ್ಡರಂಗೇಗೌಡರು ಮಿತಭಾಷಿಗಳು. ಯಾರ ಮನಸ್ಸನ್ನು ನೋಯಿಸುವಂತಹ ಪ್ರವೃತ್ತಿಯವರಲ್ಲ. ತಮ್ಮ ಸರಳತೆ ಸಜ್ಜನಿಕೆಗಳ ಮೂಲಕ ಅವರು ಗಳಿಸಿರುವ ಸ್ನೇಹ ಸಮೂಹ ತುಂಬಾ ದೊಡ್ಡದು. ಕನ್ನಡದ ಶ್ರೇಷ್ಠ ಪ್ರಾಧ್ಯಾಪಕರಾಗಿ ಅಸಂಖ್ಯಾತ ವಿದ್ಯಾರ್ಥಿಗಳ ಬೃಹತ್ ಅಭಿಮಾನಿಗಳ ಬಳಗವನ್ನೇ ಹೊಂದಿರುವ ಶ್ರೀ ಗೌಡರು ಕವಿಯ ಸಹಜ ಕನಸಿನಲ್ಲಿಯೇ ವಿಹರಿಸಿದರೂ ವಾಸ್ತವಿಕ ಪ್ರಪಂಚದ ಮಣ್ಣಿನ ವಾಸನೆಯನ್ನು ಎಂದೂ ಮರೆತವರೂ ಅಲ್ಲ. ಶ್ರೀ ಗೌಡರು ಸಹಜ ಕವಿಗಳು. ಅವರು ಕಾವ್ಯಗಳು ಅವರ ಹೃದಯವಂತಿಗೆ ಹಾಗೂ ಆದರ್ಶಗಳನ್ನು ದರ್ಶಿಸುವ ದರ್ಪಣವಾಗಿದೆ.

"ಎನಗಿಂತ ಕಿರಿಯರಿಲ್ಲ" ಎಂಬ ಬಸವಣ್ಣನವರ ಆದರ್ಶವನ್ನು ಶ್ರೀಗೌಡರ ವ್ಯಕ್ತಿತ್ವದಲ್ಲಿ ಸ್ಪಷ್ಟವಾಗಿ ನಾವು ಕಾಣಬಹುದಾಗಿದೆ. ಅನಗತ್ಯ ವಿವಾದಗಳಿಗೆ ಒಳಗಾಗದೆ ಸದ್ದುಗದ್ದಲವಿಲ್ಲದೆ ಸಾಹಿತ್ಯ ಹಾಗೂ ಶಿಕ್ಷಣ ರಂಗಗಳಲ್ಲಿ ನಿಷ್ಠೆಯ ಸೇವೆ ಸಲ್ಲಿಸುತ್ತಿರುವ ಶ್ರೀ ಗೌಡರು ಪ್ರಚಾರ ಪ್ರಿಯರಲ್ಲ. ಸದಾ ಪ್ರಚಾರ ಹಾಗೂ ಅಬ್ಬರಗಳಿಂದ ದೂರ ಇರಲು ಬಯಸುವ ಶ್ರೀದೊಡ್ಡರಂಗೇಗೌಡರದು ಒಂದು ಆದರ್ಶ ವ್ಯಕ್ತಿತ್ವ. ಅವರೊಬ್ಬ ಅಜಾತಶತ್ರು.

# ಸಾರಸ್ವತ - ಸಾಲಿಗ್ರಾಮ

✍ ರಾಜಾನಂದ್
ಚಲನಚಿತ್ರ ಕಲಾವಿದರು

"ಸೃಜನ ಸಂಪನ್ನ" ಎಂಬುದು ಕೃತಾರ್ಥತೆಯ ಕುರುಹನ್ನೊಳಗೊಂಡ ಸಾರ್ಥಕ ಹೊತ್ತಿಗೆ. ಈ ಅಭಿನಂದನಾ ಹೊತ್ತಿಗೆಗೆ ಈ ಶಿರೋನಾಮೆಯನ್ನು ಇಟ್ಟವರು ಶ್ರೀ ದೊಡ್ಡರಂಗೇಗೌಡರನ್ನು ಸಂಪೂರ್ಣ ಅರಿತ ಅತ್ಯುಚ್ಚ ಸಂಸ್ಕೃತಿಯ ಸಹೃದಯಿಗಳೆನ್ನುವುದರಲ್ಲಿ ಸಂದೇಹವಿಲ್ಲ.

ಶ್ರೀ ದೊಡ್ಡರಂಗೇಗೌಡರು ಸಾಹಿತ್ಯದ ಮಹಾಯಾತ್ರೆಯಲ್ಲಿ ಮರೆಯಲಾಗದ ಒಂದು ಮೈಲಿಗಲ್ಲು; ಸಾಹಿತ್ಯಾರಾಧಕರಿಗೆ ಅವರೊಂದು ಸಾರಸ್ವತ ಸಾಲಿಗ್ರಾಮ! ಸ್ವಯಂ ಪ್ರತಿಭೆಯ ಪರಿಪೋಷಣೆಯನ್ನು ಅನುಸರಿಸಿ, ತಮ್ಮ ವೈಯಕ್ತಿಕ ಜೀವನದ ನಾನಾ ಘಟನೆಗಳನ್ನು, ಹಾಗೂ ಸಮಾಜದ ಅನೇಕ ದೃಶ್ಯಗಳನ್ನು ಬಹು ವಿಪುಲವಾಗಿ ಚಿತ್ರಿಸಿದವರು ಶ್ರೀ ದೊಡ್ಡರಂಗೇಗೌಡರು.

ಸಾಮಾಜಿಕ ಕ್ಷೇಮವನ್ನು ಹೆಗ್ಗುರಿಯಾಗಿಟ್ಟುಕೊಂಡು ಶ್ರೀಯುತರು ಬರೆದಿರುವ ಒಂದೊಂದು ಕವನವೂ ಅರ್ಥಪೂರ್ಣ ಮತ್ತು ರಸಗರ್ಭಿತ! ಅಲ್ಲಲ್ಲಿ ಅನುಪಮವಾದ ವ್ಯಂಗ್ಯಗಳನ್ನು ಉಪಯೋಗಿಸಿಕೊಂಡು, ಸಾಮಾಜಿಕ ಆಯಾಮಗಳನ್ನು ಚಿತ್ರಿಸುವುದರಲ್ಲಿ ಅವರದು ಎತ್ತಿದ ಕೈ! ಅವರು ರಚಿಸಿರುವ ಅನೇಕ ಕವನಗಳು, ಭಾವವೈಚಾರಿಕತೆಯಿಂದಿರುವ ಜೀವ ದ್ರವ್ಯಗಳು!.

ಗೌಡರು ನನ್ನ ಹೃದಯಕ್ಕೆ ತುಂಬ ಹತ್ತಿರದ ಕವಿಗಳು. ಅವರ ಕವನಗಳು ನನ್ನ ನಾಡಿಗಳನ್ನು ಮಿಡಿಸುತ್ತವೆ. ಅವುಗಳನ್ನು ಓದಿದರೆ, ನನಗೆ ಒಂದು ರೀತಿಯ ಹರ್ಷೋಲ್ಲಾಸ; ಅಪರಿಮಿತ ಆನಂದ; ರಸತಿರುಳನ್ನು ಸವಿದಷ್ಟು ಧನ್ಯತೆ!

ಗೌಡರು ನನ್ನೊಡನೆ ೩-೪ ಸಲ ಮಾತನಾಡಿದ್ದಾರೆ. ಅವರ ವಿನಮ್ರ ವಿನಯಶೀಲ ಸವಿಮಾತುಗಳಿಗೆ ನಾನು ಆನಂದಗೊಂಡಿದ್ದೇನೆ; ಅವರ ಹೃದಯವಂತಿಕೆಗೆ ಶಿರಬಾಗಿದ್ದೇನೆ!

ಅವರ ಕಾವ್ಯ ಬತ್ತಳಿಕೆಯಲ್ಲಿ ನಾನಾ ಶಸ್ತ್ರಗಳಿವೆ. ಅವುಗಳಲ್ಲಿ ಕೆಲವಂತೂ ಚಲನಚಿತ್ರರಂಗಕ್ಕೆ ಅಳವಡಿಸಿದ ಅರ್ಥ ಪುಷ್ಟಿಯ ರಸತಿರುಳಿನ ಸ್ವಾರಸ್ಯ ಬಿತ್ತುಗಳು.

ಗೌಡರಲ್ಲಿ ಕಾರಯಿತ್ರೀರೂಪದಲ್ಲಿದ್ದುಕೊಂಡು ಕೃತಿಗಳನ್ನು ಮೂಡಿಸಲು ಯಾವುದು ಕಾರಣವಾಗಿದೆಯೋ, ಅದೇ ಪ್ರತಿಭಾಭೂಷಿತ ಶಕ್ತಿ ಭಾವಯಿತ್ರೀ ರೂಪದಲ್ಲಿ ಸಕಲ ಸಾಹಿತ್ಯ ಪ್ರಿಯರ ಹೃದಯಗಳಲ್ಲಿ ಜೀವಗೊಂಡು, ಕವಿಯ ಕೃತಿಗಳಿಗೆ ಚಾಲನೆ ಸಿಗುವಂತಾಗಲಿ, ಮತ್ತು ಇತ್ಯೋಪ್ಯತಿಶಯವಾದ ಆಯುರಾರೋಗ್ಯ ಸಂಪದವನ್ನು ದೈವ ಅವರಿಗೆ ದಯಪಾಲಿಸಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.

# ಪ್ರಯೋಗಶೀಲ ಸಾಹಿತಿ

✍ ಟಿ. ಎಸ್. ನಾಗಾಭರಣ
ಚಲನ ಚಿತ್ರ ನಿರ್ದೇಶಕರು

ದೊಡ್ಡರಂಗೇಗೌಡರೊಡನೆ ನನ್ನ ಪರಿಚಯ ಎರಡು ದಶಕಗಳ ಹಿಂದಿನದು ಬಯಲುರಂಗಮಂದಿರದಲ್ಲಿ ಜೋಕುಮಾರ ಸ್ವಾಮಿ ನಾಟಕದಲ್ಲಿ ೧೯೭೦ರಲ್ಲಿ ಮೇಳದಲ್ಲೊ ಹಿಮ್ಮೇಳದಲ್ಲೊ ಮತ್ತೆ Central College ನಲ್ಲಿ ರಿಹರ್ಸಲ್ ಮಾಡಿದ್ದ ಜಾಗದಲ್ಲೂ ನಗೆಮೊಗದ ಈ ವ್ಯಕ್ತಿ ನನ್ನೊಡನೆ ಬೆರೆಯುತ್ತಿದ್ದ ರೀತಿ ಅತ್ಯಂತ ಸ್ಮರಣೀಯ.

ಅಂದಿನಿಂದ ಇಂದಿನವರೆಗೆ ನಾನು ಮತ್ತು ದೊರಂಗೌ ಚಲನ ಚಿತ್ರ ಕ್ಷೇತ್ರದಲ್ಲಿ ಒಟ್ಟಿಗೆ ಕೆಲಸ ಮಾಡಿದವರು ಮತ್ತು ಒಟ್ಟಿಗೆ ಬೆಳೆದವರು.

ಬಂಗಾರದ ಜಿಂಕೆ, ಪ್ರಾಯ ಪ್ರಾಯ, ಪ್ರೇಮಯುದ್ಧ ಹೀಗೆ ನನ್ನ ಹತ್ತು ಹಲವಾರು ಚಿತ್ರಗಳಿಗೆ ತಮ್ಮ ಕಾವ್ಯದ ನೀರೆರೆದಿದ್ದಾರೆ ಆಗೆಲ್ಲ ಈ ಗೀತೆಗಳ ಗಾರುಡಿಗ ಪದಗಳೊಡನೆ ಹೊಸ ಹೊಸ ಪ್ರಯೋಗಗಳನ್ನು ಲೀಲಾಜಾಲವಾಗಿ ಕಾವ್ಯಮಯವಾಗಿ ಮಾಡುತ್ತಿದ್ದುದನ್ನು ಕಂಡು ಬೆರಗಾಗಿದ್ದೇನೆ. ಕನ್ನಡ ಚಲನಚಿತ್ರ ಸಾಹಿತ್ಯ ಜಗತ್ತಿನ ಜಗಲಿ ಹತ್ತಿ ಇಳಿದು ಈ ನವ್ಯ ಸಾಹಿತಿ ಚಿತ್ರ ಸಾಹಿತಿಯಾಗಿ ಜನಮನ ಸೂರೆಗೊಂಡದ್ದನ್ನು ಕಂಡು ಹಿಗ್ಗಿದ್ದೇನೆ.

ಎಷ್ಟೊ ಜನರಂತೆ ಸಂದರ್ಭಕ್ಕೆ ತಕ್ಕಂತೆ ಡಿಥೀರ್ ಕವಿತೆ ಬರೆದವರಲ್ಲ ದೊರಂಗೌ. ಕಥೆಯ ನಾಡಿ ಮಿಡಿತವನ್ನು ಹಿಡಿದು ಪಾತ್ರಗಳ ಆಳಹರಹುಗಳನ್ನು ವಿಮರ್ಶಿಸಿ ಎಷ್ಟೋಸಲ ಸರಿ ಇಲ್ಲದ್ದನ್ನು ಸರಿಪಡಿಸಿ ಕಾವ್ಯದ ಮಿಂಚ ಮೇಳೈಸಿ ಕವನ ಬರೆದವರು.

ಸದಭಿರುಚಿಯ ಸಾಹಿತ್ಯ ಕೆಲವರನ್ನೇ ಮಟ್ಟಬಹುದು ಆದರೂ ಅದು ಚಿರಂತನವಾಗಿ ಉಳಿಯುವಂತಹುದು ಎಂಬುದಕ್ಕೆ ದೊರಂಗೌ ಅವರ ಸಾಹಿತ್ಯವೇ ಸಾಕ್ಷಿ. ಈ ಸಾಹಿತ್ಯ ಕೃಷಿ ಸದಾ ಹಸಿರಾಗಿರಲಿ ಹೊಸದನ್ನು ತರ್‍ತಾ ಇರಲಿ ಯಾವಾಗಲೂ ನನ್ನ ಸ್ನೇಹಿತನಾಗಿರಲಿ.

ಅವರೇ ಹೇಳುವಂತೆ ಮತ್ತೂ.. ಮತ್ತೂ.. ಮತ್ತೂ.. ಬಗೆಯ ಬೇಕೆಂದಿದ್ದ ಆಲಾಪ ಗುಂಭಗಳ, ಕೋಮಲ ಪದಡಿಂಬಗಳ ಸಾಧ್ಯವಾದರೆ ಮಾರ್ನುಡಿಸಬೇಕೆಂದಿದ್ದ ಓಂಕಾರದಾಚೆ ಝೇಂಕಾರಗಳ.

ಈ ಹುಡುಕಾಟ ಎಂದಿನವರೆಗೆ ಇರುತ್ತದೊ ಅಂದಿನ ವರೆಗೆ ಇವರು ಸೃಜನ ಸಂಪನ್ನರು.

## ಹೊಸ ಆಯಾಮದ ಚಿಂತಕ

✍ ಕುಮಾರ್ ಬಂಗಾರಪ್ಪ
ಚಲನ ಚಿತ್ರ ಕಲಾವಿದ

ನನ್ನ ಮಾರ್ಗದರ್ಶಿಗಳಲ್ಲೊಬ್ಬರಾದ ಜಾನಪದ ಸಾಹಿತಿ ಶ್ರೀ ದೊಡ್ಡರಂಗೇಗೌಡರ ಬರವಣಿಗೆಗಳು ವಿಶೇಷವಾಗಿ ಚಿತ್ರರಂಗಕ್ಕೆ ದಶಕಗಳಿಂದಲೂ ಹರಿದುಬರುತ್ತಿರುವುದು ಸರ್ವವೇದ್ಯವಾದ ಸಂಗತಿ.

ಹೊಸ ಆಯಾಮದ ಚಿಂತಕರಾಗಿ, ಗುರುವಾಗಿ ದಾರ್ಶನಿಕರಾಗಿ ಕೃತಿಗಳಿಸಿದ ಧೀರರಲ್ಲಿ ಒಬ್ಬರಾಗಿ ಸಾಹಿತ್ಯಕ್ಷೇತ್ರದಲ್ಲೂ, ಬೋಧನಾ ಕ್ಷೇತ್ರದಲ್ಲೂ ಅವಿಶ್ರಾಂತವಾಗಿ ಶ್ರಮಿಸುತ್ತಿರುವ ಶ್ರೀಯುತರಿಗೆ. "ಸೃಜನ ಸಂಪನ್ನ"ವೆಂಬ ಸಂಭಾವನ ಗ್ರಂಥವನ್ನು ಅರ್ಪಿಸುತ್ತಿರುವುದು ಸಮಯೋಚಿತವಾದ ಶ್ಲಾಘನೀಯ ಕಾರ್ಯವೆಂದು ಭಾವಿಸುತ್ತೇನೆ.

ಆ ಔಚಿತ್ಯಪೂರ್ಣ ಸಮಾರಂಭವು ಯಶಸ್ವಿಯಾಗಿ ಜರುಗಲೆಂದು ಹಾರೈಸುತ್ತಾ ಈ ಸತ್ಕಾರ್ಯಕ್ಕೆ ಕಾರಣಕರ್ತರಾದವರೆಲ್ಲರನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಶ್ರೀ ದೊಡ್ಡರಂಗೇಗೌಡರ ಸಾಹಿತ್ಯ ಸೇವೆಯು ಕನ್ನಡನಾಡಿನ ಜನತೆಗೆ ನಿರಂತರವಾಗಿ ಲಭಿಸುತ್ತಿರಲೆಂದು ಆಶಿಸುತ್ತೇನೆ.

## ಸೃಜನ ಸಂಪನ್ನರಿಗೆ ಪ್ರಣಾಮಗಳು

✍ ರಾಮಕೃಷ್ಣ
ಕಲಾವಿದ

"ಈ ಗಾಳಿ ಈ ನೀರು ನನ್ನ ಉಸಿರು, ಈ ಬೀದಿ, ಈ ಮನೆಯೆ ನನ್ನ ತೊಟ್ಟಿಲು, ಜನ್ಮ ನೀಡಿದ ಭೂತಾಯಿಯ ನಾ ಹೇಗೆ ತಾನೆ ಮರೆಯಲಿ?" ಎಂದು "ಪಡುವಾರಳ್ಳಿ ಪಾಂಡವರು" ಚಿತ್ರಕ್ಕೆ ಬರೆದ ಹಾಡು ನನ್ನ ಚಿತ್ರಜೀವನದ ಮೊದಲನೆ ಹಾಡು. ಈ ಹಾಡನ್ನೇ ಎಲ್ಲೆಂದರಲ್ಲಿ ಹಾಡುತ್ತ ನನ್ನ ೧೯ ವರ್ಷಗಳ ನಟನಾ ವೃತ್ತಿಯಲ್ಲಿ ಮುನ್ನಡೆಯುತ್ತಿದ್ದೇನೆ. ಸಾರ್ಥಕತೆ ಪಡೆಯುತ್ತಿದ್ದೇನೆ. ಈ ಋಣವನ್ನು ಈ ಹಾಡಿನ ಕರ್ತೃ ಶ್ರೀ ದೊಡ್ಡರಂಗೇಗೌಡರಿಗೆ ನಾನು ಹೇಗೆ ತೀರಿಸಲಿ? ಅದು ಅಸಾಧ್ಯ. ಹಾಗೆ ಕನ್ನಡ ಚಿತ್ರ ಪ್ರಚಾರಕ್ಕೆ ಸಹ ಶ್ರೀ ದೊಡ್ಡರಂಗೇಗೌಡರ ಋಣ ತೀರಿಸಲು ಸಾಧ್ಯವಾಗದು.

ಅವರ ಐವತ್ತು ಸಂವತ್ಸರದ ಶುಭಸಂದರ್ಭದಲ್ಲಿ "ಸೃಜನ ಸಂಪನ್ನ"ದ ಅಡಿಯಲ್ಲಿ ನನ್ನ ಅನಂತ ಪ್ರಣಾಮಗಳು.

# ಪ್ರತಿಭೆಯ ವಿವಿಧ ರೂಪ
# ಪ್ರೀತಿ ಪ್ರಗಾಥ

✍ ಸತ್ಯಾನಂದ

ಪ್ರೊ|| ದೊಡ್ಡರಂಗೇಗೌಡರ "ಪ್ರೀತಿ ಪ್ರಗಾಥ" ಅನ್ನು ಕೇಳಿ ಆನಂದಿಸಿದ್ದೇನೆ. ಕರ್ನಾಟಕ ಸಚಿವಾಲಯ ಕ್ಲಬ್‌ನಲ್ಲಿ ಒಂದು ಸಂಜೆ ಅವರು ತಮ್ಮ ಪತ್ನಿಯೊಂದಿಗೆ ಆಗಮಿಸಿ ಆ ಕಾವ್ಯವನ್ನು ವಾಚನ ಮಾಡಿದ ಸವಿನೆನಪು ಇಂದಿಗೂ ನಮ್ಮಲ್ಲಿದೆ. ಸುದೀರ್ಘವಾದ ಕಾವ್ಯ ಎಲ್ಲರೂ ಮೆಚ್ಚುವ ದನಿ, ಧ್ವನಿಯಲ್ಲಿದೆ. ಅವರ ಧರ್ಮಪತ್ನಿಯವರೂ ವಾಚನ ಕಾಲಕ್ಕೆ ಇದ್ದುದು ಒಂದು ಮಹಾಪ್ರಸಂಗ ಕಾವ್ಯವು ಬಹು ಸುಂದರ, ಸರಳ ಶೈಲಿಯಲ್ಲಿ ಪ್ರಾರಂಭವಾಗಿ ಜೀವನದ ಎಲ್ಲಾ ರಸ ನಿಮಿಷಗಳನ್ನು ಒಳಗೊಂಡಿದೆ. ಬಾಲ್ಯದಲ್ಲಿ ಬರುವ ಬಡತನದ ದುಃಖದುಮ್ಮಾನಗಳೂ ಅಲ್ಲಿವೆ. ಯೌವನದ ಚೈತ್ರವನ್ನೂ ಅಲ್ಲಿ ನೋಡಬಹುದು ಕಾಲಕ್ಕೆ ತಕ್ಕಂತೆ ಪ್ರೇಮ ಚೇಷ್ಟೆಗಳು ಇಲ್ಲಿ ಇಣಕಿವೆ.

ಯೌವ್ವನದ ವಿಕಲತೆ ಆಶಾಗೋಪುರಗಳೂ ಇಲ್ಲಿ ಕಾಣಬಹುದು ಬಹು ಸಹನೆಯಿಂದ ಎಲ್ಲ ಕಷ್ಟ ಕಾರ್ಪಣ್ಯಗಳನ್ನು ಸಹಿಸಿ, ಜೀವನ ಹಾದಿಯಲ್ಲಿ ಸುಗಮವಾಗಿ ನಡೆದಿದ್ದಾರೆ. ಅನುಭವದ ಪರಿಪಾಠವನ್ನು ಕಡೆಗೆ ಕಂಡಿದ್ದಾರೆ. ಜೀವನದ ಉದ್ದೇಶವೇನು? ಕಾವ್ಯದ ಲಕ್ಷಣಗಳೇನು? ಕವಿಯ ಮನೋಭಾವ ಹೇಗಿರಬೇಕು? ಮುಂತಾದ ಪ್ರತಿಭೆಯ ವಿವಿಧ ರೂಪಗಳನ್ನಿಲ್ಲಿ ಕಾಣಬಹುದು.

ಕಾವ್ಯದೃಷ್ಟಿಯ ಆಯಾಮಗಳೇನು? ಎಲ್ಲವನ್ನೂ ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ. ಒಟ್ಟಿನಲ್ಲಿ ಕವಿಯ ಸಹಜ ಜೀವನ ವಯೋಧರ್ಮ, ನೀತಿಯಲ್ಲಿ ನಿಯಮಗಳ ಬೆಡಗು, ಸಾಹಿತ್ಯದ ಒಳಸೌಂದರ್ಯವನ್ನಿಲ್ಲಿ ಕಾಣಬಹುದು.

ಧರ್ಮಪತ್ನಿಯು ಸಹಧರ್ಮಿಣಿಯಷ್ಟೇ ಅಲ್ಲ; ಆಕೆಯು ಜೀವನದ ಉಸಿರು ಪ್ರೀತಿಯ ಬುಗ್ಗೆಯಾಗಿ ಕಂಡಿದ್ದಾರೆ. ಬದುಕು ಬಂಗಾರವಾಗಬೇಕಾದರೆ, ಬಾಳ ಸಂಗಾತಿಯು ಮಧುರ ಸಖಿಯಾಗಬೇಕು. ಗಾಯನ ಗಂಗೆಯಾಗಬೇಕು. ವರಕವಿ ಬೇಂದ್ರೆಯವರು ಹೇಳುವಂತೆ "ಒಲುವೇ ನಮ್ಮ ಜೀವನ"ವಾಗಬೇಕು. ಶ್ರೀ ದೊಡ್ಡರಂಗೇಗೌಡರು ತಮ್ಮ ಒಲುವಿನ, ಚೆಲುವಿನ, ಗೆಲುವಿನ ಜೀವ ಸಖಿಯನ್ನು ಪಡೆದು ಧನ್ಯರಾಗಿದ್ದಾರೆ. ಅವರ ಜೀವನ ಹೀಗೆಯೇ ರಸಮಯವಾಗಿ ಸಾಗಲೆಂದು ದೇವರಲ್ಲಿ ಪ್ರಾರ್ಥನೆ.

# ದೊಡ್ಡರಂಗೇಗೌಡರ ಸಮಗ್ರ ನವ್ಯಕಾವ್ಯ ಕೃಷಿ; ಒಂದು ಪಕ್ಷಿನೋಟ

✍ ಎಂ. ಎಸ್. ಅಶ್ವತ್ಥ್
ಕನ್ನಡ ಉಪನ್ಯಾಸಕ

ಜಗತ್ತಿನಲ್ಲಿ ಯಾವುದೇ ವ್ಯಕ್ತಿ ಮತ್ತು ವಸ್ತುವನ್ನು ಹೊರತುಪಡಿಸಿ ಮೌಲ್ಯವನ್ನು ಕುರಿತು ಚರ್ಚಿಸುವುದು ಸಾಧ್ಯವೇ ಇಲ್ಲ. ವ್ಯಕ್ತಿ ಮತ್ತು ವಸ್ತುವನ್ನು ನೋಡಿದಾಗ ಅದರ ಬಾಹ್ಯ ಅರಿವು ನಮಗಾಗುತ್ತದೆ ನಿಜ, ಆದರೆ ಅಂತರಾಳದಲ್ಲಿ ಅಡಗಿರುವ ಮೌಲ್ಯವನ್ನು ಕುರಿತು ಮೆಚ್ಚುವಾಗ ನಮ್ಮಲ್ಲಿ ಪ್ರತಿಕ್ರಿಯೆಯ ಅರಿವು ತೀವ್ರವಾಗುತ್ತದೆ, ಆಗಲೇ ಬೇಕು. ಕೇವಲ ಬಾಹ್ಯವಷ್ಟೇ ಸತ್ಯವಲ್ಲ. ಅದು ಮೌಲ್ಯವಾಗಿ ಪರಿಗಣನೆಗೆ ಬರಬೇಕಾದರೆ, ವ್ಯಕ್ತಿ-ವಸ್ತುಗಳ 'ಸಮಗ್ರ ಸತ್ಯ' ಕಾಣಬೇಕಾದರೆ ಅನುಭವಿಸುವ ಮನಸ್ಸಿಗೂ ಸಂವೇದನಾ ಶೀಲ ಪ್ರತಿಕ್ರಿಯೆಯ ಅರಿವು ಇರಲೇಬೇಕು.

ಚಳಿಗಾಲದ ಒಂದು ರಾತ್ರಿ ಜೊತೆಯಾಗಿ ನಡೆವ ಗೆಳೆಯರಿಬ್ಬರಿಗೆ ಒಂದೇ ಬಗೆಯ ವಾತಾವರಣ ಒಂದೇ ಬಗೆಯ ಅನುಭವವನ್ನು ಕೊಡದೆ ಬೇರೆ ಬೇರೆಯಾಗಿಯೇ ಅರಿವಿನ ಕ್ರಿಯೆ ಸ್ಫೋಟಿಸಬಹುದು. ಅಂತಹ ಬಾಹ್ಯ ಅರಿವು ಮತ್ತು ಆಂತರಿಕ ಸಂವೇದನಾ ವಿಷಯಗಳ ಪ್ರಾಮಾಣಿಕ ಪ್ರತಿಕ್ರಿಯೆಯಿಂದ ಮಾತ್ರ ವಸ್ತುನಿಷ್ಠ ಮೌಲ್ಯಗಳ ಸತ್ಯವನ್ನು ಕಾಣಬಹುದು. ಇಲ್ಲದೇ ಹೋದರೆ ಮೌಲ್ಯಗಳು ಅಪಮೌಲ್ಯಗಳಾಗಿ, ಸತ್ಯ ಭ್ರಾಂತಿಯಾಗಿ ತೋರಿದರೆ ಗಾಬರಿ ಪಡಬೇಕಾಗಿಲ್ಲ. ಇಂತಹ ಪರಸ್ಪರ ಅರಿವಿನ ಕ್ರಿಯೆಯ ಮನಸ್ಥಿತಿಯುಳ್ಳವ ಮಾತ್ರ ಏನಾದರೂ ದರ್ಶನ ಕಾಣಲು ಸಾಧ್ಯ.

ದರ್ಶನದ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡು ಈ ನೆಲದ ಮಣ್ಣಿನೊಂದಿಗೆ ಒಡನಾಡುತ್ತಾ, ನಾಡು-ನುಡಿಯ ಕೀರ್ತಿಗಾಗಿ ದುಡಿದು, ಈ ನಾಡಿನಲ್ಲಿ ಅನೇಕ ಮಹನೀಯರು ಸತ್ಪಥದಲ್ಲಿ ನಡೆದಿದ್ದಾರೆ. ತಮ್ಮ ಬಾಳಿನಲ್ಲಿ ಕಂಡುಂಡ ಅನೇಕಾನೇಕ ಸತ್ಯಾಸತ್ಯತೆಗಳನ್ನು ಅಭಿವ್ಯಕ್ತಿಸುತ್ತಾ ಸನ್ಮಾರ್ಗದಲ್ಲೇ ನಡೆದು ಅಮರರಾಗಿದ್ದಾರೆ. ಅವರುಗಳ ಉದಾತ್ತ ಆದರ್ಶದ ಬೆಳಕಿನಲ್ಲೇ ಸಹೃದಯತೆಯನ್ನು ಮೆರೆಯುತ್ತಾ ಸರಳತೆ, ಸೌಜನ್ಯ, ಸಜ್ಜನಿಕೆಗಳಿಂದ ಸಾಮಾಜಿಕ ಋಣ ತೀರಿಸುತ್ತಾ ಎಲೆಮರೆಯ ಕಾಯಿಗಳಂತೆ ಇಂದಿಗೂ ನಮ್ಮ ನಿಮ್ಮ ನಡುವೆ ಹಲವರು ಬದುಕು ಸಾಗಿಸುತ್ತಿದ್ದಾರೆ. ಅಂತಹವರಲ್ಲಿ ಕಳೆದ ಮೂರು ದಶಕಗಳಿಂದಲೂ ಅನುಪಮ ಆದರ್ಶದ ಪಥದಲ್ಲಿ ಸಾಗುತ್ತಿರುವ ಶ್ರೀ ದೊಡ್ಡರಂಗೇಗೌಡ ಅವರು ಉದಾತ್ತ ಧ್ಯೇಯಗಳನ್ನಷ್ಟೇ ನಂಬಿ ಜೀವನ ಮಾರ್ಗದಲ್ಲಿ ಕ್ರಮಿಸುತ್ತಿದ್ದಾರೆ.

ನಾನು ಬಾಲ್ಯದಲ್ಲಿ ಹಳ್ಳಿಗಾಡಿನ ಧೂಳಿನ ಜೀವನದೊಂದಿಗೆ ಬದುಕುತ್ತಿದ್ದಾಗ ಕವಿ ದೊಡ್ಡರಂಗೇಗೌಡರ ಹೆಸರಿನ ಪರಿಚಯವೇ ಇಲ್ಲದೆ ಗೋಮಾಳದಲ್ಲಿ ದನ ಕಾಯುವಾಗ, ಕಣದಲ್ಲಿ ಧಾನ್ಯ ಬೇರ್ಪಡಿಸುವಾಗ, ತೋಟ, ಗದ್ದೆ, ಹೊಲಗಳಲ್ಲಿ ದುಡಿಯುವಾಗ, ಬೇಸಿಗೆಯ ಬಿಸಿ ದಿನಗಳ ರಾತ್ರಿ ಊರ ಮುಂದಲ ಬಯಲಾಟದ ರಂಗಮಂದಿರದಲ್ಲಿ ಕುಳಿತು ಇವರು ರಚಿಸಿದ ಗೀತೆಗಳನ್ನು ಹಳ್ಳಿಯ ಹೈದರು ಗುನುಗಿಕೊಳ್ಳುತ್ತಿದ್ದುದನ್ನು ನೂರಾರು ಬಾರಿ ಕೇಳಿದ್ದೇನೆ. ರಚನೆಕಾರ ಯಾರೆಂದು ತಿಳಿಯದೇ ದೊಡ್ಡರಂಗೇಗೌಡರು ರಚಿಸಿದ ಗೀತೆಗಳು ಜನಪ್ರಿಯವಾಗಿ ಜನಮನವನ್ನು ಸೂರೆಗೊಂಡಿದ್ದುದನ್ನು ಇಂದಿಗೂ ನಾನು ನೆನೆದುಕೊಳ್ಳುತ್ತಾ ಬೆರಗಾಗುತ್ತೇನೆ.

ಬಯಲು ಸೀಮೆಯಾದ ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಕುರುಬರ ಹಳ್ಳಿಯ ಪಡ್ಡೆಹುಡುಗನೊಬ್ಬ ಒಕ್ಕಲು ಮಕ್ಕಳ ಬದುಕಿನ ಮೂಲ ಸೆಲೆಯಾದ ಮಣ್ಣನ್ನೇ ಮುಕ್ಕಿ ಮಣ್ಣಿನ ಗುಣವನ್ನೇ ಕಕ್ಕುತ್ತಾ ಜನಪದದೊಂದಿಗೆ ಬೆರೆತು ಜೀವನ ಜೋಕಾಲಿಯಲ್ಲಿ ಕುಳಿತು ಹಸನ್ಮುಖಿ ಭಾವದಿಂದ ಮೇಲೇರುತ್ತಿರುವುದನ್ನು ನೋಡಿ ಆಶ್ಚರ್ಯ ಚಕಿತನಾಗಿದ್ದೇನೆ.

ಜಾನಪದ ಜಾದೂಗಾರರಂತೆ ಬೆಳೆಯುತ್ತಿರುವ ದೊಡ್ಡರಂಗೇಗೌಡರನ್ನು ನಾನು ಕಳೆದ ಐದಾರು ವರ್ಷಗಳಿಂದ ಚೆನ್ನಾಗಿ ಬಲ್ಲೆ. ಇವರ ಜೊತೆಯಲ್ಲೇ ಪಾಠಹೇಳುವ ಕಾಯಕದಲ್ಲಿ ತೊಡಗಿರುವ ನಾನು ಪ್ರತಿನಿತ್ಯ ಸೂಕ್ಷ್ಮವಾಗಿ ಅವರ ಕಾವ್ಯಕೃಷಿಯನ್ನು ಗಮನಿಸುತ್ತಲೇ ಬಂದಿದ್ದೇನೆ. ಏರುತ್ತಿರುವ ಎತ್ತರವನ್ನು ಕಂಡು ಸಂತೋಷಪಟ್ಟಿದ್ದೇನೆ.

ಮನಸ್ಸಿನ ತುಂಬಾ ಕೊಳಕು ರಾಡಿಯನ್ನೇ ತುಂಬಿಕೊಂಡು ಮೋಸ, ಧಗ, ವಂಚನೆ, ಕ್ರೌರ್ಯಗಳನ್ನೇ ಮೈಗೂಡಿಸಿಕೊಂಡಿರುವ ಇಂದಿನ ಬಹುಪಾಲು ಜನರಲ್ಲಿ ಬೂಟಾಟಿಕೆ, ಬಾಹ್ಯಾಡಂಭರ, ದರ್ಪ-ಪ್ರತಿಷ್ಠೆ ನರ್ತನ ಮಾಡುತ್ತಿವೆ. ಇಂತಹ ದುರ್ದಿನಗಳಲ್ಲೂ ಬಂದವರನ್ನು ಪ್ರೀತಿಯಿಂದ ಬನ್ನಿರೆಂದು, ಕುಳ್ಳಿರಿಸಿಕೊಂಡು ಆತ್ಮೀಯತೆಯಿಂದ ಮನಸ್ಸು ಬಿಚ್ಚಿ ವಿಚಾರ ಮಗ್ನರಾಗುವ ದೊರಂಗೌ ಉತ್ತಮ ಸಂಸ್ಕಾರವಿರುವ ಸರಳ, ಸಜ್ಜನ ಸೃಜನ ಸಂಪನ್ನನೆಂದರೆ ಅತಿಶಯೋಕ್ತಿಯಾಗಲಾರದು.

ವಿದ್ಯಾರ್ಥಿ ದೆಸೆಯಿಂದಲೂ ಸರಳ ಜೀವನಕ್ಕೇ ಅಂಟಿಕೊಂಡು ಬದುಕು ಸಾಗಿಸುತ್ತಿರುವ ದೊರಂಗೌ ಶಿಸ್ತು-ಸದ್ಗುಣಗಳಿಗೆ ಮಾದರಿಯಾಗಿದ್ದರು. ಪ್ರೌಢ ಶಿಕ್ಷಣವನ್ನು ತುಮಕೂರಿನಲ್ಲಿ ಮುಗಿಸಿ ಹೊಟ್ಟೆಪಾಡಿಗಾಗಿ ಬೆಂಗಳೂರಿಗೆ ಬಂದು ಕಾಯಕ ಹಿಡಿದವರು. ಆರ್ಥಿಕ ಸಂಕಷ್ಟದಲ್ಲೂ ರೈಲ್ವೆ ಇಲಾಖೆಯಲ್ಲಿ ಮೈಮುರಿದು ದುಡಿಯುತ್ತಾ ಜೊತೆಜೊತೆಯಾಗಿಯೇ ಶಿಕ್ಷಣವನ್ನೂ ಮುಂದುವರಿಸಿ ಸ್ನಾತಕೋತ್ತರ ಪದವಿ ಪಡೆದು ಅಧ್ಯಾಪಕ ವೃತ್ತಿ ಹಿಡಿದವರು. ಮಾಡುವ ಕಾಯಕ ಅಧ್ಯಾಪಕ ವೃತ್ತಿಯಾದರೂ ಪ್ರವೃತ್ತಿಯಿಂದ ಕವಿಗಳು, ಸಾಮಾಜಿಕ ಚಿಂತಕರು, ಮೇಲಾಗಿ ಉತ್ತಮ ಅಭಿರುಚಿಯುಳ್ಳ ಚಲನ ಚಿತ್ರಗೀತರಚನಕಾರರು.

ಸಾಹಿತ್ಯ ಪ್ರಕಾರಗಳಾದ ಕಾವ್ಯ, ಕಥೆ, ಕಥನಕವನ, ಪ್ರಬಂಧ, ವಿಮರ್ಶೆ, ಮುಕ್ತಕಗಳು, ಪ್ರಗಾಥ, ಲಾವಣಿ, ಚುಟುಕು, ಭಾವಗೀತೆ - ಹೀಗೆ ಕನ್ನಡದ ಕಣಜವನ್ನು ನಾನಾ ಪ್ರಕಾರಗಳಲ್ಲಿ ತುಂಬಿದವರು, ಸಹೃದಯರಾಗಿ ಸದುವಿನಯದಿಂದ ಬದುಕು-ಬರಹಗಳಲ್ಲಿ ಶುದ್ಧಿ ಹಾಗೂ ಸಿದ್ಧಿ ಪಡೆದು ತುಂಬು

ಬದುಕನ್ನು ಬದುಕುತ್ತಿರುವ ದೊರಂಗೌ ಅವರು ಐವತ್ತು ವಸಂತಗಳನ್ನು ಕಂಡುಂಡು ತಮ್ಮ ಜ್ಞಾನ ಕ್ಷಿತಿಜವನ್ನು ವಿಸ್ತರಿಸಿಕೊಂಡ ಹೃದಯ-ಶ್ರೀಮಂತರಾಗಿದ್ದಾರೆ.

ಕನ್ನಡ ನಾಡಿನ ಅಭಿಮಾನೀ ಸಂಘಗಳಿಂದ 'ಸೃಜನಸಂಪನ್ನ', 'ಕಾವ್ಯಕೇಸರಿ', 'ಸಾಹಿತ್ಯರತ್ನ', 'ಸಾಹಿತ್ಯ ಕಲಾ ರತ್ನ' ಇತ್ಯಾದಿ ಬಿರುದುಗಳನ್ನು ಗಳಿಸಿಕೊಂಡಿರುವ ದೊರಂಗೌ ಅವರು 'ಜಗಲಿ ಹತ್ತಿ ಇಳಿದು' ಕಾವ್ಯ ಸಂಕಲನದಿಂದ 'ಮಾವು ಬೇವು' ಕವನ ಸಂಕಲನದವರೆಗೆ ಹದಿನೆಂಟು ಕಾವ್ಯಕೃತಿಗಳನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ್ದಾರೆ. ಚಲನ ಚಿತ್ರರಂಗದಲ್ಲೂ ಇಲ್ಲಿಯವರೆಗೆ ಮುನ್ನೂರಕ್ಕೂ ಹೆಚ್ಚು ಕನ್ನಡ ಚಿತ್ರಗೀತೆಗಳನ್ನು ರಚಿಸಿ, ಹತ್ತು ಚಿತ್ರಗಳಿಗೆ ಸಂಭಾಷಣೆ ಬರೆದಿದ್ದಾರೆ.

ಉತ್ತಮ ಭಾವಗೀತೆಗಳನ್ನು ಒಳಗೊಂಡಿರುವ ಹದಿನಾಲ್ಕು ಧ್ವನಿಸುರುಳಿಗಳನ್ನು ಹೊರತಂದಿದ್ದಾರೆ. ಇಪ್ಪತ್ತೈದಕ್ಕೂ ಹೆಚ್ಚು ದೂರದರ್ಶನ ಧಾರಾವಾಹಿಗಳಿಗೆ ಸಾಹಿತ್ಯ-ಸಂಭಾಷಣೆ ಹಾಗೂ ಅಸಂಖ್ಯಗೀತೆಗಳನ್ನು ನೀಡಿ ಸಾಹಿತ್ಯ ಪ್ರಕಾರಗಳಲ್ಲಿ ಗಣನೀಯ ಪ್ರಮಾಣದ ಸೇವೆ ಸಲ್ಲಿಸಿದ್ದಾರೆ, ಸಲ್ಲಿಸುತ್ತಿದ್ದಾರೆ.

ಅಂತರಾಷ್ಟ್ರೀಯ ಮಟ್ಟದಲ್ಲಿ ಅಮೇರಿಕನ್ ಬಯಾಗ್ರಫಿಕಲ್ ಸೆಂಟರ್ ಅವರು ಹೊರತಂದಿರುವ ಐದುನೂರು ಜನ ವಿಶ್ವಪ್ರತಿಭಾವಂತರ ಪಟ್ಟಿಯಲ್ಲಿ 'ಕನ್ನಡದ ಜನಪ್ರಿಯ ಕವಿ ದೊರಂಗೌ' ಸ್ಥಾನ ಗಳಿಸಿದ್ದಾರೆ. ಇಂಗ್ಲೇಂಡಿನ ಕೇಂಬ್ರಿಡ್ಜನಿಂದ "ಮೆನ್ ಆಫ್ ಅಚೀವಮೆಂಟ್" ಪ್ರಶಸ್ತಿ ಪತ್ರ ಪಡೆದು ವಿಶ್ವಮಾನ್ಯರಾಗಿದ್ದಾರೆ. ಇಷ್ಟೇ ಅಲ್ಲದೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ, ಕನ್ನಡ ಸಾಹಿತ್ಯ ಪರಿಷತ್ತಿನಿಂದ, ಕರ್ನಾಟಕ ರಾಜ್ಯ ಸರ್ಕಾರದಿಂದ ವಿಶೇಷ ಪ್ರಶಸ್ತಿ ಹಾಗೂ ಬೆಳ್ಳಿಯ ಪದಕಗಳನ್ನು ಪಡೆದು ಕೀರ್ತಿವಂತರಾಗಿದ್ದಾರೆ, ಪ್ರೀತಿವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ದೊಡ್ಡರಂಗೇಗೌಡರು ನವೋದಯ ಕವಿಗಳಿಂದ ಪ್ರಭಾವಿತರಾದವರು. ನಮ್ಮ ಹಿರಿಯ ತಲೆಮಾರಿನ ಚಿಂತಕರ ಕೃತಿಗಳನ್ನು ಆಳವಾಗಿ ಅಭ್ಯಸಿಸಿದವರು. ಪ್ರವಾಸ ಪ್ರಿಯರಾದ ದೊರಂಗೌ ಪತ್ರ ಮಿತ್ರರೊಡನೆ ಸದಾ ಸಂಪರ್ಕವಿಟ್ಟುಕೊಂಡು ಪ್ರತಿದಿನ ಒಂದಲ್ಲ ಒಂದು ಸಮಾರಂಭಗಳಲ್ಲಿ ಭಾಗವಹಿಸುತ್ತಾ ತಮ್ಮ ಸರಳ, ಸಜ್ಜನಿಕೆಯನ್ನು ಮೆರೆಯುತ್ತಿರುವವರು.

ಜನಮನದಲ್ಲಿ ಅಚ್ಚಳಿಯದೆ ಉಳಿದು ಹೋಗಿರುವ ಇಂತಹ ಕವಿಯೊಬ್ಬರ ಸಮಗ್ರಕೃತಿಗಳ ಪರಿಚಯ ಮಾಡಿಕೊಡುವ ಸಂದರ್ಭ ಒದಗಿ ಬಂದಿರುವುದು ನನಗೆ ಅತೀವ ಸಂತಸವೆನಿಸುತ್ತದೆ. ಇಲ್ಲಿ ನಾನು ದೊರಂಗೌ ಅವರ ಸಮಗ್ರ ಕಾವ್ಯಕೃತಿಗಳ ಆಳವಾದ ಅಧ್ಯಯನಕ್ಕೆ ಕೈಹಾಕದೆ ಒಟ್ಟಾರೆ ಚಿಂತನೆಗಳ ಪ್ರಾಥಮಿಕ ಪರಿಚಯ ಮಾಡಿಕೊಡುವುದಷ್ಟೇ ನನ್ನ ಕೆಲಸ.

## ಜಗಲಿ ಹತ್ತಿ ಇಳಿದು

ದೊರಂಗೌ ಅವರು ತಮ್ಮ ತಾರುಣ್ಯದಲ್ಲೇ ಹೊರತಂದ ಹದಿನೇಳು ಕವಿತೆಗಳ ಪ್ರಥಮ ಕವನ ಸಂಕಲನ. ಸಂಕಲನದ ಶೀರ್ಷಿಕೆಯೇ ಸೂಚಿಸುವಂತೆ ಕಾವ್ಯಕೃಷಿಗೆ ತೊಡಗಿಸಿಕೊಂಡ ಕವಿಯು ಕಂಡ ಏಳು ಬೀಳುಗಳ ಚಿತ್ರಗಳನ್ನು ಕಣ್ಣಿಗೆ ಕಟ್ಟಿ ಕೊಡುತ್ತವೆ. ಬದುಕೆಂಬುದು ಹುಡುಗಾಟವಲ್ಲ ಅದು ಹುಡುಕಾಟವೆಂಬುದನ್ನು ಸಾರಿಹೇಳುತ್ತವೆ.

ಈ ಚೊಚ್ಚಲ ಕೃತಿಯಲ್ಲೇ ಕವಿ ಮುಂದೆ ಏರಬಹುದಾದ ಮಜಲುಗಳನ್ನು ತೆರೆದಿಡುತ್ತವೆ.

"ಒಂದೊಂದೆ ಪಕಳೆಗಳ ಕಿತ್ತು
ವಿಷಯ ಸಮುದ್ರದೊಳಗೆ
ಅನುಭವ ಲಂಗರು ಹಾಕಿ ಬರಹವನು ನಿಲಿಸುವಾಸೆ
ಸದ್ದುಗದ್ದಲ ಮೂಸಿ
ಮುಜುಗರ - ಜಡ
ಇಂಥ ಇಕ್ಕಟ್ಟಿನಲ್ಲೂ ಕವನ ಕೊರೆವ ಒತ್ತಡ"

*(ಆಸೆ ಅರ್ಜುನ)*

ವಾಸ್ತವ ಬದುಕನ್ನು ಕಂಡು ರೋಸಿ ಹೋದ ಕವಿ ಸುತ್ತಮುತ್ತಲಿನ ಗದ್ದಲವನ್ನು ಹೀರಿ ಜಡವಾಗದೆ ಜೀವಂತಿಕೆಯ ಕವನ ಕೊರೆವ, ಬದುಕಿನ ಮೂಲಬೇರನ್ನೇ ಕೆದಕಿ ಹೊಸ ಜಾಡು ನಿರ್ಮಿಸುವ ಕಡೆ ತುಡಿಯುತ್ತಾರೆ. ಇಲ್ಲಿಯ ಅನೇಕ ಕವಿತೆಗಳಲ್ಲಿ ನವೋದಯದ ಪೊರೆಯನ್ನು ಸಂಪೂರ್ಣ ಕಳಚಲಾರದೆ ನವ್ಯದ ಕಡೆ ಹೊರಳಿ ಒಳಮುಖಿ ವಿಮರ್ಶೆಯನ್ನು ಮಾಡಿಕೊಳ್ಳುವಲ್ಲಿ ಚಡಪಡಿಸುವ ಕವಿತೆಗಳನ್ನೂ ಕಾಣಬಹುದು.

"ಪುಕ್ಕಕಟ್ಟಿಕೊಂಡು ಕುಣಿವಾಸೆ ನನಗಿಲ್ಲ
ಇರುವಿಕೆ ಒಪ್ಪಿಕೊಂಡು ಬರೆಯುವಾಸೆ ನನ್ನದೆಲ್ಲ"

*(ನಾನು ಮತ್ತು ಜಗತ್ತು)*

ಇಂತಹ ಕಡೆಗಳಲ್ಲೆಲ್ಲ ಸ್ವೋಪಜ್ಞತೆ ಮೆರೆಯುತ್ತಾರೆ, ಪ್ರಕೃತಿಯ ಚಲುವಿನೊಂದಿಗೆ ನಿಂತೇ ಅಖಂಡ ಬದುಕಿನ ಜಿಜ್ಞಾಸುವಾಗುತ್ತಾರೆ.

"ಮೌಲ್ಯ ಮಂಡಾಗಿ ಸುಖ
ಚುಮು ಚುಮು ಎಂದಾಗ
ತೀಟೆ, ಬೊಬ್ಬೆ
ಬಿಸಿಯುರಿ, ಬೇಗೆ
ಕೆರೆದು ಕೆರೆದು ಮೈ ಆವುಗೆ ಒಳಗೆ"

*(ಮಜಲು-ಮಜಲು-ಮಜಲು)*

ಹೀಗೆ ಬಾಹ್ಯ ಮತ್ತು ಆಂತರಿಕ ಸೌಂದರ್ಯಗಳನ್ನು ಕೆದಕುತ್ತಲೇ ಸಮಪಾತಳಿಯ ಮೇಲೆ ಭದ್ರವಾಗಿ ಬೇರೂರಲು ಹವಣಿಸಿರುವುದನ್ನು ಈ ಕೃತಿ ನಿಚ್ಚಳವಾಗಿ ದಾಖಲಿಸುತ್ತದೆ. ವಾಸ್ತವತೆಯ ಕಟುಸತ್ಯವನ್ನು ಹೇಳಲು ಹಿಂಜರಿಯದ ಕವಿಯ ತುಡಿತ ಒಟ್ಟಾರೆ ಕಾವ್ಯ ಶಿಲ್ಪದ ದೃಷ್ಟಿಯಿಂದ ಕಂಡದ್ದನ್ನು ನಿರ್ಭಯವಾಗಿ ಅಭಿವ್ಯಕ್ತಿಸುವ ಮನೋಧರ್ಮವನ್ನು ಈ ಸಂಕಲನದಲ್ಲಿ ನಾವು ಗುರುತಿಸಬಹುದಾಗಿದೆ.

## ಕಣ್ಣು ನಾಲಗೆ ಕಡಲು

1972ರಲ್ಲಿ ಪ್ರಕಟಿಸಿದ ಈ ಕವನ ಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಬಹುಮಾನ ನೀಡಿ ಗೌರವಿಸಿದೆ. ಕಾಂಕ್ರೀಟ್ ಗೋಡೆಗಳ ನಡುವೆ ನಡೆಯುವ ನೂರಾರು ವ್ಯಾಪಾರಗಳನ್ನು ಸೂಕ್ಷ್ಮವಾಗಿ ನುಡಿಚಿತ್ರಗಳಲ್ಲಿ ಹಿಡಿದಿಟ್ಟಿದ್ದಾರೆ. ರೊಮ್ಯಾಂಟಿಕ್ ಕಾವ್ಯದ ಅಭಿವ್ಯಕ್ತಿಯನ್ನು ಗಮನಿಸುತ್ತಲೇ ಹೊಸದಾರಿಗಾಗಿ ತೀವ್ರ ಸೆಣಸಾಟ ನಡೆದಿರುವುದು ಈ ಸಂಕಲನದಲ್ಲಿ ಕಂಡು

ಬರುತ್ತದೆ. ಜಾನಪದ ಕಾವ್ಯದ ಸಹಜ ಅನುಭೂತಿಗಳನ್ನು ಜೀರ್ಣಿಸಿಕೊಳ್ಳುತ್ತಲೇ ನವೀನ ಮಾದರಿಯ ಪಕ್ವ ಕವಿತೆಗಳನ್ನು ಇಲ್ಲಿ ಬರೆದಿದ್ದಾರೆ. ಹೊಸತನ್ನು ಕಂಡು ಕಟ್ಟಬೇಕೆನ್ನುವ ಕವಿಯ ಉದ್ರೇಕ ಇಲ್ಲಿಯ ಅನೇಕ ಕವಿತೆಗಳಲ್ಲಿ ಮಿಂಚಿನಂತೆ ಹರಿದಾಡಿದೆ. ಇಲ್ಲಿಯ ಕವಿತೆಗಳ ನಿರೂಪಣಾ ವಿಧಾನ, ವಸ್ತು ವಿನ್ಯಾಸ, ಮೈ ಚಳಿಬಿಟ್ಟ ತನಿಯಾದ ಬರವಣಿಗೆಯಿಂದ ತಮ್ಮ ತಾಜಾತನ ಉಳಿಸಿಕೊಳ್ಳುತ್ತವೆ. ಅಷ್ಟೇ ಅಲ್ಲದೆ ಮಾನವನ ನಿತ್ಯ ಜೀವನಕ್ಕೆ ಸಮೀಪವೆನಿಸುವ ಪಾತಳಿಯ ಮೇಲೆ ಅರಳಿನಿಲ್ಲುತ್ತವೆ. ಇಲ್ಲಿ ಕವಿಯ ದೃಷ್ಟಿ ಮೂಲತಃ ಸಾಮಾಜಿಕವಾದದ್ದು. ಆದ್ದರಿಂದಲೇ ದೊರಂಗೌ ಜೀವಂತ ಕ್ಷಣಗಳಲ್ಲಿ ಘರ್ಷಣೆಗೆ ಒಳಗಾಗುವ, ಶೋಷಣೆಯ ನವಿರಾದ ಎಳೆಗಳನ್ನು ಬಿಡಿಸಿ ತೆರೆದಿಡುತ್ತಾ ವಿವರಣೆಗೆ ಮೀರಿದ ಕ್ರಿಯೆಯಲ್ಲಿ ಅನ್ವೇಷಣೆಗೆ ತೊಡಗುತ್ತಾರೆ.

ಮನುಷ್ಯ ತನ್ನ ಬದುಕಿನ ಅತ್ಯಂತ ಪ್ರಮುಖವಾದ ಖಾಸಗಿ ಕ್ಷಣಗಳಿಗೆ ತನ್ನ ಅನುಭವದ ರೂಪಕೊಟ್ಟು ಸಾಹಿತ್ಯ ಕೃತಿಗಳಲ್ಲಿ ಅದನ್ನೇ ವಸ್ತುವಾಗಿಸಿಕೊಂಡು ನಿರೂಪಣೆ ಮಾಡುತ್ತಾನೆ. ಆ ಖಾಸಗಿ ಕ್ಷಣಗಳು ಕೇವಲ ತಂತ್ರವಾಗಿ ಬರದೆ ಅನುಭವದ ಮೂಸೆಯಿಂದಲೇ ಬಂದಾಗ ಮಾತ್ರ ಒಂದು ರೀತಿಯಕಲಾತ್ಮಕತೆಯನ್ನು ಪಡೆದು ಕೊಳ್ಳುತ್ತವೆ. ದೊರಂಗೌ ಅವರ ಇಲ್ಲಿಯ ಬಹುಪಾಲು ಕವಿತೆಗಳು ಮನುಷ್ಯನ ಖಾಸಗಿ ಕ್ಷಣಗಳನ್ನು ನಿರೂಪಿಸುವಂತಹವುಗಳಾಗಿವೆ.

"ಮೈಪುಳಕ ಫೌಂಟೆನ್ನಾಗಿ
ಮನಸ್ಸು ಭಾವೋದ್ರೇಕ ಸೈರನ್ನಾಗಿ
ಕಾಣದ ಮುಖಗಳು
ಕರಗದ ನಖಗಳು
ಸುಳಿದರೂ ಹೊಳೆದರೂ
ನಿಜಸುತ್ತುವರಿಯಿತು ಮುತ್ತಿ"

*(ಕಾಣದ ಮೈ)*

ಇಲ್ಲಿ ಕವಿ ಬಾಹ್ಯದ ಬಹುಮುಖಗಳ ಬಂಧನಗಳನ್ನು ಗಮನಿಸುತ್ತಲೇ ಅಂತರ್ಮುಖಿಯಾಗುತ್ತಾರೆ. ಹೊರಜಗತ್ತಿನ ಸೌಂದರ್ಯಕ್ಕೆ ರೋಮಾಂಚನಗೊಂಡ ಮೈ ಕಾರಂಜಿಯಾಗುವುದೂ, ಮನಸ್ಸಿನ ಭಾವನೆಗಳು ತೀವ್ರವಾಗಿ ಸೈರನ್ನಾಗುವುದೂ ಔಚಿತ್ಯಪೂರ್ಣ ಪ್ರತಿಮೆಗಳೆನಿಸಿಕೊಳ್ಳುತ್ತವೆ. ಕಾರಂಜಿ ಚಿಮ್ಮಿದಾಗಲೇ ಅದರ ಏರಿಳಿತಗಳು ಅರಿವಿಗೆ ಬರುವುದು, ಹಾಗೆಯೇ ಸೈರನ್ ಅನ್ನುವ ಮನಸ್ಸಿನ ಬಯಕೆಯ ರೋಧನ ಬಿಡುಗಡೆ ಮತ್ತು ಸೆಳೆತಗಳನ್ನೂ ಏಕಕಾಲಕ್ಕೆ ಉಂಟುಮಾಡುವ ಸ್ಥಿತಿಯುಳ್ಳ ದುರಂತ ಸತ್ಯವಾಗುವುದನ್ನೂ ಧ್ವನಿಸುತ್ತವೆ.

"ರಕ್ತ ಹೂರಣ ಬಿಸಿಲು ಹಸಿವು ಕೀಳುವ ದಿಗಿಲಿಗೆ
ಸತ್ತ ನಡಿಗೆ ಹೊತ್ತ ಕಾಲಿಗೆ
ಮುಗಿಲು ಜೀಕುವ ತೆವಲು"

"ಬೇನೆ ಚಿಗುರಿದೆ
ತೊನ್ನು ನೆಲದ ಹುತ್ತದಲ್ಲಿ"

*(ಕಣ್ಣು ನಾಲಗೆ ಕಡಲು)*

ಭ್ರಷ್ಟವಾಗಿರುವ ವಾತಾವರಣದಲ್ಲಿ ಆಸೆಯ ಹುತ್ತ ಬೇಸೆಯನ್ನಲ್ಲದೆ ಮತ್ತೇನನ್ನು ಚಿಗುರಿಸಲು ಸಾಧ್ಯ? ನರಕ ಸದೃಶವಾದ ಈ ಸಮಾಜದಲ್ಲಿ ಶ್ರೀ ಸಾಮಾನ್ಯನನ್ನು ಹಸಿವೆಂಬ ಭೂತ ಕಿತ್ತು ತಿನ್ನುತ್ತದೆ. ಆಸೆ ಕನಸನ್ನು ಹೊತ್ತ ಈ ದೇಹ ಎಂದೋ ಸತ್ತು ಸುಣ್ಣವಾಗಿದೆ. ಆದರೂ ಹೃದಯದಾಳದಿಂದ ಚಿಮ್ಮುವ ಈ ಮನಸ್ಸಿಗೆ ಬಂಧನವೆಂಬುದು ಇಲ್ಲ, ಮುಗಿಲು ಮುಟ್ಟುವ ಛಲ ಕಡಿಮೆಯಾಗುವುದೇ ಇಲ್ಲ. ಎಷ್ಟು ತುಳಿದರೂ ಮತ್ತೆ ಮತ್ತೆ ಚಿಗುರುವ ಗರಿಕೆಯಂತೆ ಮನುಷ್ಯ ಆಗಸದೆಡೆಗೆ ಮುಖ ಮಾಡಿ ಮುಗಿಲು ಮುಟ್ಟುವ ಸತತ ಪ್ರಯತ್ನವಿರಲೇ ಬೇಕು. ಆಗ ಮಾತ್ರ ಬದುಕು ಸಾರ್ಥಕವಾದೀತು ಎಂದು ಕವಿ ಎಚ್ಚರಿಸುತ್ತಾನೆ. ಇಂತಹ ಕಡೆಗಳಲ್ಲೆಲ್ಲಾ ದೊರಂಗೌ ಯಶಸ್ವೀ ರೂಪಕಗಳನ್ನು, ಪ್ರತಿಮೆಗಳನ್ನೂ, ನುಡಿಚಿತ್ರಗಳನ್ನು ಓದುಗರಿಗೆ ಧಾರಾಳವಾಗಿ ಉಣಬಡಿಸುತ್ತಾರೆ.

ಮನುಷ್ಯನ ಹುಟ್ಟಿನೊಂದಿಗೇ ಬಂದಿರುವ ಅಳು, ನಗು, ಕ್ರೌರ್ಯ, ರೋಷ, ಪ್ರೀತಿ-ಪ್ರೇಮ, ಅಭಿಮಾನ ಮುಂತಾದ ವಿಭಿನ್ನ ಮುಖಗಳೇ ಇಲ್ಲಿಯ ಕವಿತೆಗಳ ವಸ್ತುವಾಗಿದೆ. ಮನುಷ್ಯನ ಜೀವನದಲ್ಲಿ ಕಂಡು ಬರುವ ಅನೇಕಾನೇಕ ವಿಶಿಷ್ಟ ಸಂಗತಿಗಳನ್ನು ಮತ್ತು ಸಮಗ್ರ ಜೀವನಾನುಭವಗಳನ್ನು ಕವಿ ದೊರಂಗೌ ಶೋಧಿಸುತ್ತಾ ಹೋಗುತ್ತಾರೆ. ಕಂಡುಕೊಂಡ ಸತ್ಯಾಂಶಗಳನ್ನು ತಮ್ಮ ಪ್ರತಿಭೆಯ ಒಡಲಲ್ಲಿ ಜೀರ್ಣಿಸಿಕೊಂಡು ಸತ್ವಯುತವಾದ ಕವಿತೆಗಳನ್ನೇ ನೀಡಿದ್ದಾರೆ. ಈ ಕಾರಣದಿಂದಲೇ ಇಲ್ಲಿಯ ಕವಿತೆಗಳು ವಸ್ತು ವೈವಿಧ್ಯತೆಯ ಸಮೃದ್ಧಿಯಿಂದ ಕೂಡಿ ವ್ಯಾಪಕವಾದ ವಿಸ್ತಾರವನ್ನು ಪಡೆದುಕೊಂಡಿವೆ.

**ನಾಡಾಡಿ**

ಈಗಾಗಲೇ ಹಿಂದೆ ಪ್ರಕಟಿಸಿದ ಎರಡು ಕವನಸಂಕಲನಗಳಿಗಿಂತ ದೊರಂಗೌ ಇಲ್ಲಿ ಹೆಚ್ಚು ಬೆಳೆದಿದ್ದಾರೆ, ಪಕ್ವವಾಗಿದ್ದಾರೆ. ಇದು ತಾಜಾ ನವ್ಯ ಕವಿತೆಗಳ ಸಂಕಲನ. ಕವಿಗೆ ಸಮಾಜದ ವ್ಯವಸ್ಥೆಯ ಮೇಲಿರುವ ರೋಷ ಇಲ್ಲಿ ಜ್ವಾಲೆಯಾಗಿ ಹೊರಹೊಮ್ಮಿದೆ. ಹಕ್ಕುಗಳನ್ನು ಪಡೆಯಲು, ಪ್ರಶ್ನಿಸಲು ಧ್ವನಿಯೇ ಇಲ್ಲದ ದೀನದಲಿತರಿಗೆ ಇಲ್ಲಿಯ ಕವಿತೆಗಳು ಕೊರಳಾಗುತ್ತವೆ. ಪಟ್ಟಭದ್ರರ ದರ್ಪದೌರ್ಜನ್ಯಗಳನ್ನು ಹಿಗ್ಗಾ ಮುಗ್ಗಾ ಬಯಲಿಗೆಳೆಯುತ್ತವೆ. ಸಮಾಜದಲ್ಲಿ ಮಾನವೀಯ ಮೌಲ್ಯಗಳು ಸ್ಥಗಿತಗೊಂಡಾಗ ಕವಿಯಾದವನು ಹೇಗೆ ಚಿಕಿತ್ಸಕ ದೃಷ್ಟಿಯನ್ನು ಮೈಗೂಡಿಸಿಕೊಳ್ಳಬೇಕೆಂಬುದರ ಬಗ್ಗೆ ಇಲ್ಲಿಯ ಕವಿತೆಗಳೇ ಮಾತನಾಡುತ್ತವೆ. ಸಂಘರ್ಷವಿಲ್ಲದೆ ಸಾಮರಸ್ಯ ಸಾಧ್ಯವಿಲ್ಲವೆಂಬುದನ್ನು ದಾಖಲಿಸುತ್ತವೆ.

ಈ ಮೇಲಿನ ಮಾತುಗಳಿಗೆ 'ದಣಿಪುರಾಣ' ಕವಿತೆಯೊಂದೇ ಸಮರ್ಥ ಉತ್ತರ ನೀಡಬಲ್ಲದು. ಪಡುವಾರಹಳ್ಳಿ ಪಾಂಡವರು ಚಲನ ಚಿತ್ರ ಯಶಸ್ವಿಯಾಗಿದ್ದೇ ಈ ಕವಿತೆಯ ಕಥಾನಕದಿಂದ ಎಂದರೆ ಉತ್ಪ್ರೇಕ್ಷೆಯ ಮಾತಾಗಲಾರದು.

> "ಮೇವಿರದೆ ಹಸು ಸತ್ತರೂ ಅವನದೇ
> ಬದುಕಿದ್ದರೂ ಅವನ ಪಾಲಿನದ್ದೇ, ಈ ನಾಯಕ ಲಫಂಗನಿಗೆ ಲಂಗ
> ಎತ್ತದ ಹುಡುಗಿಯರ ಪಾಡು
> ಅವರಪ್ಪನ ವಂಶದ ಪೂರ್ಣ ತಿಥಿ"

"ಹಾಗೆ ಬಿಡೋದಿಲ್ಲ ಅವನು ಯಾರನ್ನೂ
ಎತ್ತಲಾಗಿ ತಿರುಗಿದರೂ ಅತ್ತಲಾಗೇ
ಹೋಗಿ ನಿಲ್ಲುತ್ತಾನೆ, ಅವರಿವರ ಬಾಳ ತಿನ್ನುತ್ತಾನೆ"

"ಈ ಪರಾಕ್ರಮಿ ಶೂರ ತನ್ನ ಹೆಂಡತಿ ಬಂಜರೆಂದು
ಬಂಜೆಯರ ಫಲವತ್ತು ಮಾಡಹೊರಟವನು
ಮೈ ಮುಖ ಪರಚಿಗಾಯ ಮಾಡಿದವರನ್ನೂ ಕೂಡಿ
ಕಾಡಿದವನು"

ಇಂತಹ ಕಡೆಗಳಲ್ಲೆಲ್ಲ ಕವಿ ದುಡಿಸಿಕೊಂಡಿರುವ ಭಾಷೆ ಸರಳವಾಗಿದೆ. ಶ್ರೀಸಾಮಾನ್ಯನ ಮನಸ್ಸನ್ನು ತಟ್ಟಿ ಶೋಷಣೆಯ ವಿರುದ್ಧ ಸಿಡಿದೇಳುವಂತೆ ಬಡಿದೆಬ್ಬಿಸುತ್ತದೆ. ಭಾಷೆ ಹಳ್ಳಿಯ ಕೊಳ್ಳಗಳಲ್ಲೇ ಸಂಚರಿಸಿ ಅಲ್ಲಿಯ ಧೂಳಿನೊಂದಿಗೇ ಎದ್ದು ನಿಲ್ಲುತ್ತದೆ.

"ಚಲನೆ ಗುಂಗಿಗೆ ಬಿದ್ದ ನಗರ
ಮೈನೆರೆದ ಹುಡುಗಿಯ ಹಾಗೆ"

ಫ್ಯಾಷನಬಲ್ ಸಂಸ್ಕೃತಿಗೆ ಒಳಗಾಗಿ ಬೃಹದಾಕಾರವಾಗಿ ಬೆಳೆಯುತ್ತಿರುವ ಕಾಂಕ್ರೀಟ್ ಕಾಡುಗಳನ್ನು ಮೈನೆರೆದ ಹುಡುಗಿಗೆ ಹೋಲಿಸಿರುವುದು ಅರ್ಥಪೂರ್ಣವಾಗಿದೆ. ಇಲ್ಲಿ ಬಳಸಿರುವ ಉಪಮೆಗಳು ಓದುಗನನ್ನು ಕ್ಷಣಕಾಲ ತಡೆದು ನಿಲ್ಲಿಸಿ ಮನದಾಳದಲ್ಲಿ ಮಿನುಗಿ ದಿಗ್ಭ್ರಮೆಗೊಳಿಸುತ್ತವೆ.

"ಸೀರಿಗೆ ಬರ ಬಂದ ಗಲ್ಲಿಗಳು ಕೊಳೆತುನಾರುತ್ತವೆ."

"ನಿಶಾರಾಣಿ ಮಣಿಗಳು ನೆರಳಲ್ಲಿ ಮಿನುಗುತ್ತವೆ"

"ಭಾರ ಹೇರಿಕೊಂಡು ಪುತಕರಿಯುತ್ತ ತೆವಳುತ್ತವೆ"

ಇಂತಹ ಸಾಲುಗಳು ಕವಿತೆಯ ಒಡಲಲ್ಲಿ ಕಿಕ್ಕಿರಿದಿವೆ. ಯಾವುದನ್ನು ಉದಾಹರಿಸಲಿ? ನವ ನಾಗರೀಕನ ಬದುಕು ಕೊಳೆತು ನಾರುತ್ತಿರುವುದನ್ನು, ಬೆಳೆದು ನಿಂತಿರುವ ನಗರಗಳು ನೂರಾರು ಜ್ವಲಂತ ರೋಗಗಳ ಆಗರವಾಗುತ್ತಿರುವುದನ್ನು ಕವಿ ಕಣ್ಣಿಗೆ ಕಟ್ಟಿಕೊಡುತ್ತಾರೆ. ನಾವು ನಾಗರಿಕರು ಎಂದು ಹೇಳಿಕೊಳ್ಳುವವರು ಕ್ಷಣಕಾಲ ಯೋಚಿಸುವಂತೆ ಮಾಡುತ್ತಾರೆ.

"ಏಪ್ರಿಲ್ ಮೂರನೇ ವಾರ
ಮಟಮಟ ಮಧ್ಯಾಹ್ನ
ಬೀದಿ ಮಾತಾಡಿಸಿದೆ"

"ಚರಂಡಿ ತಡಕುವ ಕರಿಬತ್ತಲೆ ಹುಡುಗರು
ಕಸದ ತೊಟ್ಟಿ ಬದಿ ನಿಂತ ನಿರಾಶ್ರಿತ ಭಿಕಾರಿಗಳು
ವ್ಯಾನಿಟಗಗನ ಮುಟ್ಟದ ಕೊಬ್ಬಿದ ಹುಡುಗಿಯರು"

"ನಿಗಿ ನಿಗಿ ಮಿರುಗುವ ಬೆಂಕಿಹೊಳೆ
ರಸ್ತೆ ಸತ್ತಿದೆ"

ಇಂತಹ ಕಡೆಗಳಲ್ಲೆಲ್ಲ ಕವಿಯ ಬಂಡಾಯದ ಧ್ವನಿ ಕಾಣಸಿಗುತ್ತದೆ. ಗ್ರಾಮೀಣ ಮತ್ತು ಪಟ್ಟಣ ಸಂಸ್ಕೃತಿಗಳ ಸಂಘರ್ಷಗಳು ಅಲ್ಲಲ್ಲಿ ತಳುಕು ಹಾಕಿಕೊಂಡು

ಬದುಕಿನ ಮೂಲ ಸೆಲೆಗಳನ್ನು ಶೋಧಿಸುತ್ತವೆ. ಹಳ್ಳಿ ಮತ್ತು ನಗರ ಜನ ಜೀವನದ ರೀತಿ ನೀತಿಗಳು, ನಿರುದ್ಯೋಗ, ಬಡತನ, ಗೊಂದಲಗಳು, ಕೌಟುಂಬಿಕ ತುಮುಲಗಳು, ಅವಿದ್ಯಾವಂತರ ಆಸೆ-ಆಕಾಂಕ್ಷೆಗಳು, ಅವರ ನಂಬಿಕೆಗಳು, ಭಯಭೀತಿಗಳು, ಮುಗ್ಧತೆಗಳು, ಬದುಕಿನ ಉಲ್ಲಾಸಮಯಕ್ಷಣಗಳು, ಬದಲಾವಣೆ ಬಯಸುವ ಮನಸ್ಸುಗಳು - ಹೀಗೆ ನಾನಾ ನೆಲೆಗಳಲ್ಲಿ 'ನಾಡಾಡಿ' ಕವನ ಸಂಕಲನದ ಕವಿತೆಗಳು ಅಭಿವ್ಯಕ್ತಿ ಪಡೆದಿವೆ. ಒಟ್ಟಾರೆ ನವ್ಯಕಾವ್ಯದ ಉತ್ತಮ ಕವನಗಳ ಸಾಲಿನಲ್ಲಿ ಕವಿತೆಗಳು ಶಾಶ್ವತವಾಗಿ ನಿಲ್ಲುತ್ತವೆ.

## ಮೌನ ಸ್ಪಂದನ

ಈ ಸಂಕಲನದಲ್ಲಿ ಅರವತ್ತೆರಡು ಅಪ್ಪಟ ನವ್ಯ ಕವಿತೆಗಳಿವೆ. 'ನಾಡಾಡಿ'ಯಲ್ಲಿ ಬೇರುಬಿಟ್ಟು ಭದ್ರವಾಗಿ ನಿಂತ ನವ್ಯತೆ ಇಲ್ಲಿ ಉತ್ತಮ ಫಲಗಳನ್ನೇ ನೀಡಿದೆ. ಭಾಷೆಯ ಬೀಸು ಮತ್ತಷ್ಟು ಮೊನಚಾಗಿದೆ. ಹದವರಿತು ಅಭಿವ್ಯಕ್ತಿಗೊಂಡಿದೆ. ಇಲ್ಲಿಯ ಕವಿತೆಗಳನ್ನು ಮನಃಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸಿದರೆ ಕವಿಗಿರುವ ಅಂತರಾಳದ ಬಿರುಸುತನ (ಟೆನಷನ್)ವು ಪರಾಕಾಷ್ಠತೆಯತ್ತ ಸಾಗುವುದನ್ನು ನಿಚ್ಚಳವಾಗಿ ಗುರುತಿಸಬಹುದು. ದೊರಂಗೌ ಇಲ್ಲಿಯ ಕವಿತೆಗಳಲ್ಲಿ ಹೇಳಲೇಬೇಕಾದ ದುರಂತ ಸತ್ಯಗಳನ್ನು ನಿರ್ಭಿಡೆಯಿಂದ ಹೇಳಿಯೇ ಬಿಡುತ್ತಾರೆ. ಬದುಕಿನಿಂದ ಪಲಾಯನ ಮಾಡದೆ ಎಲ್ಲವನ್ನೂ ಸ್ವೀಕರಿಸಿ ಜೀವನ ಕಲೆಯನ್ನು ಸಾಧಿಸಿಕೊಂಡಿದ್ದಾರೆ. ತನ್ನ ಸುತ್ತಮುತ್ತಲಿನ ಬದುಕನ್ನು ತಮ್ಮ ಕಾವ್ಯ ಕಲೆಯ ಮೂಲಕ ಜೀವಂತ ಗೊಳಿಸುತ್ತಾರೆ. ತನ್ನಿಂದ ಹೊರಜಿಗಿದು ಪ್ರಕೃತಿಯ ಮಡಿಲಲ್ಲಿ ನಿಂತೇ ಸಮಾಜದ ವಿಡಂಬನೆಗೆ ಮುಂದಾಗುತ್ತಾರೆ.

"ದೂರದಾಸೆಯನ್ನೇರಿ ತೀರದೂಟವ ಕೋರಿ
ನೂರು ತಾರಾಟ
ಚೀರಾಟ ತೂರಾಟಗಳಲ್ಲಿ ಬಾಳ ಪಯಣವೆಲ್ಲ
ಗಾಳಿ ಗುದ್ದಾಟ"

"ವಾಸ್ತವವ ಮೀಟಿ ಭ್ರಮೆಗಳನೆಲ್ಲ ದಾಟಿ
ಕಂಡದ್ದ ಉಂಡದ್ದ ಗುರುತಿಸಿ ಊದಬೇಕು
ಗೆಲವಿನ ಸೀಟಿ"

*(ಸಾವಿರದ ಕಂದರ)*

ಇಲ್ಲಿ ಕವಿಯ ಸೃಜನ ಶೀಲತೆ ಚಲನಶೀಲವಾದದ್ದು. ಗೊತ್ತುಗುರಿಯಿಲ್ಲದೆ ಸಾಗುತ್ತಿರುವ ನಾವು ಆಚರಣೆಗಳ, ಪರಂಪರೆಗಳ ಬಿಗಿ ಬಾಹುಗಳಲ್ಲೇ ತೊಡರಿ ಕುಳಿತು, ಅದನ್ನು ಅತಿಕ್ರಮಿಸಲಾರದ ಸ್ಥಿತಿಯಲ್ಲಿ ಸಿಕ್ಕಿ ನರಳುತ್ತಿದ್ದೇವೆ. ಊಳಿಗ ಮಾನ್ಯ ಪದ್ಧತಿಯ ವ್ಯವಸ್ಥೆ ಮಾನವೀಯ ಮೌಲ್ಯಗಳಿಗೆ ಬಿದ್ದ ಪೆಟ್ಟಾಗಿದೆ. ಇಂತಹ ಭ್ರಮಾಧೀನ ಪೊರೆಯನ್ನು ಕಳಚಿ ಹೊರಬಂದು ವಾಸ್ತವತೆಯ ಕಟು ಸತ್ಯವನ್ನು ಅರಿತಾಗ ಮಾತ್ರ ಬದುಕನ್ನು ಗೆಲ್ಲಲು ಸಾಧ್ಯ ಎಂಬ ಗಂಭೀರ ಚಿಂತನೆಗೆ ತೊಡಗುತ್ತಾರೆ.

'ವಿರೋಧಾಭಾಸ' ಕವಿತೆಯು ಕರ್ತವ್ಯ ಪ್ರಜ್ಞೆ ನಶಿಸಿ ಹೋಗಿ ಮಾನವೀಯತೆಯು ಅಧಃಪತನದ ಕಡೆ ಸಾಗುತ್ತಿರುವುದನ್ನು ಸೂಚಿಸುತ್ತದೆ. 'ಮೂಡೀತೆ ಅಗ್ನಿ ದಿವ್ಯ?' ಕವಿತೆ ನವನಾಗರಿಕತೆಯ ದುರಂತಗಳನ್ನು ಚಿತ್ರಿಸುತ್ತದೆ.

'ಭಾರತೀಯ ತರುಣರು' ಕವಿತೆಯಲ್ಲಿ ಸ್ಪಷ್ಟ ಭವಿಷ್ಯವಿಲ್ಲದ ಯುವ ಜನಾಂಗದ ಸ್ಥಿತಿಯನ್ನು ಕಂಡ ಕವಿ

"ಮೌಢ್ಯಗಳಿಗೆ ಕೊಳ್ಳಿಹಿಡಿದು
ಮಠಗಳೆಲ್ಲ ಬೇಲಿ ಇರಿದು
ಅಂತಸ್ಥಿನ ಪರದೆ ಹರಿದು
ವ್ಯಕ್ತಿಪೂಜೆ ಕೋಟೆ ಬಿರಿದು"

ಪ್ರವಾಹದೋಪಾದಿಯಲ್ಲಿ ಹೊರಬಂದು ಬದುಕಿನ ಅರ್ಥ ಕಂಡಕೊಳ್ಳಬೇಕೆಂದು ಕರೆನೀಡುತ್ತಾರೆ.

ಒಂದು ಹೊತ್ತಿನ ತುತ್ತು ಕೂಳಿಗೂ ಗತಿ ಇಲ್ಲದ ಬಡಜನರ ದಾರುಣ ಸ್ಥಿತಿ, ಒಂದು ಕಡೆ ಹೊಟ್ಟೆಗೆ ಹಿಟ್ಟಿಲ್ಲದೆ ಸಾವು, ಮತ್ತೊಂದೆಡೆ ತಿಂದದ್ದು ಹೆಚ್ಚಾಗಿ ಅಜೀರ್ಣದಿಂದ ನರಳುತ್ತಿರುವ ಶ್ರೀಮಂತರುಗಳ ಬದುಕನ್ನು 'ಇಲ್ಲದವರ ಪಾಡು' ಕವಿತೆ ಎಳೆಎಳೆಯಾಗಿ ಬಿಡಿಸಿಟ್ಟಿದೆ. ಮಾನವನ ಬದುಕಿನಲ್ಲಿ ಹಠಾತ್ತನೆ ಆಕ್ರಮಿಸಿ ದಿಢೀರನೆ ಸೆಳೆದು ಕೊಳ್ಳುವ ಘೋರ ಗಳಿಗೆಗಳು ಹೇಗೆ ಮನುಷ್ಯನನ್ನು ಅಂತರ್ಮುಖಿಯನ್ನಾಗಿಸುತ್ತವೆ ಎಂಬುದನ್ನು ದಾಖಲಿಸುತ್ತದೆ.

ಪ್ರಕೃತಿಯ ವೈವಿಧ್ಯಮಯ ಬೆಡಗಿನ ಚಿತ್ತಾರಗಳನ್ನು, ಆಕ್ಟೋಪಸ್ ಹಿಡಿತದಂತೆ ಆವರಿಸಿರುವ ಭ್ರಷ್ಟರು, ವಿಷಯಲಂಪಟರು, ಕಿಡಿಗೇಡಿಗಳು ಸಮಾಜವನ್ನು ಹೇಗೆ ಛಿದ್ರಗೊಳಿಸುತ್ತಿದ್ದಾರೆಂಬುದನ್ನು ಕಣ್ಣಿಗೆ ಕಟ್ಟಿಕೊಡುತ್ತಾರೆ. ಹುಳುಗಳಂತೆ ಪಿತಗುಡುತ್ತಿರುವ ನಗರಗಳ ಬೆಳವಣಿಗೆ, ಮುಗ್ಧರನ್ನು ಮೋಸಗೊಳಿಸಿ ಐಷಾರಾಮಿ ಬದುಕು ಸಾಗಿಸುತ್ತಿರುವ ನಯವಂಚಕರ ಜಾಲಗಳು ಇಲ್ಲಿ ಬೆಸಲಾಗುತ್ತವೆ. ಇಲ್ಲಿಯ ಕವಿತೆಗಳು ಕವಿಯ ವೈಯಕ್ತಿಕ ಅನುಭವದ ಮೇಲೆ ನಿಂತಿದ್ದು ಸಾರ್ವತ್ರಿಕತೆಯತ್ತ ಮುಖ ತಿರುಗಿಸುತ್ತವೆ. ಕವಿ ತನ್ನ ಪರಿಸರದ ಹಲವು ಮಗ್ಗುಲುಗಳನ್ನು ಪರೀಕ್ಷಿಸುತ್ತಾ ಏಕಕಾಲದಲ್ಲೇ ಒಂದು ಅನುಭವದ ವಿವಿಧ ಮುಖಗಳನ್ನು ಕಾಣಿಸುತ್ತಾ ಕಾವ್ಯ ಶಿಲ್ಪವನ್ನು ಕಡೆಯುತ್ತಾರೆ. ಇವರ ಸಾಮಾಜಿಕ ಕಳಕಳಿ, ಬದುಕಿನ ತೀವ್ರತೆ ಇಲ್ಲಿಯ ಕವಿತೆಗಳಲ್ಲಿ ತುಂಬಾ ಲವಲವಿಕೆಯಿಂದ ಕೂಡಿ ಮೈ ತಳೆದಿವೆ.

## ಏಳುಬೀಳಿನ ಹಾದಿ

ಈ ಕವನ ಸಂಕಲನದಲ್ಲಿ ಐವತ್ತು ಕವಿತೆಗಳಿವೆ. ಶೀರ್ಷಿಕೆಯೇ ಸೂಚಿಸುವಂತೆ ಇಲ್ಲಿ ಅನೇಕ ಬಗೆಯ ಸಂಕೀರ್ಣ ಕವಿತೆಗಳಿವೆ. ವಾಸ್ತವ ನೆಲೆಗಟ್ಟಿನ ಮೇಲೆ ನಿಂತುಕೊಂಡು ಸಾಮಾಜಿಕ ಕಳಕಳಿಯನ್ನು ಪ್ರಕಟಿಸುತ್ತಾರೆ. ಪ್ರಕೃತಿಯನ್ನು ಆರಾಧಿಸುತ್ತಾರೆ. ಅಷ್ಟೇ ಅಲ್ಲದೆ ಸ್ವವಿಮರ್ಶೆಗೂ ಮುಂದಾಗುತ್ತಾರೆ.

"ರಕ್ತ ಮಾತಾಡುವ ಹಾಗಿದ್ದಿದ್ದರೆ
ಗೊತ್ತಾಗುತ್ತಿತ್ತು ಜಗತ್ತಿಗೇ
ನನ್ನ ಅಪರಾಧದ ಹಿಮಾಲಯದ ಹೊರೆ"

(ಸ್ವಮೌಲ್ಯ ಮಾಪನ)

ಇಲ್ಲಿ ಕವಿ ತನ್ನ ಆತ್ಮ ನಿರೀಕ್ಷಣೆ ಮಾಡಿಕೊಳ್ಳುತ್ತಾರೆ. ತನ್ನ ಇತಿಮಿತಿಗಳರಿತು ಉಸಿರು ಸಲೀಸಾಗಬೇಕೆಂದು, ಕತ್ತಲೆ ತುಂಬಿದ ಮನದ ಮೂಲೆಯಲ್ಲಿ ಕುರುಡು ಕಣ್ಣು ತೆರೆಸಿ ಬೆಳ್ಳಿ ಬೆಳಕಿನ ಬಣ್ಣವಾಗಿ ಸಾರ್ಥಕ ಬದುಕಿನ ಕಡೆ ದಿಟ್ಟಹೆಜ್ಜೆ ಇಟ್ಟು

ಆದರ್ಶ ಬದುಕಿಗಾಗಿ ಸದಾ ಹೋರಾಟಮಾಡಬೇಕೆಂಬ ಹಂಬಲ ವ್ಯಕ್ತಪಡಿಸುತ್ತಾರೆ. 'ಹೆಚ್ಚಿಕೊಂಡಿವ ಹೆಗ್ಗಣಗಳು' ಕವಿತೆಯಲ್ಲಿ ಜನನಾಯಕರ ಕುತಂತ್ರಗಳನ್ನು ಚಿತ್ತಲಾಗಿಸಿ, ಅವರನ್ನು ಮಟ್ಟಹಾಕಿದರೆ ಮಾತ್ರ ಜನಸಾಮಾನ್ಯರ ಜೀವನ ಹಸನಾದೀತು ಎಂದು ಎಚ್ಚರಿಸುತ್ತಾರೆ.

'ವಿಸ್ಮಯ' ಕವಿತೆಯಲ್ಲಿ ಅಸಂಖ್ಯ ಅಸಂಖ್ಯ ರಹಸ್ಯಗಳನ್ನು ತನ್ನೊಡಲಲ್ಲಿ ಅಡಗಿಸಿಕೊಂಡಿದ್ದರೂ ಇನಿತೂ ಸದ್ದುಗದ್ದಲವಿಲ್ಲದೆ ಬದುಕಿಗೆ ಇಂಬಾಗುತ್ತಿರುವ, ಮುರುಟಿದ ಮನಸ್ಸುಗಳಿಗೆ ಚೈತನ್ಯ ನೀಡುತ್ತಿರುವ ಪ್ರಕೃತಿಯನ್ನು ಕಂಡ ಕವಿ ಮೂಕರಾಗುತ್ತಾರೆ, ತಲೆಬಾಗುತ್ತಾರೆ. ಹಾಗೆಯೇ ಮಾನವನು ಬದುಕಿಗಾಗಿ ನಡೆಸುವ ಹೋರಾಟ, ರಂಪಾಟಗಳನ್ನು ಕಂಡು ವಿಷಾದದ ವಿಸ್ಮಯ ವ್ಯಕ್ತಪಡಿಸುತ್ತಾರೆ.

'ಕೂಗಿದೆ ಕರುಳ ಅಳಲು' ಮತ್ತು 'ಚಿಗುರು ಬಲಿಯುವ ಮೊದಲೇ' ಕವಿತೆಗಳು ಗುಡಿಸಲ ತಡಿಕೆಗಳೊಳಗಿನ ತುತ್ತಿನ ಚೀಲಗಳ ಬವಣೆಗಳನ್ನು, ಬಡಜೀವಿಗಳ ನೆತ್ತರು ಹೀರುತ್ತಿರುವ ಶ್ರೀಮಂತ ಜಿಗಣೆಗಳ ದೌರ್ಜನ್ಯಗಳನ್ನು ಮನಕರಗುವಂತೆ ಚಿತ್ರಿಸುತ್ತಾರೆ.

'ಓಡುವ ನದಿಯ ತೊಡೆಯ ಮೇಲೆ', 'ಮುಚ್ಚಂಜೆ', 'ಮಳೆಯು ಬಂದಾ ಮೂರನೇ ದಿನ' ಇತ್ಯಾದಿ ಕವಿತೆಗಳು ಸೃಜನ ಕ್ರಿಯೆಗೆ ಸ್ಫೂರ್ತಿಯಾದ ಪ್ರಕೃತಿಯ ಆರಾಧನೆಗಳೇ ಆಗಿವೆ. 'ಭರವಸೆ ಗೀತ' ವಂತೂ ಬತ್ತಿ ಹೋಗುತ್ತಿರುವ ಭಾವ ಸಾಗರದಲ್ಲಿ ಮತ್ತೆ ಪ್ರವಾಹದ ಕೆಚ್ಚನ್ನು ತುಂಬುತ್ತದೆ. ತಲ್ಲಣಿಸಿದ ಬದುಕಿಗೆ ಆಸೆಯ ಪಲ್ಲವ ಅಂಕುರಿಸುವಂತೆ ಮಾಡಿ ಏನೆಲ್ಲ ಬಂದರೂ ಸಹಿಸಿಕೊಂಡು ಆಶಾವಾದಿಗಳಾಗೋಣ ಎಂಬ ಮಾತನ್ನು ಸಾರಿ ಹೇಳುತ್ತಾರೆ. ಹೀಗೆ ಬದುಕಿನ ಏಳುಬೀಳುಗಳನ್ನು, ಸಾಮಾಜಿಕ ಅರಿವನ್ನು ಜನನಾಯಕರ ಮುಖವಾಡಗಳನ್ನು ತೆರೆದಿಡುತ್ತಲೇ ಬದುಕಿನ ಭವ್ಯ ರಹಸ್ಯಗಳು ಅಡಗಿರುವ ನಿಸರ್ಗದತ್ತ ನೋಟ ಬೀರುತ್ತಾರೆ.

## ನೆಲವಿಲ್ಲದೆ ಬೇರಿಲ್ಲ

ಈ ಸಂಕಲನವು ಹತ್ತು ಉತ್ತಮ ನವ್ಯ ಕವಿತೆಗಳ ಗುಚ್ಛವಾಗಿದೆ. 'ನೆಲವಿಲ್ಲದೆ ಬೇರಿಲ್ಲ' ಕವಿತೆಯು ಈ ಜಗತ್ತಿನ ಸಕಲ ಜೀವಿಗಳ ಅಸ್ತಿತ್ವದ ಬಗ್ಗೆ ಚಿಂತನೆ ನಡೆಸುತ್ತದೆ.

> "ಅಮೃತವಿಲ್ಲವೆ ನಾಸಿಲ್ಲ; ನೆಲವಿಲ್ಲದೆ ಅಮೃತವಿಲ್ಲ
> ಬರಿ ನೆಲವೊಂದೆ ಸಕಲವಾಗುವುದಿಲ್ಲ."

ಈ ಲೋಕದ ಅವತಾರಗಳೆಲ್ಲ ಪರಸ್ಪರ ಸಂಗಮದಿಂದ ಮಾತ್ರ ಸಾಧ್ಯ, ಯಾವುದು ಹೆಚ್ಚು ಯಾವುದು ಕಡಿಮೆಯೂ ಅಲ್ಲ. ಸಮಸ್ಥಿತಿಯ ಸಂಯೋಜನೆ ಇದ್ದಾಗ ಮಾತ್ರ ಅಸ್ತಿತ್ವ ಸಾಧ್ಯ ಎಂಬ ಸೈದ್ಧಾಂತಿಕ ನಿಲುವಿಗೆ ಬದ್ಧರಾಗಿ ನಿಲ್ಲುತ್ತಾರೆ. 'ಸದ್ದು' ಕವಿತೆಯಂತೂ ಹಠಾತ್ತನೆ ಬಂದೆರಗುವ ಸಾವನ್ನು ಕುರಿತು ಚಿಂತಿಸುತ್ತದೆ. 'ಮುಂಗಾರು' ಕವಿತೆ ಬೇಸಿಗೆಯಲ್ಲಿ ಬೆಂದು ಬರಡಾದ ಬದುಕಿಗೆ ತಂಪೆರೆಯುತ್ತದೆ.

> "ಮನಸ್ಸಿನ ಸರೋವರದೊಳಗಿನ ಲಾವಣ್ಯ
> ರೆಪ್ಪೆಗಳಲಿ ತೇಲಿ
> ಹಸಿ ಕನಸಿನ ಹಾಯಿ ಹಡಗು ಮಿಷಿ ಬಿರಸು, ತಂಪು ಹವೆ"

ಯನ್ನು ನೀಡಿ ಮನಸ್ಸಿಗೆ ಮುದ ನೀಡುತ್ತಾರೆ. ಇದೇ ಗುಂಪಿನಲ್ಲಿ ಬರುವ 'ಇರುಳು ಹುಟ್ಟುವ ಮೊದಲು' ಕವಿತೆ ಹಗಲು ರಾತ್ರಿಗಳ ಮೌನ ಚಿತ್ರಗಳನ್ನು ಕಟ್ಟಿಕೊಡುತ್ತಾ, ಎರಡೂ ಏಕಕಾಲಕ್ಕೆ ಸಿದ್ಧಿಸದಿದ್ದರೂ ಇವು ಪರಸ್ಪರ ಅಭಿಮುಖವೇ ಎಂಬುದನ್ನು ಸಾರುತ್ತಾರೆ. ಹುಟ್ಟು ಸಾವುಗಳ ಸ್ಥಿತಿ ಮತ್ತು ನಡುವಿನ ಹಾರಾಟ, ತೂರಾಟಗಳ ಭಾವ ಚಿತ್ರಗಳನ್ನು ಸಾಂಕೇತಿಕ ಪ್ರತಿಮೆಗಳ ಮೂಲಕ ಒಟ್ಟಿಗೆ ಕಟ್ಟಿ ಕೊಡುತ್ತಾರೆ. ಒಟ್ಟಾರೆ ಈ ಸಂಕಲನವೂ ಯಶಸ್ವೀ ಕವಿತೆಗಳನ್ನು ನೀಡಿ ನವ್ಯ ಕಾವ್ಯದ ದಿಕ್ಕನ್ನು ಮತ್ತಷ್ಟು ವಿಸ್ತರಿಸಿದೆ.

## ಚದುರಂಗದ ಕುದುರೆಗಳು

1993ರಲ್ಲಿ ಪ್ರಕಟಿಸಿದ ಮೂವತ್ತೊಂದು ನವ್ಯ ಕವಿತೆಗಳ ಸಂಕಲನ. ಕಳೆದ ಮೂವತ್ತು ವರುಷಗಳಿಂದಲೂ ಕಾವ್ಯ ಕೃಷಿ ನಡೆಸುತ್ತಾ ಬಂದ ದೊರಂಗೌ ಅವರ ಕಾವ್ಯದ ಗೆಯ್ಮೆ ಇಲ್ಲಿ ನಿಚ್ಚಳವಾಗಿ ಫಲ ನೀಡಿದೆ. ಮುನ್ನುಡಿಯಲ್ಲಿ ಡಾ|| ಡಿ. ಆರ್. ನಾಗರಾಜ್ ಹೇಳಿದಂತೆ 'ಕಾವ್ಯ ಭಾಮಿನಿಯಂತಹ ಮಾಟಗಾತಿ ಹಠವಂತರಿಗೆ ಮಾತ್ರ ಮಣಿಯುತ್ತಾಳೆ'. ಹಾಗೆಯೇ ದೊರಂಗೌ ಅವರಿಗೆ ಇರುವ ಏಕಾಗ್ರತೆ ಮತ್ತು ಹಠಕ್ಕೆ ಇಲ್ಲಿ ಒಲಿದೇ ಮಣಿದಿದ್ದಾಳೆಂದರೆ ಅಚ್ಚರಿ ಪಡಬೇಕಾಗಿಲ್ಲ, ಅದಕ್ಕೆ ಉತ್ತರವನ್ನು ಈ ಸಂಕಲನದಲ್ಲಿರುವ 'ಕರ್ಮಮಾರ್ಗ' ಕವಿತೆಯೇ ನೀಡುತ್ತದೆ.

"ಕೊಚ್ಚಿಹೋದ ಕನಸಿನ ದೋಣಿ ಪತ್ತೆ ಮಾಡಿ
ಸಾಧ್ಯತೆಗಳ ದಡಕ್ಕೆ ತಂದ
ಕರ್ಮಮಾರ್ಗದಲ್ಲಿ ಫಲಾನಂದ ಉಕ್ಕಿ
ಕಲಿತ ಕರಾಳ ಪಾಠದಲ್ಲೂ
ಏಕಾಏಕಿ ವಿಪ್ಲವಗಳ ಸೀಳಿ ನಡೆದ
ತನ್ನ ಸಾಧನೆಗೆ ತಾನೇ ಮಾನ್ಯತೆ ಪಡೆದ"

ಕರ್ಮಮಾರ್ಗದಲ್ಲೇ ಸಾಧನೆಗೈಯುತ್ತಾ ನಡೆದ ಕವಿ ನೀರು-ಸೂರಿಗಾಗಿ, ಹಿಟ್ಟು-ಬಟ್ಟೆಗಾಗಿ ಬೆವರು ಸುರಿಸುತ್ತಾ ಕತ್ತಲೆಯ ಕರಿಪರದೆ ಸರಿಸಿ ಬೆಳಕಿನಾಗಸಕ್ಕೆ ಏರಿದ್ದು, ಸೃಜನ ದೀವಿಗೆಯ ಹಿಡಿದದ್ದೂ, ಅಂತರಂಗದ ಜೀವಸೆಲೆ ಬತ್ತದಂತೆ ಕಾವ್ಯ ರಮಣಿಯನ್ನು ಒಲ್ಲೈಸಿದ್ದು ಕವಿಯ ಧನ್ಯತಾ ಭಾವನೆಯನ್ನು ಪ್ರಕಟಿಸುತ್ತದೆ. ಈ ದೃಷ್ಟಿಯಿಂದಲೇ ವಿಮರ್ಶಕರು ದೊರಂಗೌ ಅವರ ಕಾವ್ಯವನ್ನು 'ಸಾಮಾನ್ಯನ ಚರಿತ್ರೆ' ಎಂದು ಕರೆದಿದ್ದಾರೆ.

ಕವಿಯೇ ಹೇಳುವಂತೆ

"ನನ್ನ ಕವಿತೆ ಮುದ್ದೆಸೊಪ್ಪಿನ ಸಾರು
ಧಾತುವಾಗುತ್ತೆ.
ಹಳ್ಳಿಗರ ಹೊಟ್ಟೆಯಲ್ಲಿ
ನನ್ನ ಕವಿತೆ ರೊಟ್ಟಿಕಡಲೆಕಾಯಿ
ಬೆರೆತು ಹೋಗುತ್ತೆ
ಸಾಮಾನ್ಯರ ಬದುಕಿನಲ್ಲಿ"

ಇಂತಹ ಕಡೆಗಳಲ್ಲೆಲ್ಲಾ ಜನಪದರ ಬದುಕಿನ ಮಣ್ಣಿನ ಘಾಟು ವಾಸನೆ ಮೂಗಿಗೆ ಅಡರುತ್ತದೆ. ಶ್ರಮಿಕ ಜೀವಿಗಳ ಜೊತೆ ಬೆರೆತು ಆ ಧೂಳಿನಲ್ಲೇ ಕವಿತೆ

ಮೈತಳೆದು, ರಕ್ತ ಮಾಸಂಗಳಿಂದ ತುಂಬಿಕೊಂಡು ಮಾತಾಡುತ್ತದೆ. ಮುಖವಾಡಗಳಿಲ್ಲದ ಈ ಕವಿ ಸಹಜವಾಗಿಯೇ ಶ್ರೀ ಸಾಮಾನ್ಯನನ್ನು ಮುಟ್ಟಿ, ತಟ್ಟಿ ತನ್ನ ಕಾವ್ಯ ಸಂಕೀರ್ಣವಲಯದೊಳಕ್ಕೆ ಸೆಳೆದು ಕೊಳ್ಳುತ್ತಾರೆ.

ಹಾಗೆಯೇ ಈ ಕವಿ ಸಾಗಿ ಬಂದ ದಾರಿಯೇನೂ ಅಷ್ಟು ಸುಗಮವಾದುದಲ್ಲ.

"ಇರಿದದ್ದು ಅಸಹನೆ
ವಾಕರಿಕೆಯಾದದ್ದು ಬವಣೆ
ಕೆಂಡದುಂಡೆಗಳ ಸಿವುಡು ಕಟ್ಟಿದ್ದು ನನ್ನ ಬದುಕು"

ಹೀಗೆ ನಿತ್ಯ ನಿತ್ಯ ನಡೆದ ದಾರಿ ಅಳಲು ತುಂಬಿದ ಬೊಬ್ಬೆಗಳ; ಉರಿದ ಮೊಂಬತ್ತಿ ಕರಗಿ ಚೈತನ್ಯವಿಲ್ಲದ ಘನ ದ್ರವವಾದಂತೆ ನೆನಪಿನ ಉಗ್ರಾಣದ ಆಳದಲ್ಲಿ ಕೆಂಡದುಂಡೆಗಳು ಸಿವುಡಾದದ್ದು ಎಂತಹವರನ್ನೂ ಬೆಚ್ಚಿ ಬೀಳಿಸುತ್ತದೆ. ಇಷ್ಟೆಲ್ಲಾ ಎಡರು ತೊಡರುಗಳನ್ನು ದಾಟಿದರೂ

"ವಾಸ್ತವ ಬದುಕೊಂದು ರೇಖೆ
ಮನಸೊಳಗಿನ ಕನಸೊಂದು ರೇಖೆ
ಅಂದುಕೊಂಡದ್ದು ಆಗಲೇ ಇಲ್ಲ
ರೇಖೆಗಳು ಕೂಡಲೇ ಇಲ್ಲ"

ಎಲ್ಲರೂ ಬುದ್ಧನಂತಾಗುವುದು ಸಾಧ್ಯವೇ ಇಲ್ಲ. ಏಕೆಂದರೆ ನಾವುಗಳು ಸಿದ್ಧಾರ್ಥನಂತಲ್ಲ.

"ದಿನ ದಿನ ಊಸರವಳ್ಳಿ ವೇಷತೊಟ್ಟು
ಮುಗ್ಧತೆಗೆ ತಿಲಾಂಜಲಿ ಬಿಟ್ಟು
ಥಳುಕಿಗೆ ಬುದ್ಧಿ ಭಾವ
ಅಡವಿಟ್ಟು
ಯಃಕಶ್ಚಿತ್ತಾದ ಮಾನವ ಚಿಂದಿಯಾದ
ಕೊಚ್ಚೆಗುಂಡಿ ಹಾದಿಯಾದ"

ಮಾನವತೆಗೆ, ನೀಯತ್ತಿಗೆ ಎಳ್ಳುನೀರು ಬಿಟ್ಟಿರುವ ನಾವು ಜ್ಞಾನದ ಅರಿವನ್ನು ಪಡೆವುದಾದರೂ ಹೇಗೆ? ಸಂಸ್ಕೃತಿ ಶೀಲವನ್ನೇ ಹಾಳುಮಾಡಿ ಹುಲಿ, ಸಿಂಹಗಳೆಲ್ಲ ಇಲ್ಲಿ ಹೆಸರಿದ್ದ ಮಾನವ ರೂಪವಾಗಿದ್ದಾರೆ. ಹಸುವಿನಾಕಾರ ಹುಲಿಯಾಚರಣೆ ದಿನನಿತ್ಯ ನಮ್ಮದಾಗಿದೆ. ಹೀಗಿದ್ದರೆ ಬದುಕು ಹೇಗೆ ತಾನೆ ಹಸನಾದೀತು ಎಂದು ಚಿಂತಾಮಗ್ನನಾಗುತ್ತಾನೆ ಕವಿ. ಪ್ರಸ್ತುತ ಸಂಕಲನದ ಯವುದೇ ಕವಿತೆಯನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದರೂ ಅಲ್ಲಿ ದೊರಂಗೌ ಅವರಿಗೆ ಸಮಾಜದ ಬಗ್ಗೆ ಇರುವ ಕಳಕಳಿ ಅರ್ಥವಾಗುತ್ತದೆ. 'ಮರೀಚಿಕೆ' ಕವನದಲ್ಲಿ ಭಾರತೀಯ ಸಂಪ್ರದಾಯಬದ್ಧ ಸಮಾಜದೊಳಗೆ ಬದುಕುವ ವ್ಯಕ್ತಿ ತನ್ನ ಶಕ್ತಿ ಸಾಮರ್ಥ್ಯಗಳಿಗೆ ಯಾವ ಪ್ರತಿಫಲವನ್ನೂ ಪಡೆಯುತ್ತಿಲ್ಲ. ನಮ್ಮ ರಕ್ತದಲ್ಲಿ ತುಂಬಿಕೊಂಡಿರುವ ದೇವರು, ಧರ್ಮ, ಪುನರ್ ಜನ್ಮ, ಪವಿತ್ರ ಗ್ರಂಥಗಳು, ಸ್ವರ್ಗನರಕಗಳ ಬಂಧನಗಳು ಮನುಷ್ಯನನ್ನು ಗುಲಾಮನನ್ನಾಗಿ ಮಾಡುತ್ತಿವೆ.

ಕ್ಷೇಮ ಸೂರ್ಯನಿಗಾಗಿ ಹೆಣಗಿ ತಿಣುಕಾಟ ನಡೆಸಿದರೂ ಮಂಗಳದ ಮರೀಚಿಕೆಯಲ್ಲಿ ಅಲೆದಾಡುತ್ತಿದ್ದಾನೆ. ಈ ಕವನದಲ್ಲಿ ಕಂಡು ಬರುವ ಅನುಭವದ ಸಾಂದ್ರತೆ ಮತ್ತು ಪ್ರತಿಮೆಗಳು ವಿಶೇಷಾರ್ಥವನ್ನು ಧ್ವನಿಸುತ್ತವೆ. ವಾಸ್ತವ ಜಗತ್ತಿನಲ್ಲಿ

ಬದುಕುತ್ತಿರುವ ತಳಮಳ ಮತ್ತು ಕಳವಳಗಳನ್ನು ಸನಾತನಕ್ಕೆ ಬೆಸೆಯುತ್ತಾ ಆತ್ಮ ಪರಿವೀಕ್ಷಣೆಗೆ ತೊಡಗುತ್ತಾರೆ. ಇಲ್ಲಿ ಕವಿ ಜೀವಕ್ಕೂ, ಪ್ರಕೃತಿಗೂ ಇರುವ ಅವಿನಾಭಾವ ಸಂಬಂಧದ ಕಾಣ್ಕೆಗಾಗಿ (Vision) ಚಡಪಡಿಸುತ್ತಾರೆ.

'ಗೆಯ್ಮೆ' ಮತ್ತು 'ಕದಿಯುವ ಕೆಲಸ' ಕವನಗಳಲ್ಲಿ ಗಟ್ಟಿ ಮುಟ್ಟಾದ ಧ್ವನಿ ವ್ಯಾಪಾರಗಳನ್ನು ನಡೆಸುತ್ತಾ, ಚಮತ್ಕಾರ ಪೂರ್ಣ ಧ್ವನಿಚಿತ್ರಗಳನ್ನು ಕಡೆದು ಬಿಡುತ್ತಾರೆ.

ಪರಂಪರೆಗೆ ಬದ್ಧನಲ್ಲದ ಮಗ ಮೂರ್ತತೆಯಿಂದ ಅಮೂರ್ತದ ಕಡೆ ತೆರಳಿ ಗೆಯ್ಮೆ ಹೆಪ್ಪು ಗಟ್ಟಿ ಬಿಡುತ್ತದೆ. ಇಲ್ಲಿಯ ಕಾವ್ಯಚಲನೆ ಮೊದಲಿಗೆ ಬಿರುಸಾಗಿ ಸಾಗಿದರೂ ವಂಶದ ವೃತ್ತಿಯ ಮರೆವಿನೊಂದಿಗೇ ಮೌನ ತಾಳಿ ಚಲನೆಯ ಗತಿ ನಿಧಾನವಾಗುತ್ತದೆ. ಇಲ್ಲಿಂದ ಮುಂದೆ ಕಾವ್ಯ ಪ್ರತಿಮೆ ಗೂಡು ಕಟ್ಟಿ ಸಂಕೇತಗಳು ಪ್ರತಿಮಾತ್ಮಕ ಬಂಧನದೊಳಗೆ ಉಯ್ಯಾಲೆಯಾಡುತ್ತವೆ.

ಕವಿಯ ಸೃಜನ ಶೀಲ ಗೆಯ್ಮೆ ಕವನದ ಹಿಂದಿನ ಸಾಲುಗಳಲ್ಲಿ ಕಂಡು ಬಂದಂತೆ ಅಂತರಾರ್ಥವನ್ನು ಸೂಕ್ಷ್ಮವಾಗಿ ಚೆಲ್ಲಿ ನಿಂತುಬಿಡುತ್ತದೆ. ಒಟ್ಟಿನಲ್ಲಿ ತನ್ನ ಸಂಕೀರ್ಣತೆಯಿಂದ 'ಗೆಯ್ಮೆ' ನಮಗರಿವಿಲ್ಲದೇ ಗೆದ್ದುಬಿಡುತ್ತದೆ. 'ಕದಿಯುವ ಕೆಲಸ' ಕವನವೂ ಕೂಡ ಸಾಮಾನ್ಯತೆಯಿಂದ ಅಸಾಮಾನ್ಯತೆಯ ಕಡೆ ಜಿಗಿಯುತ್ತಾ ಮತ್ತೆ ಮೂಲಸ್ಥಿತಿಗೆ ಮರಳಿ ಬಿಡುತ್ತದೆ. ಕವಿಗೆ ಬದುಕೇ ಮುಖ್ಯವಾಗುವುದರಿಂದ ಈ ಭಾವ ಸ್ಥಾಯಿಯಾಗಿ ಕೆಲಸ ಮಾಡುತ್ತದೆ. ಒಟ್ಟಾರೆ ಈ ಸಂಕಲನದಲ್ಲಿ ಅಗಣಿತ ತುಡಿತಗಳು ಮಿಡಿಯುತ್ತಾ ಕಾವ್ಯಬಂಧವನ್ನು ಯಶಸ್ವಿಯಾಗಿ ಕಟ್ಟಿಕೊಡುತ್ತವೆ.

## ಪ್ರೀತಿ ಪ್ರಗಾಥ

ಪ್ರಗಾಥವೆಂದರೆ ಆಂಗ್ಲ ಸಾಹಿತ್ಯದ 'ODE'ಗೆ ಸಂವಾದಿಯಾಗಿ ಬಳಸಿದ ಪದ. ಯಾವುದೇ ಅಡೆತಡೆಯಿಲ್ಲದೆ ನಿರ್ದಿಷ್ಟ ವಸ್ತುವನ್ನು ಕುರಿತು ವರ್ಣನಾತ್ಮಕವಾಗಿಯೂ, ವಸ್ತು ನಿಷ್ಠವಾಗಿಯೂ ಹೃದಯದಿಂದ ಚಿಮ್ಮಿದ ಸೌಂದರ್ಯದ ಸಹಜ ಗೀತೆಯ ಅನುಭವಗಳೇ ಸಂಕೇತಗಳಾಗಿ ಸಾಗಿ ಬಂದ ಬದುಕಿನ ಏರಿಳಿವುಗಳಲ್ಲಿ ನರ್ತನ ಮಾಡುತ್ತಾ ಸಾಗುತ್ತದೆ. ಇಪ್ಪತ್ತೈದು ಒಳತಲೆಬರಹಗಳ ಅಡಿಯಲ್ಲಿ ಸಾಗುವ ಈ ಪ್ರಗಾಥ ಕವಿಯ ವೈಯಕ್ತಿಕ ಜೀವನಾನುಭವಗಳನ್ನು ಕಟ್ಟಿ ಕೊಡುತ್ತವೆ. ಕವಿ ಪಟ್ಟ ಪಾಡುಗಳೆಲ್ಲವೂ ಇಲ್ಲಿ ಹುಟ್ಟು ಹಾಡುಗಳಾಗಿವೆ. ಇಲ್ಲಿಯ ಸ್ವರ ಮಾಧುರ್ಯದ ಓಟ ಜೀವಭಾವಗಳನ್ನು ಬೆಸೆಯುತ್ತವೆ.

"ಇಂದು ಅಂದಿನ ಘಟನೆ
ನೆನಪಾಗಿ ರಸ ನಿಮಿಷ
ನನ್ನೆದೆಯ ಕಡಲುಕ್ಕಿ ಸಾವಿರದ ಸಂತೋಷ"

ಕವಿಗೆ ಯೌವ್ವನದ ಆವೇಶ ನೆನಪಾಗುತ್ತದೆ. ಅದು ರಾಗ, ಉನ್ಮಾದಗಳ ಜೊತೆಗೂಡಿ ಕಡಲಾಗಿ ಹರಿದು ತನ್ನ ಪ್ರಗಾಥಕ್ಕೆ ನಾಂದಿ ಹಾಡುತ್ತದೆ.

ಮಂಪರದ ಮಾಧುರ್ಯಗಳೂ ಗರಿಗೆದರಿ ಇಲ್ಲಿ ಹಾರಾಡುತ್ತವೆ. ಕವಿ ತನ್ನ ಹೃದಯದೊಂದಿಗೇ ಸಂವಾದ ನಡೆಸುತ್ತಾ ಸಾಗುತ್ತಾನೆ. ಹರೆಯದ ಹುಚ್ಚಿನ ವೈವಿಧ್ಯತೆಯನ್ನು, ದಾಂಪತ್ಯ ಪ್ರೇಮದ ಪ್ರಖರತೆಯನ್ನು, ಒಲಿದ ಹೃದಯಗಳು ಸಂಸಾರ ಸಾಗರದಲ್ಲಿ ಕಂಡ ಏರಿಳಿವುಗಳನ್ನು ಆತ್ಮೀಯವಾಗಿ ನಿವೇದಿಸುತ್ತಾ;

ಹರ್ಷದ ಹೊನಲಲ್ಲಿ ರಸಾನಂದವನ್ನು ಉಣಬಡಿಸುತ್ತಾರೆ. ಪ್ರೀತಿಗೆ ಸಾವಿಲ್ಲ ಅದು ನಿತ್ಯಂ ಪೊಸತು ಎಂಬುದನ್ನು ಸಾಬೀತುಗೊಳಿಸಿದ್ದಾರೆ.

"ಕಳೆದಂಥ ಕಾಲವನು
ನೆನೆವಾಗ ಮಧುರ ಸ್ಮೃತಿ
ಮತ್ತೊಮ್ಮೆ ಯವ್ವನವೆ ಬಂದಂತೆ ಉಕ್ಕುಕ್ಕಿ"

ಹಾರುವುವು ಕಣ್ಮುಂದೆ ನೆನಪಾಗಿ ಬೆಳ್ಳಕ್ಕಿ ಹರೆಯದಲ್ಲಿ ಆಡಿದ, ಕೂಡಿದ ಮಧುರ ನೆನಪುಗಳು ಇಂದಿಗೂ ಉಕ್ಕುಕ್ಕಿ ಕಣ್ಣಮುಂದೆ ಮೆರವಣಿಗೆ ಸಾಗುತ್ತದೆ. ಸದ್ದುಗದ್ದಲಗಳಿಲ್ಲದ ಸಡಗರದ ಸನ್ಮಾನಗಳು ಬೆಳ್ಳಕ್ಕಿಯಂತೆ ಬಾನಿನಗಲ ಪಟಪಟಪಾರಾಡುತ್ತವೆ. ಈ ಪ್ರಗಾಥಕ್ಕೆ ಪ್ರೇರಕವಾಗಿ ಸಾಟಿಯಿಲ್ಲದ ರೂಪಕಗಳು ಮೈಪಾಳಿ ನಿಲ್ಲುತ್ತವೆ. ಪ್ರಾಯದ ಒಲುಮೆ ಪಲ್ಲವಿಸಿ ನಗೆ ಮಲ್ಲಿಗೆಯನ್ನೇ ಚೆಲ್ಲುತ್ತವೆ.

ಚಿತ್ತ ಪಕ್ಷಿಗಳೆರಡು ಮುಗಿಲಿಗೆ ಜೀಕಿ ಬದುಕಿನ ಚಿತ್ತಾರ ಬರೆಯುತ್ತಾ "ಬೇಲಿ ಕಟ್ಟುವುದುಂಟೆ ಒಲವಿಗೆ?" ಎಂದು ತಾವೇ ಪ್ರಶ್ನಿಸಿಕೊಂಡು "ಒಲವಿಗೆ ಮೊದಲುಂಟು ತುದಿಯೆಂಬುದೆಲ್ಲುಂಟು?" ಎಂಬ ಉತ್ತರವನ್ನು ಕಂಡುಕೊಳ್ಳುತ್ತಾರೆ.

"ನಮ್ಮೆಲ್ಲರ ಪ್ರೇಮಕ್ಕೆ ಅಡ್ಡಿಗಳು ಏನೆಲ್ಲ?
ಜಾತಿಯ ಭೂತವೋ! ಅಂತಸ್ಥಿತನ ಪ್ರೇತವೋ
ಅರ್ಥವಾಗಲಿಲ್ಲ ಹಿರಿಯರಿಗೆ ನಮ್ಮೊಲವು !

ಜಾತಿಗೇಕೆ ಪ್ರೀತಿ ಅಂತಸ್ಥಿನ ಗೋಡೆ? ಒಲಿದ ಹೃದಯಗಳಿಗೆ ಬೇಲಿಯೇ ಬೇಡ! ಸದಾ ಉಕ್ಕುವುದು ಚೈತನ್ಯದ ಚಿಲುಮೆ, ಎಂದು ಮುನ್ನುಗ್ಗಿದರೆ.

"ಹೆಜ್ಜೆ ಇಟ್ಟಲ್ಲೆಲ್ಲಾ ಬರೀ ಮುಳ್ಳು ಜಾಲಿ
ಎತ್ತ ತಿರುಗಲಿ ನಾವು, ಅಲ್ಲಿ ನೀತಿ ಬೇಲಿ" ಯ

ಬವಣೆಗಳ ಬೇಂಕಿ ಎಡತಾಕುತ್ತದೆ ಅದನ್ನೂ ಲೆಕ್ಕಿಸದೆ ಅಳುವುದೇಕೆ ಹೇಳು ಗೆಳತಿ ಹಚ್ಚ ಬೇಕು ಪ್ರೀತಿ ಪ್ರಣತಿ" ಎನ್ನುತ್ತಾ ಮುನ್ನಡೆಯುತ್ತಾರೆ. ಹೀಗೆ ಕವಿ ತನ್ನ ಕಷ್ಟದಲ್ಲಿ ಆದ ಪ್ರಾಣಗೆಳೆಯ ಗೆಳೆತಿಯರನ್ನು ಸ್ಮರಿಸುತ್ತಾ ಸಾಗುತ್ತಾರೆ. ನಂಟು ಚೂರಾದರೂ, ಬದುಕು ರೋಧನವಾದರೂ ಧೃತಿಗೆಡದೆ ಬಾಳಿನ ಬವಣೆಗಳನ್ನು ಮೆಟ್ಟಿ ಪ್ರೀತಿ ಕುಲುಮೆಯಲ್ಲಿ ಮಿಂದು ಹೊರಬಂದ ಪರಿಯನ್ನು ಹಾಡಾಗಿಸುತ್ತಾರೆ. ಇರುಳು ಹೊಟ್ಟೆ ಪಾಡಿಗಾಗಿ ದುಡಿಯುತ್ತಾ ಹಗಲು ಜ್ಞಾನದೇಗುಲಗಳಿಗೆ ಎಡತಾಕುತ್ತಾ ಪಟ್ಟ ಕಷ್ಟಗಳನ್ನು ಇಲ್ಲಿ ಕಾವ್ಯವಾಗಿಸಿದ್ದಾರೆ.

ಒಟ್ಟಾರೆ "ಪ್ರೀತಿಪ್ರಗಾಥ"ವು ವೈಯಕ್ತಿಕ ಜೀವನಾನುಭವದ ನೆಲೆಗಟ್ಟಲ್ಲೇ ಅರಳಿದರೂ ಅದರ ಕಂಪು ಸಾರ್ವತ್ರಿಕತೆಯನ್ನು ಪಡೆದು ಭಾವಗೀತೆಯಾಗಿ ಓದುಗನ ಹೃದಯಕ್ಕೆ ನೇರವಾಗಿ ಹರಿಯುತ್ತದೆ. ಕವಿ ಬಳಸುವ ಭಾಷೆಯ ಓಟ ಪ್ರಾಸಾನುಪ್ರಾಸಗಳ ರಿಂಗಣ ಕುಣಿತವು ಬದುಕಿನ ಏರಿಳಿತಗಳಂತೆ ಲಯ, ಸಾದನಗಳನ್ನು ಚಿಮ್ಮಿಸಿ, ಕೆಲವೊಮ್ಮೆ ಗದ್ಯದ ಗತಿಯಲ್ಲೂ ಸಾಗಿ ಸೊಗಸಾದ ಪ್ರೀತಿಯ - ಪ್ರಗಾಥವನ್ನೇ ಕನ್ನಡ ಕಾವ್ಯ ಕ್ಷೇತ್ರಕ್ಕೆ ನೀಡಿದ್ದಾರೆ.

## ಹಳ್ಳಿ ಹುಡುಗಿ ಹಾಡು ಪಾಡು

ನಲವತ್ತೇಳು ಒಳ ವಿಭಾಗಗಳಿಂದ ಕೂಡಿರುವ ಈ ಪ್ರಗಾಥವು ಅನಕ್ಷರಸ್ಥಳಾದ ಹಳ್ಳಿಯ ದಲಿತ ಹೆಣ್ಣು ಮಗಳೊಬ್ಬಳ ಬದುಕಿನ ಬೇರೆ ಬೇರೆ

ಘಟ್ಟಗಳ ಸಮುಗ್ರ ಚಿತ್ರಣವನ್ನು ಚಿತ್ರಿಸುತ್ತದೆ ಗ್ರಾಮೀಣ ಬದುಕಿನಲ್ಲಿ ಅರಳುತ್ತಿರುವ ಮುಗ್ಧ ಜೀವಗಳು ಏನೆಲ್ಲ ಆಸೆ ಆಕಾಂಕ್ಷೆಗಳನ್ನು ಇಟ್ಟುಕೊಂಡಿರುತ್ತವೆ ಎಂಬುದನ್ನು ಕವಿ ಇಲ್ಲಿ ಸೊಗಸಾಗಿ ದಾಖಲಿಸುತ್ತಾರೆ. ಹಳ್ಳಿಯ ಹುಡುಗಿಯೊಬ್ಬಳು ಪಟ್ಟ ಪಾಡೆಲ್ಲವೂ ಇಲ್ಲಿ ಹಾಡಾಗಿ ಹರಿದಿದೆ. ಕುಡುಕ ಗಂಡನೊಂದಿಗೆ ಸಂಸಾರದ ಹೊಣೆ ಹೊತ್ತು ಬವಣೆಯ ಬದುಕು ಸಾಗಿಸುವುದು ಸಾಮಾನ್ಯದ ಮಾತೇನಲ್ಲ.

ಮನಸ್ಸಿಗೆ ನೆಮ್ಮದಿ ಇಲ್ಲದೆ ಮಾನಸಿಕ ನೋವು ಅನುಭವಿಸುತ್ತಾ ಕಷ್ಟಗಳನ್ನೇ ಹಾಸಿ- ಹೊದ್ದು ಮಲಗುವ ಜೀವಿಗಳು ಏನೆಲ್ಲ ಕನಸುಗಳನ್ನು ಹೆಣೆಯುತ್ತವೆ ಎಂಬುದು ಇಲ್ಲಿ ಮನ ಮಿಡಿಯುವಂತೆ ನಿರೂಪಿತವಾಗಿದೆ. ಇಂಥ ತೊಳಲಾಟದಲ್ಲೇ ಸಾಗಿ ಹಾದಿ ತಪ್ಪಿದರೂ ಪರವಾಗಿಲ್ಲ ಬದುಕಲ್ಲಿ ಹಸಿರು ಕಾಣುತ್ತೇನೆ ಎನ್ನುವ ಹಳ್ಳಿಯ ಹೆಣ್ಣಿನ ಛಲ ಇಲ್ಲಿ ಕಾರಂಜಿಯಾಗುತ್ತದೆ. ನಿಂತ ನೀರು ಮಲೆತು ಜೊಂಡು ಬೆಳೆದು ರಾಡಿಯಾದರೂ ಕೋಮಲವಾದ ಕಮಲ ಅರಳುವಂತೆ ಬದುಕಿಗೆ ಆಶಾಕಿರಣವಾದ ಮಗನನ್ನು ಪಡೆಯುತ್ತಾಳೆ. ಸಂಸಾರದಲ್ಲಿ ಏನೆಲ್ಲಾ ನೋವುಗಳಿದ್ದರೂ ಮಗನ ಏಳ್ಗೆಯೊಂದೇ ತಾಯಿಗೆ ನೆಮ್ಮದಿ ತಂದು ಕೊಡುತ್ತದೆ.

ಬೇಸಿಗೆಯ ಬಿಸಿಲಿನಲ್ಲಿ ಬೆಂದು ಬರಡಾದ ಗಿಡಮರಗಳ ಜೋಲು ಮೋರೆ, ಮುಂಗಾರ ಮಳೆ ಬಿದ್ದ ಮೂರನೇ ದಿನ ಹೇಗೆ ನಳನಳಿಸುತ್ತಾ ಅರಳುತ್ತದೋ ಹಾಗೆಯೇ ವಂಶದ ಕುಡಿ ಚಿಗುರೊಡೆದಾಗ ನೋವೆಲ್ಲವೂ ಗೌಣವಾಗಿ ಸಂತೋಷ ಉಕ್ಕುತ್ತದೆ ಎಂಬುದನ್ನು ದೊರಂಗೌ ಇಲ್ಲಿಯ ನುಡಿ ಚಿತ್ರಗಳಲ್ಲಿ ಧ್ವನಿಸಿದ್ದಾರೆ. ಭಾಷೆ ಎಲ್ಲಿಯೂ ಮುಲುಕದೆ, ವೇಷ ತೊಟ್ಟುಕೊಳ್ಳದೆ ಗ್ರಾಮೀಣ ಸೊಗಡಿನಲ್ಲೇ ಬೆತ್ತಲೆ ಸ್ನಾನ ಮಾಡಿ ನಿರ್ಗಳವಾಗಿ ಸಾಗುತ್ತದೆ ತುಮಕೂರು ಜಿಲ್ಲೆಯ ಪ್ರಾದೇಶಿಕತೆ ಹಳ್ಳಿ ಹುಡುಗಿಯ ಬದುಕಿನ ಚಿತ್ರಗಳ ಮೇಲೆ ಮುದ್ರೆಯೊತ್ತಿ ಪುನರ್ ಜನ್ಮ ಪಡೆಯುತ್ತವೆ. ಓದುಗನಿಗೆ ಮೈ ಮನಸ್ಸುಗಳು ಪುಳಕಗೊಂಡು ಮತ್ತೆ ಮತ್ತೆ ಮೆಲುಕು ಹಾಕುವಂತೆ ಉದ್ದೀಪನ ಗೊಳಿಸುತ್ತದೆ.

ಹಳ್ಳಿಗಾಡಿನ ಹೆಣ್ಣೊಬ್ಬಳ ಕನಸು ನನಸಾಗುವಂತೆ ಮಗ ಓದಿ ವಿದ್ಯಾವಂತನಾಗಿ ಉನ್ನತ ಹುದ್ದೆ ಹಿಡಿಯುತ್ತಾನೆ. ಇದುವರೆಗೂ ಶಹರದ ಬದುಕನ್ನೇ ಕಂಡರಿಯದ ಮುಗ್ಧ ಹೆಣ್ಣು ಮಗ-ಸೊಸೆಯೊಂದಿಗೆ ಬದುಕುತ್ತಾ ಜೀವನದಲ್ಲೇ ಕಾಣಬಾರದನ್ನೆಲ್ಲಾ ಕಂಡು, ನೋಡಬಾರದ್ದನ್ನೆಲ್ಲಾ ನೋಡಿ ಸಂತೋಷ ಸಾಗರದಲ್ಲಿ ಮುಳುಗುತ್ತಾಳೆ.

ಮಗ-ಸೊಸೆಯರ ಅನ್ಯೋನ್ಯತೆಯನ್ನು ಕಂಡ ತಾಯಿಗೆ ಮಗ ನನ್ನನ್ನು ದೂರ ಮಾಡುತ್ತಿದ್ದಾನೆ ಎನ್ನುವ ಭಾವನೆ ಬಲವಾಗಿ ಬೇರು ಬಿಡುತ್ತದೆ. ಬೇಸರಗೊಂಡು ಸಾವಿಗಾಗಿ ಮೊರೆ ಇಡುತ್ತಾ ಇಹಲೋಕ ತ್ಯಜಿಸುತ್ತಾಳೆ. ಒಟ್ಟಾರೆ ದೊರಂಗೌ ಅವರ ಈ "ಪ್ರಗಾಥ" ಎಲ್ಲಾ ರೀತಿಯಿಂದಲೂ ಯಶಸ್ವೀ ಕೃತಿಯೆನಿಸಿಕೊಳ್ಳುತ್ತದೆ.

ಬದುಕಿನ ವಿವಿಧ ಹಂತಗಳಲ್ಲಿ ಅನೇಕ ಬಗೆಯ ಬಯಕೆಗಳು ಚಿಗುರೊಡೆಯುವುದು ಸಹಜ, ಆದರೆ ಆ ಬಯಕೆಗಳೇ ಬಲವಾಗುತ್ತಾ ಸಾಗಿದರೆ ದುರಂತದಛಾಯೆ ಆವರಿಸಿಬಿಡುತ್ತದೆನ್ನುವ ಮನೋವಿಜ್ಞಾನಿ ಫ್ರಾಯ್ಡನ ಸಿದ್ಧಾಂತಗಳಿಗೆ ಈ ಕೃತಿ ಪುಷ್ಟಿಯೊದಗಿಸುತ್ತದೆ.

## ಮಣ್ಣಿನ ಮಾತುಗಳು

ದೊರಂಗೌ ಅವರ ಈ ಕೃತಿ ಏಳು ನೂರಎಂಬತ್ತಾರು ಚೌಪದಿಗಳನ್ನು ಒಳಗೊಂಡ ಸಂಗ್ರಹ. ಚೌಪದಿಗಳೆಂದರೆ ಮುಕ್ತಕಗಳು ಅರ್ಥಾತ್ ಚುಟುಕುಗಳು ಎಂದು ಕರೆಯಬಹುದು. ಕನ್ನಡದ ಜಾಯಮಾನಕ್ಕೆ ಚೌಪದಿ ಶ್ರೇಷ್ಠವಾದುದು. ಮೊದಲ ಮೂರು ಸಾಲಿನಲ್ಲಿ ಬೇರೆ ಬೇರೆ ದೃಶ್ಯಾನುಭವಗಳನ್ನು ಕಟ್ಟಿಕೊಂಡು ಕೊನೆಯ ಸಾಲು ತಟಕ್ಕನೆ ಆಸ್ಫೋಟಗೊಳ್ಳುತ್ತದೆ. ಇಲ್ಲಿಯ ಒಂದೊಂದು ಮುಕ್ತಕಗಳು ಸ್ವಯಂ ಪೂರ್ಣವಾದವುಗಳು. ಕವಿ ತನ್ನ ಸ್ವಾನುಭವವನ್ನು ಹೇಳಿ ಕೊಳ್ಳುವ ಸ್ವಾತಂತ್ರ್ಯ ಈ ಮುಕ್ತಕಗಳಿಗೆ ಇರುತ್ತದೆ. ಇಲ್ಲಿ ಬರುವ ಮುಕ್ತಕಗಳ ಗುಣ ಹಾಗು ಗಾತ್ರದಲ್ಲಿ ಮಹತ್ತನ್ನು ಸಾಧಿಸಿವೆ. ಶರಣರು ದಾಸರನ್ನು ನೆನಪಿಗೆ ತರುತ್ತವೆ. ಇಲ್ಲಿಯ ಚಿಂತನೆಗಳು ಸಹೃದಯನ ಭಾವಕೋಶವನ್ನು ತೆರೆದು ಅಲ್ಲಿ ವೈಚಾರಿಕ ಜಾಗೃತಿಯನ್ನು ಮೂಡಿಸುತ್ತವೆ. ಈ ಲೋಕದ ಬದುಕನ್ನು ಕಂಡುಂಡ ಕವಿ ತನಗೆ ದಕ್ಕಿದ ಅನುಭವಗಳನ್ನು ಇಲ್ಲಿ ಹಕ್ಕಿಯಂತೆ ಹಾಡಿದ್ದಾನೆ. ಕೆಲವು ಮುಕ್ತಕಗಳಂತೂ ಆದಿ ಮತ್ತು ಅಂತ್ಯ ಪ್ರಾಸಗಳ ಛಂದಸ್ಸಿನ ಚೌಕಟ್ಟಿನಲ್ಲೇ ಲಯಬದ್ಧವಾಗಿ ಕುಣಿಯುತ್ತಾ ಒಳಪ್ರಾಸಗಳನ್ನು ಸೃಷ್ಟಿಸಿಕೊಳ್ಳುತ್ತವೆ. ಮಾತ್ರೆ ಗಣಗಳಿಗಿಂತಲೂ ಕಾವ್ಯದಲ್ಲಿ ಲಯದ ಹಿಡಿತವಿರಬೇಕು. ಆ ಲಯ ಮತ್ತು ಚಲನೆ ಇಲ್ಲಿ ಬಹುಮುಖ್ಯವಾಗಿ ಗೋಚರಿಸುತ್ತದೆ.

ಹೇಳಿ ಕೇಳಿ 'ಮುಕ್ತಕ' ಛಂದಸ್ಸಿನಿಂದ ನಿಯಂತ್ರಿತ ಕಾವ್ಯವಲ್ಲ. ಕೆಲಹೊತ್ತು ನಿಂತಲ್ಲಿ, ಕುಂತಲ್ಲಿ ಮೆಲುಕು ಹಾಕಬಹುದಾದಂತಹ ನುಡಿಮುತ್ತುಗಳು. ದೊರಂಗೌ ಅವರ ಮುಕ್ತಕಗಳಲ್ಲಿ ಸಂಕ್ಷೇಪನ ಶಕ್ತಿ ಇದೆ; ಸ್ವಾನುಭವವಿದೆ; ಕೃತಿಕಾರನ ನೇರ ಅಭಿಪ್ರಾಯವಿದೆ. ಅಷ್ಟೇ ಅಲ್ಲದೆ ಕಡಿಮೆ ಶಬ್ದಗಳಲ್ಲಿ ಅಭಿವ್ಯಕ್ತಿ ಪಡೆದು ಮನನವಾಗುತ್ತವೆ. ನೆನಪಿನಲ್ಲಿ ಉಳಿಯುತ್ತವೆ.

"ಮಣ್ಣಿನಾ ಮಗ ನಾನು ಮಂಕುತಿಮ್ಮನ ಶಿಷ್ಯ
ಕಣ್ಣು ಕಂಡಂತೆಲ್ಲಾ ಬರೆಯುವೆನು ಭಾವ-ಭಾಷ್ಯ"

ಮಣ್ಣಿನ ಮಗನಾದ ದೊರಂಗೌ ತನ್ನ ಕಾವ್ಯ ಗುರುಗಳಿಂದ ಪಡೆದ ಸ್ಫೂರ್ತಿಯನ್ನು ನೆನೆಯುತ್ತಾರೆ. ಈ ಲೋಕವನ್ನು ಕಂಡಾಗ ಹೃದಯದಿಂದ ಚಿಮ್ಮಿದ ಭಾವನೆಗಳಿಗೆ ಭಾಷ್ಯ ಬರೆಯುತ್ತಾರೆ. ಸರ್ವಜ್ಞನಂತೆ ಈ ಸಮಾಜದಲ್ಲಿನ ಅನೀತಿ, ಅನೈತಿಕತೆ, ಅನ್ಯಾಯಗಳನ್ನು ಕಂಡಾಗ ಸಿಡಿದೇಳುತ್ತಾರೆ.

"ಹುತ್ತ ಕಟ್ಟುತ್ತದೆ ಕವಿತೆ ಸುಷುಪ್ತಿಯೊಳಗೆ
ಕವಿತೆ ಹುಟ್ಟುತ್ತದೆ ಚಿತ್ತ ಚಿಲುಮೆಯೊಳಗೆ
ಮಾತು ಅರ್ಥವ ಕಂಡು ಭಾವವಾಗಿದ ಘಳಿಗೆ
ವಾಗರ್ಥಮೀರಿ ಧ್ವನಿಯಾಗುತ್ತೆ ಕವಿನಾಲಗೆಯೊಳಗೆ - ಮಣ್ಣಿನ ಮಗ"

ಹುತ್ತವೆಂಬ ಚಿತ್ತದಲ್ಲಿ ಮಾತು ಕರಗಿ ಅರ್ಥ ಪಡೆದು ಭಾವನೆಗಳು ಮಾಗಿದಾಗ ಕವಿತೆ ಜನ್ಮತಾಳಿ ವಾಚ್ಯಾರ್ಥ ಮೀರಿ ಧ್ವನಿಯಾಗುವುದನ್ನು ಚಿತ್ರಿಸುತ್ತಾರೆ.

"ಏನಿದೀ ಲೋಕವಿದು ಅಬ್ಬರದ ಜಾತ್ರೆ?
ಇಲ್ಲಿ ನಮ್ಮ ಬದುಕೆಲ್ಲ ಬಂದು ಹೋಗುವ ಯಾತ್ರೆ!
ಹೀಗಿದ್ದು ನಾವೆಲ್ಲ ಸದ್ದು ಮಾಡೋ ಒಣಪಾತ್ರೆ
ನಮ್ಮ ಮಿತಿ ನಾವರಿಯೆ ಪರಮಸುಖ - ಮಣ್ಣಿನ ಮಗ"

ಈ ಲೋಕವೆಂಬುದು ನೂರಾರು ಗದ್ದಲಗಳ ಯಾತ್ರಾಸ್ಥಳ. ನಾವು ಕೇವಲ ಯಾತ್ರಾರ್ಥಿಗಳು ಅಷ್ಟೆ. ಕೆಲಕಾಲ ಇಲ್ಲಿದ್ದು ಇಹ ವ್ಯಾಪಾರವನ್ನು ಮುಗಿಸಿ ಹೊರಡುವ ನಾವು, ನಾನು ನನ್ನದು ಎಂದು ಹೋರಾಡುವುದೇಕೆ? ಇಲ್ಲಿಯ ಬದುಕು ಶಾಶ್ವತವಲ್ಲ. ನಮ್ಮ ನಮ್ಮ ಮಿತಿಗಳರಿತು ನಾವು ನಡೆದರೆ ಸಾಕು ಅದೇ ಪರಮ ಸುಖ ಎಂದು ಎಚ್ಚರಿಕೆ ನೀಡುತ್ತಾರೆ.

"ಸಾವಿರದ ಶೈಲಿಯಿಹುದು ಜಗದ ಸಾಹಿತ್ಯದಲಿ
ರೂಪಿಸಿಕೋ ನಿನ್ನ ಅನುಭವ, ಅಭಿರುಚಿ ಹಿನ್ನೆಲೆಯಲ್ಲಿ
ಎರಕ ಹೊಯ್ಯಿ ಸ್ವೋಪಜ್ಞತೆಯ ಮೌಲ್ಯಗಳ ಜೊತೆಯಲಿ
ಹೃದ್ಭಾವ ಪಲ್ಲವಿಸೆ ಕಾವ್ಯೋದಯ - ಮಣ್ಣಿನ ಮಗ"

ಈ ಜಗತ್ತಿನ ಸಾಹಿತ್ಯದಲ್ಲಿ ಸಾವಿರ ಸಾವಿರ ಬಗೆಯ ಸಾವೇ ಇರದ ಶೈಲಿಯಿದೆ. ಇದನ್ನು ನೀನು ಮೈಗೂಡಿಸಿಕೊಂಡು ನಿನ್ನ ವ್ಯಕ್ತಿತ್ವ ರೂಪಿಸಿಕೋ ಆಗ ಮಾತ್ರ ಹೃದಯದಾಳದಿಂದ ಭಾವನೆಗಳು ಪಲ್ಲವಿಸಿ ಸ್ವಂತಿಕೆಯ ಕಾವ್ಯ ಉಗಮವಾಗುತ್ತದೆ ಎಂದು ಸಹೃದಯನಿಗೆ ಕರೆ ನೀಡುತ್ತಾರೆ. ಒಟ್ಟಾರೆ ಇಲ್ಲಿಯ ಮುಕ್ತಕಗಳು ಪ್ರೀತಿ, ಪ್ರೇಮ, ಅನ್ಯಾಯ, ಶೋಷಣೆ, ಅಪ್ರಾಮಾಣಿಕತೆ, ದೌರ್ಜನ್ಯ ಮುಂತಾದ ನೆಲೆಗಳಲ್ಲಿ ವಿವೇಚಿಸುತ್ತಾ ಓದುಗನನ್ನು ತನ್ನ ಚಿಂತನಾ ಸಂಕೀರ್ಣವಲಯದೊಳಕ್ಕೆ ಅನುಕ್ರಮವಾಗಿ ಸೆಳೆದುಕೊಳ್ಳುತ್ತದೆ. ಭಾಷೆ ಮತ್ತು ಭಾವದ ಸಂಯೋಗದಿಂದಾಗಿ ಕವಿಯ ಬದುಕು ಮತ್ತು ಬರಹಕ್ಕೆ ಸಾಂಗತ್ಯವೇರ್ಪಟ್ಟು, ಆರೋಗ್ಯಕಾರಿ ಸಮಾಜ ನಿರ್ಮಾಣದ ಕಡೆ ತುಡಿಯುತ್ತಾ ಹೊಸ ಆಶಯಗಳನ್ನು ಹುಟ್ಟುಹಾಕುತ್ತವೆ.

ಕವಿ ದೊಡ್ಡರಂಗೇಗೌಡರು ನವ್ಯ ಕಾವ್ಯಕ್ಷೇತ್ರಕ್ಕೆ ಅತ್ಯುತ್ತಮ ನವ್ಯ ಕವಿತೆಗಳನ್ನು ನೀಡಿ ಆ ದಿಕ್ಕನ್ನು ಮತ್ತಷ್ಟು ವಿಸ್ತರಿಸಿದ್ದಾರೆ. ಭ್ರಷ್ಟಗೊಂಡ ಸಮಾಜದಲ್ಲಿ ಮತ್ತೆ ಮತ್ತೆ ಪ್ರಾಮಾಣಿಕತೆಯನ್ನು ಪ್ರತಿಷ್ಠಾಪಿಸಬೇಕೆನ್ನುವ ಛಲ, ಹಠಮಾರಿತನ, ಏಕಾಗ್ರತೆ ಅವರ ಕಾವ್ಯಕೃತಿಗಳ ಹಿನ್ನೆಲೆಯಲ್ಲಿ ದಟ್ಟವಾಗಿ ಕೆಲಸಮಾಡಿದೆ. ಏನೆಲ್ಲ ಬಂದರೂ ಎಲ್ಲವನ್ನೂ ಸಹಿಸಿಕೊಂಡು ಧೃತಿಗೆಡದೆ ಮುನ್ನುಗ್ಗಿದರೆ ಜಯ ಖಂಡಿತಾ ಸಿಕ್ಕೇ ಸಿಗುತ್ತದೆ ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತಾರೆ.

ಮಾನವೀಯ ಮೌಲ್ಯಗಳ ಆಧಾರದ ಮೇಲೆ ಹೊಸ ಬದುಕಿನ ದೃಷ್ಟಿಕೋನವನ್ನು ರೂಪಿಸಿಕೊಳ್ಳುತ್ತಲೇ ವೈವಿಧ್ಯಮಯವಾದ ಜೀವನ ನೋಟವನ್ನು ಕಟ್ಟಿಕೊಡುತ್ತಾರೆ. ಭ್ರಷ್ಟಗೊಂಡ ಬದುಕಿನಿಂದ ವಿಮುಖವಾಗದೆ, ಪರಿವರ್ತನೆಯ ನೆಲೆಗಾಗಿ ಚಡಪಡಿಸುತ್ತಾ ಬದುಕಿಗೆ ಅಭಿಮುಖವಾಗಿ ನಿಂತುಕೊಂಡು ಆಶಾವಾದಿಗಳಾಗುತ್ತಾರೆ.

**ಬಾಳಬಣ್ಣ**

ಕಪ್ಪು ಬಿಳುಪೆಂಬ ಬೇಧ ಭಾವವದೇಕೆ?
ಶ್ರೇಷ್ಠತೆಯು ಕಪ್ಪಲ್ಲೂ ಇರಬಾರದೇಕೆ?
ಎಲ್ಲ ಸಮಾನವೆಂದು ನೋಡಿ ನೀ ಬದುಕೆ
ಬಾಳಬಣ್ಣ ತಿಳಿವುದು - ಮಣ್ಣಿನಮಗ.

# ದೊರಂಗೌ ಕಾವ್ಯ ಜೀವನದ ಮೈಲುಗಲ್ಲು : ಪ್ರೀತಿ ಪ್ರಗಾಥ

✍ ಪ್ರೊ॥ ವೇಣುಗೋಪಾಲ ಸೊರಬ

"ಪ್ರೀತಿ ಪ್ರಗಾಥ" ಆಮೂಲಾಗ್ರವಾಗಿ ಓದಿದೆ; ನಿಮ್ಮ ಕಾವ್ಯದ ಆರಕ್ಕೆ ಏರದ ಮೂರಕ್ಕೆ ಇಳಿಯದ ಗಂಭೀರ ಹಾಗೂ ಸಮಪಾತಾಳಿಯ ನಡೆ ನನಗೆ ಖುಷಿಕೊಟ್ಟಿತು.

ಅಬ್ಬರದ ಬೊಬ್ಬೆಯಿಲ್ಲದೆ ಆವೇಶದ ಅಹಂಕಾರವಿಲ್ಲದೆ, ಉದ್ದಕ್ಕೂ ಒಂದೆ ಗತಿಯಲ್ಲಿ ಹರಿಯುವ ನಿಮ್ಮ ಕಾವ್ಯದ ಓಟ, ಓದುಗರಲ್ಲಿ ಪ್ರೀತಿಯನ್ನು ಹುಟ್ಟಿಸುತ್ತದೆ.

ಒಬ್ಬ ಹಳ್ಳಿಯ ಹುಡುಗ, ಪಟ್ಟಣದ ಹುಡುಗಿ-ಅದೂ ಭಿನ್ನಜಾತಿಗೆ ಸೇರಿದ್ದರೂ, ಕೇವಲ ತಮ್ಮ ಪ್ರೀತಿಯ ಬಂಡವಾಳವೊಂದರಲ್ಲೇ ಪ್ರಪಂಚವನ್ನು ಅರಿತುಕೊಳ್ಳುವ ರೀತಿ ಪರಸ್ಪರ ಅನ್ವೇಷಿಸುವ ರೀತಿ ಅದು ನಿರ್ಘಣವಾದ ಮಹಾ ನಗರವೊಂದರಲ್ಲಿ ಒಬ್ಬರನ್ನೊಬ್ಬರು ಬಗೆಯುವ ರೀತಿ - ಈ ಕೃತಿಯನ್ನು ಮಹತ್ವದ ಸ್ಥಾನದಲ್ಲಿ ನಿಲ್ಲಿಸುತ್ತದೆ.

ಇಲ್ಲಿನ ಕೇಂದ್ರಬಿಂದುವಾದ ನಲ್ಮೆಯ ಸುತ್ತ ಸುಳಿಯುವ ಕಪ್ಪು ಬಿಳುಪಿನ ರಂಗು-ರಂಗಿನ ಛಾಯೆಗಳು, ಬದುಕಿನ ವೈರುಧ್ಯವನ್ನು ಒರೆಗೆ ಹಚ್ಚಿ ಆ ಮೂಲಕ ತನ್ನ ನಲ್ಮೆಯ ಬಣ್ಣವನ್ನು ಬಿಟ್ಟುಕೊಡದೆ ಕಾಯ್ದುಕೊಳ್ಳುವ ಕ್ರಮ ಈ ಕಾವ್ಯಕ್ಕೆ ಪರಿಪೂರ್ಣತೆ ತಂದುಕೊಟ್ಟಿದೆ,

ನಾನು ಮೆಚ್ಚಿಕೊಂಡ ಹಲವು ಸಾಲುಗಳಲ್ಲಿ ಕೆಲವು

ನಿನ್ನ ಪಕ್ಕ ರೋಮಾಂಚ ಪುಳಕ
ವಾಗಾರ್ಥ ಮೀರಿದ ದೀಪಕ

ಮೆಚ್ಚಿದ ಮೇಲೆ ಮಾತು ಮೌನ, ಎಲ್ಲಾ ಬಂಗಾರ
ಎತ್ತರ ಏರುವಡೆ ಎತ್ತರೆತ್ತರ ಸ್ವಪ್ನ ಜಾಲ
ಕೌಟುಂಬಿಕ ಬವಣೆಗಳು ಅಂಟು ಪುರಲೆಗಳಂತೆ

ಬಾಳಿನಾದ್ಯಂತ ಧಗೆ, ಬೇಗೆ
ಉರಿವಗ್ನಿ ಕುಂಡ!

ನಲ್ಲ ಎಂದು ಒಪ್ಪಿ ಬಂದಪ್ಪಿ
ನೀಲಾಂಜನೆಯಾದೆ ನೀನು.

ಎಂಬ ಸಾಲಿಗೆ ಕಾಡುವ ಗುಣ ಇದೆ.

ನೀವು ಬಳಸಿದ "ನೀಲಾಂಜನೆ" ಪದ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆಲ್ಲಾ ಅರ್ಥ ಪರಂಪರೆಯನ್ನು, ಹೊಮ್ಮಿಸಿದರೆ-ಅತಿಶಯೋಕ್ತಿ ಎನ್ನಿಸಬೇಕಾಗಿಲ್ಲ. ಈ ನೀಲಾಂಜನೆ ಒಪ್ಪಿ ಬಂದಪ್ಪಿದವಳು ಎನ್ನುವುದು ಅರ್ಥಪುಷ್ಟಿಗೆ ಸಹಾಯಕವಾಗಿದೆ. ಇವಳು ಭ್ರಮಾಲೋಕಕ್ಕೆ ಸೇರಿದವಳಲ್ಲ ...ವಾಸ್ತವ ಕನ್ಯೆ. ಹಾಗಿದ್ದು "ನೀಲಾಂಜನೆ" ಎನಿಸಿ ಒಂದು ಕಲ್ಪನಾಲೋಕವನ್ನೇ ಸೃಷ್ಟಿಸಬಲ್ಲ ಇವಳು ವಾಸ್ತವ ಬದುಕನ್ನೇ ಕಟ್ಟಲಿಕ್ಕೆ ಬಂದವಳು; ಇದರಲ್ಲಿಯೇ ಇಡೀ ಕವನದ "ಇತ್ಯಾತ್ಮಕತೆ" ಅಡಗಿದೆ; ಅರಳಿದೆ.

ವಾಸ್ತವತೆಯನ್ನು ಇರಿದು ತೋರಿಸುವ ಇಂತಹ ಸಾಲುಗಳು ಓದುಗನ ಕಣ್ಣು ತೆರೆಸತ್ತವೆ.

"ಪರಿತಾಪ ಸುಟ್ಟಿರಲು, ನೋವು ಎದೆನೆಟ್ಟಿರಲು
ನಾ ಕೊಟ್ಟೆ ನಿನಗೆನಿತೋ ಮುಳ್ಳ ಮಡಿಲು"

ಹೀಗೆ ಇಡೀ "ಪ್ರಗಾಥ" ಕೇವಲ ನಿರೂಪಣೆಯಾಗದೆ, ಜತೆ ಜತೆಗೇ ಬದುಕನೂ ಹಿಂಜಿ ನೋಡುವ, ಪರೀಕ್ಷೆಗೆ ಒಡ್ಡುವ "ಅಗ್ನಿದಿವ್ಯ"ವೂ ಆಗಿರುವುದು ಕೃತಿಯ ಬಗ್ಗೆ ಗೌರವಾದರಗಳನ್ನು ಹುಟ್ಟಿಸುತ್ತವೆ. ನಿಮ್ಮ ಕಾವ್ಯಜೀವನದಲ್ಲಿ ಇದೊಂದು ಮೈಲಿಗಲ್ಲು.

## ಅನುಭವಕ್ಕೆ ತಕ್ಕ ಅಭಿವ್ಯಕ್ತಿ

✍ ಜಯಸುದರ್ಶನ

ದೊಡ್ಡರಂಗೇಗೌಡರ ಕವನಗಳು ಒಂದುರೀತಿಯಲ್ಲಿ ಅವರ ಜೀವನ ಚರಿತ್ರೆಯ ಅಧ್ಯಾಯಗಳೇ ಆಗಿವೆ. ಅವುಗಳಲ್ಲಿ ವ್ಯಕ್ತವಾಗುವ ನೋವು, ನಲಿವು, ವಿಷಾದ, ಸಂತೋಷ, ರೊಚ್ಚು, ವಾತ್ಸಲ್ಯ, ಪ್ರೇಮ, ಸಿಟ್ಟು - ಇವೆಲ್ಲವೂ ಗೌಡರ ಜೀವನದ ಬಗ್ಗೆ, ಸುತ್ತಲ ಪರಿಸರ ಪರಿಸ್ಥಿತಿಯ ಬಗ್ಗೆ ಹೊಂದಿರುವ ಕಾಳಜಿಯನ್ನೇ ಪ್ರತಿನಿಧಿಸುತ್ತವೆ; ಜೀವನದೊಡನೆ ಅವರು ಬೆಳೆಸಿಕೊಂಡಿರುವ ಸಂಬಂಧಗಳನ್ನು ಸೂಚಿಸುತ್ತವೆ.

ಗೌಡರ ಸ್ವಂತ ಕಾಳಜಿಗಳು, ಅನುಭವಗಳು ಪಕ್ವಗೊಂಡಂತೆ, ಆಳವಾದಂತೆ ಅವರ ಕವನಗಳು ಸಾರ್ವತ್ರಿಕ ಅನುಭವಗಳಿಗೆ ಹತ್ತಿರವಾಗುತ್ತವೆ, ಮತ್ತು ಅಭಿವ್ಯಕ್ತಿಗಳನ್ನು ಒದಗಿಸಲು ಯತ್ನಿಸುತ್ತವೆ.

# ಮಣ್ಣಿನ ಮಾತುಗಳು ಒಂದು ಕಿರು ಪರಿಚಯು

✍ ಪ್ರೊ|| ವಿ. ಕೃಷ್ಣಶೆಟ್ಟಿ

## ನುಡಿ ನಮನ

"ಮಣ್ಣಿನ ಮಾತುಗಳು" ಶ್ರೀ ದೊಡ್ಡರಂಗೇಗೌಡರ ಚೌಪದಿಗಳ ಸಂಗ್ರಹ ಮೊದಲನೆಯ ಚೌಪದಿ 'ನುಡಿ-ನಮನ'

ಓಂಕಾರ ಎಂಬುದೇ ಬೀಜಾಕ್ಷರ
ಹೃನ್ಮನವ ಮೀಟುವ ಮಂತ್ರಾಕ್ಷರ
ಸಮಸ್ತ ವಾಙ್ಮಯದ ಮೂಲಾಕ್ಷರ
ಓಂಕಾರ ಸ್ವರೂಪಿಗೆ ನಮಿಸೋ - ಮಣ್ಣಿನ ಮಗ

ಓಂಕಾರವನ್ನು ಕುರಿತ ಸುಂದರ ರಚನೆಯೊಡನೆ ತಮ್ಮ ಚೌಪದಿಗಳ ಸಂಗ್ರಹವನ್ನು ಕವಿ ಪ್ರಾರಂಭಿಸಿರುವುದು ತುಂಬಾ ಸಾರ್ಥಕವಾಗಿದೆ.

## ಮಂಕು ತಿಮ್ಮನ ಶಿಷ್ಯ

ಶ್ರೀ ದೊಡ್ಡರಂಗೇಗೌಡರು ಡಾ.ಡಿ.ವಿ.ಜಿ ಮತ್ತು ಶ್ರೀ ದಿನಕರ ದೇಸಾಯಿ ಇಬ್ಬರಿಂದಲೂ ಪ್ರಭಾವಿತರಾಗಿರುವುದು ಸುವ್ಯಕ್ತ; ಅವರೇ ತಮ್ಮನ್ನು 'ಮಂಕುತಿಮ್ಮನ ಶಿಷ್ಯ', 'ದಿನಕರನ ಮಾನಸ' ತಮ್ಮ ಎಂದು ಕರೆದುಕೊಂಡಿದ್ದಾರೆ. ಶ್ರೀ ಡಿ.ವಿ.ಜಿಯವರ ಪ್ರಭಾವಕ್ಕೆ ಕೆಲವು ಉದಾಹರಣೆಗಳನ್ನು ಪರಿಶೀಲಿಸಬಹುದು.

ಏನು ಭೈರವ ಲೀಲೆಯೀ ವಿಶ್ವವಿಭ್ರಮಣ,
ಏನು ಭೂತಗ್ರಾಮ ನರ್ತನೋನ್ಮಾದ
ಏನಗ್ನಿ ಗೋಳಗಳು ಎನಂತರಾಳಗಳು
ಏನು ವಿಸ್ಮಯ ಸೃಷ್ಟಿ

ಎಂಬ ಮಂಕುತಿಮ್ಮನ ಉದ್ಗಾರಕ್ಕೆ ಸಂವಾದಿಯಾಗಿ ಮಣ್ಣಿನ ಮಗನ ಉದ್ಗಾರವಿಂತಿದೆ.

ಏನಿದೇನಿದು ಲೋಕ? ಏನಿದರ ಮಾಟ
ಏನಿದೇನಿದು ಲೀಲೆ? ಏನಿದರ ಆಟ
ಏನೆಲ್ಲ ಭವಣೆಗಳು? ಏನೆಲ್ಲ ಭ್ರಮೆಗಳು
ಏನು ನಟನೆಯೋ ಬದುಕು

ಕಾರುಣ್ಯ ಸರಸ ಸೌಂದರ್ಯ ರುಚಿಗಳೆ ಸೃಷ್ಟಿ
ಕಾರಣಮೆನಿಪ್ಪವೊಲು ತೋರ್ವುದೊಂದು ಚಣ
ಕಾರ್ಪಣ್ಯ ಕಟುಕತೆಗಳೆನಿಪುದಿನ್ನೊದು ಚಣ

ಮಂಕುತಿಮ್ಮನಿಂತೆಂದರೆ ಮಣ್ಣಿನ ಮಗನೆನ್ನುತ್ತಾನೆ

ಜಗದೊಳಗೆ ಬರಿ ಒಳಿತೇ ಇಲ್ಲ - ಕೆಡುಕೂ ಇದೆ
ಬದುಕೊಳಗೆ ಮಾವಷ್ಟೆ ಅಲ್ಲ - ಬೇವೂ ಇದೆ
ಆಕರ್ಷಕದ ಜೊತೆ ಅಪಕರ್ಷವೂ ಇದೆ
ರಾಗ-ವಿರಾಗ ಸಂಗಮವೀ ಬದುಕು

ಗ್ರೀಸಿನಾ ಕಬ್ಬಗಳನೋದುವರು ದೆಹಲಿಯಲಿ
ಕಾಶಿಯಾ ಶಾಸ್ತ್ರಗಳನಾಕ್ಸ್‌ಫರ್ಡಿನವರು
ದೇಶಕಾಲವಿಭಾಗ ಮನದ ರಾಜ್ಯದೊಳಿರದು
ಶ್ವಾಸವದು ಬೊಮ್ಮನದು

ಈ ರೀತಿ ಮಂಕುತಿಮ್ಮ ತೀರ್ಪಿತ್ತರೆ ಮಣ್ಣಿನ ಮಗ (ಎಷ್ಟೇ ಆಗಲಿ ಮಣ್ಣಿನ ಮಗನಲ್ಲವೆ) ಪ್ರಭಾವವಿದನ್ನು ಕನ್ನಡಕ್ಕೆ ಸೀಮಿತಗೊಳಿಸಿ ಹೀಗೆನ್ನುತ್ತಾನೆ.

ಕನ್ನಡದ ಕಂಪು ಕೆನಡಾದಲ್ಲೂ ಕೊನರಿಲ್ಲವೆ?
ಕನ್ನಡದ ಪೆಂಪು ಮಾಸ್ಕೋದಲ್ಲೂ ಮೊಳಗಿಲ್ಲವೆ?
ಕನ್ನಡ ಕಾವ್ಯಕ್ಕೆ ಕಾಶಿಯಾದರೇನು? ಚಿಕಾಗೋವೇನು?
ದೇಶಕಾಲಾತೀತ ಭಾಷೆ

ಬನ್ನಿರಾಡುವ ಕಣ್ಣುಮುಚ್ಚಾಲೆಯಾಟವನು
ಎನ್ನನರಸಿರಿ ಬನ್ನಿ ಮಕ್ಕಳಿರ ಬೇಗ
ಬನ್ನಿರಾಟವ ಬೇಡವೆಂಬರನು ನಾಂ ಬಿಡನು
ಎನ್ನುವಜ್ಜಿಯೊ ಬೊಮ್ಮ

ಎಂದು ತಿಮ್ಮ ಗುರು ಹೇಳಿದರೆ ಶಿಷ್ಯನೆನ್ನುತ್ತಾನೆ.

ಯಮನ ಆಲೆಯ ಮನೆಯ ಕಟ್ಟುಕಾಣೋ ನೀನು
ಯಾರನೂ ಬಿಡದೆ ಕಬ್ಬನರೆದಂತೆ ಅರೆವನವನು.

ಮಿಡಿಚೇಪೆಕಾಯಿಗಳ ತಡಬಡದೆ ನುಂಗುವುದು
ಕಡಿಯೆ ಹೊಟ್ಟೆಯಲಿ ಹರಳೆಣ್ಣೆ ಕುಡಿಯುವುದು
ಬಿಡುತಿರಲು ನೋವಾಗ ಸುಖವೀಗಳೆನ್ನುವುದು ಪ್ರೊಡವಿಗಿದೆ ಬೋಗಸಿಥಿ

ಸುಖಭ್ರಾಂತಿಯನ್ನು ಕುರಿತು ಮಂಕುತಿಮ್ಮನ ಮಾತಿದಾದರೆ ಪ್ರತಿಯಾಗಿ ಮಣ್ಣಿನ ಮಗನ ಮಾತು ಹೀಗಿದೆ.

ಬಿಟ್ಟಿ ಸಿಗಲ್ತಿಣುವುದು, ಹೊಟ್ಟೆನೋವೆನ್ನುವುದು
ಸದಳುತ್ತ ಕೊರಗುವುದು, ಮದ್ದನ್ನು ಮಾಡುವುದು
ಆಮೇಲೆ ಎಲ್ಲವನೂ ಒಮ್ಮೆಗೇ ಮರೆಯುವುದು
ಮುಕ್ತಿದೇ [illegible]

ಡಿ.ವಿ.ಜಿ.ಯವರ ಪ್ರಭಾವಕ್ಕೆ ಇಷ್ಟು ಉದಾಹರಣೆಗಳು ಸಾಕು.

## ದಾಸರ - ಶರಣರ ಪ್ರಭಾವ

ಮಣ್ಣಿನ ಮಗನ ಕೆಲವು ಮಾತುಗಳನ್ನು ಓದಿದಾಗ ಈ ಮುಕ್ತಕಗಳ ಮೇಲೆ ದಾಸರ ಶರಣರ ಪ್ರಭಾವ ಇರುವಂತೆ ಕಾಣುತ್ತದೆ.

ಮುಂದೆ ಹೊಗಳುವವರೆಲ್ಲ ಹಿಂದೆ ತೆಗಳುವವರೇನೆ
ಬಂಧುಬಾಂಧವರೂ ಒಳಗೊಳಗೆ ಆಡಿಕೊಳ್ಳುವವರೇನೆ
ನಿಂದೆ ಕಾಣದ ನರನು ಎಲ್ಲಿಯಾದರೂ ಇಹನೇ
ಅದುವೇ ಆತ್ಮವಿಮರ್ಶೆಗೆ ಇಂಬು

ಈ ಮಾತುಗಳನ್ನು 'ಹೊಡೆದವರನ್ನು ಹಡೆದವರೆಂಬೆ, ಬೈದವರನ್ನು ಬಂಧುಗಳೆಂಬೆ ಎಂಬ ಬಸವಣ್ಣನವರ ಮಾತಿಗೂ 'ನಿಂದಕರಿರಬೇಕು' ಎಂಬ ಪುರಂದರದಾಸರ ಮಾತಿಗೂ ಹೋಲಿಸಬಹುದಲ್ಲವೇ.

ನಿನ್ನ ಬದುಕನ್ನು ನೀನೆ ನೀಸಲು ಬೇಕೋ
ಗೆಳೆಯರಿಗೆ ದುಂಬಾಲು ಬೀಳುವೆ ಏಕೋ
ನಿನ್ನ ಊಟ ನಿದ್ದೆ ಮೈಥುನಕೆ ಬೇರೆಯವರ ಹಂಗೇಕೋ

ಮಣ್ಣಿನ ಮಗನ ಈ ಮಾತುಗಳನ್ನು ಬಸವಣ್ಣನವರು ಬೇರೊಂದು ಸಂದರ್ಭದಲ್ಲಿ ಹೇಳುವ

ತನ್ನಾಶ್ರಯದ ರತಿಸುಖವನು ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ

ಎಂಬ ಮಾತುಗಳಿಗೆ ಹೋಲಿಸಬಹುದಲ್ಲವೆ?

ಅವರಿವರ ಡೊಂಕುಗಳ ತಿದ್ದಹೊರಟಿಹೆ ನೀನು
ನಿನ್ನ ಡೊಂಕ ಮೊದಲು ನೀ ತಿದ್ದಿಕೋ

ಈ ಮಾತುಗಳನ್ನು 'ಲೋಕದ ಡೊಂಕ ನೀವೇಕೆ ತಿದ್ದುವಿರಿ' ಎಂಬ ಬಸವಣ್ಣನವರ ವಚನಕ್ಕೆ ಹೋಲಿಸಬಹುದಲ್ಲವೆ?

'ವೇಷಕ್ಕೂ ವ್ಯಕ್ತಿತ್ವಕ್ಕೂ ಸಂಬಂಧವಿಲ್ಲ" (ವ್ಯಕ್ತಿತ್ವ) ಎಂಬ ಮಣ್ಣಿನ ಮಗನ ಮಾತು 'ವೇಷವ ಧರಿಸಿ ಫಲವೇನಯ್ಯ', 'ವೇಷದಂತಾಚರಣೆ ಇಲ್ಲದನ್ನಕ್ಕ' ಎಂಬ ಸಿದ್ಧರಾಮನ ನುಡಿಯನ್ನು ಹೋಲುವುದಿಲ್ಲವೇ?

## ಕನ್ನಡ ನಾಡು - ನುಡಿ ಪ್ರೇಮ

ಶ್ರೀ ದೊಡ್ಡರಂಗೇಗೌಡರ ಕನ್ನಡ ನಾಡು-ನುಡಿಗಳನ್ನು ಕುರಿತಾದ ಪ್ರೇಮ ಚೌಪದಿಗಳಲ್ಲೂ ಅಭಿವ್ಯಕ್ತಿ ಪಡೆದಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ಕೆಲವನ್ನಾದರೂ ಹೆಸರಿಸಬಹುದು.

'ಕೋಮಲಭಾವದ ಕಾನನ, ಚಂದನ, ಕನ್ನಡ ನಾಡಿನ ನನ್ನ ಜನ' ಎಂದು ಪ್ರಾರಂಭವಾಗುವ "ನನ್ನ ಜನ" ಎಂಬ ರಚನೆ,

ಕನ್ನಡವೆಂದರೆ ಹೃದಯದ ಸಿಹಿಮುದ

ಎಂದು ಪ್ರಾರಂಭವಾಗುವ ಕನ್ನಡ ಎಂಬ ಚೌಪದಿ

ಕನ್ನಡದ ಏನಿಲ್ಲ ಕೇಳಯ್ಯ ಜಾಣ

ಎಂದು ಪ್ರಾರಂಭವಾಗುವ 'ಸಂಸ್ಕೃತಿಯ ತವರು' ಎಂಬ ಮುಕ್ತಕ.

ಎಲ್ಲಿ ಕನ್ನಡದ ಜನ ಅಲ್ಲಿ ಸೌಜನ್ಯದ ಸಿಹಿಯೌತಣ

ಎಂದು ಪ್ರಾರಂಭವಾಗುವ 'ಸೌಜನ್ಯ ಸಂಪನ್ನ'ರು ಎಂದು ರಚನೆ ಮುಂತಾದವುವನ್ನು ಉಲ್ಲೇಖಿಸಬಹುದು

## ಕವಿ-ಕಾವ್ಯ -ಸಹೃದಯು ವಿಮರ್ಶಕ

ಮೂರು ದಶಕಗಳಿಂದಲೂ ಸಾಹಿತ್ಯ ಸೇವೆಯಲ್ಲಿ ತೊಡಗಿರುವ ಶ್ರೀ ಗೌಡರು ಕವಿ, ಕಾವ್ಯ ಸಹೃದಯ ವಿಮರ್ಶಕ ಮುಂತಾದ ಕಾವ್ಯಕರ್ಮಕ್ಕೆ ಸಂಬಂಧಿಸಿದಂತೆಯೂ ಚೌಪದಿಗಳನ್ನು ರಚಿಸಿದ್ದಾರೆ. ಒಬ್ಬ ಸೃಜನಶೀಲ ಕವಿ ಈ ಬಗ್ಗೆ ಏನು ಹೇಳುವನೆಂಬುದು ಕೌತುಕದ ವಿಷಯವೆ

ಅವುಗಳಲ್ಲಿ ಕೆಲವನ್ನಾದರೂ ನೋಡಬಹುದು.

೧. ಬರೆದ ಬರಹಗಳೆಲ್ಲ ಕಾವ್ಯವಾಗುವುದಿಲ್ಲ

೨. ಹೃದಯದ ಮಾತೆಲ್ಲ ಸೃಜನಶೀಲ

೩. ಎಲ್ಲಿ ಸಮುದಾಯದ ಕಳಕಳಿ, ಅಲ್ಲಿ ಚೈತನ್ಯಮಯ ವಾಗರ್ಥರಂಗವಲ್ಲಿ

೪. ಮಹಾಕವಿ ಜಗದ ದ್ರಷ್ಟಾರ ಕಾಣೋ

೫. ಎಲೆ ಕವಿಯೆ ನೀನಾಗು ಕಾನನದ ಅಗರುಚಂದ, ಬೆಲೆ ಸಿಗಲಿ ಬಿಡಲಿ ನೀಡುತಿರು ಕಾವ್ಯಸ್ಪಂದ

೬. ನ್ಯೂನತೆಯಿರದ ಕೃತಿಯುಂಟೆ ಜಗದೊಳಗೆ ಒಂದಲ್ಲ ಒಂದು ಊನ ಎಲ್ಲದರೊಳಗೆ

ಊನವಿದ್ದೂ ಕಲಾತ್ಮಕತೆ ಸಾಧ್ಯ ಕೃತಿಯೊಳಗೆ

೭. ಅನುಭಾವವೇ ದರ್ಶನ ಕಾವ್ಯ

೮. ಕವಿ ಕಲ್ಪನೆಗೆ ನಿಸರ್ಗವೇ ಸ್ಫೂರ್ತಿತಾನೆ?

೧೦ ಪುರಸ್ಕಾರ-ತಿರಸ್ಕಾರ ಲೆಕ್ಕಿಸಿ ರಚಿಸುವುದಿಲ್ಲ ಬರಹಗಾರ ಬದುಕಿನುದ್ದಕ್ಕೂ ಬರೆದವನ ಕರ್ಮ

೧೧. ಮಾತು ಅರ್ಥವ ಕಂಡು ಭಾವ ಮಾಗಿದ ಗಳಿಗೆ ವಾಗರ್ಥ ಮೀರಿ ಧ್ವನಿಯಾಗುತ್ತ ಕವಿ ನಾಲಗೆಯೊಳಗೆ

೧೨. ಕವಿತೆಯ ಯಶ ಸಹೃದಯನ ಗ್ರಹಿಕೆಯಲ್ಲೇ ಸಹೃದಯನ ಮುದ ಕಾವ್ಯದ ಅಂತರ್ಯದಲ್ಲೇ

೧೩. ಕವಿತೆಯ ಧ್ಯಾನದಲ್ಲಿ ಕವಿ ಚಿತ್ತ ಹುತ್ತ ಧ್ಯಾನದ ಗಳಿಗೆಯಲ್ಲಿ ಭಾವ ಕೆಂಡ ಸುಪ್ತ

೧೪. ಪ್ರತಿ ಕವಿಯೂ ವಾಙ್ಮಯದ ರಥವೇನೆ ಕವಿಯ ಕಾವ್ಯಯುಗಯುಗದ ಪಯಣವೇನೆ ಕಾವ್ಯದಾಂತರ್ಯ ವಾಗರ್ಥರಥಿಕ ಸ್ವರೂಪವೇನೆ.

೧೫. ಮಣಿಮಾಲೆ ಕಟ್ಟುವುದೇ ಕವಿಕಾರ್ಯ

೧೬. ಕಾವ್ಯವೆಂಬುದು ಅನಂತ ಕಡಲು ಕಾಣಾ
ರಸಿಕ ಮನ .. . ಮಂದರಗಿರಿ ಸಮಾನ

ಸಾಹಿತ್ಯ ಮೀಮಾಂಸೆಯನ್ನು ಕುರಿತು ವಿಸ್ತಾರವಾದ ಪ್ರಬಂಧಗಳಲ್ಲಿ ಮಾಡಬಹುದಾದ ಗಂಭೀರ ಚಿಂತನೆಯನ್ನು ಒಂದೆರಡು ಸಾಲುಗಳಲ್ಲಿ ಹೇಗೆ ಸೆರೆಹಿಡಿಯುತ್ತಾರೆ ಎಂಬುದು ಸ್ವಾರಸ್ಯಕರ ಅಂಶವಲ್ಲವೇ? ತಮ್ಮ ಹೃದಯಕ್ಕೆ ಹತ್ತಿರವಾದ ವಿಷಯವಾದುದರಿಂದ ಭಾವ ಸೌಂದರ್ಯ ಉಕ್ತಿ ಮಾಧುರ್ಯ ಎರಡನ್ನು ಸಮಪ್ರಮಾಣದಲ್ಲಿ ಬೆರೆಸಿ ಈ ಔಷದಿಗಳನ್ನು ಹೆಣೆದಿದ್ದಾರೆ, ಮುನ್ನುಡಿಯಲ್ಲಿ ಡಾ|| ಎನ್. ವಿದ್ಯಾಶಂಕರ ಹೇಳುವಂತೆ ಅನುಭವಗಳನ್ನು ಭಾವಗಂಧಿಯಾಗುವಂತೆ ಹೇಳುವ ಕಲೆಗಾರಿಕೆ ಅರಿಗೆ ಪ್ರಸಾದಿಕವಾಗಿದೆ.

## ಸತತ ಸಾಧನೆಗೆ ಎಲ್ಲವೂ ಸಾಧ್ಯ

ಗೌಡರು ಆತ್ಮಾಭಿಮಾನ, ಜೀವನದಲ್ಲಿ ಶ್ರದ್ಧೆ, ಸತತ ಪರಿಶ್ರಮಗಳಿಂದ ಬಾಳಿನಲ್ಲಿ ಏನನ್ನಾದರೂ ಸಾಧಿಸಬಹುದೆಂದು ಆಶಾವಾದವನ್ನು ಪ್ರತಿಪಾದಿಸುತ್ತಾರೆ. ಇಂದಿನ ಪರಿಸ್ಥಿತಿಯಲ್ಲಿ ಅದು ಅಗತ್ಯವೂ ಹೌದು, ನಾಸ್ತಿಕನೆಂದರೆ ತನ್ನ ಸ್ವಶಕ್ತಿಯಲ್ಲಿ ನಂಬಿಕೆ ಇಲ್ಲದವನು ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು. ಇಂದು ಯುವಕರಿಗೆ ತಾವು ಕುರಿಮರಿಗಳಲ್ಲ ಸಿಂಹದ ಮರಿಗಳು ಎಂಬುದರ ನೆನಪನ್ನು ಮಾಡಿಕೊಡುತ್ತಲೇ ಇರಬೇಕು.

ಛಾತಿ ಇದ್ದರೆ ಏರಬಹುದು ಹಿಮಾಲಯ
ಭೀತಿ ಇದ್ದರೆ ತಲುಪಲಾಗದು ಯಾವುದೇ ಗುರಿಯ

ಜೀವನದಲ್ಲಿ ದೃಢನಿಶ್ಚಯವಿದ್ದರೆ ಏನನ್ನಾದರೂ ಸಾಧಿಸಬಹುದಲ್ಲವೇ.

ಆತ್ಮಬಲ ಮಾನವನಿಗೆ ಸೂರ್ಯಶಕ್ತಿ ಸಮಾನ
ಆತ್ಮಬಲ ಯಶಸ್ಸಿನ ಸಾಧನ

ಆತ್ಮ ಶಕ್ತಿ ಅಣುಶಕ್ತಿಗಿಂತಲೂ ಹಿರಿದಾದುದೆಂದು ರಾಷ್ಟ್ರಪಿತ ಬಾಪೂಜಿ ಸಾಧಿಸಿ ತೋರಿಸಿದ್ದಾರೆ

ಶ್ರದ್ಧೆಯಿದ್ದರೆ ಪ್ರಗತಿ ನಿಚ್ಚಣಿಕೆ ಏರಬಹುದು
ವೃದ್ಧನಾದರೂ ಕಾರ್ಯೋತ್ಸಾಹ ಕಾಣಬಹುದು

ಶ್ರದ್ಧೆ ವೃದ್ಧಾಪ್ಯವನ್ನು ತಾರುಣ್ಯವನ್ನಾಗಿ ಮಾರ್ಪಡಿಸುವ ಮಾಂತ್ರಿಕ ಶಕ್ತಿಯನ್ನು ಹೊಂದಿದೆಯಲ್ಲವೆ?

ಯಾಕೆಲ್ಲ ಬೇಕಪ್ಪಾ ಈ ಬಗೆಯ ಬಲು ತ್ರಾಸ?
ಎಂದೆಲ್ಲಾ ಅನಿಸುವುದು ಪರ್ವತಾರೋಹಣ ಕೆಲಸ,
ಹತ್ತದಿರೆ ಎದೆಗುದಿಯು, ಹತ್ತಿದರೆ ಬಲು ಉಲ್ಲಾಸ,
ತುದಿ ತಲುಪೆ ಪರಮ ಸಂತೋಷ.

ಕಷ್ಟಪಟ್ಟು ಏನನ್ನಾದರೂ ಸಾಧಿಸಿದರೆ ಅದಕ್ಕೆ ಪ್ರತಿಫಲವಾಗಿ ಸಿಗುವ ಆತ್ಮ ಸಂತೋಷಕ್ಕೆ ಸಮವಾದುದು ಯಾವುದುಂಟು ಜಗದಲ್ಲಿ?

## ವ್ಯಷ್ಟಿ ಸಮಷ್ಟಿ ಸುಧಾರಣೆ

'ಬಿಂದು ಬಿಂದುವೂ ಸಿಂಧು'ಎಂದರು ರಾಷ್ಟ್ರ ಕವಿ ಕುವೆಂಪು

Little drops of water
make the mighty Ocean,
Little grains of sand
Make the mighty stretch of land

ಎಂದು ಹಾಡಿದನು ಆಂಗ್ಲಕವಿಯೊಬ್ಬ. ವ್ಯಷ್ಟಿ ಸುಧಾರಣೆಯಾಗದೆ ಸಮಷ್ಟಿ ಸುಧಾರಣೆ ಸಾಧ್ಯವಿಲ್ಲವೆಂಬ ಅಂಶ ಸರ್ವರಿಗೂ ವೇದ್ಯವಾದುದೆ, ಆದರೆ ಸುಧಾರಣೆ ತನ್ನಿಂದಲೇ ಆರಂಭಗೊಳ್ಳಲೆಂಬ ಆರೋಗ್ಯ ಸಂಪನ್ನ ಮನೋಭಾವ ಸ್ವಾಗತಾರ್ಹವಲ್ಲವೆ? ಈ ಬಗ್ಗೆಯೂ ಶ್ರೀ ದೊಡ್ಡರಂಗೇಗೌಡರು ಚಿಂತನೆ ನಡೆಸಿರುವುದುಂಟು. ಅವರ ಔಷದಿಗಳಿಂದ ಆಯ್ದ ಬಿಡಿ ಕುಸುಮಗಳಿಂದ ವ್ಯಷ್ಟಿ ಸುಧಾರಣೆಗೆ ಏಕಾದಶಸೂತ್ರ. ಮಾಲೆಯೊಂದನ್ನು ಪೋಣಿಸಿದರೆ ಅದು ಹೀಗಿರುತ್ತದೆ.

೧. ಒಳಿತನೇ ಚಿಂತಿಸಲೋ ಮನ ಎಂದೆಂದೂ
೨. ಗಂಧದಂತೆ ಉಪಯುಕ್ತವಾದರೆ ಬಾಳು ಚೆಂದ
೩. ಸತ್ಫಲನ ಬಯಸಿರಲು ಸ್ವೇದ ಶ್ರಮಮಂತ್ರ
೪. ಎಂಥ ವೈರಿಗಳನ್ನೂ ಗೆಲ್ಲುವುದು ಪ್ರೇಮ ಸ್ಪರ್ಶದ ಹದನು
೫. ಆತ್ಮ ನಿರ್ದಶನಕೆ ಎಂದೆಂದೂ ನೀ ತಲೆಬಾಗು.
೬. ಸ್ವ ವಿಮರ್ಶೆ ಸಾಧನೆಗಿಂಬು
೭. ನಿನ್ನ ಮುನ್ನಡೆಗೆ ತಿಳಿಯಬೇಕು ನೀ ಸಮಯದ ಹಿರಿಮೆ
೮. ಸಾಫಲ್ಯತೆಯ ದಾರಿ ಒಮ್ಮೆ ಸಿಕ್ಕೀತು ನಿನಗೂ
೯. ಸ್ವಾವಲಂಬನೆ‌ಇರಲು ಸಕಲ ಶ್ರೇಯೋಭಿವೃದ್ಧಿ
೧೦. ತಾಳ್ಮೆ ಬುದ್ಧಿ ಮುನ್ನೋಟವಿರೆ ಯಶಸ್ಸು ಕಾಣೋ
೧೧. ಮಿಡಿವ ಜಾಣ್ಮೆಯಿರೆ ರದೆ ಮನ ಜೇಡಿ

## ಮೌಲ್ಯಪಾತದ ಚಿತ್ರ

ಸಮಾಜ ಜೀವನವನ್ನು ಕಾಡುತ್ತಿರುವ ಹಲವಾರು ಅನಿಷ್ಟಗಳ ಬಗ್ಗೆ ಕುಡಿತ. ಜಾತೀಯತೆ, ಧೂಮಪಾನ ಲಂಚ-ಲಾಲನೆ, ಮೂಢನಂಬಿಕೆ ವರದಕ್ಷಿಣೆ, ರಕ್ತದಾಹ ಮುಂತಾದ ಹಲವಾರು ಚೌಪದಿಗಳಲ್ಲಿ ತಮ್ಮ ಮುಕ್ತ ಮನಸ್ಸಿನ ಚಿಂತನೆಯನ್ನು ಮೂಡಿಸಿದ್ದಾರೆ. ನಮ್ಮ ಜನಜೀವನ ಹಸನಾಗಲಿಲ್ಲವೆಂಬ ಕಳಕಳಿ ಮೌಲ್ಯಗಳ ಕುಸಿತದಿಂದ ದೇಶದ ಭವಿಷ್ಯ ಎಂತಾದೀತು ಎಂಬ ಕಾಳಜಿ ... ಈ ರಚನೆಗಳ ಹಿಂದಿನ ಸ್ಫೂರ್ತಿ.

ಇಂತಹ ನೀತಿಭೋಧಕ ಚೌಪದಿಗಳೂ ಹೇಗೆ ಸುಂದರವಾಗಿರಬಲ್ಲುವು, ಅವುಗಳಲ್ಲಿಯೂ ಕಾವ್ಯಾತ್ಮಕ ಅಂಶಗಳಿರಬಲ್ಲುವು ಎಂಬುದಕ್ಕೆ ಕೆಲವೇ ನಿದರ್ಶನಗಳನ್ನು ನೋಡಬಹುದು.

ಎಲ್ಲೆಡೆಯೂ ಮೌಲ್ಯ ಸಾತದ ಚಿತ್ರ ಸಾಮಾನ್ಯ
ಆದರ್ಶ ಮಾನವತೆ ಅಂತಃಕರಣವಿಂದು ಶೂನ್ಯ.
ಮಾನವೀಯತೆ ಇರದ ಬದುಕೆಲ್ಲ ಮಾನ್ಯ

ಕೊಂಪೆಗಳು ಬರೆಯುತ್ತಿವೆ ಭೀಕರ ಚಿತ್ರ
ವಾಸ್ತವ ಬದುಕಿಗೇಕೆ ಬಣ್ಣನೆಯ ಸೂತ್ರ?
ಎಲ್ಲ ಕವಳಕ್ಕೇ ಸೊನ್ನೆ ಅಲ್ಲಿ ನೆತ್ತರಿನ ನೇತ್ರ

ಪಟ್ಟಭದ್ರರಾಗುತ್ತಿದ್ದಾರೆ ಹಣವುಳ್ಳವರು
ಮೂಕರಾಗುತ್ತಿದ್ದಾರೆ ಬುದ್ಧಿ ಜೀವಿಗಳು
ನೊಂದು ನರಳುತ್ತಿದ್ದಾರೆ ಶ್ರೀ ಸಾಮಾನ್ಯರು.

ಅವನ ಇವ ಇರಿವ, ಇವನ ಅವ ಇರಿವ
ರಕ್ತದಾಹಕೆ ಕೇಳಿಸದೇ ಜೀವಜೀವದ ಆರ್ತರವ?
ಧರ್ಮ ಹೇಳುವುದೇನು ದ್ವೇಷ ಬಿತ್ತುವ ಭೇದಭಾವ?

ಭ್ರಂಶ ರಾಜಕಾರಣಿ ಆಗಿಹನಿಂದು ಗರ್ವಿತ ಗೂಂಡಾ
ಉಂಡುಂಡೆಯಾಗಿ ನುಂಗುತಿಹನು ರಾಷ್ಟ್ರದ ಭಾಂಡಃ

## "ಜೋಡು - ಇಜ್ಜೋಡು"

'ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ' ಎಂದು ಹಾಡಿದ ಶ್ರೀ ಪುರಂದರದಾಸರೇ 'ಹೆಂಡತಿ ಪ್ರಾಣ ಹಿಂಡುತಿ' ಎಂದೂ ಹಾಡಿದರಲ್ಲವೆ? ಹಾಗೆಯೇ ಶ್ರೀ ದೊಡ್ಡರಂಗೇಗೌಡರು ಸಹ 'ಇನಿಯ - ಇನಿಯೆ' ಹೆಣ್ಣು "ಕಾನು" ಮದುವೆ "ಶೃತಿ" ಮತ್ತೆ ಸೌಖ್ಯ ಸೂತ್ರ. ಮುಂತಾದ ಚೌಪದಿಗಳಲ್ಲಿ ದಾಂಪತ್ಯದ ಸಾಮರಸ್ಯವನ್ನು ಕುರಿತು ಬರೆದಿದ್ದಾರೆ. ಅದೇ ಲೇಖನಿಯಿಂದ 'ಒಡಕು' 'ಶೀಲ' 'ಸಂಶಯ' 'ಒಲ್ಲದವರು' 'ವಿಚ್ಛೇದನ' ಮತ್ತು 'ಒಡೆದ ಸಂಸಾರ' ಮುಂತಾದ ಚೌಪದಿಗಳಲ್ಲಿ ದಾಂಪತ್ಯವಿರಸ ಕಹಿ ಪರಿಣಾಮಗಳನ್ನು ಕುರಿತು ಬರೆದಿದ್ದಾರೆ. ಉದ್ದೇಶ ಒಂದೆ-ವರಕವಿ ಬೇಂದ್ರೆಯವರು ಹೇಳುವಂತೆ 'ರಸವೆ ಜನನ, ವಿರಸ ಮರಣ, ಸಮರಸವೇ ಜೀವನ' ಎಂಬ ಸತ್ಯವನ್ನು ಹಿಡಿಯುವುದೇ ಆಗಿದೆ

## "ತುಲನಾತ್ಮಕ ಕ್ರಮ"

ಬದುಕನ್ನು ಬಹಳ ಗಾಢವಾಗಿ ಪ್ರೀತಿಸುವ ಈ ಸಂವೇದನಾಶೀಲ ಕವಿ ಆದರ್ಶಕ್ಕೂ ವಾಸ್ತವಿಕತೆಗೂ ಇರುವ ಕಂದರವನ್ನು ಕುರಿತು ಪ್ರಸ್ತಾಪಿಸುವಾಗ ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ದಂದ್ವಗಳನ್ನು ಬಹಳ ಸಮರ್ಥವಾಗಿ ಬಳಸಿಕೊಳ್ಳುತ್ತಾರೆ.

ಕಿರಣ ಕೊಡುವ ಬಾನಿಗೆ ಹನಿಯ ತರುವ ವರುಣಗೆ ಗಂಧ ತರುವಗಾಳಿಗೆ ಇರದ ಬೇಧಭಾವ ಮನುಷ್ಯನಿಗೇಕೆ ಎಂದು ಪ್ರಶ್ನೆ ಕೇಳುವಾಗ ಸ್ವಾಭಿಮಾನ ಶೂನ್ಯ ಹಾಗೂ ಸ್ವಾಭಿಮಾನ ಪೂರ್ಣ ಬಾಳಗಳನ್ನು ಹೋಲಿಸುವಾಗ ಆತ್ಮಬಲವೊಂದು ಕಡೆ ಜನಬಲ ಧನಬಲಗಳಿನ್ನೊಂದು ಕಡೆ ಇಟ್ಟು ತುಲನೆ ಮಾಡುವಾಗ, ನಾಲಗೆ ಹೇಗೆ ಸಜ್ಜನರಲ್ಲಿ ಹಾಗೂ ದುರ್ಜನರಲ್ಲಿ ಬೇರೆಬೇರೆಯಾಗಿರುತ್ತದೆ ಎಂದು ವರ್ಣಿಸುವ ಸಂದರ್ಭದಲ್ಲಿ ಸವಿನೆನಪು ಕಹಿನೆನಪುಗಳನ್ನು ತಾಳೆ ಮಾಡುವ

ಸಮಯದಲ್ಲಿ ಬಾಳಿನಲ್ಲಿ ನಿತ್ಯವಾವುದು ಅನಿತ್ಯವಾವುದು ಎಂದು ವಿವರಿಸುವಲ್ಲಿ ಹೀಗೆ ಕತ್ತಲು ಬೆಳಕುಗಳಂತೆ ಇರುವ ಬಾಳಿನ ದಂದ್ವಗಳನ್ನು ತುಲನಾತ್ಮಕವಾಗಿ ಪ್ರಸ್ತಾಪನೆ ಮಾಡುವುದು ಈ ಕವಿಯ ರೀತಿ, ಉದ್ದೇಶ, ದ್ವಂದ್ವಾತೀತ ಸ್ಥಿತಿಯ ಸಾಧನೆಯೆ. ಅಂತಹ ಒಂದು ಚೌಪದಿಯನ್ನು ಪರಾಮರ್ಶೆ ಮಾಡಬಹುದು

ಪುಣ್ಯವಂತರ ಮಾತು, ಪಡುಗಡಲ ತಂಬೆಲರು
ಪಾಪಿಷ್ಠರಾ ಪೊಗರು, ಪೂತನಿಯ ನಂಬಿನುಗುರು
ಪರಂಜ್ಯೋತಿಯ ಸಾನಿಧ್ಯ ಪರಮಾರ್ಥ ಪಯಸ್ವಿನಿ ಕೀರು
ಪಾದರಿಯ ಸಂಪರ್ಕ ಪರಿತಾಪದ ಪರಿಘ

ಒಂದು ಪುಟ್ಟ ಚೌಪದಿಯ ವಾಮನಗರ್ಭದಲ್ಲಿ ಎಷ್ಟೊಂದು ಸಾರಾಸಾರ ವಿಚಾರಗಳ ತ್ರಿವಿಕ್ರಮ ದರ್ಶನ. ಚೌಪದಿಯ ಸಂಕ್ಷೇಪ ಸ್ವಾರಸ್ಯಕ್ಕೆ ಇದೊಂದು ಸುಂದರ ಚೇತೋಹಾರಿ ನಿದರ್ಶನವಾಗಿದೆ. ಸಹಜ ಅಕೃತಕ ಪ್ರಾಸವೈಭವಕ್ಕೂ ಇದು ಉತ್ತಮ ಉದಾಹರಣೆ.

## "ಸೂತ್ರಪ್ರಾಯ ಸಾಲು"

ಚೌಪದಿಯ ನಾಲ್ಕಂತಸ್ತಿನ ಕಟ್ಟಡಕ್ಕೆತೆ ಕೊನೆಯ ಸಾಲು ಒಂದು ಸುಂದರ ಗೋಪುರ. ಮೊದಲ ಮೂರು ಸಾಲುಗಳಲ್ಲಿ ನಿರ್ದರ್ಶನಗಳನ್ನೋ ದೃಷ್ಟಾಂತಗಳನ್ನೊ ಕೊಟ್ಟು ಕೊನೆಯ ಸಾಲಿನಲ್ಲಿ ಸೂತ್ರಪ್ರಾಯವಾದ ಸಾರಸಂಗ್ರಹವಾದ ನುಡಿಮುತ್ತೊಂದನ್ನು ಕಟ್ಟುತ್ತಾರೆ. ಸಾರ್ಥಕಮುಕ್ತಾಯದ ಸಾಧನೆ, ಇದೊಂದು ಅವರ ತಂತ್ರವೆನ್ನುವಷ್ಟರ ಮಟ್ಟಿಗೆ ಬಹುತೇಕ ಚೌಪದಿಗಳಲ್ಲಿ ಇದನ್ನು ಕಾಣಬಹುದಾಗಿದೆ. ಸ್ಥಳದ ಅಭಾವದಿಂದ ಮೂರು ಉದಾಹರಣೆಗಳನ್ನು ನೀಡಲಾಗಿದೆ.

ಇರಲಿಲ್ಲ ನೆಂಟರು ಬವಣೆಗಳು ಬೆಂಬಿಡದೆ ಕಾಡುವಾಗ
ಇರಲಿಲ್ಲ ಸ್ನೇಹಿತರು ಅಳಲುಗಳು ಮೈತುಂಬ ಮನೆಮಾಡಿದಾಗ
ಇರಲಿಲ್ಲ ಬಂಧುಗಳು ಬಡತನವು ಬೆನ್ನು ಹತ್ತಿ ಬೇಯುವಾಗ

ಎಂದೆಲ್ಲ ಹೇಳಿ ಕೊನೆಯ ಸಾಲಿನಲ್ಲಿ ಉಂಡುಟ್ಟು ನಲಿವಾಗ ನೆಂಟರ ಬಳಗ ಎನ್ನುತ್ತಾರೆ. ಹಳ್ಳಿಗಳಲ್ಲಿ ಹಿರಿಯರು ಹೇಳುವ, 'ತನ್ನ ಮನೆಯ ರಾಗಿಕಲ್ಲು ಬೀಸುತ್ತಿದ್ದರೆ ಊರೆಲ್ಲ ನೆಂಟರೆ' ಎಂಬ ಅನುಭವೋಕ್ತಿ ನನೆಪಿಗೆ ಬರುತ್ತದೆ.

ಸ್ವತಃ ದುಡಿದುಣಲು ಸಂತೋಷ ಕಡಲು
ಹಂಗಿನಲಿ ನಾವಿರಲು ಹೊನ್ನ ಪಂಜರದಳಲು
ಬಾಳ್ವವಿಗೆ ಕಾಯಕ ಯಜ್ಞ ಜೇನು ಹೊನಲು

ಎಂದೆಲ್ಲ ಬಣ್ಣಿಸಿ 'ದುಡಿಮೆ ಮಾನವ ಧರ್ಮ ಎಂಬ ಸೂತ್ರದೊಡನೆ ಮುಗಿಸುತ್ತಾರೆ.

ಬರಡಲ್ಲವೀ ಬಾಳು, ತೇಯ್ದರೆ ಚಂದದ ಕೊರಡು
ಬರೀ ಕೊರಡಲ್ಲವೀ ಬದುಕು, ನಿತ್ಯಮಲ್ಲಿಗೆ ಕಂಪು
ಅಂತವರಿಗೆಲ್ಲ ಇಹದ ಜೀವನ ಸಗ್ಗದ ಸೈಪು

ಮೂರೆಳೆಯ ಈ ಚಿನ್ನದ ಸರಕ್ಕೆ 'ಗುರಿ ಇರದವರಿಗೆ ಇರವೇ ಗೋರಿ' ಎಂಬ ಪಚ್ಚೆಯ ಪದಕದ ಅಲಂಕಾರ.

## "ಧನ್ಯತೆಯ ಭಾವ"

ಸಾರಸ್ವತ ಸೇವೆಯನ್ನು ತಪಸ್ಸಿನಂತೆ ನಿರಂತರ ನಡೆಸಿಕೊಂಡು ಬಂದಿರುವ ಶ್ರೀ ದೊಡ್ಡರಂಗೇಗೌಡರು.

ಹುಟ್ಟಿದೆ ಹತಾಶೆಗಳ ಹುನ್ನಾರಿನಲ್ಲಿ
ಬೆಳೆದೆ ಬವಣೆಗಳ ಬೇಗುದಿಯಲ್ಲಿ
ಅಂತರಾತ್ಮ ಮೆಚ್ಚಲು ಬರೆವೆ ತಾಯ್ನುಡಿಯಲ್ಲಿ
ಕನ್ನಡಾಂಬೆಯ ಮುಡಿಗೆ ಹುವಾದಲ್ಲಿ ಧನ್ಯ.

ಎಂಬ ಮಾತುಗಳಲ್ಲಿ ವ್ಯಕ್ತಪಡಿಸುವ ಕೃತಾರ್ಥತೆಯ ಭಾವವನ್ನು ನೋಡಿದಾಗ ಅಕ್ಕಮಹಾದೇವಿಯ

ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ
ಬೆಳೆದೆನು ಅಸಂಖ್ಯಾತರ ಕರುಣದೊಳಗೆ
ಬಸವಣ್ಣ ಮೆಚ್ಚಲೊಗೆತನವ ಮಾಡುವೆ
ಚೆನ್ನಮಲ್ಲಿಕಾರ್ಜುನನ ಕೈಹಿಡಿದು, ನಿಮ್ಮ ತಲೆಗೆ
ಹೂವ ತಹೆನಲ್ಲದೆ ಹುಲ್ಲುತಾರೆನು.

ಎಂಬ ವಚನ ಸಹಜವಾಗಿಯೆ ನೆನಪಿಗೆ ಬರುತ್ತದೆ. ಸಂದರ್ಭವಂತೂ ಬೇರೆ ಎಂಬುದನ್ನು ಮರೆಯಬಾರದು ಅಷ್ಟೆ. ಬಾಳಿನ ಪ್ರಾರಂಭದ ದಿನಗಳಲ್ಲಿ ಪ್ರತಿಕೂಲ ಪರಿಸ್ಥಿತಿಯಿಂದ ಈ ಕವಿಚೇತನ ಮರುವಿಹೋಗದೆ ತನ್ನ ಸೃಷ್ಟಿಕಾರ್ಯವನ್ನು ಧೀರ ಪ್ರತಿಜ್ಞೆಯಿಂದ ಕೈಗೊಂಡುದು ನಾಡಿನ ಪುಣ್ಯ. ಶ್ರೀ ಗೌಡರು ನಿಜವಾಗಿಯೂ ಧನ್ಯಜೀವಿ. ಅವರು ನೂರುಕಾಲ ಬರೆಯುತ್ತಾ ಹೋಗಲಿ, ಅವರ ಲೇಖನಿಯಿಂದ ಇನ್ನೂ ಉತ್ತಮ ಕೃತಿಗಳು ಹೊರಹೊಮ್ಮಿ ಕನ್ನಡ ಸಾರಸ್ವತ ಸಂಪತ್ತು ಮತ್ತಷ್ಟು ಶ್ರೀಮಂತವಾಗಲಿ ಎಂದು ಹಾರೈಸುತ್ತೇನೆ. ಈ ಕೃತಿಯನ್ನು ಕುರಿತು ಶ್ರೀ ಸಿಂಪಿಯ್ಯಪುರಾಣಿಕರು ಹೇಳುವಂತೆ 'ಕವಿಯು ಇಲ್ಲಿ ಮಣ್ಣಿನ ಮಗನಾಗಿ ಮಣ್ಣಿನಲ್ಲಿ ಮಲ್ಲಿಗೆಗಳನ್ನು ಅರಳಿಸಿದ್ದಾನೆ' ಎಂಬ ಮಹತ್ವದ ಮಾತಿಗೆ ನಾನೂ ಧ್ವನಿಗೂಡಿಸುತ್ತೇನೆ.

## ಎದೆ ತಟ್ಟುವಂತಹ ಬರಹ

✍ ಪ್ರೊ. ಸುಂದರನಾಡ ಕರ್ಣಿ

ದೊಡ್ಡರಂಗೇಗೌಡರ ಕವನಗಳು ಸುಲಭ ಭಾಷೆಯಲ್ಲಿ, ಪ್ರತಿಮೆಗಳ ಸಂಕೀರ್ಣತೆಯ ಜಾಳಿನಲ್ಲಿ ವಿಶೇಷ ಸಿಲುಕಿಕೊಳ್ಳದೆ ಎದೆ ತಟ್ಟುವಂತಹ ಬರಹವಿರುವುದು ನನಗೆ ಅತ್ಯಂತ ಪ್ರಿಯವಾದುದು. ಅವರ ಅನೇಕ ಕವನಗಳು ಈ ಪರಿಘದಲ್ಲಿರುವುದರಿಂದ ಸಹೃದಯರಿಗೆ ಮೆಚ್ಚುಗೆಯಾಗಿವೆ.

# ಭಾವ ಭಾಗೀರಥಿ ಹರಿಯುವ ಪರಿ

✍ ಸ. ರಘುನಾಥ
ಅಧ್ಯಾಪಕರು

ಅದೊಂದು ಕಾಲವಿತ್ತು. ಲೇಖಕ ತಾನು ಬರೆದಿದ್ದನ್ನು ಹೆಮ್ಮೆಯಿಂದ ಪ್ರಕಟಿಸುವ ಕಾಲ. ಅದು ಮುಗಿದು ಒಂದು ಮಾದರಿಯ ಸಂಕೋಚದ ಒತ್ತಡವನ್ನು ಮೀರಿ ಪ್ರಕಟಿಸಬೇಕಾದ ಸಂದರ್ಭ ಹುಟ್ಟಿಕೊಂಡಿತು. ವಿಶೇಷವಾಗಿ ಗೇಯ ಕವಿತೆಗಳನ್ನು ಪ್ರಕಟಿಸುವಾಗ ಈ ಸಂಕೋಚದ ಒತ್ತಡಕ್ಕೆ ಒಳಗಾಗಬೇಕಾಗಿ ಬಂತು. ಅಂಥ ಪರಿಸ್ಥಿತಿಯೊಂದು ನಿರ್ಮಾಣವಾಗಿರುವುದನ್ನು ನಾವೆಲ್ಲ ಅನುಭವಿಸಿದ್ದೇವೆ. ಹೀಗಾದದ್ದು ನವ್ಯ ಕಾವ್ಯ ಬೆಳೆಯುತ್ತ ಹೊರಟ ಬೆನ್ನಲ್ಲೆ. ಬಹು ಸಂಖ್ಯಾತ ನವ್ಯರು ಲಯ ಪ್ರಾಸಗಳನ್ನು ಇಟ್ಟುಕೊಂಡು ಬರೆದರೂ, ಶುದ್ಧ ಗೇಯ ಕಾವ್ಯವನ್ನು ನಿರಾಕರಿಸಿದ್ದೇ ಇದಕ್ಕೆ ಕಾರಣವೆನ್ನಬಹುದು. ಆದರೂ ನವೋದಯ ಮನೋಭಾವದ ಕವಿಗಳು ಗೇಯ ಕವಿತೆಗಳನ್ನು ಬರೆಯುತ್ತಲೇ ಬಂದವರಾದರೂ ಆ ಧ್ವನಿ 'ನವ್ಯ'ದ ಮೇಲಾಟದಲ್ಲಿ ಕ್ಷೀಣವಾಗಿಯೇ ಉಳಿದು ಬಿಟ್ಟಿತು. ನಂತರ ನವ್ಯ ಕಾವ್ಯದ ಹಂಗನ್ನು ನಿರಾಕರಿಸುವಂತೆ ಮೂಡಿಬಂದ ದಲಿತ ಬಂಡಾಯದ ಸಾಹಿತ್ಯ ಚಳುವಳಿಯ ಗೇಯ ಕವಿತೆಗಳಿಗೆ ಉಸಿರು ತುಂಬತೊಡಗಿತಾದರೂ ಪ್ರಕೃತಿ ಪ್ರೇಮದಂಥಾ ನವೋದಯ ಮೂಲದ್ರವ್ಯಗಳನ್ನು ನಿರಾಕರಿಸಿತು.ಹೀಗಾಗಿ ಮತ್ತೆ ಇಂಥಾ ಭಾವ ಗೀತೆಗಳು ಹಿಂದೆ ಸರಿದವು. ಇಂಥ ಒಂದು ಸಂದಿಗ್ಧ ವಾತಾವರಣದಲ್ಲಿ ಹುಟ್ಟಿಕೊಂಡ "ಧ್ವನಿಸುರುಳಿ" ಗಳು ಮತ್ತೆ ಇವಕ್ಕೆ ಜೀವ ತಂದವಾದರೂ ಸಂಕಲನ ತರುವ ಮಟ್ಟಿಗಂತೂ ಹೇಳಿಕೊಳ್ಳುವ ಪ್ರಯತ್ನಗಳು ಹೊರಬರಲಿಲ್ಲ. ಧ್ವನಿಸುರುಳಿಗಳು ಜನಪ್ರಿಯತೆ ಗಳಿಸಿದ ಮೇಲೆ ಗೇಯ ಕವಿತೆಗಳು ಸಂಕಲನದ ರೂಪದಲ್ಲಿ ಮತ್ತೆ ಕಣ್ಣುಬಿಡತೊಡಗಿದವು.

ಡಾ|| ಎನ್.ಎಸ್.ಎಲ್., ಡಾ|| ಹೆಚ್.ಎಸ್.ವಿ., ಬಿ. ಆರ್. ಲಕ್ಷ್ಮಣರಾವ್, ಸಿದ್ಧಲಿಂಗದೇಸಾಯಿ ದೊಡ್ಡರಂಗೇಗೌಡ, ಕಮಲಾಹಮ್ಮಿಗ್ರೆ ಮಂತಾದವರು ಧೈರ್ಯಮಾಡಿ ಭಾವಗೀತೆಗಳ ಸಂಕಲನಗಳನ್ನು ಪ್ರಕಟಿಸಿದರು. ಆದರೆ ಸಾಕಷ್ಟು ಟೀಕೆಗಳನ್ನು ಎದುರಿಸಿದಂತೆ, ಮೆಚ್ಚುಗೆಯನ್ನು ಗಳಿಸಿದರು. ಈಗ ಇಂಥ ವಿರೋಧಿ ಮನೋಭಾವ ಕಡಿಮೆಯಾಗುತ್ತಿರುವುದು ಈ ಮಟ್ಟಿಗಿನ ಪ್ರೇಮಿಗಳಿಗೆ ಸಧ್ಯಕ್ಕೆ ಸಂತಸದ ವಿಚಾರವೇ.

ಈ ಸಂದರ್ಭದಲ್ಲಿ 'ಗೀತಗಾರುಡಿ' 'ಹೋಳಿ ಹುಣ್ಣಿಮೆ', 'ಪ್ರೇಮಾಂಜಲಿ' ಭಾವಗೀತೆಗಳ ಸಂಕಲನಗಳನ್ನೂ ಕನ್ನಡ ಕಾವ್ಯಲೋಕಕ್ಕೆ ಕೊಟ್ಟ ಹಿರಿಯ ಮಿತ್ರ ಶ್ರೀ ದೊಡ್ಡರಂಗೇಗೌಡರು ಈ 'ಭಾವ ಭಾಗೀರಥಿ'ಯನ್ನು ಕರೆತರುತ್ತಿದ್ದಾರೆ. ಅದನ್ನು ಸ್ವಾಗತಿಸುತ್ತಾ ಕೆಲವು ಮಾತುಗಳನ್ನು ಬರೆಯುತ್ತಿದ್ದೇನೆ.

## 2

ಭಾವಗೀತೆಗಳ ಸಂದರ್ಭಕ್ಕೆ ಬಂದಾಗ ತೆಲುಗು, ಕನ್ನಡದಿಂದ ಭಿನ್ನವಾಗಿ ನಿಲ್ಲುತ್ತದೆ ಅಲ್ಲಿ 'ಅಭ್ಯುದಯ ಕವಿತೆ, ದಿಗಂಬರ ಕವಿತೆ, ಕ್ರಾಂತಿ ಕವಿತೆ, ವಚನ ಕವಿತೆ, ಮುಂತಾಗಿ ಬಿರುಗಾಳಿಯೇ ಎದ್ದಾಗಲೂ ಭಾವಗೀತೆಗಳು ಅದಕ್ಕೆ ಸರಿಸಮ ಉಸಿರಾಡುತ್ತಲೇ ಬಂದವು. ಆಶ್ಚರ್ಯದ ವಿಷಯಗಳೆಂದರೆ ಈ ಎಲ್ಲ ಪಂಥದ ಪ್ರಮುಖ ಕವಿಗಳು ತಾವು ಒಪ್ಪಿಕೊಂಡ ಸಿದ್ಧಾಂತಗಳಿಗೆ ಅಂಟಿಕೊಂಡೇ ಭಾವಗೀತೆಗಳನ್ನು ಬರೆದದ್ದು. ಇವರಲ್ಲಿ ಅನೇಕರು ನಮ್ಮ ನವ್ಯರಂತೆ ಪೂರ್ಣವಾಗಿ ಇದನ್ನು ತಿರಸ್ಕರಿಸಲಿಲ್ಲ. ಪ್ರತ್ಯೇಕವಾಗಿ ಸಂಕಲನವೆಂದು ತರದಿದ್ದರೂ (ಎಲ್ಲರೂ ಅಲ್ಲ) ಭಾವಗೀತೆಗಳನ್ನು ಬರೆದರು. ಕೆಲವರು ಸಿನಿಮಾಗೆಂದು ಬರೆದರೂ ಅವು ವಾಸ್ತವದಲ್ಲಿ ಭಾವಗೀತೆಗಳೇ ಆಗಿದ್ದವು.

ಇದಕ್ಕೆ ಪಕ್ಕಾ ಕ್ರಾಂತಿವಾದಿಯಾದ 'ಶ್ರೀ ಶ್ರೀ' ಸಹ ಹೊರತಾಗಿರಲಿಲ್ಲ, ಡಾ|| ಸಿ. ನಾರಾಯಣರೆಡ್ಡಿ, 'ಆರುದ್ರ' ಇಂಥವರು ಸಂಕಲನಗಳನ್ನು ಪ್ರಕಟಿಸಿದರು.

ನಮ್ಮ ಕನ್ನಡ ಕವಿಗಳಂತೆ, ತೆಲುಗು ಕವಿಗಳಿಗೆ ಸಿನಿಮಾಗೀತೆ ಬರೆಯುವುದು ನಾಚಿಕೆಯ ಸಂಗತಿಯಾಗಲಿಲ್ಲ. ವಿಮರ್ಶಕರೂ ಇದನ್ನು ಗಂಭೀರ ವಿಷಯವನ್ನಾಗಿ ಮಾಡಲಿಲ್ಲ. ಕಾವ್ಯ ರಸಿಕರ ಅನುಮೋದನೆಯೂ ಇದ್ದಿತು, ಇಂದಿಗೂ- ಇದೆ. ಇದೇ ಪರಿಸ್ಥಿತಿ ಹಿಂದಿ ಸಿನಮಾ ಕ್ಷೇತ್ರದಲ್ಲೂ ಇದೆ. ಸಾಹಿರ್‌ಲೂಧಿಯಾನ್ವಿ ಗೀತೆಗಳು ಬಹಳ ಚರ್ಚೆಗೆ ಒಳಪಡುತ್ತಿವೆ. ಆದರೆ ಕನ್ನಡದಲ್ಲಿ ಹೀಗಾಗಲೇ ಇಲ್ಲ. ಇಲ್ಲಿ ಸಿನಿಮಾಗೆ ಹಾಡು ಬರೆದ ಕವಿಗಳ ಕಾವ್ಯದ ಬಗ್ಗೆಯೇ ವಿಮರ್ಶಕರಿರಲಿ, ಗಂಭೀರ ಕಾವ್ಯಾಸಕ್ತರೂ ಸಹಾ 'ಮೊಗಂ' ಆಗಿ ಇದ್ದು ಬಿಟ್ಟಿದ್ದನ್ನು ಕಾಣುತ್ತೇವೆ. ಅದು ಅಪರಾಧವೇನೋ ಎಂಬಂತೆ!

ಭಾವಗೀತೆಗಳ ಕುರಿತಾದ ಇನ್ನೊಂದು ರೀತಿಯ ಬೆಳವಣಿಗೆಯನ್ನು ತೆಲುಗಿನಲ್ಲಿ ಗಮನಿಸಬಹುದು. ಅಲ್ಲಿನ ಖ್ಯಾತ ಕವಿ ನಂಡೂರಿ ಸುಬ್ಬಾರಾವರ ಸೃಷ್ಟಿ 'ಎಂಕಿ ಪಾಟಲು'ವಿನ 'ಯಂಕಿ' ಇತರ ಕವಿಗಳ ಭಾವಗೀತೆಗಳಲ್ಲೂ ಕಾಣಿಸಿಕೊಳ್ಳುವಂತೆ ವಿಶ್ವನಾಥ ಸತ್ಯನಾರಾಯಣರ 'ಕಿನ್ನರ ಸಾನಿ'ಯೂ ಕಾಣಿಸಿಕೊಳ್ಳುತ್ತಾಳೆ. ಉದಾಹರಣೆಗೆ- ಎಂಕಿನ್ನೆ ಪಾಡಾಲ ಎಜುನಮಕ್ಕೆನ ("ಎಂಕಿಯಾಗಿ ಹಾಡಬೇಕು ಎಲ್ಲ ಜನ್ಮಕ್ಕೂ") ಎಂಬಂಥ ಗೀತೆಯನ್ನು ಹೆಸರಿಸಬಹುದು. ಇದು ಭಾವ ದಾರಿದ್ರ್ಯದಿಂದ ಪುನಾರಾವರ್ತನೆ ಎಂದು ಭಾವಿಸಿದರೆ ಆತುರದ ಮಾತಾದೀತು. ತಪ್ಪು ಆಗಬಹುದು. ಅದೇನಿದ್ದರೂ ತಮ್ಮ ಹುಚ್ಚು ಪ್ರೀತಿಯ, ಜನಮನದಲ್ಲಿ ಜೀವಂತ ಗೊಳಿಸುವ ಪ್ರಕ್ರಿಯೆಯಲ್ಲಿ ರೂಪ ಕೊಟ್ಟು ನಿಲ್ಲಿಸುವ ಸಹೃದಯ ಪ್ರಯತ್ನದಿಂದ ಮೂಡಿದ್ದು. ಮತ್ತೂ ಆ ಕವಿಯ ಹಾಗೂ ಪಾತ್ರದ ಬಗೆಗಿನ ಆದರ, ಗೌರವ ರೂಪದ್ದು ಎಂಬುದನ್ನು ನಾವು ಮನಗಾಣಬೇಕು. ಇಂಥದೊಂದು ಮನೋಭಾವ ಕನ್ನಡಕ್ಕಿನ್ನು ಒಗ್ಗಿಯೇ ಬಂದಿಲ್ಲ. ಇದು ಕನ್ನಡಿಗರೆಲ್ಲ ಯೋಚಿಸಬೇಕಾದ ವಿಷಯ.

ದೊಡ್ಡರಂಗೇಗೌಡರ "ಭಾವಭಾಗೀರಥಿ"ಯ ಸಂದರ್ಭಕ್ಕೂ ಒಪ್ಪಿಕೊಳ್ಳುವಂಥ ಮಾತೊಂದಿದೆ. "ಅನಿಸಿದ್ದನ್ನು ನೇರವಾಗಿ ಹೃದಯಕ್ಕೆ ತಟ್ಟುವಂತೆ ಮುಚ್ಚು ಮರೆಯಿಲ್ಲದೆ ಚುಚ್ಚದಂತೆ ಪ್ರೀತಿಯಿಂದ ಹೇಳುವ ಕಲೆಗಾರಿಕೆ ಸಾಧಿಸಿದೆ." (ಸಿದ್ಧಲಿಂಗ ಪಟ್ಟಣಶೆಟ್ಟಿ) ಅನಿಸಿದ್ದನ್ನು ಅನುಭವಿಸಿ ಹೇಳುವಲ್ಲಿ ಹಿಂತೆಗಯದ ಮನೋಭಾವ ಪ್ರಸ್ತುತ ಕವನ ಸಂಕಲನದಲ್ಲೂ ನಿಚ್ಚಳವಾಗಿದೆ. 'ಹೇಗೋ

ಹೇಳಿದರಾಯ್ತು' ಎಂಬ ಬಿಡು ಬೀಸುತನ ಗೌಡರಲ್ಲಿ ಕಾಣದು. ಶಿಸ್ತು, ಅಚ್ಚುಕಟ್ಟು ಎದ್ದು ಕಾಣುವಂತಿದೆ. ಅದಕ್ಕೆ ಬೇಕಾದ ಲಯ, ಪ್ರಾಸ, ಛಂದದ ಕಸುಬು ನಿಖರವಾಗಿ ಮೈಗೂಡಿ ಬಂದಿದೆ. ಕೇಳುಗ, ಹಾಡುಗ ಇಬ್ಬರೂ ಕೂಡಿಯೇ ಒಲಿಯುವಂಥ ಮನಸ್ಸನ್ನು ಮೃದುಮಾಡಿ ಅನುಭವಕ್ಕೆ ತಂದುಕೊಡುವಂಥ ಶೈಲಿ ಅವರಿಗೆ ಒಗ್ಗಿ ಬಂದಿದ್ದೆ.

ಕೊಟ್ಟು ಪಡೆವಾಟ, ನೆಟ್ಟು ನಗುವಾಟ
ಬಿತ್ತಿ ಬೆಳೆವಾಟ ಪ್ರೀತಿಗೆ
ಅಟ್ಟು ಉಣುವಾಟ, ಬಿಟ್ಟು ಬೆಸೆವಾಟ
ತೊಟ್ಟು ಕಳೆವಾಟ ಪ್ರೇಮಿಗೆ (ರಾಗದೊಳಗಿನ ರಾಗ)

ಅಂಬರದಲ್ಲಿ ಮೋಡದ ಕೋಟೆ
ಮೋಡವ ಸೀಳುತ ಕಿರಣದ ಬೇಟೆ
ಆ ಸಾಹಸ ನೋಡಲು ಪಕ್ಷಿ ಸಂಕುಲ
ಬಾನಲಿ ಹಾರುತ ಬರೆದಿವೆ ಚಿತ್ರಗಳ" (ಪ್ರಕೃತಿ ಪೂಜೆ)

ದೊಡ್ಡರಂಗೇಗೌಡರ ಗೀತೆಗಳನ್ನು ಇಡಿಯಾಗಿ ಗಮನಿಸಿದಾಗ ಅವರ ಅಂತರಂಗದ ತುಡಿತ, ಪ್ರೀತಿ ಪ್ರೇಮ ಪ್ರಕೃತಿ ವರ್ಣನೆ, ತತ್ವ-ತಾತ್ವಿಕ ಚಿಂತನೆಗಳಲ್ಲಿ ಕಾಣಸಿಕೊಳ್ಳುತ್ತದೆ. ಅವರ ಬದುಕಿನ ನಂಬಿಕೆ-ವಿಶ್ವಾಸಗಳು ಪ್ರಕಟವಾಗುವುದು ಇವುಗಳ ಮೂಲಕವೇ ಅನ್ನಬಹುದು. ಇದೇ ಇವರ ಕಾವ್ಯ-ಕಸುಬಿನ ಸ್ಥಾಯಿಯೂ ಆಗಿದೆ ಅನ್ನಿಸುವುದು. ಹಾಗಾಗಿ ಅವರ ರಚನೆಗಳು ಭಾವಗರ್ಭಿತ ರಚನೆಗಳಾಗಿ ಪರಿಣಮಿಸುತ್ತವೆ. ಒಟ್ಟಿಗೇ ಭಾವುಕರನ್ನು ತನ್ನೊಳಗೆ ಸೆಳೆದುಕೊಳ್ಳುತ್ತವೆ.

ಈ ಕವಿ ಬರಿದೇ ಕಲ್ಪನೆಯಲ್ಲೇ ಮಧುರ ಭಾವಲೋಕದಲ್ಲೇ ವಿಹರಿಸುತ್ತಾನೆ - ಅನ್ನುವಂತಿಲ್ಲ. ವಾಸ್ತವದ ಕಟು ಬದುಕಿನ ಅರಿವೂ, ಇಲ್ಲಿನ ಕಷ್ಟಕೋಟಲೆಗಳ ಪ್ರಜ್ಞೆಯೂ ಉಳ್ಳವನಾಗಿದ್ದಾನೆ. ಅಷ್ಟೇ ಅಲ್ಲ ಅವರ ಅನುಭವಿಯೂ ಆಗಿರುವುದು ಅವರ ಗೀತೆ ಕವಿತೆಗಳನ್ನು ಬಲ್ಲವರಿಗೆ ತಿಳಿದದ್ದೇ. ಅದರಿಂದಾಗಿಯೇ ಅವರ ಕಾವ್ಯ ಇತ್ತಲೂ ಹೃದಯ ತೆರೆದಿರುತ್ತದೆ. ಅಂಥ ಪ್ರಯತ್ನವನ್ನು ಸಧ್ಯದ ಸಂಕಲನ "ಭಾವ ಭಾಗೀರಥಿ"ಯ 'ವೈಚಾರಿಕ ಗೀತೆ' 'ಹೃದಯದ ಹಾಡು', 'ಶ್ರಮಿಕರ ಪಾಡು,' 'ಯಾರಿಗೆ ಹಬ್ಬ,' 'ಆದರ್ಶಗೀತ,' 'ಪಂಚ ನದಿಗಳ ನಾಡಿನಲ್ಲಿ' ದೂರ-ಹತ್ತಿರ-ಮುಂತಾದ ರಚನೆಗಳಲ್ಲಿ ಕಾಣಬಹುದು.

ಗೌಡರು ನಾಡು-ನುಡಿಗಳ ಸಂದರ್ಭಕ್ಕೂ ಸ್ಪಂದಿಸುವ ಮನಸ್ಸಿನ ಕವಿ. ಈ ಮೂಲಕ ಇಲ್ಲಿ ಕವಿ ತನ್ನ ಭಾವ ಹರಹನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವನ್ನು ಕಾಣಬಹುದು 'ಕಂಕಣ ಕಟ್ಟೋಣ ಬನ್ನಿ', 'ನಮ್ಮ ಹೆಮ್ಮೆಯ ನಾಡು', 'ಕನ್ನಡ-ನಮ್ಮ -ಕನ್ನಡ' ಎಂಬ ಗೀತೆಗಳನ್ನು ಈ ನಿಟ್ಟಿಗೆ ಹೆಸರಿಸಬಹುದು ಹಾಗೇ ನಮ್ಮ ದೇಶದ ಪರಂಪರೆಯ ಬಗ್ಗೆ ಕವಿಗಿರುವ ಒಲವನ್ನು 'ವಿವೇಕನಂದರಿಗೆ ವಂದನೆ', 'ಸರ್ವಜ್ಞನಿಗೆ,' ಎಂಬಂಥ ಗೀತೆಗಳಲ್ಲಿ ಕಾಣಬಹುದಾಗಿದೆ.

ಗೌಡರ ಗೀತೆ ಕಟ್ಟುವ ಕಸುವಿನ ಇನ್ನೊಂದು ಮಜಲು ಕಾಣುವುದು ಅವರ ಗ್ರಾಮ್ಯ ಭಾಷೆ ಬಳಕೆಗೊಂಡ (ಜಾನಪದ ಭಾಷೆ ಅನ್ನಲಡ್ಡಿಯಿಲ್ಲ) ಗೀತೆಗಳಲ್ಲಿ. ಇಲ್ಲಿನ ವಿನ್ಯಾಸ ಸ್ವಲ್ಪ ನವೋದಯ ಸಂಪ್ರದಾಯಕ್ಕೆ ಹತ್ತಿರ ಅನ್ನಿಸುವುದಾದರೂ ಭಾವಾಹೂರಣ ಜಾನಪದದಂತೆಯೇ ಅಪ್ಯಾಯವಾಗುವಂಥದ್ದು. ಇಂಥ ಗೀತೆಯ

ನಡಿಗೆ ಗಾಯಕರಿಗಂತೂ ಸುಲಭ ಗ್ರಾಹ್ಯವಾದುದು. ಕೇಳುಗರಿಗೆ ಮುದ ನೀಡುವಂಥದು.

ಗೌಡರು ಭಾವವನ್ನು ಹಿಡಿದಿಡಲು ಬಳಸುವ ಲಯ-ಪ್ರಾಸಗಳ ಗೀತೆ ಕಟ್ಟುವಲ್ಲಿ ಛಂದಸ್ಸಿನ ಬಳಕೆ ಸಾಂಪ್ರದಾಯಿಕಾದುದು. ಈ ಸಂಕಲನದಲ್ಲಿ ಏಕತಾನತೆಯನ್ನು ಉಳಿಸಿಕೊಳ್ಳದಿರಲಿಕ್ಕಾಗಿ ಬೇರೆ ಬೇರೆ ಛಂದಸ್ಸಿನ ಬಳಕೆಯನ್ನು ಅಧ್ಯಯನ ಶೀಲ ಮನಸ್ಸು ಗ್ರಹಿಸಲು ಸಾಧ್ಯವಿದೆ.

ಲಾಲಿತ್ಯದ ಸೊಬಗಿನಿಂದಾಗಿ 'ಪದಕವಿತೆ'ಗೆ ತೀರಾ ಹತ್ತಿರ ನಿಲ್ಲುವುದರ ಜೊತೆಗೆ ವಿಧ ವಿಧ ಸೊಬಗಿನ ಚಿತ್ರಗಳು ರಂಜನೆಯೊಂದಿಗೆ ಆನಂದವನ್ನು ತಾವೇ ಮೂಡಿಸಿಕೊಡುತ್ತವೆ. ವಿಶೇಷವಾಗಿ ನವೋದಯ ಕಾವ್ಯ ಮೆಚ್ಚುವ ರಸಿಕ ಮನಸ್ಸುಗಳಿಗೆ ಇಲ್ಲಿಯ ಗೀತೆಗಳು ಹೆಚ್ಚು ಪ್ರಿಯವಾಗುತ್ತವೆ. ಇಲ್ಲಿನ ಗೀತೆಗಳು ದುಡಿಸಿಕೊಂಡಿರುವ ಒಳಪ್ರಾಸಗಳ ನಾದ ಮಾಧುರ್ಯ, ಸದಭಿರುಚಿ, ಎಲ್ಲಕ್ಕೂ ಮಿಗಿಲಾಗಿ ಎದ್ದು ಕಾಣುವ ಸಹೃದಯತೆಯನ್ನು ಯಾರೂ ಒಪ್ಪಬೇಕು. ಮೆಚ್ಚಬೇಕು, ಅಂದರೂ ಅನುಭವಿಸುವುದು ಆನಂದಿಸುವುದು ಕೃತಿಗೆ ನ್ಯಾಯ ಕೊಡುವುದು ಸಹೃದಯ ರಸಿಕರಿಗೆ ಬಿಟ್ಟದ್ದು.

ಕಡೆಯ ಮಾತಾಗಿ ಇದನ್ನು ಹೇಳಬಹುದು; ಗೌಡರನ್ನು ಒಳಗೊಂಡಂತೆ ಕನ್ನಡದಲ್ಲಿ ಗೇಯ ಕವಿತೆಗಳನ್ನು ರಚಿಸುವ ಎಲ್ಲ ಕವಿಗಳ ಕಾವ್ಯದೊಟ್ಟಿಗೆ ಅವರ ಗೇಯ ಕವಿತೆಗಳೂ ಗಂಭೀರ ಚರ್ಚೆ-ವಿಮರ್ಶೆಗೆ ಒಳಪಡುವಂತಾಗಿ, ಸರಿ ಮೌಲ್ಯ ನಿರ್ಣಯ ಆಗುವಂತಾದಲ್ಲಿ ಒಂದು ಆರೋಗ್ಯಕರ ಸನ್ನಿವೇಶ ನಿರ್ಮಾಣವಾಗದಿರುದು. ಹಾಗಾಗಲಿ ಎಂದು ಹಾರೈಸುತ್ತೇನೆ.

## ದಲಿತ ಬದುಕಿನ ಸಂವೇದನೆ

✍ ಡಾ|| ಬುದ್ಧಣ್ಣ ಹಿಂಗಮಿರೆ

ದೊಡ್ಡರಂಗೇಗೌಡರು ಕೆಲವು ಒಳ್ಳೆಯ ಪದ್ಯಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಈ ಕವಿ ಸ್ವಂತಅನುಭವದ ಸ್ತರದ ಮೇಲೆ ಸಾರ್ವತ್ರಿಕ ಮೌಲ್ಯಗಳ ಕುರಿತು ಚಿಂತಿಸುವುದನ್ನು ನಾವು ಕಾಣಬಹುದು.

"ನನ್ನದಲ್ಲದ ಬದುಕನ್ನು ನನ್ನದೆಂದು ಹೇಳಿಕೊಳ್ಳುವ ಭ್ರಮೆ ನನಗಿಲ್ಲ" ಎನ್ನುವ ಗೌಡರ ಪ್ರಾಮಾಣಿಕತೆ ದೊಡ್ಡವರಿಗೂ ತಟ್ಟುವಂಥಾದ್ದು.

ಗೌಡರ ಕವಿತೆಗಳಲ್ಲಿ ದಲಿತ ಬದುಕಿನ ಸಂವೇದನೆ ಹಾಗೂ ಝಳವಿರುವುದರಿಂದ ಸಾಮಾಜಿಕ, ರಾಜಕೀಯ, ಸಮಕಾಲೀನ ಅಳಲು ಹಾಗೂ ದುರಂತದ ದನಿ ಗಮನಾರ್ಹ; ಬಂಡಾಯದ ಭಾವವನ್ನು ಬಡಿದೆಬ್ಬಿಸುವ ಶಕ್ತಿ ಈ ಕವಿವಾಣಿಗಿದೆ.

# ಶ್ರೀ ದೊಡ್ಡರಂಗೇಗೌಡರ ಚುಟುಕು ಸಾಹಿತ್ಯ - ಒಂದು ಕಿರು ಸಮೀಕ್ಷೆ

✍ ಡಾ|| ಡಿ. ವಿ. ಪರಮಶಿವಮೂರ್ತಿ

'ಚುಟುಕ' ಎಂಬ ಹೆಸರು ಕನ್ನಡ ಸಾಹಿತ್ಯದ ಓದುಗರಿಗೆ ಚಿರಪರಿಚಿತವಾದುದಾಗಿದೆ' ಆದರಲ್ಲೂ ಇತ್ತೀಚಿನ ವರ್ಷಗಳಲ್ಲಿ ಇದರ ವ್ಯಾಪಕತೆ ಕ್ಷಿಪ್ರವಾಗಿ ಪಸರಿಸತೊಡಗಿದೆ. ಎಲ್ಲ ವಿವಿಧ ಪತ್ರಿಕೆಗಳಲ್ಲಿ ಉನ್ನತ ಸ್ಥಾನವನ್ನು ಪಡೆಯುತ್ತಿದೆ. ಚುಟುಕಗಳ ಬೆಳವಣಿಗೆಯ ಇತಿಹಾಸ ಸರ್ವಜ್ಞ ಕವಿಯಿಂದ ಆರಂಭವಾದರೂ ಹೊಸರೂಪ ಪಡೆದದ್ದು ಸುಮಾರು ನಲವತ್ತು ವರ್ಷಗಳಿಂದೀಚೆಗೆ. ೧೯೫೦ನೇ ಇಸವಿಯಿಂದ ದಿನಕರ ದೇಸಾಯಿಯವರು ಚುಟುಕುಗಳನ್ನು ಜನಪ್ರಿಯಗೊಳಿಸಿದರು. ಇವರನ್ನು 'ಚುಟುಕ ಪಿತಾಮಹ' ಎಂದರೂ ತಪ್ಪಾಗಲಾರದು ಹಾಸ್ಯ ಮತ್ತು ವಿಡಂಬನೆಗಳಿಗೆ ಇವರು ಹೆಚ್ಚು ಒತ್ತು ಕೊಟ್ಟಿದ್ದರು.

ಚುಟುಕುವೆಂಬುದು ಸಾಹಿತಿಯ ಬಿರುಸುಬಾಣ, ಮರ್ಮ ಭೇದಿಸಿದರೂ ಉಳಿಯುವುದು ಪ್ರಾಣ ವೆಂದು ಅವರು ನಂಬಿದ್ದರು.

ಶ್ರೀ ದಿನಕರದೇಸಾಯರ ನಿಧನದ (೧೯೮೨) ನಂತರ ಈ ಕ್ಷೇತ್ರವನ್ನು ಸಮರ್ಥವಾಗಿ ಪ್ರತಿನಿಧಿಸಬಲ್ಲ ಮತ್ತೊಬ್ಬರು ದೊರೆಯಲೇ ಇಲ್ಲ. ಹಲವರು ಪ್ರಯತ್ನ ಪಟ್ಟರೂ ದೇಸಾಯಿಯವರ ಪ್ರಭಾವದ ಮುಂದೆ ಸ್ವಂತಿಕೆಯನ್ನು ಕಳೆದುಕೊಂಡರು ಅಥವಾ ಅನುಕರಿಸಲು ತೊಡಗಿ ಮುಗ್ಗರಿಸಿ ಬಿದ್ದರು. ಆದರೆ ಈ ಮಾತಿಗೆ ಅಪವಾದವೆಂಬಂತೆ ಕೆಲವರು ಮಾತ್ರ ಸ್ವಂತಿಕೆಯನ್ನು ಉಳಿಸಿಕೊಂಡು ಬೆಳೆದರು, ದೇಸಾಯರ ಪರಂಪರೆಯನ್ನು ಮುಂದುವರೆಸಿದರು ಇಂತಹವರಲ್ಲಿ ಪ್ರಮುಖವಾಗಿ ಕೇಳಿಬರುವ ಹೆಸರು ಶ್ರೀ ದೊಡ್ಡರಂಗೇಗೌಡರದ್ದು. ಬದುಕಿನ ನೋವು ನಲಿವುಗಳನ್ನು ಸ್ವತಃ ಅನುಭವಿಸಿ, ಸ್ಪಂದಿಸಿ ಪಕ್ವವಾದ ವ್ಯಕ್ತಿತ್ವದ ಚಹರೆಯನ್ನು ಇವರ ಚುಟುಕುಗಳಲ್ಲಿ ಪ್ರಧಾನವಾಗಿ ಕಾಣಬಹುದು.

ದಿನಕರ ದೇಸಾಯಿಯರ ಪರಂಪರೆಯನ್ನು ಮಂದುವರಿಸಿದರೂ ಸಹ ಅವರ ನೆರಳಾಗದೆ ಅವರಿಗಿಂತಲೂ ಭಿನ್ನವಾದ ಪ್ರಯತ್ನಗಳನ್ನು ಕೈಗೊಂಡು ಸಫಲರಾದರು. ಹಾಸ್ಯ ವಿಡಂಬನೆಗಳಿಗೆ ಮೀಸಲಾಗಿದ್ದ ಈ ಚುಟುಕ ಪ್ರಕಾರವನ್ನು ಗಂಭೀರ ಚಿಂತನೆಯ ನೆಲೆಗೆ ಕೊಂಡೊಯ್ದು ಯಶಸ್ಸು ಗೌಡರಿಗೆ ಸಲ್ಲಬೇಕು.

ಕೆಲಸ ಸಿಕ್ಕ ಮೊದ ಮೊದಲು
ಅಧ್ಯಾಪಕ
ಶ್ರದ್ಧಾವಂತ ಚಿಂತಕ
ದಶಕ ದಶಕ ಉರುಳಲು

ಈ ಬೋಧಕ
ಶಿಕ್ಷಣ ಕ್ಷೇತ್ರಕ್ಕೆ ಮಾರಕ

ಎಂಬ ಚುಟುಕದಲ್ಲಿ ಇಂದಿನ ಬಹುಪಾಲು ಅಧ್ಯಾಪಕರ ಮನೋಭೂಮಿಕೆಯನ್ನು ಎತ್ತಿ ತೋರಿಸುತ್ತಾರೆ. ಇದನ್ನು ಓದಿದ ಅಧ್ಯಾಪಕರೆಲ್ಲ ಆತ್ಮವಿಮರ್ಶೆಗೊಳಗಾಗುವಂತೆ ಪ್ರೇರೇಪಿಸುತ್ತಾರೆ.

ಮಾಗಿದ ಅನುಭವ
ರಸಪುರಿ ಮಾವು
ಮಾಗದ ಮಾನವ
ಬರಿ ಹುಳಿ ಮಾವು

ಅನುಭವವೆಂಬುದು ಜೀವನದಲ್ಲಿ ಎಷ್ಟು ಮುಖ್ಯವೆಂಬುದು ಮೇಲಿನ ಚುಟುಕದ ಸಾರಾಂಶವಾಗಿದೆ. ಈ ಅನುಭವವನ್ನು ಗಳಿಸುವುದು ಹೇಗೆಂದು ಈ ಕೆಳಗಿನಂತೆ ಹೇಳುತ್ತಾರೆ.

ಯಾವಾಗ ಮನುಷ್ಯ ಯಾಂತ್ರಿಕ
ಆಗ ಇರದು ಬದುಕಿನಲ್ಲಿ
ರೋಮಾಂಚಕ ಪುಳಕ,
ಯಾವಾಗ ಮಾನವ ಅನ್ವೇಷಕ
ಆಗೆಲ್ಲ ಕ್ಷಣ ಕ್ಷಣ
ಅನಭವದ ಅದ್ಭುತ ಲೋಕ!

ಇಂದಿನ ಯಾಂತ್ರಿಕ ಬದುಕಿನಲ್ಲಿ ಹುದುಗಿರುವ ಮಾನವನ ಮುಖಕ್ಕೆ ಕನ್ನಡಿ ಹಿಡಿದಂತಿದೆ, ಮೇಲಿನ ಚುಟುಕ.

ಕನ್ನಡಕ್ಕೆ ಕನ್ನಡಿಗರಿಗೆ ಆಗಿರುವ ಅನ್ಯಾಯವನ್ನು ದೊಡ್ಡರಂಗೇಗೌಡರು ಬಹಳ ಮನಮಿಡಿಯುವಂತೆ ಹೇಳುತ್ತಾರೆ.

ನಾವು ಕರುಣಾಳು ಕನ್ನಡಿಗರು
"ಪರಕೀಯರಿಂದ ತುಂಬಿದೆ ನಮ್ಮೂರು"
ನಾವು ಉದಾರಿಗಳು ಕನ್ನಡಿಗರು
"ಅನ್ಯ ರಾಜ್ಯಕ್ಕೆ ಯದ್ವಾತದ್ವಾ ಹರಿದಿದೆ ನಮ್ಮ ನದಿ ನೀರು"
ನಾವು ಔದಾರ್ಯವಂತರು ಕನ್ನಡಿಗರು
"ಅದಕ್ಕೆ ನಮ್ಮ ಕಾರ್ಖಾನೆಗಳಲ್ಲಿ ಬರೀ ನೆರೆಹೊರೆಯವರು"

ಈ ಚುಟಕದಲ್ಲಿ ಕರುಣಾಳು, ಉದಾರಿ, ಔದಾರ್ಯವಂತ ಎಂಬ ಶಬ್ದಗಳ ಹಿಂದೆ ನೋವಿನಿಂದ ತುಂಬಿದ ಹೃದಯದ ವ್ಯಂಗ್ಯ ವ್ಯಕ್ತವಾಗಿದೆ.

ದೊಡ್ಡರಂಗೇಗೌಡರು ತಮ್ಮ ಹಲವಾರು ಚುಟುಕಗಳಲ್ಲಿ ತಮ್ಮನ್ನು ತಾವೇ ವಿಮರ್ಶಿಸಿಕೊಳ್ಳುತ್ತಾರೆ. ಸಫಲ-ವಿಫಲತೆಗಳನ್ನು ನಿಸ್ಸಂಕೋಚವಾಗಿ ಹೊರಗೆಡಹುತ್ತಾರೆ.

ಬುದ್ಧನಾಗ ಹೊರಟು ಬದ್ಧನಾದೆ
ಸಿದ್ಧನಾಗದೆ- ಕೊನೆಗೆ ಪೆದ್ದನೂ ಆಗದೆ
ರಕ್ತ ಮಾಂಸದ ಒಂದು ಮುದ್ದೆಯಾದೆ

ಎಂದು ಹೇಳುತ್ತಾ ನಾವು ನಿಮಿತ್ತ ಮಾತ್ರ, ವಿಧಿಯಾಟದ ಮುಂದೆ
ನಾವು ಬರೀ ಬೊಂಬೆಗಳು ಎಂದು ಹೇಳುವರು.

ಬೆಟ್ಟಗಳ ಬುಡದಲ್ಲಿ ಕಲ್ಲಾಗಿ ಕುಳಿತೆ
ಹತ್ತಿದವನಿಲ್ಲ ಇಳಿದವನಿಲ್ಲ
ಹೋಗಲಿ ಕುತೂಹಲಕ್ಕೆ ಕಲ್ಲು ಹೊಡೆದವನೂ ಇಲ್ಲ!

ಎಂಬಲ್ಲಿ ಪ್ರತಿಕ್ರಿಯೆಯೇ ಇಲ್ಲದ ಜನರನ್ನು ಕುರಿತು ಅವರ ಮನೋಭಾವವನ್ನು ಕುರಿತು ಹೇಳುತ್ತಾರೆ.

ಎನಿತು ದುಡಿದರೂ
ಮುಗಿಯಲ್ಲಿಲ್ಲ ಅಳಲ ಹಾಡು
ಒಂದೊಂದು ಹಾಡಿಗೂ
ನೂರೊಂದು ಬವಣೆ ಪಾಡು

ಕಾವ್ಯ ಕ್ಷೇತ್ರಕ್ಕೆ ಒಲಿದವನಿಗೆ ಸಿಗುವ ಪ್ರತಿಫಲವನ್ನು ಇಲ್ಲಿ ತಮ್ಮದೇ ಧಾಟಿಯಲ್ಲಿ ಮುಂದಿಡುತ್ತಾರೆ.

ಗೌಡರ ಚುಟುಕಗಳಲ್ಲಿ ಹಾಸ್ಯವೂ ಮನೆಮಾಡಿದೆ. ಆದರೆ ಅದು ಪೇಲವ ಹಾಸ್ಯವಲ್ಲ. ಗಂಭೀರತೆಯ ಹಿಂದಿನಿಂದಿಣುಕುವ ಹಾಸ್ಯವಾಗಿದೆ.

ಉದಾಹರಣೆಗೆ ಕೆಲವನ್ನು ನೋಡಬಹುದು.

ದುಶ್ಶಾಸನನ ಕೈಗೆ ಸಿಕ್ಕ
ದ್ರೌಪದಿಯ ಸೀರೆ
ಸಿನಿಮಾ ಕಾವ್ಯಧಾರೆ!

ಸಿನಿಮಾ ಸಾಹಿತ್ಯವನ್ನು ಅಳೆಯುವ ಚುಟುಕವಿದು.

ಪ್ರಾಯಬಂದರೆ
ನೂರು ಕಲ್ಪನೆ
ಪ್ರೇಮಕಾಮದ ಯೋಚನೆ
ವೃದ್ಧರಾದರೆ
ಎಲ್ಲ ಮುಗಿದು
ದೇವರು ದಿಂಡರ ಚಿಂತನೆ

ಎಂಬ ಚಟುಕದಲ್ಲಿ ಇಡೀ ಬದುಕಿನ ಅವಧಿಯ ವಿಶ್ಲೇಷಣೆಯಿದೆ.

ಹುಡುಗ ಕರೆದಾಗ
ಹುಡುಗಿ ಮುದುಡಿ ಹೋಗಿದ್ದಳು,
ಹುಡುಗಿ ನಕ್ಕಾಗ
ಹುಡುಗ ಮೂರ್ಛೆ ಹೋಗಿದ್ದನು.

ಇಲ್ಲಿ ಧೈರ್ಯವಿಲ್ಲದೆ ಹುಡುಗರ ಆಸೆ ಚುರುಕುತನವನ್ನು ಹಾಸ್ಯಲೇಪನದ ಬಾಷೆಯಲ್ಲಿ ಹೇಳಲಾಗಿದೆ.

ಅನಾಮಿಕರೆಲ್ಲ ಸೇರಿ
ಮಾಡಿದರು

ಬಡವರ ಮೇಳ
ದಿಕ್ಕಿಲ್ಲದವರೆಲ್ಲ ಕೂಡಿ
ಹಾಡಿದರು
ಅಳಲು ಹಿಮ್ಮೇಳ

ಇಂದಿನ ಸ್ವಾರ್ಥಿ ಜನರ, ರಾಜಕಾರಣಿಗಳ ಒಳಸಂಚುಗಳನ್ನು ಇಲ್ಲಿ ಸರಳವಾಗಿ ಅಷ್ಟೇ ವ್ಯಂಗ್ಯವಾಗಿ ಹೇಳುತ್ತಾರೆ.

ಹೆಂಡತಿಯೆಂದರೆ,
ಮಲ್ಲಿಗೆ ಜಲಧಿಯಲ್ಲಿ
ಕಾಲಿಗೆ ಕಟ್ಟಿಕೊಂಡ
ಕಬ್ಬಿಣದ ಗುಂಡು!

ಸಂಸಾರವೆಂದರೆ
ಸಂಸಾರ ಜೂನಲ್ಲ
ಜಿಂಕೆ ಮಕ್ಕಳು
ಗಂಡ -ಹೆಂಡತಿ
ಹುಲಿ - ಸಿಂಹಗಳು
ಸಂಸಾರದಲ್ಲಿ ಜಗಳಗಳು,
ಹಸಿರು ಕಣಿವೆಯಲಿ
ಅನಿರೀಕ್ಷಿತ
ಜ್ವಾಲಾ ಮುಖಿಗಳು,
ಅಕ್ಕರೆ ಬಾನಿನಲಿ
ಅಳಿಸದ
ಧೂಮಕೇತುಗಳು!

ಹೀಗೆ ದೊಡ್ಡರಂಗೇಗೌಡರ ಚುಟುಕುಗಳು ಅಧ್ಯಾಪಕ, ವಿಧ್ಯಾರ್ಥಿ, ರಾಜಕಾರಣಿ, ಹೆಂಡತಿ, ಸಂಸಾರ, ಮಕ್ಕಳು, ಸ್ನೇಹಿತರು, ಧರ್ಮ,ಜಾತಿ, ದೇಶ ಲಂಚ, ಪ್ರಾಮಾಣಿಕತೆ, ಪ್ರೀತಿ, ಕಾಮ ,ಸ್ವಾರ್ಥ, ತ್ಯಾಗ ಯುವಜನ, ಚೆಲುವು, ಹರೆಯ, ಮುಪ್ಪು, ಸ್ನೇಹ, ವೈರತ್ವ, ನಿರಾಸೆ, ಹೀಗೆ ಜೀವನದ ನಾನಾ ಮುಖಗಳನ್ನು ಗಂಭೀರವಾಗಿ ಹಿಡಿದಿಡಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ.

ಸುಮಾರು ಎರಡು ಸಾವಿರದಷ್ಟು ಬೃಹತ್ ಸಂಖ್ಯೆಯ ಇವರ ಎಲ್ಲ ಚುಟುಕುಗಳನ್ನು ಇಲ್ಲಿ ದಾಖಲಿಸುವುದು ಅಸಾಧ್ಯದ ಮಾತು. ಇಷ್ಟು ವಿಫುಲ ಸಂಖ್ಯೆಯಲ್ಲಿದ್ದರೂ ಅವುಗಳು ವಸ್ತು ವೈವಿಧ್ಯತೆ, ಭಾಷಾ ಪ್ರಯೋಗಕ್ಕೆ ಆಶ್ಚರ್ಯವುಂಟಾಗುತ್ತದೆ. ದೊಡ್ಡರಂಗೇಗೌಡರ ಒಟ್ಟು ಚುಟುಕ ಸಾಹಿತ್ಯವನ್ನು ಈ ಕೆಳಗಿನಂತೆ ವಿಶ್ಲೇಷಿಸಿಸಬಹುದು.

ಮೊದಲನೆದಾಗಿ, ಪ್ರಾಸದ ದಾಸರಾಗದೆ ಸಹಜವಾಗಿಯೇ ಭಾಷೆಯನ್ನು ದುಡಿಸಿಕೊಂಡಿರುವುದು.

ಎರಡನೆಯದಾಗಿ, ಕೇವಲ ವ್ಯಂಗ್ಯ ಟೀಕೆಗಳೇ ಗುರಿಯಾಗಿರದೆ ಚಿಂತನಯುಕ್ತ ಅಂಶಗಳನ್ನು ಮಿಂಚಿಸಿರುವುದು.

ಮೂರನೆಯದಾಗಿ ಚುಟುಕು ಸಾಹಿತ್ಯ ಕ್ಷೇತ್ರದಲ್ಲಿ ಮತ್ತೊಬ್ಬರನ್ನು ಅನುಕರಿಸದೆ ಸ್ವಂತಿಕೆಯ ಮುದ್ರೆಯನ್ನು ಒತ್ತಿರುವುದು. ನಾಲ್ಕನೆಯದಾಗಿ, ಯಾರೂ ಬಳಸದಷ್ಟು ವಸ್ತುವನ್ನು ಬಳಸಿರುವುದು. ಐದನೆಯದಾಗಿ, ಸರಳವಾದ ಪದಗಳಿಂದ, ಜನಸಾಮಾನ್ಯರಿಗೂ ಅರ್ಥವಾಗುವಂತೆ ರಚಿಸಿರುವುದು.

ಆರನೆಯದಾಗಿ, ದಿನಕರ ದೇಸಾಯಿಯವರ ಆದರ್ಶವಿದ್ದರೂ ಅವರಿಗಿಂತಲೂ ವಿಸ್ತಾರವಾಗಿ ಅನುಭವದ ಬಾಹುಗಳನ್ನು ಚಾಚಿರುವುದು.

ಚುಟುಕ ಸಾಹಿತ್ಯಕ್ಕೆ ತನ್ನದೇ ಆದ ಇತಿ-ಮಿತಿಗಳಿವೆ. ಈ ಮಿತಿಯಲ್ಲೇ ಅವು ಅರಳಬೇಕಾಗುತ್ತದೆ. ಇನ್ನಿತರ ಸಾಹಿತ್ಯ ಪ್ರಕಾರಗಳಿಗೆ ಬಳಸುವಂತಹ ವಿಮರ್ಶ ಮಾನದಂಡಗಳನ್ನು ಚುಟುಕ ಪ್ರಕಾರಕ್ಕೆ ಬಳಸ ಕೂಡದು. ಏಕೆಂದರೆ ಜನಸಾಮಾನ್ಯರನ್ನೇ ದೃಷ್ಟಿಯಲ್ಲಿಟ್ಟುಕೊಂಡು ಇವನ್ನು ರಚಿಸಲಾಗಿರುತ್ತದೆ ಇಂತದ್ದರಲ್ಲಿ ಹಲವು ವಿಮರ್ಶಕ ಮಾನದಂಡಗಳಿಂದ ಅಳೆದರೂ ಸಹ ದೊಡ್ಡರಂಗೇಗೌಡರ ಚುಟುಕು ಸಾಹಿತ್ಯ ಗೆಲುವನ್ನು ಪಡೆಯುತ್ತದೆ. ಅನೇಕ ದೃಷ್ಟಿಗಳಿಂದ ಚುಟುಕು ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡರಂಗೇಗೌಡರ ಸ್ಥಾನ ಹಿರಿದಾದುದಾಗಿದೆ.

## ಪೂರ್ವಾಗ್ರಹಗಳಿಲ್ಲದ ಸೃಜನ

✍ ಡಾ||ಎಸ್.ಪಿ. ಪದ್ಮಪ್ರಸಾದ್

ದೊಡ್ಡರಂಗೇಗೌಡರು ನಮ್ಮ ಯುವ ಪೀಳಿಗೆಯ ಜನಪ್ರಿಯ ಕವಿಗಳಲ್ಲೊಬ್ಬರು. ಈ ಜನಪ್ರಿಯತೆಗೆ ಅವರು ಸಿನಿಮಾಗಳಿಗೆ ಹಾಡುಗಳನ್ನು ಬರೆಯುವುದು. ಎಷ್ಟರ ಮಟ್ಟಿಗೆ ಕಾರಣವೋ ಅಷ್ಟೇ ತೂಕದ ಇನ್ನೊಂದು ಕಾರಣ ಇವರು ಮೊದಲಿನಿಂದಲೂ ಕವಿತೆಯನ್ನೇ ತಮ್ಮ ಮಾಧ್ಯಮ ಎಂದು ಗಂಭೀರವಾಗಿ ಪರಿಗಣಿಸಿಕೊಂಡು ಕಾವ್ಯ ಬರೆಯುತ್ತಾ ಬಂದಿರುವುದು.

ಬದುಕಿಗೆ ಸಂಪೂರ್ಣವಾಗಿ ತೆರೆದುಕೊಂಡು ಯಾವ ಪೂರ್ವಾಗ್ರಹಗಳೂ ಇಲ್ಲದೆ ಸ್ಪಂದಿಸುತ್ತಾ ಹೋದ ಒಂದು ಮನಸ್ಸು ತನ್ನ ಅನಿಸಿಕೆಗಳನ್ನು, ಅನುಭವಗಳನ್ನು ಪ್ರತಿಕ್ರಿಯೆಗಳನ್ನು ಅರ್ಥಗರ್ಭಿತವಾಗಿ ಹಾಗೂ ಕಲಾಪೂರ್ಣವಾಗಿ ಹಿಡಿದಿಡಬೇಕೆಂಬ ಹೆಣಗಾಟದಲ್ಲಿರುವುದು ದೊಡ್ಡರಂಗೇಗೌಡರ ಕಾವ್ಯದ ಉದ್ದಕ್ಕೂ ಕಂಡು ಬರುತ್ತದೆ.

# ಮಾವು - ಬೇವು

✍ ಜಿ. ಅಬ್ದುಲ್ ಬಷೀರ್
ಕನ್ನಡ ಪ್ರಾಧ್ಯಾಪಕರು

ಶ್ರೀ ದೊಡ್ಡರಂಗೇಗೌಡರು ಬಿ.ಎ. (ಆನರ್ಸ್) ಮತ್ತು ಎಂ.ಎ. ತರಗತಿಗಳಲ್ಲಿ (೧೯೬೭-೭೨) ನನ್ನ ಸಹಪಾಠಿಯಾಗಿದ್ದರು. ಅವರು ನಗುನಗುತ್ತಾ ಸ್ನೇಹಿತರನ್ನು ಬರಮಾಡಿಕೊಳ್ಳುವ ರೀತಿ ತುಂಬ ಮೆಚ್ಚುಗೆಯಾಗುತ್ತದೆ. ಅವರ ತೆರೆದ ಹೃದಯದ ಮಾತುಗಳು, ಆತ್ಮೀಯತೆ ಸರಳತೆ, ಮುಗುಳ್ನಗೆ ಅವರಿಗೇ ವಿಶಿಷ್ಟವಾದವು. ಅವರ ಕಾವ್ಯದಂತೆ ಅವರ ಮಾತುಗಳೂ ಸೋಪಜ್ಞತೆಯಿಂದ ಕೂಡಿರುತ್ತವೆ. ಅವರು ವಿದ್ಯಾರ್ಥಿದೆಸೆಯಲ್ಲಿ ಬರೆದ 'ಜಗಲಿ ಹತ್ತಿ ಇಳಿದು' ಎಂಬ ಕವಿತೆ ಹಾಗೂ ಉಲ್ಲಾಳ್ ಪಾರಿತೋಷಕ ನಾಟಕ ಸ್ಪರ್ಧೆಯ ವಿಮರ್ಶೆ ನನ್ನ ಕುತೂಹಲವನ್ನು ಕೆರಳಿಸುತ್ತಾ ಇವರು ಮುಂದೆ ಕಾವ್ಯಕೃಷಿಯಲ್ಲಿ ತೊಡಗಿ ಅಪೂರ್ವವಾದ ಕೃತಿಗಳನ್ನು ಸಾಹಿತ್ಯಲೋಕಕ್ಕೆ ಕಾಣಿಕೆಯಾಗಿ ನೀಡುತ್ತಾರೆಂಬ ನನ್ನ ನಂಬಿಕೆಯನ್ನವರು ಗಟ್ಟಿಗೊಳಿಸಿದರು.

ನವೋದಯ-ನವ್ಯಗಳೆರಡೂ ಪಂಥಗಳಲ್ಲಿ ಶ್ರಮಿಸುತ್ತಾ ಬಂದ 'ದೊರಂಗೌ' ಅವರು ಕಣ್ಣಿಗೆ ಹೊಡೆಯುವಂಥ ಕೃತಿಗಳನ್ನು ನಿರ್ಮಿಸಿದ್ದಾರೆ. ಮತ್ತಷ್ಟು ಬೆಳೆಯುವ ಭರವಸೆಯ ಕುಡಿಗಳು ಅವರ ಕೃತಿಗಳಲ್ಲಿ ಕಂಡುಬರುತ್ತವೆ; ಇದು ಆರೋಗ್ಯಕರವಾದ ಲಕ್ಷಣವೂ ಹೌದು, ಚಲನಚಿತ್ರ ಸಾಹಿತ್ಯ ರಚನೆಯನ್ನು ಒಳಗೊಂಡಂತೆ ವೈವಿಧ್ಯಮಯ ಪ್ರಕಾರಗಳಲ್ಲಿ ಈವರೆಗೆ ಅವರು, ಕೃತಿಗಳನ್ನು ಹೊರತಂದು ದಾಖಲೆಯನ್ನು ನಿರ್ಮಿಸಿದ್ದಾರೆ.

'ಬೇವುಂಡ' ಗೌಡರ ಬದುಕು 'ಮಾವನ್ನು' ಮಾಡಿಸಿದೆ. ಆದರೂ ಬದುಕಿನ ಬೇವಿನ ಕಹಿ ಅವರನ್ನು ಆಗಾಗ ಕಾಡುವುದೂ ಉಂಟು. ಅಲ್ಲದೆ ಮಾವಿನ ಸಿಹಿಯಲ್ಲಿ ಅದರ ಹೆಜ್ಜೆಗುರುತುಗಳು ಅಸ್ಪಷ್ಟವಾಗುತ್ತವೆ. ಇದಕ್ಕೆ ಗೌಡರ ಇತ್ತೀಚಿನ ಭಾವಗೀತೆಗಳ ಸಂಕಲನವಾದ 'ಮಾವು-ಬೇವು' ಎಂಬುದರಲ್ಲಿ ಸಾಕಷ್ಟು ಪುರಾವೆಗಳು ಸಿಗುತ್ತವೆ.

'ಮಾವು-ಬೇವು' ಭಾವಗೀತೆಗಳನ್ನೊಳಗೊಂಡ ಸಂಕಲನ 'ನೇಸರು ನಗುತಾನೆ' ಮೋಡಿಯ ಮಾಡಿದೋಳು ಎಂಬವೇ ಮುಂತಾದ ಅವರ ಸುಪ್ರಸಿದ್ಧ ಭಾವಗೀತೆಗಳು ಚಿತ್ರ ಸಾಹಿತ್ಯ ಜಗತ್ತಿನಲ್ಲಿ ಅವರಿಗೆ ಸಾಕಷ್ಟು ಕೀರ್ತಿ ತಂದಿವೆ. ದೇಸೀನಿಷ್ಠೆ, ಸಂಗೀತ ಸಹಾಯರ್ತ, ಅಂತ್ಯ ಪ್ರಾಸ, ಉಪಮೆ ರೂಪಕಗಳ ಸಹಜ ಬಳಕೆ, ನಿಸರ್ಗರಮ್ಯತೆ, ದಟ್ಟ ಜೀವನಾನುಭವಗಳನ್ನು ಸಹೃದಯರು ಪರಿಭಾವಿಸಬೇಕು.

"ತೇರ ಏರಿ ಅಂಬರದಾಗೆ ನೇಸರು ನಗುತಾನೆ
ಮರಗಿಡ ತೂಗ್ಯಾವೆ-ಹಕ್ಕೀ ಹಾಡ್ಯಾವೆ."

"ನೋಟದಾಗೆ ನಗೆಯ ಮೀಟಿ
ಮೋಜಿನಾಗೆ ಎಲ್ಲೆಯ ದಾಟಿ"

ಬದುಕಿನ ಬೇವು-ಬೆಲ್ಲದ ವಿಚಾರವನ್ನು ಹೇಳುವಾಗ ಗೌಡರು ಹರಿದಾಸರ ಕೃತಿಗಳ ಬಾಷೆ-ಬಂಧಗಳ ಪ್ರಭಾವೀಕ್ಕೀಡಾಗಿರುವುದು ಅಲ್ಲಲ್ಲಿ ಗೋಚರಿಸು ವುದುಂಟು; ಅದು ಸಹಜವೂ ಹೌದು.

ಮುಂಡಾಗಿ ಹೋದ ಬಂಡ ಬಾಳಿಗೆಲ್ಲ
ನೀ ರಂಗು ತಂದೆಯಲ್ಲ ..ಪ್ರೀತಿಯ
ಗಂಗು ಹಿಡಿಯುತಲ್ಲಾ ಪ್ರೇಮ ಸಿಂಧು : ಪುಟ : ೧೭

"ಗಾಳಿಗೊಡ್ಡಿದಾ ದೀಪದಂತೆ ನಮ್ಮ ಬಾಳುವೆ
ಅಗಲೋ ಈಗಲೋ ಆರುವಾ ತೋರುವಾ ಬಾಳುವೆ,"
ಇತಿ -ಮಿತಿ : ಪುಟ ೨೬

"ಸುಳಿಗೆ ಸಿಲುಕದ ನಾವೆಯಂತೆ ಇಹದ ಜೀವನ
ತೇಲುತಾ ಮುಳುಗುತಾ ಏಳುತ ಬೀಳುವ ಜೀವನ"
ಸುಳಿಗೆ ಸಿಲುಕಿದನಾವೆ : ಪುಟ ೫೭

ಗೌಡರ ತಾತ್ತ್ವಿಕ ನಿಲುವಿಗೆ ಮೇಲಿನ ಸಾಲುಗಳು ನಿದರ್ಶನವಾಗಿದೆ.

ಕಾವ್ಯದಲ್ಲಿ ಪ್ರಕೃತಿಸೌಂದರ್ಯ, ಪ್ರೇಮ, ದಾಂಪತ್ಯ, ನುಡಿ-ನುಡಿಗಳ ಅಭಿಮಾನ, ಒಗ್ಗಟ್ಟು, ನೈತಿಕ ಬದುಕಿನ ಬಗ್ಗೆ-ಹೀಗೆ ಹುವು ಹತ್ತು ವಿಷಯಗಳನ್ನು ಕುರಿತು ಕವಿತೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಪ್ರಭಾತಗೀತೆ', 'ರಂಗಾದ ಬೆಳಗು', 'ಬಂಗಾರದ ಬೆಳಗು', 'ಮೋಹಕ ಮುಂಜಾನೆ' ಎಂಬವೇ ಮುಂತಾದ ಕವಿತೆಗಳು 'ಬೆಳಗಿನ ಜಾವದ' ನಿಸರ್ಗದ ದಟ್ಟ ಸೌಂದರ್ಯವನ್ನು ಸೆರೆಹಿಡಿದಿವೆ:

"ಪೂರ್ವದಿಗಂತದಿ ನೇಸರು ಮೂಡಲು
ಬಾನೊಳು ತೆರೆಯಿತು ಹೊಂಬೆಳಕು,
ತಾವರೆ ಕೊಳದಲಿ ಹೂಗಳು ಅರಳಲು
ಮುತ್ತಿದಲ್ಲೊಮ್ಮೆಗೆ ದುಂಬಿಗಳು" (ಪ್ರಭಾತ : ಪುಟ - ೧)

'ಪ್ರೇಮಕ್ಕೆ ಕಣ್ಣಿಲ್ಲ' ವೆಂಬುದು ಸುಪ್ರಸಿದ್ಧ ಪುರಾಣ ಸೂಕ್ತಿ ಗೌಡರ ಬದುಕೂ ಇದಕ್ಕೆ ನಿದರ್ಶನವಾಗಿದೆ. 'ಪ್ರೀತಿ ಆತ್ಮ ಮೊರೆಯುತ್ತೈತೆ' (ಪುಟ : ೧೮) ಎಂಬ ಕವಿತೆಯಲ್ಲವರು ಎಳೆಎಳೆಯಾಗಿ ಅದನ್ನು ಬಿಡಿಸಿ ತೋರಿಸಿದ್ದಾರೆ:

"ಬಾಳಿನಾಂಗೆ ಒಂದು ಸಾರಿ ಪ್ರೀತಿ ಹುಚ್ಚು ಹಿಡಿಯುತೆಂದ್ರೆ
ಕಣ್ಣಿನಾಗೆ ಆಸೆಕಿಚ್ಚು ಕನಸಿನಾಗೂ ತುಂಟತೊಂದ್ರೆ!"

'ಐಕ್ಯಗಾನ'ವೆಂಬ ಭಾವಗೀತೆಯ ಮೇಲೆ ಡಾ. ಜಿ. ಎಸ್. ಶಿವರುದ್ರಪ್ಪನವರ ಕವಿತೆಯೊಡನೆ ಪ್ರಭಾವಿತವಾಗಿದ್ದರೂ ಸಹೃದಯರ ಮನಸೆಳೆಯುತ್ತದೆ. ಪ್ರದೇಶ, ಭಾಷೆ, ಜಾತಿಗಳ ಹೆಸರಿನಲ್ಲಿ ನಮ್ಮ ದೇಶದಲ್ಲಿ ನಡೆಯುತ್ತಿರುವ ಕಚ್ಚಾಟಗಳು ಕವಿಯ ಮನಸ್ಸನ್ನು ರೊಚ್ಚಿಗೇಡುಮಾಡದೆ ಶಾಂತ ರೀತಿಯಲ್ಲಿ ಚಿಂತಿಸಿ ಒಗ್ಗಟ್ಟಿನ ನಾದತರಂಗಗಳನ್ನು ಹೊಮ್ಮಿಸಿದ್ದಾರೆ.

"ಎಂದೆಂದೂ ನಾವೊಂದೇ!
ನಮ್ಮಯ ಜನಗಣವೊಂದೇ!"

ಮತ ಧರ್ಮಗಳ ಸಾವಿರವಾದರೂ ಮಾನವತೆಯು ಒಂದೇ ಎಂಬಂಥ ವಿಚಾರಗಳು ಯಾವತ್ತಿಗೂ ಹೊಸವೇ. ಹೆಚ್ಚು ಪ್ರೇಮಗೀತೆಗಳನ್ನೊಳಗೊಂಡ ಈ ಕವನಸಂಕಲನ ಬಾಳಿನ 'ಏಳು-ಬೀಳು' (ಪುಟ-೨೦); 'ನೋವು-ನಲಿವು' (ಪುಟ-೨೧) 'ಬೇವು-ಬೆಲ್ಲ' (ಪುಟ-೩೬)ಗಳನ್ನು ಕುರಿತ ಹಲವಾರು ಕವಿತೆಗಳನ್ನೊಳಗೊಂಡಿದೆ.

ಈ ಕವನ ಸಂಕಲನದಲ್ಲಿ ಗೌಡರು ಕೆಲವು ಕಡೆ ಪ್ರಾಚೀನ ಕಾವ್ಯಗಳಲ್ಲಿ ಮತ್ತೆ ಮತ್ತೆ ಬಳಕೆ ಮಾಡುತ್ತಿದ್ದ 'ತಾವರೆ ಮುಖ, ಮಲ್ಲಿಗೆ ನಗೆ, ಮೀನಿನ ಕಣ್ಣು ಹಾವಿನ ಜಡೆ, ತೊಂಡೆ ತುಟಿ, ಸಂಪಿಗೆ ಮೂಗು, ಕಿತ್ತಾಳೆಕೆನ್ನೆ, ದಾಳಿಂಬೆ ದಂತ, ಬಳ್ಳಿಯ ನಡು, ಹಂಸದ ನಡೆ' ಎಂಬುವೇ ಮುಂತಾದ ಶಬ್ದಸಮೂಹವನ್ನು ತಂದಿರುವುದುಂಟು. ಇದು ನವೋದಯ ಕಾವ್ಯದ ಒಂದು ಮಾದರಿ, ಸ್ಫೂರ್ತಿ ಸೆಲೆಯ ನೆಲೆಗಳು. ಇವು ಹಳೆಗನ್ನಡ ಹಾಗೂ ನವೋದಯಕಾವ್ಯದಲ್ಲಿ ಬಳಕೆಯಾಗುತ್ತಿದ್ದ ಈ ಶಬ್ದಗಳ ಉಪಮೆ-ರೂಪಕಗಳ ಜೊತೆ ಗ್ರಾಮೀಣ ಶಬ್ದಕೋಶವೇ ಗೌಡರ ಕಾವ್ಯದಲ್ಲಡಗಿದೆ. ರೊಪ್ಪ, ಹೈಕಳು, ಓಣಿ, ಕಾಲುವೆ, ಮುಲುಕು, ಮೂಡು, ಬಾನು ಮೀಟು, ಮೋಡಿ, ಮೆಟ್ಟು, ತೋಪು, ಇತ್ಯಾದಿ. ಮಾವು-ಬೇವು ಸಂಕಲನದಲ್ಲಿರುವುದು ಭಾವಗೀತೆಗಳ ಸುಂದರ ಮಾದರಿಗಳು, ಎಲ್ಲವೂ ಸ್ಪಷ್ಟ, ಅಸ್ಪಷ್ಟಗಿಲ್ಲಿ ಎಡೆಯೇ ಇಲ್ಲ, ಧ್ವನಿರಮ್ಯಮಾತುಗಳಿಗೇನೂ ಇಲ್ಲಿ ಕೊರತೆಯಿಲ್ಲ. ದೊಡ್ಡರಂಗೇಗೌಡರ ಪ್ರತಿಭೆ ಹೆಚ್ಚಿನದನ್ನು ಸಾಧಿಸುತ್ತದೆಂಬ ಭರವಸೆ ನನಗಿದೆ, ಅದನ್ನವರು ನೀಗಿಸಲಿ ಎಂದು ಹಾರೈಸುತ್ತೇನೆ.

## ಕಾವ್ಯೋಪಾಸಕ ದೊರಂಗೌ

✍ ಡಾ|| ಸಿದ್ಧಯ್ಯಪುರಾಣಿಕ

ಗೆಳೆಯ ದೊಡ್ಡರಂಗೇಗೌಡರಿಗೆ ಕಾವ್ಯೋಪಾಸನೆ ಆತ್ಮಬಲೋಪಾಸನೆಗೆ ಸಾಧನವಾಗಿ ತೋರಿದೆ.

'ಆತ್ಮ ಬಲದ' ಕೃತಿಗಳು ಹೆಚ್ಚಿದಷ್ಟೂ ಒದುಗರ ಆತ್ಮವಿಕಾಸಕ್ಕೆ ಅನುಕೂಲ. ಅವರ ಮುಕ್ತಕಗಳು ಓದುಗರಿಗೆ ಆತ್ಮಬಲವನ್ನು ನೀಡಬಲ್ಲವುಗಳಾಗಿವೆ.

ಇದಕ್ಕಾಗಿ ಕೃತಿಯಿಂದ ಕೃತಿಗೆ ಬೆಳೆಯುತ್ತಾ ನಡೆದಿರುವ, ಎತ್ತರಕ್ಕೆ ಏರುತ್ತ ನಡೆದಿರುವ ಸತ್ಕವಿಯನ್ನು ಅಭಿನಂದಿಸುತ್ತೇನೆ.

# ಹೃದಯದಿಂದ ಹೊರಚಿಮ್ಮಿದ 'ಮಣ್ಣಿನ ಮಾತುಗಳು'

✍ ಪ್ರೊ|| ಎನ್.ಶ್ರೀನಿವಾಸ ಉಡುಪ

ಆಧುನಿಕ ಕನ್ನಡ ಕಾವ್ಯದ 'ವಸಂತಮುಖವನ್ನು' ಪರಿಭಾವಿಸುತ್ತಾ ಕವಿ ಅಂಬಿಕಾತನಯದತ್ತರು - 'ನೂರು ಮರ ನೂರು ಸ್ವರ, ಒಂದೊಂದು ಅತಿ ಮಧುರ, ಬಂಧವಿರದೆ ಬಂಧುರ, ಸ್ವಚ್ಛಂದ ಎಂದು ಉದ್ಗರಿಸಿದ್ದರೆ. ಶ್ರೀ ದೊಡ್ಡರಂಗೇಗೌಡರವರ ಮಣ್ಣಿನ ಮಾತುಗಳು ಎಂಬ ಮುಕ್ತಕಗಳ ಸಂಕಲನವನ್ನು ಓದಿದಾಗ ನನಗೆ ಮೇಲಿನ ಸಾಲು ನೆನಪಾಗುತ್ತದೆ. 'ಮಣ್ಣಿನ ಮಾತುಗಳು' ಎಂಬುದರಲ್ಲಿ ಸಂಕಲಿತವಾಗಿರುವ ೭೭೬ ಚೌಪದಿಗಳು ಸ್ವಚ್ಛಂದ ಸುಂದರ ಸುಂದರಾವಾದ, ಬಂಧರಹಿತವಾದ ಮುಕ್ತಕಗಳು. ನಾಲ್ಕು ಸಾಲುಗಳು ವಾಮನ ವಿನ್ಯಾಸದ ಮಿತಿಯಲ್ಲಿಯೇ ಹರಳುಗಟ್ಟಿರುವ ಇಲ್ಲಿಯ ಚಿಂತನೆಯ ಹರವು ವಿಸ್ತಾರ; ಅಳ ಗಹನ. ಬದುಕಿನ ಹಲವು ಹತ್ತುಮುಖಗಳ ಬಗೆಗೆ ಲೋಕ ಜೀವನದ ಋಜು ಕುಟಿಲತೆಯ ಬಗೆಗೆ, ವ್ಯಕ್ತಿ ಜೀವನದ ಏಳು ಬೀಳುಗಳ ಬಗೆಗೆ ಕವಿಯ ಚಿಂತನಾಲಹರಿ ಇಲ್ಲಿನ ಚೌಪದಿಗಳಲ್ಲಿ ಕೆನೆಗಟ್ಟಿದೆ.

ಗ್ರಾಮೀಣ ಜೀವನದ ಹಿನ್ನೆಲೆಯಿಂದ ಬಂದು, ಜೀವನಾನುಭವವನ್ನೇ ತಮ್ಮ ಕಾವ್ಯದ ಮೂಲದ್ರವ್ಯವನ್ನಾಗಿಸಿಕೊಂಡಿರುವ ದೊಡ್ಡರಂಗೇಗೌಡರ ಈ ಸಂಕಲನಕ್ಕೆ 'ಮಣ್ಣಿನ ಮಾತುಗಳು' ಎಂದು ಕರೆದಿರುವುದು 'ಮಣ್ಣಿನ ಮಗ' ಅಂಕಿತ ವಿರಿಸಿಕೊಂಡಿರುವುದು ನಿಜಕ್ಕೂ ಅರ್ಥಪೂರ್ಣ. ನಾಲ್ಕು ಸಾಲುಗಳ ಚೌಕಟ್ಟಿನೊಳಗೆ ರಚಿತವಾಗಿದ್ದರೂ, ಮುಕ್ತಕಗಳ ವಿನ್ಯಾಸ ಶಿವಶರಣರ ವಚನಗಳಿಗೆ ಹತ್ತಿರವಾದುದು.

ಮಂಕುತಿಮ್ಮನ ಕಗ್ಗ, ದೇಸಾಯಿಯವರ ಚೌಪದಿಗಳು ಇಲ್ಲಿಯ ರಚನೆಗಳಿಗೆ ಪ್ರೇರಣೆ ಸ್ಫೂರ್ತಿ ಎಂಬುದಾಗಿ ಕವಿ ಹೇಳಿಕೊಂಡಿದ್ದಾರೆ. ಆದರೆ ಇವು ಕೇವಲ ಅನುಕರಣೆಗಲ್ಲ. ಕವಿಯ ಸ್ವಂತಿಕೆ, ಚಿಂತನ ಶ್ರೀಮಂತಿಕೆ ಅಲೋಚನಾಸಂಪತ್ತು ಇಲ್ಲಿಯ ಬಿಡಿ ಪದ್ಯಗಳಲ್ಲಿ ಸುಸ್ಪಷ್ಟವಾಗಿ ಕಾಣಿಸಿಕೊಂಡಿವೆ. ಕಾವ್ಯಾನಂದ ಸಿದ್ದಯ್ಯ ಪುರಾಣಿಕರು ಹೇಳುವಂತೆ ಇಲ್ಲಿ ಕವಿ - 'ಮಣ್ಣಿನ ಮಗನಾಗಿ ಮಣ್ಣಿನಲ್ಲಿ ಮಲ್ಲಿಗೆಗಳನ್ನು ಅರಳಿಸಿದ್ದಾರೆ'. ಕವಿಯೇ ತಮ್ಮ ಬಗೆಗೆ ಒಂದು ಕಡೆ ಹೀಗೆ ಬರೆಯುತ್ತಾರೆ.

ಮಣ್ಣಿನ ಮಗ ನಾನು-ಮಂಕುತಿಮ್ಮನ ಶಿಷ್ಯ
ಕಣ್ಣುಕಂಡಂತೆಲ್ಲಾ ಬರೆಯುವೆನು ಭಾವ - ಭಾಷ್ಯ
ಕಣ್ಣಿನಾಚೆಗೂ ಇರುವ ಕಲ್ಪನೆಯ ಸಿರಿಲಾಸ್ಯ
ಬಣ್ಣಿಸಲು ಮಾತೆಲ್ಲ ರಮ್ಯ ಕಾವ್ಯ - ಮಣ್ಣಿನ ಮಗ

ಬಹುಶಃ ಸಂಕಲನದ ಎಲ್ಲಾ ಮುಕ್ತಕಗಳ ಒಟ್ಟು ಧೋರಣೆ, ಆಶಯಗಳನ್ನು ಸೂಚಿಸುವ ಈ ಚೌಪದಿ ಕವಿ ದೊಡ್ಡರಂಗೇಗೌಡರ ಎಲ್ಲ ಕೃತಿಗಳಿಗೂ ಅನ್ವಯವಾಗುವ ಕಾವ್ಯ ಪ್ರಣಾಳಿಕೆಯಂತಿದೆ.

ನನ್ನ ಅಭಿಪ್ರಾಯದಲ್ಲಿ ಕವಿಗಳೆಲ್ಲರಿಗೂ ಅತ್ಯಂತ ಅಗತ್ಯವಾಗಿರುವ ಮೂಲ ಪರಿಕರಗಳಲ್ಲಿ ವಿಸ್ಮಯಾನುಭವ ಒಂದು. ಜಗತ್ತಿನಲ್ಲಿ ಪ್ರಕೃತಿಯ ವಿವಿಧ ಮುಖಗಳನ್ನೂ, ಬದುಕಿನ ಬಗೆಬಿನ್ನಾಣಗಳನ್ನು ಬೆರಗುಗಣ್ಣುಗಳಿಂದ ಕಾಣುವ 'ಅರ್ಭಕದೃಷ್ಟಿ' ಇದ್ದಾಗ ಕವಿ ಚಿಂತನಶೀಲನಾಗುತ್ತಾನೆ; ಆತನ ಕಾವ್ಯಕ್ಕೊಂದು ಮೌಲಿಕತೆಯ ಆಯಾಮ ಒದಗುತ್ತದೆ ದೊಡ್ಡರಂಗೇಗೌಡರಲ್ಲಿ ಧಾರಾಳವಾಗಿರುವ ಈ ಬೆರಗಿನ ಭಾವ ಅವರ ಅನೇಕ ಮುಕ್ತಕಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ಉದಾರಣೆಗೆ 'ಬ್ರಹ್ಮಾಂಡ' ಎಂಬ ಮುಕ್ತಕದಲ್ಲಿ ಅವರು ಬರೆಯುತ್ತಾರೆ

ವೈವಿಧ್ಯಮಯ ವಿಶ್ವಸೃಷ್ಟಿಯ ಹಿನ್ನೆಲೆಯ ಬಗೆ ಎಂತೋ
ಇರುವಿಕೆ ಜಾಲದ ಹಿಂದಿನ ಅಪೂರ್ವ ನಿಯಂತ್ರಣವೆಂತೋ
ಕಂಡಷ್ಟು ನಿಗೂಢವಾಗುವೀ ಜಗದ ಪರಿಪರಿಯೆಂತೂ
ಬ್ರಹ್ಮಾಂಡದಾಳ ನಿರಾಳಗಳ ಬಲ್ಲವರಾರೋ -ಮಣ್ಣಿನ ಮಗ

'ಅದ್ಭುತ' ಎಂಬ ಇನ್ನೊಂದು ಚೌಪದಿಯಲ್ಲಿಯೂ ಇದೇ ಭಾವ ಉತ್ಕಟವಾಗಿ ಕಾಣಿಸಿಕೊಂಡಿದೆ.

ಅದ್ಭುತವು ಸಾವಿರವೋ ಈ ಜಗದ ಇರವಿನಲಿ
ವ್ಯೋಮವೂ ಅದ್ಭುತವೇ ಕಡಲೊಡಲೂ ಅದ್ಭುತವೇ
ಭೂಗರ್ಭ ನಿಕ್ಷೇಪ ಅತ್ಯಂತ ಅದ್ಭುತವೋ
ಶೋಧಿಸಲು ಈ ವಿಶ್ವವೇ ಅದ್ಭುತ - ಮಣ್ಣಿನ ಮಗ

ಬದುಕಿನ ತಲ್ಲಣಗಳನ್ನು ವೈರುಧ್ಯ ವೈಪರೀತ್ಯಗಳನ್ನು ಕುರಿತು ಮಣ್ಣಿನ ಮಗ ತನ್ನ ಅನೇಕ ಅನಿಸಿಕೆಗಳನ್ನು ಇಲ್ಲಿದಾಖಲಿಸಿದ್ದಾನೆ. 'ನಿಂದೆ ಕಾಣದ ನರನು ಎಲ್ಲಿಯಾದರೂ ಇಹನೇ' ಕಾಯದಲೂ ನೇಮವಿರಬೇಕು 'ಹೃದಯದ ಮಾತೆಲ್ಲ ಸೃಜನ ಶೀಲ', 'ಜಾಡುಸಿಕ್ಕದ ಗಣಿತ ಬಾಳಿಲ್ಲ', 'ಪಲಾಯನ ಜೀವನವಲ್ಲ' - ಎಂಬಂಥ ಅನೇಕ ನುಡಿ ಮೌಕ್ತಿಕಗಳಲ್ಲಿ ಚಿಂತನೆ ಹರಳುಗಟ್ಟಿ ಸಾರ್ವತ್ರಿಕ, ಸಾರ್ವಕಾಲಿಕ ಮೌಲ್ಯವನ್ನು ಪಡೆಯುತ್ತದೆ.

ಪ್ರೀತಿಯ ದೈವಿಕತೆಯನ್ನು ಪ್ರಸ್ತಾಪಿಸುವ ಮುಕ್ತಕಗಳು ಇಲ್ಲಿ ಬಹಳಷ್ಟು ಬಾರಿ ಕಾಣಿಸಿಕೊಂಡಿರುವುದು. 'ಪ್ರೀತಿಪ್ರಗಾಥ'ವನ್ನು ಬರೆದ ಕವಿಯಿಂದ ನಿರೀಕ್ಷಿಸಬಹುದಾದ ಸಂಗತಿ. 'ಒಲುಮೆಯಿಂದಲೇ ಗೆಲುವು' ಎಂದು ದೃಢವಾಗಿ ನಂಬಿರುವ ದೊಡ್ಡರಂಗೇಗೌಡರು ಪ್ರೀತಿಯ ಪ್ರವಾದಿಯ ಹಾಗೆ ವಿರುದ್ಧನಿಯಲ್ಲಿ ವಿಧ್ಯರ್ಥಕ ಭಾಷೆಯಲ್ಲಿ ಹೇಳುತ್ತಾರೆ -

ಪ್ರೀತಿಸು ಬದುಕನ್ನು; ಪ್ರೀತಿಸು ಜಗವನ್ನು
ಪ್ರೀತಿಸು ಜನರನ್ನು; ಪ್ರೀತಿಸು ವೃತ್ತಿಯನ್ನು
ಪ್ರೀತಿಸು ಗೌರವಿಸು; ನಿನ್ನ ದೇಶವನ್ನು
ಪ್ರೀತಿಯಿಂದೆಲ್ಲಾ ಗೆಲ್ಲೋ - ಮಣ್ಣಿನ ಮಗ

ವೈಯಕ್ತಿಕ ಬದುಕಿನಲ್ಲಿ ಪ್ರೀತಿ ಎಂಬುದು ಎಂಥ ಸಂಜೀವಿನಿಯೆಂಬುದನ್ನು ಕವಿಯ ಮಾತುಗಳಲ್ಲಿಯೇ ಕೇಳಬೇಕು -

ಪ್ರೀತಿಪೂರ ಹರಿಯಲು ಜಾತಿ - ಗೋಡೆ ನುಚ್ಚುನೂರು
ಸಂಗಾತಿ ಜೊತೆಗೆ ಬೆರೆಯಲು ಸಂತೋಷದ ಪ್ರೀತಿ-ತೇರು
ಬಡವತನದೇ ಮುತ್ತಿದರೂ ಪ್ರೀತಿ ಹೃದಯದ ಹಾಲು-ಕೀರು
ಪ್ರೀತಿ-ಬೇರು ಹೃದಯ ಕಿಳಿಯ ಆತ್ಮವಿಶ್ವಾಸ ಮೇರು -

ಮಣ್ಣಿನ ಮಗ

ಇತಿಹಾಸದುದ್ದಕ್ಕೂ ಮನುಷ್ಯ ಸುಖವೆಂಬ ಮರೀಚಿಕೆಯ ಬೆನ್ನು ಹತ್ತಿ ನಡೆದಿದ್ದಾನೆ. ಆದರೆ ಸುಖವೆಂಬುದು ಹೊರಗೆ ದೊರೆಯುವ ವಸ್ತುವಲ್ಲ, ಆದ್ದುದರಿಂದಲೇ ಕವಿ 'ಅಖಂಡ ಸುಖ ನಿನ್ನಂತರಂಗದೊಳಗೇ ಇದೆ' ಎನ್ನುತ್ತಾರೆ. ಈ ಅಭಿಪ್ರಾಯಕ್ಕೆ ಪೂರಕವಾಗಿಯೋ ಎಂಬಂತೆ

ಹುಲ್ಲುಗಾವಲಿಗಿಂತ ರತ್ನಗಂಬಳಿಬೇಕೆ?
ಹೊಂಗೆನೆರಳಿಗಿಂತ ಮೃದು ತಲ್ಪಬೇಕೆ?
ಚಿಲುಮೆ ಜಲಕ್ಕಿಂತ ತಂಪು ಪಾನೀಯ ಬೇಕೆ?
ಹಣ್ಣು ಹಂಪಲು ಪ್ರಕೃತಿ ಸ್ವರ್ಗ - ಮಣ್ಣಿನ ಮಗ

ಎಂದು ಬರೆಯುತ್ತಾರೆ. ನಿಜವಾದ ಮಣ್ಣಿನ ಮಗ ಪ್ರಕೃತಿಯ ಮಡಿಲಲ್ಲಿ ಪಡೆಯುವ ಆತ್ಮ ಸಂತೃಪ್ತಿ ಇದು.

ಒಟ್ಟಿನಲ್ಲಿ ನಿರಲಂಕೃತವಾದ ಭಾಷೆಯಲ್ಲಿ ಸಹಜೋಕ್ತಿಗಳಲ್ಲಿ ಹೊರ ಹೊಮ್ಮಿರುವ ಇಲ್ಲಿನ ಮುಕ್ತಕಗಳಲ್ಲಿ ಕವಿ ಪ್ರೀತಿಯ ಆರಾಧಕರಾಗಿ, ಪ್ರಕೃತಿ ಪೂಜಿತರಾಗಿ, ಸಮಾಜ ಸುಧಾರಕರಾಗಿ, ದಾರ್ಶನಿಕರಾಗಿ ಹಲವು ಹತ್ತು ವಿಧಗಳಲ್ಲೂ ಕಾಣಿಸಿಕೊಳ್ಳುತ್ತಾರೆ. ಛಂದಸ್ಸು, ಪ್ರಾಸ - ಮುಂತಾದ ಬಂಧನಗಳಿಲ್ಲದೆ ಅವರ ಚಿಂತನೆ, ಆಲೋಚನೆ, ಸಂವೇದನೆಗಳು ಇಲ್ಲಿನ ಮುಕ್ತಕಗಳಲ್ಲಿ ವಾಗ್ರೂಪವನ್ನು ಪಡೆದಿವೆ. ಮಣ್ಣಿನ ಮಾತುಗಳನ್ನು ಕನ್ನಡಕ್ಕೆ ನೀಡಿರುವ ಕವಿ ದೊಡ್ಡರಂಗೇಗೌಡರಿಂದ ಇನ್ನಷ್ಟು ಇನ್ನಷ್ಟನ್ನು ನಿರೀಕ್ಷಿಸಿದರೆ ನಿರಾಶೆಯಾಗಲಾರದು.

**ಪ್ರೀತಿ ಪ್ರಗಾಥ**

✍ ಡಾ|| ರಂ. ಶ್ರೀ. ಮುಗಳಿ

ದೊಡ್ಡರಂಗೇಗೌಡರ 'ಪ್ರೀತಿ ಪ್ರಗಾಥ' ಕಾವ್ಯದಲ್ಲಿ ಸ್ವಾನುಭವದ ನಿಗಿ ನಗಿ ಕೆಂಡದಲ್ಲಿ ಜನಿಸಿದ ಕಾವ್ಯವಿದೆ. ಇದರಲ್ಲಿಯ ಶೈಲಿ ಪ್ರಾಸ ಎರಡೂ ಸಹಜ ರಮ್ಯವಾಗಿವೆ.

# ದೊಡ್ಡರಂಗೇಗೌಡರ ಗೀತೆಗಳಲ್ಲಿ ವೈಚಾರಿಕತೆ

✍ ವಿದ್ವಾನ್ ಎಂ. ಶಿವಕುಮಾರ ಸ್ವಾಮಿ

"ಸಹೃದಯ ರಸಿಕರೇ - ಎಷ್ಟೇ ಆಗಲಿ ನಾನು ಒಬ್ಬ ಉಪ್ಪು-ಖಾರ ತಿನ್ನುವ ಮಾನವ. ಮುನ್ನೂರರವತ್ತೈದು ದಿನವೂನಾನು ನಿಸರ್ಗಧ್ಯಾನದಲ್ಲೇ ಇರಲಾರೆ; ಇದ್ದರೆ ಹೊಟ್ಟೆಪಾಡು? ಕೆಲಸಕ್ಕೆ ಹೋಗಲೇಬೇಕಲ್ವಾ! ಅಂದಮೇಲೆ ಪ್ರಾಪಂಚಿಕವಾಗಿ ನಾನು ಕರ್ತವ್ಯ ಮಾಡಲೇ ಬೇಕಲ್ವಾ" ಎಂದು ಪ್ರಮಾಣಿಕವಾಗಿ 'ಭಾವಭಾಗೀರಥಿ' ಪೀಠಿಕೆಯಲ್ಲಿ ದೊಡ್ಡರಂಗೇಗೌಡರು ಹೇಳಿಬಿಟ್ಟಿದ್ದಾರೆ. ಮನುಷ್ಯ ಪರಿಸ್ಥಿತಿಯ ಕೂಸಾಗಿರಬಹುದು; ಹಾಗೆಂದ ಮಾತ್ರಕ್ಕೆ ಅವನು ಎಲ್ಲಾ ಸಂದರ್ಭದಲ್ಲೂ ಪರಿಸ್ಥಿತಿಯೊಡನೆ ರಾಜಿಮಾಡಿಕೊಳ್ಳಲೇ ಬೇಕೆಂಬ ನಿಯಮವಿಲ್ಲ. ಕೆಲವೊಮ್ಮೆ ಪರಿಸ್ಥಿತಿಯ ಉಗ್ರ ಅನಿವಾರ್ಯತೆಯ ವಿರುದ್ಧ ಉಗ್ರವಾಗಿಯೇ ಅವನು ಆಸ್ಫೋಟ ಪ್ರಾಯೋಗಿಕವಾಗಿ ಬಾಂಬುಗಳ ಮೂಲಕವೇ ಆಗಬೇಕೆಂದಿಲ್ಲ; ಕವನಗಳ ಮೂಲಕ ಆಗಬಹುದು, ಕತೆ ಕಾದಂಬರಿಯ ಮೂಲಕವೂ ಆಗಬಹುದು, ಅಥವಾ ಕಷ್ಟ ಸುಖಗಳನ್ನು ಬೇರೆಯವರ ಜೊತೆ ಮಾತನಾಡಿ ಹಂಚಿಕೊಳ್ಳುವಾಗ ಬರುವ ಉದ್ವೇಗದ ವಾಕ್ ಪ್ರವಾಹಗಳಲ್ಲೇ ಆದರೂ ಇಂತಹ ಸಿಡಿಗುಂಡುಗಳು ದಾಳಿ ಇಡಬಹುದು ಇದು ಒಂದು ತರಹದ ರಣರಂಗ, ಇಲ್ಲಿ ಪದಗಳೇ ಉರಿಯುವ ಪಂಜುಗಳಾಗುತ್ತವೆ. ಮನಃಸ್ಥಿತಿಯ ತೀವ್ರತೆಯು ವಿವಿಧವಾದ ಆಯುಧದ ನಾನಾ ಪ್ರಕಾರದ ತಾಂಡವ ವಾಗುತ್ತದೆ. ಜೀವನದಲ್ಲಿ ಇದೇ ತೀರ ಅತಿಯಾಗಿ ವಿಜೃಂಭಣೆಗೊಂಡಾಗ ಕಾವ್ಯದ ಸೃಷ್ಟಿ ಎಂಬುದು ಕನಸಿನಲ್ಲೂ ಸಾಧ್ಯವಾಗದೇ ವ್ಯವಹಾರಿಕವಾದ ಅಡೆತಿಡ್ಡ - ಮುಗ್ಗಟ್ಟುಗಳು ನಮ್ಮನ್ನು ಕಪಿಮುಷ್ಟಿಯಲ್ಲಿ ಹಿಂಡಿ ಹಿಪ್ಪೆಮಾಡುತ್ತವೆ. ಅಂಥದ್ದರ ದಾಖಲೆಯನ್ನು ಕವಿಮಾಡಹೊರಡುವಾಗ ಅವನಿಗೆ ಒಂದಿಷ್ಟು ಎಚ್ಚರ ಅಗತ್ಯ, ಬರೆದದ್ದು ಪತ್ರಿಕಾವರದಿ ಆಗಕೂಡದು ಅಥವಾ ಸಲ್ಲದ-ಒಲ್ಲದ ಕನಸುಗಳ ಬಣ್ಣವೂ ಆಗಬಾರದು, ಬಾಲಸದೃಶ ಮುಗ್ಧತೆಯು ಕವನದಲ್ಲಿರುವುದು ಅಪಾಯಕಾರಿಯಲ್ಲ, ಆದರೆ ಬಾಲಿಶಕ್ರಮ ಕವನದಲ್ಲಿರುವುದು ಕವಿಯ ಬೌದ್ಧಿಕ ಬೆಳವಣಿಗೆಗೆ ಆತಂಕಕಾರಿಯಾಗಬಲ್ಲುದು.

ಹಲವಾರು ದಶಕಗಳಿಂದ ದೊಡ್ಡರಂಗೇಗೌಡರು ಏರಿರುವ ಎತ್ತರವು ಅವರ ಕ್ರಮಬದ್ಧವಾದ ಕಾವ್ಯಸೃಷ್ಟಿಯ ಅಭ್ಯಾಸದ ಫಲವಾಗಿದೆ ಸರಳತ್ವದಲ್ಲೇ ಗಾಂಭೀರ್ಯವು ಅವರ ಕವನಗಳಲ್ಲಿ ಹಾಸುಹೊಕ್ಕಾಗಿರುತ್ತದೆ. ಸಮುದ್ರದ ತೆರೆಗಳು ಕಾಣಲಿಕ್ಕೆ ಬಹಳ ಆಕರ್ಷಕ; ಆದರೆ ಆ ತೆರೆಗಳು ಉತ್ಪತ್ತಿಯಾಗಲು ಕಾರಣವಾದ ಮೇಲಿನ ಗಾಳಿಯ ಒತ್ತಡದಲ್ಲಿನ ರಭಸಗಳೆಷ್ಟುತರಹ! ಸಮುದ್ರದ ಅಂತರಾಗದ ಮೇಲ್ನೂಕುಗಳೆಷ್ಟು ವಿವಿಧ!! ಕೆಲವೊಮ್ಮೆ ಆ ಬಿಗಿತ ಹಾಗೂ ಈ ತಳ್ಳುವಿಕೆ ಅತಿಯಾಗಿ ಸುಂದರ ಹಂಸ ಪಕ್ಷಿ ನೃತ್ಯ ಸದೃಶ್ಯ ಸಮುದ್ರತರಂಗವು ಬಚ್ಚೊರಿದು ಆರ್ಭಟ ಮಾಡುತ್ತದೆ

ಬಾರಿ ಹಡಗುಗಳನ್ನು ಆಟದ ಕಾಗದದ ದೋಣಿಗಳಂತೆ ತೂಗುಯ್ಯಾಲೆಯಾಡಿಸಿಬಿಡುತ್ತದೆ.

ದೊಡ್ಡರಂಗೇಗೌಡರ 'ಚದುರಂಗದ ಕುದುರೆಗಳು' ಇಂಥದ್ದೇ ನೆನಪನ್ನು ರಭಸವಾಗಿ ನುಗ್ಗಿಸುತ್ತದೆ. ಚದುರಂಗದ ಆಟದಲ್ಲಿ ಕುದುರೆಯು ವಕ್ರವಾಗಿ ನಡಿಗೆಯನ್ನುಳ್ಳದ್ದು; ಅರ್ಥಾತ್ ಎರಡು ಮನೆ ಮುಂದೆ ಹಾಗೂ ಒಂದು ಮನೆ ಪಕ್ಕ. ಈ ಪಕ್ಕವೂ ಎಡಗಡೆಯೂ ಆಗಬಹುದು; ಬಲಗಡೆಯೂ ಆಗಬಹುದು. ಹೀಗಾಗಿ ಇವನು ಗಾಳಿಬಂದಾಗ ಎಲ್ಲೆಂದರಲ್ಲಿ ತೂರಿಕೊಳ್ಳಬಲ್ಲ ಸಮರ್ಥ ಸಾಧಕ 'ಚದುರಂಗದ ಕುದುರೆಯೇ' ಸರಿ. ರಾಜಕೀಯವ್ಯಕ್ತಿಗಳ ಆಟವನ್ನು ನೋಡಿ ರೋಸಿದ ಕವಿಯೊಬ್ಬನಿಂದ ಇಂತ ಮಾತನ್ನು ಕೇಳಬೇಕಾದಷ್ಟು ಅದೋಗತಿಗೆ ನಮ್ಮ ರಾಜಕಾರಣಿಗಳು ಇಳಿದಿರುವುದು ಅತ್ಯಂತ ಶೋಚನೀಯವಾದ ಸಂಗತಿ.

ಮತ್ತೆ 'ನೆತ್ತರು ಬರೆದ ನುಡಿಗಳು'-ಮತ್ತಿನ್ನೇನು? ಆ ಶೀರ್ಷಿಕೆಯೇ ಧ್ವನಿಪೂರ್ಣವಾಗಿ, ಧ್ವನಿ ರಮ್ಯವಾಗಿದೆ. "ಕರಿಮಣ್ಣಿನ ಕಣಕಣದಲ್ಲಿ ಬೆವರು ಬಸಿವ ರೈತನ ರಟ್ಟೆಗಳಲ್ಲಿ".... ಎಂಬ ಸಾಲೇ ಕವಿಯ ವೈಚಾರಿಕತೆಯ ಒಡಲಾಳದ ಕಿಚ್ಚನ್ನು ತೋರಿಸುತ್ತದೆ. ದಲಿತತ್ವದ ಬೀಜವು ಈ ಕವನದ ಪಂಕ್ತಿ, ಪಂಕ್ತಿಯಲ್ಲೂ ವೈಚಾರಿಕ ಸತ್ಯವನ್ನು ಉತ್ಪತ್ತಿಮಾಡುತ್ತದೆ.

ಜೀವನದ ಸಂಕೀರ್ಣತೆಗಳಿಗೆ ಬೇಸತ್ತು ಬೆದರಿ ಸನ್ಯಾಸ ತೆಗೆದುಕೊಂಡು ಜೀವನದ ಆಸೆಯನ್ನು ಹತ್ತಿಕ್ಕಲಾರದೆ, ಉಳಿಯಲಾರದೆ, ಸಾಯಲೂ ಆಗದೆ ಮೇಲಿಂದ ಕೆಳಗೆ ಉರುಳಿ ಪಜೀತಿಪಡುವವರು ಕೆಲವರು. ಮತ್ತೆ ಕೆಲವರು ಚಿಪ್ಪಿನೊಳಗೆ ಹುದುಗಿಕೊಳ್ಳುವ 'ಆಮೆ'ಗಳಂತಾಗುವರು. ಆದರೆ ಯಾವ ರೀತಿಯಲ್ಲಿ ನೋಡಿದರೂ ಸಹಾ ಧೀರತನದಿಂದ ಮುನ್ನುಗ್ಗಿ ಕಷ್ಟಗಳನ್ನು ಎದುರಿಸಿ ಕರ್ಮವನ್ನು ಸಾಗಿಸುತ್ತ ಧೀಮಂತಿಕೆಯನ್ನು ಮೆರೆದಾಗಲೇ ನಿಜವಾದ ಮಾರ್ಗ ಗೋಚರಿಸುವುದು ಮಾತ್ರವಲ್ಲದೆ, ಸಮಸ್ಯೆಗಳ ಪರಿಹಾರ ಸಿಕ್ಕುವುದು ಎಂಬ ಸಲಹೆಯನ್ನು ಕವಿ 'ಕರ್ಮಮಾರ್ಗ'ದಲ್ಲಿ ಕೊಟ್ಟಾಗ ವೈಚಾರಿಕತೆಯ ಪ್ರತಿಸ್ಪಂದನ ಝಲ್ಲೆಂದು ನಮ್ಮ ಎದೆಯನ್ನು ತಾಕಿ ನಾಡಿ ಮಿಡಿಸದೇ?

'ಗೆಮ್ಮೆ'ಯು ಒಂದು ರೀತಿಯಲ್ಲಿ ವೈಚಾರಿಕತೆಯ 'ಗೆಮ್ಮೆ'ಯೇ ವಂಶನುಗತ ವ್ಯಕ್ತಿಗಳು. ತಾರುಮಾರಾಗುವ ಇಂದಿನ ದಿವಸಗಳಲ್ಲಿ ವಿವಿಧ ರೀತಿಯ ವಿಶೇಷ ಜ್ಞಾತಗಳು ದಿನಕ್ಕೊಂದು ಹುಟ್ಟಿಸುತ್ತವೆ. ಕೆಲವು ಬೆಳಿಗ್ಗೆ ಹುಟ್ಟಿ ಸಂಜೆ ಸಾಯುತ್ತವೆ. ಹಾಗೆಂದು ಹಳೆಯದೆಲ್ಲವನ್ನು ಹಾಗೆಯೇ ಉಳಿಸಿಕೊಳ್ಳಬೇಕೆಂದು ಅನ್ನುವುದು ಅಸಾಧ್ಯ. ಆದರೆ ಇಂದಿನ ಕಸುಬು ಗಾಂಭೀರ್ಯವೆಂದು ಹೊಟ್ಟೆಪಾಡಿಗೆಂದು ಅವಲಂಬಿಸಿ ವಿವೇಕ ಅದನ್ನೇ ಮುಂದುವರಿಸಿ ಭಾವುಕತೆಯ ಲಹರಿಯನ್ನು ಅವಕಾಶವಿದ್ದಾಗ ತೇಲಿಬಿಡುವ Balance ಬಹಳ ಮುಖ್ಯ. ಇದು ಅತಿರಂಜಿತ ಬಾವೋತ್ಕಟತ್ವವನ್ನು ಯಾವಾಗಲೂ ತಲೆಯಲ್ಲಿ ತುಂಬಿಕೊಂಡು ಅದರ ಮೇಲೆ ಅವಲಂಬಿತರಾಗಿ ಉದ್ಯೋಗಾಧಿಗಳನ್ನು ಪೂರ್ಣ ಮರೆಯುವ 'ಕನಸು ರಾಜ-ರಾಣಿ'ಯರಿಗೆ ನೀಡಿದ ವೈಚಾರಿಕ ದಿಕ್ಸೂಚಿಯಾಗಿದೆ.

'ನೆನಪಿನ ಗಂಗೆಯ ತಾಪವಾಗೆ'
ಬದುಕುವುದೇ ಹೇಗೆ...
ಚಿತ್ತ ಭೂಮಿಕೆಯೊಳಗೆ ಸಿಡಿಗುಟ್ಟುತ್ತಿದೆ
ಅಗ್ನಿ ಕುಂಡದ ಕೆನ್ನಾಲೆಗೆ (ಸಿಡುಗುಟ್ಟುತ್ತಿದೆ ಕೆನ್ನಾಲಿಗೆ)

ಇದು ಕವಿಯ ಅತಿ ತೀಕ್ಷ್ಣವಾದ ಪ್ರತಿಕ್ರಿಯಾತ್ಮಕ ಖಡ್ಗ. ವೈಚಾರಿಕತೆಯ ಕತ್ತಿ ಅತಿ ಹರಿತವಾದುದ್ದು, ಅದು ಯಾರನ್ನು ಸೀಳಲೆಂದು ನೋಡುತ್ತಿಲ್ಲ. ಆದರೆ ಅದರ ದೃಷ್ಟಿಗೆ ಬಿದ್ದವರು ಕಪ್ಪುತನದ ಪಿಶಾಚತ್ವವನ್ನು ಬಿಳಿತನದ ದೈವತ್ವದ ಸೋಗಲಾಡಿತನದ ಹಿಂದೆ ಅಡಗಿಸಿಕೊಂಡಾಗ ತನಗೆ ತಾನೇ ತೀರಾ ಮೊನಚಾಗಿ ಬಿಡುತ್ತದೆ. ಅದನ್ನು ಓದಿದವರ ಹೃದಯವು ದಮಗುಟ್ಟುವುದನ್ನು ಏಕಏಕಿ ನಿಲ್ಲಿಸಿ ಬಿಟ್ಟು ದುಮುಗುಡಲು ಪ್ರಾರಂಭಿಸುತ್ತದೆ.

ಪಟ್ಟಣದ ಕಣಕಣಗಳಲ್ಲೂ ಊಸರವಳ್ಳಿ ತನ ಬೆರೆತಿದೆಯೆಂದು ತೋರುತ್ತದೆ. ಇದು ನಿಜವಾಗಿ

‘ಹೇಳಿಮಾಡಿಸಿದಲ್ಲ ಹಳ್ಳಿಗರಿಗೆ’
ಹೇಳಿಕೊಟ್ಟಿದ್ದಲ್ಲ ಡಿಲ್ಲಿಗರಿಗೆ (ನಮ್ಮಂತವರಿಗಲ್ಲ ಈ ಪಟ್ಟಣ)

ಇನ್ನೂ ವೈಚಾರಿಕ ಪ್ರಜ್ಞೆಯಾಧೀವಂತರಿಗೆ ಬೇರೆ ಧೀಮಂತನ ದೀಮಂತಿಕೆ ಗೋಚರವಾಗುವ ಪರಿಣಿಸಿದೆ

“ಭರತ ಭೂಮಿಯ ಸ್ಥಿತಿಯು ಬನ್ನದೊಳು ಬೇಯುತ್ತಿರಲು
ಹೊಳೆವ ಹೊನ್ನೆಸೇರಂತೆ ಬಂದೆ ನೀನು!”

ನಿಜವೇ! ವಿವೇಕಾನಂದರು ಅನೇಕ ವೈಚಾರಿಕರ ಹೃದಯದಲ್ಲಿ ನೂರಾರು ವೈಚಾರಿಕತೆಯ ಎಚ್ಚರದ ಚಂದ್ರವಾದಂಥ ಧೀಮಂತ ವ್ಯಕ್ತಿ. ಕಷ್ಟ ಕೋಟಗಳೊಳಗೆ ಸಿಕ್ಕಿ ನಜ್ಜುಗುಜ್ಜಾದಾಗ.

‘ನೂರು ಕಷ್ಟ ಬಂದರೂನು
ಧೈರ್ಯದಿಂದ ನಡೆದೆ ನಾನು’ (ಸಾಹಸ ಗೀತೆ)

ಎಂಬ ರೀತಿಯ ರಣಭೇರಿಯನ್ನು ಹೃದಯ ಯುದ್ಧರಂಗದಲ್ಲಿ ಮೊದೊಳಿಸಲು ಕವಿಗೆ ಸಾಧ್ಯವಾಗುವುದು ಈ ದಿಟಟತನದ ವಿಚಾರದಿಂದಲೇ

ಇನ್ನು ವೈಚಾರಿಕ ಗೀತವನ್ನೇ ಬರದಂತೆ ದೊಡ್ಡರಂಗೇಗೌಡರಿಗೆ ‘ನವನವೀನ ತರುಣರು’ ಕಾಣಿಸುವುದು ಹೀಗೇ.

ಮೌಢ್ಯಗಳಿಗೆ ಕೊಳ್ಳಿ ಹಿಡಿದು
ವಿಜ್ಞಾನದ ಜ್ಯೋತಿಉರಿದು
ಅಂತಸ್ತಿನ ಪರದೆ ಹರಿದು
ವ್ಯಕ್ತಿಪೂಜೆ ಕೋಟೆಬಿರಿದು....
ನವಚಿಂತನ ಕರೆದರು, ಜಡ್ಡು ಬದುಕು ತೊರೆದರು
ಹರಿದರೋ ಹರಿದರೋ....ತನು ವಿಚಾರ ಬಿರಿದರು.

# ಬಿರುಬೇಸಗೆಯಲ್ಲಿ ತಂಗಾಳಿ
# ಪ್ರೀತಿ ಪ್ರಗಾಥ

✍ ಡಾ. ಎ. ಎಸ್ ವೇಣುಗೋಪಾಲರಾವ್

'ಪ್ರೀತಿ' ಎಂಬ ಪುಟ್ಟಪದದ ಯೋಗಮಾಯೆ ಅದೆಷ್ಟು ಗಹನ, ಅದೆಷ್ಟು ವಿಸ್ತೃತ, ಅದೆಷ್ಟು ಸಂಕೀರ್ಣ! ಹೀಗಾಗಿ ಪ್ರೀತಿ ಪುಟ್ಟಪದವಾದರೂ ಅದರ ಕಥೆ ಪ್ರಸಿದ್ಧ, ಪ್ರಚೋದಕ ಪ್ರಭೋದಕ, ಪ್ರಖರ, ಪ್ರಗಾಥ. ಅಂತೆಯೇ ಪ್ರೀತಿಯ ಕಥೆ ಒಂದು ಪ್ರಗಾಥವೇ ಸರಿ. ಅದನ್ನು ಕುರಿತು ಹಾಡದ ಕವಿಯುಂಟೆ ವಿಶ್ವ ಸಾಹಿತ್ಯದಲ್ಲಿ? ಅಪಕ್ವ ಕವಿಯಲ್ಲಿ ಅಶ್ಲೀಲವೋ ಅತಿ ಹಗುರವೋ ಆಗಿ ಬಿಡಬಹುದಾದ ಈ ವಸ್ತು ನಮ್ಮ ತಾಜಾ ಕವಿ ದೊಡ್ಡರಂಗೇಗೌಡರ ಲೇಖನಿಯಲ್ಲಿ ಪ್ರಬುದ್ಧವೂ ಪ್ರಸನ್ನ ಗಂಭೀರವೂ ಆಗಿ ಹರಿದಿದೆ, ಅವರ 'ಪ್ರೀತಿ ಪ್ರಗಾಥ'ದಲ್ಲಿ.

ಘನವಾದ ವಸ್ತು ಘನವಾದ ಶೈಲಿ ಸುದೀರ್ಘಕಥನ, ಸುಸಂಬದ್ಧ ವಿಚಾರಧಾರೆ ಉತ್ಸಾಹ ಪೂರ್ಣ ಲಯ ಅನಿಯತ ಛಂದಸ್ಸು. ಇವು ಪ್ರಗಾಥದ ಲಕ್ಷಣ. "ಗಂಭೀರವಾದ ಮತ್ತು ತೀವ್ರೋದ್ರೇಕವುಳ್ಳ (ಆದರೆ) ಅನಿಯತರೂಪವಲ್ಲದ ಉತ್ಸಾಹ ಗತಿ, ಕವಿಯ ಉತ್ಸಾಹ ಹರಿದೆಡೆಗೆ ಹಾಯಿಯಾಗಲಿ, ಹುಟ್ಟಾಗಲೀ ಇಲ್ಲದೆ ತೇಲಿ ಹೋಗುತ್ತದೆ" ಎಂಬುದು ಪ್ರಗಾಥದ ವ್ಯಾಖ್ಯಾನ. ಇಂಥ ದೀರ್ಘ ಕವನ ಪ್ರಕಾರ ಷೆಲ್ಲಿ ಕೀಟ್ಸ್ ಮುಂತಾದ ಆಂಗ್ಲಕವಿಗಳ ಮಾದರಿಯನ್ನು ಅನುಸರಿಸಿದರೂ ನಮ್ಮದೇ ಎನಿಸುವಷ್ಟು ಸ್ವತಂತ್ರವಾಗಿ ಕನ್ನಡನವೋದಯದ ಸಿರಿಪ್ರವಾಹದಲ್ಲಿ ಹರಿದು ಬಂದಿತು. ಬಿ.ಎಂ.ಶ್ರೀ ಅವರ ಕನ್ನಡ ತಾಯಿನೋಟ, ಶುಕ್ರಗೀತೆ, ಶ್ರೀ ಕುವೆಂಪು ಅವರ ಸ್ವಾತಂತ್ರ್ಯೋದಯ ಪ್ರಗಾಥ, ಡಾ|| ಬೇಂದ್ರೆಯವರ ಸಖೀಗೀತ, ಶ್ರೀ ಪುತಿನ ಅವರ ನಾಡಿನಳ್ಕರೆ, ಈ ಪ್ರಕಾರದಲ್ಲಿ ಹೆಸರಿಸಬಹುದಾದ ಕೆಲವು ಪ್ರಗಾಥಗಳು. ಇವುಗಳಲ್ಲಿ ಬೇಂದ್ರೆಯವರ ಕವನವನ್ನುಳಿದು ಇತರ ಗೀತೆಗಳು ನಾಡು-ನುಡಿಯನ್ನು ಕುರಿತವು. ದಾಂಪತ್ಯದ ಕಟು-ಮಧುರ ಆಖ್ಯಾಯಿಕೆಯೇ ವಸ್ತುವಾದ "ಸಖೀಗೀತ"ದ ವಸ್ತು ಪ್ರೀತಿಯೇ. ಶ್ರೀ ದೊ.ರಂ.ಗೌ. ಅವರ ಪ್ರೀತಿ ಪ್ರಗಾಥವೂ ಹಾಗೆಯೇ.

## 2

ಹೆಣ್ಣು ಗಂಡಿನ ಆಕರ್ಷಣೆ ನಿಸರ್ಗ ಸಹಜ ಪ್ರವೃತ್ತಿ. ಅದು ಎಷ್ಟು ಮೋಹಕವೂ ಅಷ್ಟು ತೀವ್ರವಾದದ್ದು. ಸಸ್ಯ ಜಗತ್ತಿನಿಂದ ತೊಡಗಿ ಮನೋದೇಹಿಯಾದ ಮಾನವನವರೆಗೆ ಹಬ್ಬಿ ತಬ್ಬಿರುವ ಈ ಆಕರ್ಷಣೆಯಲ್ಲಿ ರತಿಯೇ ಸ್ಥಾಯಿ. ಶೃಂಗಾರವೇ ರಸಸ್ಥಾನ. ಮೂಲ ಭೂತವಾಗಿ ದೇಹಸಿಷ್ಠವಾದ ಕಾಮವೇ ಆದರೂ ಅದು ಸ್ಫುರಿಸುವ ಭಾವದ ತುಂತುರುಗಳು ಅದರಾಚೆಯ ಜಗತ್ತನ್ನು ಆರ್ದ್ರವಾಗಿಸುತ್ತದೆ. ಆತ್ಮದ ನಿರಂತರ ಹಸಿವನ್ನು ಕೆರಳಿಸುವ ಸಂತೈಸುವ

ತಣಿಸುವ ಪ್ರಬಲ ಶಕ್ತಿಯೇ ಈ ಪ್ರೀತಿ. ಜಗತ್ತಿನ ತಂದೆ ತಾಯಿಯಿಂದ ಶಿವ-ಶಿವಾನಿಯರನ್ನು ಮರುಳು ಮಾಡಿದ ಮಹಾಶಕ್ತಿ ಅದು. ಕಾಮದಹನದಲ್ಲಿ ಸುಟ್ಟರೆಯಾಗಿ ಭಸ್ಮವಾದ ಮನ್ಮಥ ಅನಂಗನಾದ. ಸತ್ತು ಅಮರನಾದ! ಶ್ರೀ ಕುವೆಂಪು ಸಾರ್ಥಕವಾಗಿ ನುಡಿದಂತೆ. "ತನುವಿಲ್ಲದುದರಿಂದ ಸರ್ವತನು ತಾನಾಗಿ ಜಗವನಾಳುತಿಹ" ಮಹಾಭೂತ ಈ ಮನ್ಮಥ. ಅವನ ಪ್ರಚೋದನೆಯಿಂದಲೇ ಸೃಷ್ಟಿ ವ್ಯಾಪಾರ. ದೇಹದ ಹಸಿವಿನಿಂದ ದೇಹಾತೀತ ಆತ್ಮ ವಿಸ್ತಾರದವರೆಗೆ ಅದರ ಬೆಳವಣಿಗೆ. ಸತ್ಸಂತಾನದಲ್ಲಿ ಅದರ ಸಾರ್ಥಕತೆ. ಅದರ ಜನಪ್ರಿಯತೆ - ಕವಿ ಜನ ಪ್ರಿಯತೆ ಎಂದಿಗೂ ಹಚ್ಚ ಹಸಿರಾಗಿಯೇ ಉಳಿದಿರುವುದು ಪ್ರೀತಿಯ ಯೋಗಮಾಯ ರಹಸ್ಯವೇ ಸರಿ.

ಪ್ರಣಯ ಪ್ರಪಂಚವನ್ನು ಕಾವ್ಯವಾಗಿಸುವುದು ಸುಲಭದ ಮಾತೇನಲ್ಲ. ಶೀಲ ಅಶ್ಲೀಲತೆಗಳ ಲಕ್ಷ್ಮಣಗೆರೆ ಇಲ್ಲಿ ತುಂಬ ಸೂಕ್ಷ್ಮ ಅದು ಎಲ್ಲಿ ಬೇಲಿದಾಟುತ್ತದೆ. ರಾವಣ ಸಂನ್ಯಾಸದಲ್ಲಿ ವಿಜೃಂಭಿಸಿ ವಿಕೃತವಾಗುತ್ತದೆ ಹೇಳುವುದೇ ಕಠಿಣ. ಕವಿ ಪ್ರತಿಭಾವ್ಯಾಪಾರವೊಂದೇ ಅದರ ಸೂಕ್ಷ್ಮತೆಯನ್ನು ರಹಸ್ಯವನ್ನು ಬೇದಿಸಬಲ್ಲದು. ಪೇಲವತೆ ಭಾವಶಬಲತೆ ಅದರ ಒಂದು ಅತಿರೇಕವಾದರೆ ಲಂಪಟತೆ ಅದರ ಮತ್ತೊಂದು ಅತಿರೇಕ ಪ್ರಸನ್ನ ಗಂಭೀರವಾದ ಪ್ರಣಯ ಚಿತ್ರಣದಲ್ಲಿ ಶ್ರೀ ದೊ.ರಂ.ಗೌ. ನಿಜಕ್ಕೂ ಅದ್ಭುತ ಯಶಸ್ಸನ್ನು ಸಾಧಿಸಿದ್ದಾರೆ. ತಮ್ಮ ಪ್ರಗಾಥದಲ್ಲಿ ಪಟ್ಟಪಾಡೂ ಹುಟ್ಟು ಹಾಡಾಗಿ ಶ್ರೋತೃವಿನ ಹೃದಯವನ್ನು ಆರ್ದ್ರವಾಗಿಸುವುದರಲ್ಲಿ ಅದರ ಸಾರ್ಥಕತೆಯಿದೆ, ಪ್ರಣಯ ಬೀಜ ನೋಡನೋಡುತ್ತಾ ಅಂಕುರಿಸಿ ಪಲ್ಲವಿಸಿ ಮುಳ್ಳು ಕಂಟಿಗಳನ್ನು ಕವರಿಕೊಂಡು ಹಬ್ಬಿ ತಬ್ಬುತ್ತಾ ಹೂ ಹಣ್ಣುಗಳನ್ನು ಹೆರುವ ಸೊಬಗಿನಲ್ಲಿನ ಮಧುರಯಾತನೆ ಮನಸ್ಸನ್ನು ದ್ರವಿಸಿಬಿಡುತ್ತದೆ. ರಸ ಒಸರುತ್ತದೆ. ಶೃಂಗಾರದ ವಿಜಯ ಪತಾಕೆ ಗಗನ ಚುಂಬಿಯಾಗುತ್ತದೆ.

## 3

ಇಪ್ಪತ್ತೈದು ಪರ್ವಗಳಲ್ಲಿ, ಪ್ರತಿ ಪರ್ವ ರಸೋದಯವಾಗುವಂತೆ ಬೆಳೆದ ಈ ಪ್ರಗಾಥದ ವಸ್ತು "ಪ್ರೀತಿ ...ಪ್ರೀತಿ ಮತ್ತೆ ಪ್ರೀತಿ ! ಬೆಡಗಿನ ಗಂಧವಿಲ್ಲದ ಹಳ್ಳಿಯ ಹುಡುಗನ - ತುಡುಗನ ಹೃದಯವನ್ನು ನೋಡನೋಡುತ್ತಾ ಆಕೆ ಅಪಹರಿಸಿ ಬಿಟ್ಟಳು. ಪ್ರೀತಿಯ ಅಂಕುರವಾಯಿತು ಮಾತಿಗಿಂತ ಮೌನದ ನೋಟದ ಮೀಟು ಎಷ್ಟು ಚೆನ್ನ ಪ್ರೀತಿಸುರಿವ ಕಂಗಳಲ್ಲಿ ನೂರುಕಾವ್ಯ (೧). ಹೊಂದಾವರೆ ಬಿರಿದಂತೆ ಒಂದೊಂದೇ ಘಟನೆಗಳು ಮೀಟಿದಂಥಾ ಮಾತು ಮೋಹಕ. ಅಂಟಿದಂಥಾ ನಲ್ಮೆ ರಸಪಾಕದೆರಕ (೨), ಏಳೇಳು ಜನುಮದ ಅನುಬಂಧ. ಎಲ್ಲಿ ಚೆಲುವಿತ್ತು ಅಲ್ಲಿ ನೀನಿದ್ದೆ ಎಲ್ಲೆಲ್ಲಿ ಒಲವಿತ್ತು ಅಲ್ಲೆಲ್ಲಾ ನಾನಿದ್ದೆ (೩). ಸ್ನೇಹ ಚಳಿ ಬಿಟ್ಟಿತ್ತು, ಪ್ರೀತಿ ಹೂ ಕೊಟ್ಟಿತ್ತು (೪). ಭೇಟಿಗೆ ಕುಂಟುನೆಪ ಮಾತಿಗೆ ಏನೋ ಒಂದು ಸಣ್ಣ ಪೀಠಿಕೆ, ಆದೇ ಹೊತ್ತಿ ಉರಿಯುವ ಪ್ರೇಮ ಪ್ರದೀಪಿಕೆ (೫). ಬೆಳಗಾಗುವ ಮುನ್ನ ಗುಸುಗುಸು ಸುದ್ದಿ, ಅಲ್ಲಿ ಸುದ್ದಿ ಇಲ್ಲಿ ಸುದ್ದಿ ಎಲ್ಲೆಲ್ಲೂ ಬಿಸಿ ಬಿಸಿ ಸುದ್ದಿ, ಸುದ್ದಿ ಯಾದೆವು ನಾವು ಊರೊಳಗೆ (೬). ಕಂಡುಂಡ ನೋವುಗಳು ಒಂದಲ್ಲ ಎರಡಲ್ಲ, ತೊಡರಿದ ಬಳ್ಳಿಗಳೂ ಹೂವಿನದೇನಲ್ಲ, ಹೆಜ್ಜೆ ಇಟ್ಟಲೆಲ್ಲ ಬರಿ ಮುಳ್ಳು ಜಾಲಿ ಎತ್ತ ತಿರುಗಲಿ ನಾವು ಅಲ್ಲಿ ನೀತಿ ಬೇಲಿ (೭). ಕಷ್ಟಕ್ಕೆ ಆದವರು ಜೀವಗೆಳೆಯರು ಸೂರ್ಯಚಂದ್ರರ ಸಾಕ್ಷ ನಮ್ಮ ಪ್ರೇಮ ಪಯಣ. ಹತಾಶದಂಪತಿಗಳಿಗೆ ಸ್ನೇಹಿತರೇ ಸರ್ವ ಪರಿವಾರ. (೮). ಹೆಸರಿಗೆ ಮದುವೆಯಾಯ್ತು ಬದುಕು ರೊದನವಾಯ್ತು ಇರುಳೇ ಹಗಲಾಯಿತ್ತು ತುತ್ತು ತುತ್ತಿಗೆ (೯). ಸಾಲಗಳ ಶೂಲಗಳು ಬಡ್ಡಿಗಳ

ಬೆಟ್ಟಗಳು. ಅಣಕಿಸಿತ್ತು ಒಲವನ್ನೆ ವಾಸ್ತವದಲಿ ಗೆದ್ದಿತ್ತು ಒಲುಮೆಯದು ಹಿರಿಮೆಯಲ್ಲ (೧೦). ನಲ್ಮೆಗೆ ಇರಲಿಲ್ಲ ಬಡತನವು, ಪಾಡಿತ್ತು ಬಾಳಿನಲಿ, ಹಾಡಿತ್ತು ಹೃದಯದಲಿ ಎಲ್ಲಕ್ಕೂ ಮಿಗಿಲಾಗಿ .. ನಂಟಿತ್ತು ನಲ್ಮೆಯಲಿ (೧೧), ಎತ್ತು ಏರಿಗೆಳೆಯಲಿಲ್ಲ, ಕೋಣ ನೀರಿಗೆಳೆಯಲಿಲ್ಲ, ಕುಡಿಯೊಡೆದಿತ್ತು ಬವಣೆಪರ್ವದಲಿ ಭರವಸೆತೆನೆ (೧೨), ಒಂದೊಂದೇ ಹೆಜ್ಜೆ ಹತ್ತಿದೊಂದೊಂದು ಸೋಪಾನ ಹಿಂತಿರುಗಿ ನೋಡಲಿಲ್ಲ.ಬೆಟ್ಟದ ಮುಡಿ ಬೆಳಕಾ ಕಾಣಲು ಶ್ರದ್ಧಾ ಕಾರ್ಯದ ವಿಧಿ! (೧೩), ಅಕ್ಕರೆಯ ಮಿಸುನಿಹೊಳೆ ಹರಿದು ಸೆಳೆದು ಸದ್ಗೃಹಸ್ಥನಾದೆ ನಾನು, ಗೃಹಲಕ್ಷ್ಮಿಯಾಗಿ ಬೆಳೆದು ಬೆಳಗಿದೆ ನೀನು (೧೪), ಮನೆತುಂಬ ಜಿರಲೆಗಳು ಹರಿದಾಡಿದಂತೆ ಸಂಕಟದ ಗಳಿಗೆಗಳು, ತುಂಬಿದ ಬಸುರಿ ನೀ ಕಾಪಾಡುವರಿಲ್ಲ, ನನ್ನ ಬಗ್ಗೆ ನನಗೇ ಅಕ್ಕಸ, ನಿನ್ನ ಅರ್ತಿಯೊಂದೇ ಶುಭಾಶಯದ ಅಕ್ಷತ (೧೫). ಬಂದವರಿಗೆ ಹರಿದ ಚಾಪೆಯ ಆತಿಥ್ಯ, ಹೀಗಿದ್ದು ಬದುಕಿ ಉಳಿದದ್ದು ಸತ್ಯಸ್ಯ ಸತ್ಯ (೧೬), ಆನಂದಾಗ್ನಿ ಹೊತ್ತಿ ಉರಿದರೂ ನಮ್ಮೊಳಗೆ ಇತ್ತು ಅತ್ಯುಜ್ವಲ ಅರ್ತಿ, ದಂಡಿದಂಡಿ ಕಷ್ಟ ಮರೆತು ಸಾಗಿತ್ತು ಪ್ರೀತಿಯ ಬಂಡೀ (೧೭), ಬಹುವಚನವು ಏಕವಾಗಿ ಸರಸಹರುಷ ಹರುಷ, ನನಗೆ ನೀ ಪವಿತ್ರ ಪ್ರೀತಿ ಇಚ್ಛಾವತಿ ನಿನಗೆ ನಾ ನಿರ್ಮಲ ಭಾವಗಂಗೋತ್ರಿ (೧೮), ಎಲ್ಲ ಸಹಿಸಿ ಏರಿದರೆ ಸುಖದ ಜಟಾಜೂಟ, ನೆಮ್ಮದಿಯ ಮಾನಸ ಸರೋವರ (೧೯), ಗೆಳೆಯರಾಶುಭನುಡಿ ನನ್ನೆದೆಗೆ ಮಹಾಪೂರ, ಕಾಯಕದ ಸಂದರ್ಭ ಕತ್ತಿ ಅಲುಗಿನ ಮೇಲೆ (೨೦), ಲೇಬರ್ ವಾರ್ಡಿನ ಒಳಗೆ ಸಹಿಸಲಾಗದ ನೋವು ನಿನಗೆ ಕರುಳ ಕಿವಿಚುವ ಅಳಲು ನನ್ನಂಥ ಹಲವರಿಗೆ ಕೊನೆಗೊಬ್ಬಾಕೆ ಬಂದು ಹೇಳಿದಳು ನಿನಗೊಂದು ಮುದ್ದು ಮಗುವಾಯಿತೆಂದು, ಆತಂಕನಿಂತು ದಡಸೇರಿತ್ತು ಧೈರ್ಯದ ದೋಣಿ ನಿಂತಿತ್ತು ಮಳೆಯು ಆಗಿತ್ತು ಬೆಳಗು ಹೊರಗೆ ಹಕ್ಕಿ ಚಲಿಪಿಲಿ ದನಿ (೨೧). ಸಂತಸದ ಸಿರಿನವಿಲು ಜಾಗರವಾಡಿತು! ಬಂಗಾರ ರಥವೇರಿ ಬಾನೊಳಗೆ ಬಾಸ್ಕರ ಬಂದ. ಮಡಿಲಲ್ಲಿ ಕಂದಮ್ಮ ಕಣ್ ಬಿಟ್ಟು ಸಂತೋಷ, ಬಡತನದ ಬಾಗಿಲಿಗೆ ಬಾಗ್ಯದ ಸಿರಿ ಸರಸ (೨೨), ಸಿಕ್ಕಿತು ಮಗುವಿನಿಂದ ಮನೆಯ ಪರಿಧಿ ದೂರದೂರವಿದ್ದವರು ಬಾಗಿಲಿಗೆ ಬಂದರೋ ಸುದ್ದಿಕೇಳಿ ಅಕ್ಕರೆಯ ಮಗುವಿನಿಂದ ಸಕ್ಕರೆಯ ಸೇತುವೆಯಾಯ್ತು, ಪ್ರೀತಿ ಪ್ರಗಾಥಕ್ಕೆ ಹೊಸ ತಿರುವ ತಂತು (೨೨), ಪಾಡೆಲ್ಲ ಹಾಡಾಯಿತು! ಏಕಾಂಗಿ ನಾನೇನಲ್ಲ ನನ್ನ ಜೊತೆ ನನಗಿಹುದಲ್ಲ, ಏಕಾಂಗಿ ನೀನು ಅಲ್ಲ ಕಂದನ ಜೊತೆ ನಿನಗಿಹುದಲ್ಲ (೨೩), ಎಲ್ಲಾ ದ್ವಂದ್ವಗಳಾಚೆ ನಕ್ಕಿತ್ತು ಇರವು, ಪ್ರೀತಿ ಎಂಥ ಪ್ರಭಲ ಶಕ್ತಿ ಸಂಚಯ, ನಿನ್ನ ರಕ್ಷಿಸಿತ್ತು, ನಿನ್ನ ಆತ್ಮಶ್ರೀ ಬಿತ್ತು ಹೊಳೆಯುತ್ತಾ ನನ್ನ ಕಾವ್ಯಶ್ರೀ (೨೪), ವಿಷಗಳಿಗೆ ಮರೆಯಾಗಿತ್ತು, ಅಮೃತ ಘಳಿಗೆ ತೊರೆಯಾಗಿತ್ತು, ನನ್ನೆದೆಯ ಕಾವ್ಯ ಕಡಲುಕ್ಕಿ ಸಾವಿರದ ಸಂತೋಷ, ಪ್ರೀತಿ ಪ್ರಗಾಥಕ್ಕೆ ಯಾವತ್ತೂ ನವ ನವೋನ್ಮೇಷ (೨೫).

## 4

ಹೀಗೆ ಹರಿದಿದೆ ಸಾರ್ಥಕತೆಯ ಕಡಲತ್ತ ಈ ಪ್ರೀತಿ ಪ್ರಗಾಥ. ಪರ್ವ ಪರ್ವಗಳಲ್ಲಿನ ಕವಿಯ ಮಾತುಗಳನ್ನು ಹೀಗೆ ಕೋದರೂ ಸುಂದರ ಸುಸಂಬದ್ಧ ಅಖಂಡ ಪ್ರಗಾಥ. ಬಿಡಿಬಿಡಿಯಾಗಿ ಸವಿದರು ಚಪ್ಪರಿಸುವ ಬಳ್ಳಿ ದ್ರಾಕ್ಷಿ. ಇಲ್ಲಿನ ಉಪಮೆಗಳು ಅದಕ್ಕೂ ಮುಖ್ಯವಾಗಿ ಘನೀಭೂತವಾದ ರೂಪಕಗಳು, ಗಾಥ ಪ್ರತಿಮೆಯಾಗಿ ರಮ್ಯ ಮೌಲ್ಯವನ್ನು ಹೆಚ್ಚಿಸಿವೆ. ಇದು ಸ್ವಾನುಭವ ಕಥನದ ಕಟು ಮಧುರ ಅಖ್ಯಾಯಿಕೆ. ಇಲ್ಲಿ ನೋವು ನಲಿವಿನ ಮುನ್ಸೂಚನೆ. ಹೆರಿಗೆಯ ನೋವು

ದಿವ್ಯ ಮಧುರ ಯಾತನೆ. ಮುಂದೆ ಸುಖದ ಹೆರಿಗೆ. ಆನಂದ ಗಂಟು. ಕಳಚಿದ ಕೊಂಡಿಗಳ ಬೆಸುಗೆ. ಜಾತಿ-ಮತಗಳ ಕೃತಕ ಗೋಡೆಗಳನ್ನು ಕೆಡವಿದ ಸ್ನೇಹಸೇತುವೆ. ನಿರ್ಮಲ ಪ್ರಣಯದ ದಿಗ್ವಿಜಯದ ಪತಾಕೆ. ಈ ಅಸಿಕೇತನದ ಕೇತನ ಮುದಿ ಹೃದಯಗಳನ್ನು ಮುದಗೊಳಿಸುವಂತೆಯೇ, ತರುಣ ಹೃದಯಗಳಲ್ಲಿ ಶುಭ್ರ ಸುಂದರ ಆಸೆಗಳ ಕನಸುಗಳ ಕಾಮನಬಿಲ್ಲನ್ನು ಮಿಂಚಿಸಿ ಬಿಡಬಲ್ಲದು. ಈ ಪ್ರೇಮದ ಆಪ್ಯಾಯಿಕೆ ಪ್ರಣಯಿನಿಯೊಡನೆ ಸಲ್ಲಾಪ ಕಥನವಾಗಿ ತನ್ನ ಆತ್ಮೀಯತೆಯನ್ನೂ ಸ್ವಾದವನ್ನು ಹೆಚ್ಚಿಸಿಕೊಂಡಿದೆ. ಸಂತಾನದಿಂದ ದಾಂಪತ್ಯದ ಸಾರ್ಥಕತೆ ಎಂಬ ದರ್ಶನದಲ್ಲಿ ಈ ಪ್ರಗಾಥದ ನಿರ್ಮಲ ಶ್ರೀಮಂತಿಕೆಯಿದೆ. ಪ್ರಣಯದ ಪ್ರಜ್ವಲತೆ ಸುಂದರ ದಾಂಪತ್ಯದ ಸಿಹಿ ಬೆಳದಿಂಗಳಾದ ಈ ದಿವ್ಯದರ್ಶನದ ರುಚಿ - ಶುಚಿಗಳು ಸಮಾಜದ ಆರೋಗ್ಯಕ್ಕೆ ಅಗತ್ಯ ಸಂಜೀವಿನಿ. ಹೀಗಾಗಿ ಪ್ರೀತಿಪ್ರಗಾಥ ವೈಯಕ್ತಿಕ ನೆಲೆಯಿಂದ ಸಮಷ್ಟಿ ಕಲ್ಯಾಣದತ್ತ ಅಪ್ರಯತ್ನವಾಗಿಯೇ ಧಾವಿಸುತ್ತದೆ.

ಪ್ರಣಯ ಪ್ರಪಂಚದ ಕೋಮಲ ಸ್ತರಗಳ ಬಣ್ಣನೆಗೆ ಆಡಂಬರದ ಭಾಷೆ ಅನಾವಶ್ಯಕ. ನಿಜಕ್ಕೂ ಅದೊಂದು ತೊಡಕೇ ಆಗುತ್ತದೆ. ಅನೇಕ ಪ್ರಣಯ ಗೀತೆಗಳು ಸೋಲುವುದೇ ಈ ಅತೀ ವಿಜೃಂಭಿತ ಭಾಷೆಯಿಂದ. ಕೆ.ಎಸ್.ನ. ಅಂತಹ ವರಕವಿಗಳು ಈ ರಹಸ್ಯವನ್ನು ಬಲ್ಲವರಾದುದರಿಂದಲೇ ಅವರ ಪ್ರಣಯ ಕವನಗಳು ಅನನ್ಯ ಎನಿಸಿ ಬಿಟ್ಟವು. ಅತೀ ಸರಳವಾದ ಮಾತುಗಳಲ್ಲಿ ಅಪಾರ ಅರ್ಥವನ್ನು ಮಿಂಚಿಸುವ ಈ ಜಾಣ್ಮೆ ದೊಡ್ಡರಂಗೇಗೌಡರಲ್ಲೂ ಕಂಡುಬರುತ್ತದೆ.

ಪ್ರೀತಿಪ್ರಗಾಥದ ಒಂದೆರಡು ಸಾಲುಗಳನ್ನು ಗಮನಿಸಬಹುದು :

ಮೀಟಿದಂಥಾ ಮಾತುಮೋಹಕ
ಅಂಟಿದಂತಾ ನಲ್ಮೆ ರಸಪಾಕದೆರಕ (ಪುಟ ೧೨)

ಕೂತೆವು ನಿಂತೆವು ತಿಂದೆವು ಉಂಡೆವು
ಹರಿಯಿತು ಮಾತಿನ ಪ್ರೀತಿ -ಹೊಳೆ
ಆಯಿತು ಮುತ್ತಿನ ಕೊಡು-ಕೊಳೆ
ಸಿಕ್ಕಿತ್ತು ಪ್ರೀತಿಯ ಮೂಲ ಸೆಲೆ (ಪುಟ -೧೪)

ನೀನಿದ್ದಲ್ಲಿ ನಾನು
ನನ್ನಲ್ಲಿದ್ದೆ ನೀನು (ಪುಟ ೧೫)

ನಳನಳಿಸಿದೆ ನೀನು
ಪರಿತಪಿಸಿದೆ ನಾನು (ಪುಟ ೧೮)

ಇಂಥ ಧ್ವನಿರಮ್ಯತೆಯ ಉದಾಹರಣೆಗಳು ನೂರಾರು ದೊರೆಯುತ್ತವೆ - ನಿರಾಭರಣ ಸುಂದರ. ಕಂಡೂ ಕಾಣದ ಸವಿ ರೂಪಕ, ಇಲ್ಲವೆ ಸ್ವಭಾವೋಕ್ತಿ. ಅನುಕರಣೆಯ ಸೊಗಸನ್ನು ಅತಿಸಹಜವಾಗಿ ಸಾಧಿಸಿ ಬಿಡುತ್ತಾರೆ. "ಹದಿ ಹರೆಯ ಹರಿದಾಡಿ ..." ಇತ್ಯಾದಿ.

ಇಡಿಯ ಪಾದಜೋಡಿಯಲ್ಲಿ ಆದಿ-ಅಂತ್ಯ ಯಮಕವನ್ನು ಸಾಧಿಸಿ ಬಿಡುತ್ತಾರೆ. "ನನ್ನನ್ನು ನೀ ಅರಿತೆ, ನಿನ್ನನ್ನು ನಾ ಅರಿತೆ" ಇತ್ಯಾದಿ ಆದರ್ಶದ ಹಿಲಾಲು, ಮೆರೆಯುತ್ತಾ ಮೊರೆವ ಧೈತ್ಯ ಶಹರ, ಬಡ್ಡಿಯ ಬೆಟ್ಟ, ಪ್ರೀತಿ ಬಂಡಿ ಮುಂತಾದ ಸಶಕ್ತ ಸಾರ್ಥಕರೂಪಕಗಳು ಕಾವ್ಯಕ್ಕೆ ಸೊಗಸುಕೊಡುತ್ತವೆ. "ಅಂದು ರೋಮಿಯೋ ಇಂದು ನಾನು, ಅಂದು ಜೂಲಿಯೆಟ್ ಇಂದು ನೀನು" ಎಂಬ ತೀರ ಸರಳ

ವಾಕ್ಯಗಳು ಪ್ರಣಯದ ನಿರಂತರ ಮೊರೆತವನ್ನು ಜೀವ ಸೆಲೆಯನ್ನು ತಟ್ಟನೆ ಮನಸ್ಸಿನಲ್ಲಿ ಹರಡಿ ಬಿಡುತ್ತದೆ. "ಮನೆಯಲ್ಲಿ ಏನಿತ್ತೋ ಏನಿಲ್ಲವೋ ಮನದಲ್ಲಿ ಮಹಾಕಾವ್ಯವಿತ್ತು". ಎಂಬ ಸಾಲುಗಳನ್ನು ಕಿರಿದರೊಳ್ ಪಿರಿಯರ್ಥವನ್ನು ಮಿಂಚಿಸುವ ಜಾಣ್ಮೆಯನ್ನು ಮರೆಯಲಾದೀತೆ? "ಓ ನಲ್ಲೆ ನಿನ್ನ ಸೀರಿ ನಿರಿಗೆಯಲ್ಲೂ ನನ್ನ ಪ್ರೇಮದೆಳೆಯೇ" ಎಂಬ ರಾಗರಂಜಿತ ಕಾಮನಬಿಲ್ಲಿನ ಮೋಹಕ ಮಾಧುರ್ಯ ಕಾವ್ಯ ರಸಿಕನಿಗೆ ಜುಮ್ಮುತಟ್ಟಿಸುವ ಅನುಭವವಾಗಿ ಬಿಡುತ್ತದೆ. "ಎಣ್ಣೆ ತೀರಲಿಲ್ಲ ಬತ್ತಿ ಆರಿರಲಿಲ್ಲ." ಇದು ಸಾಕು ಮುಂದಿನ ಎರಡು ಸಾಲುಗಳು. "ಆಸೆ ಬತ್ತಿರಲಿಲ್ಲ ಕನಸು ಮುಗಿದಿರಲಿಲ್ಲ" ಎಂಬುದು ಧ್ವನಿರಮ್ಯತೆಗೆ ಭಂಗತರುವ ವಾಚ್ಯತೆಯಲ್ಲವೆ? ಕ್ಷತಾಂಕ, ಗಹ್ವರ, ಅಕಿಂಚನ, ಹೃದಯಾಬ್ಧಿ ಇಂಥ ಶಬ್ದ ವಿಜೃಂಭಣೆ ಅಲ್ಲಲ್ಲೆ ಕುಟುಕುವುದನ್ನು ಇಲ್ಲವೆನ್ನಲಾರೆ. ಆದರೆ ಹೊಂದಾವರೆ, ಸೆಲೆ, ಮೇಲಾಟ, ನಲ್ಬೇಟ, ಹೂಮಳೆ, ಈ ಮಾತುಗಳು ಮದ್ದುಗಾರಿಕೆ ಮನಸ್ಸನ್ನು ಮುದಗೊಳಿಸಿ ಬಿಡುತ್ತದೆ.

ಒಟ್ಟಿನಲ್ಲಿ ಈ ಕವಿಯಲ್ಲಿ ಭಾವದ ಸೌಕುಮಾರ್ಯ ಅಭಿವ್ಯಕ್ತಿಯು ಮಾಧುರ್ಯ ಸಮೃದ್ಧವಾಗಿದೆ. ರತಿ ಸ್ಥಾಯಿಯಾಗಿದ್ದೂ ಮನಸ್ಸು-ಲೇಖನಿ ಲಂಪಟತೆಗೆ ಒಲಿಯದಿರುವುದು ನಿಜಕ್ಕೂ ಆರೋಗ್ಯದ ಲಕ್ಷಣ. ಇಂದಿನ ಕಾವ್ಯ ಜಗತ್ತಿನ ಸ್ವೈರತೆಯ ದಿನಗಳಲ್ಲಿ ಅಪರೂಪದ ಗುಣವೂ ಹೌದು. ಬದುಕಿನ ಬವಣೆಗಳಿಂದ ಮನಸ್ಸನ್ನು ಕಹಿಯಾಗಿಸಿ ಕೊಂಡವರ ಕಾವ್ಯದಲ್ಲಿ ಕೊಲ್ಲುವ ಕೊಚ್ಚು ಹಸಿಯ ರೊಚ್ಚು ಅಸಹ್ಯ ಸಿನಿಕತನ ವಿಜೃಂಭಿಸಿ ಬಿಡುತ್ತದೆ. ನಿಜದಲ್ಲಿ ಅಂಥವರು ಪ್ರೀತಿಯ ಸಾಂತ್ವನ ಗುಣವನ್ನು ಸ್ವಾದವನ್ನು ಅಭಿವ್ಯಕ್ತಿಸಲಾರರು. ಹೂದಳವನ್ನು ಸೀಳುವ ಕೀಟಕ್ಕೆ ಅದರ ಮಕರಂದವನ್ನು ಸವಿಯುವ ರಸಿಕ ದುಂಬಿಯ ತುಂಬು, ಆನಂದದ ತುಳುಕು, ಅಸಾಧ್ಯ! ಪ್ರಿಯ ದೊ.ರಂ.ಗೌ. ಈ ಕೀಟ ಕರ್ಮದಿಂದ ಅಚ್ಚರಿಗೊಳಿಸುವಷ್ಟು ದೂರವಿದ್ದಾರೆ. ಅವರನ್ನು ಬೇಸಗೆಯ ಬೆಂಕಿಯ ನಡುವೆ ಬೀಸುವ ತಂಗಾಳಿ ಎನ್ನುತ್ತೇನೆ. ಈ ಚಿತ್ತಾಪಹಾರಕ ಚೈತ್ರ ಗುಣಕ್ಕೆ ಅವರನ್ನು ಮನಸಾ ಅಭಿನಂದಿಸುತ್ತೇನೆ ತಮ್ಮ ಮುಕ್ತಕಗಳಿಂದ ಮಿಡಿ-ಮಿನಿ ಕವನಗಳಿಂದ ಆಗಾಗ ಚೆಲ್ಲಾಟವಾಡುವ ಕವಿ, ಪ್ರೀತಿಪ್ರಗಾಥದಲ್ಲಿ ತುಂಬಾ ಆಳವಾದ, ಗಾಢವಾದ, ದೀಪ್ತಗುಣದಿಂದ ಹೊಸ ಭರವಸೆಗಳನ್ನು ಹುಟ್ಟಿಸಿದ್ದಾರೆ. ಕೆ.ಎಸ್.ನ ಕಾವ್ಯ ಮಾಧುರ್ಯ ಲಾಲಿತ್ಯಗಳೊಡನೆ ಬೇಂದ್ರೆಯವರ ಲಾವಣ್ಯ ಬೆಡಗುಗಳನ್ನು ಕಸಿ ಮಾಡಿ ಧ್ವನಿ ರಮ್ಯತೆಯ ಹೊಸ ಹೂವುಗಳನ್ನು ಬಿಡಿಸಬಲ್ಲ ಪ್ರತಿಭೆ ದೊ.ರಂ.ಗೌ. ಅವರದ್ದು. ಅವರ ಕಾವ್ಯ ಕೃಷಿ ನಿರಂತರವಾಗಿ ಹೀಗೆಯೇ ಹಸಿರು ಚೆಲ್ಲುತ್ತಿರಲಿ, ಬದುಕಿನ ಆಳ ಅಗಲಗಳನ್ನು ಹಬ್ಬಿ ತಬ್ಬುತ್ತಾ ಬೆಳೆಯಲಿ, ಎಂದು ಹಲವು ಹೃದಯಗಳ ಹಂಬಲ.

"ನೀನೀಗ ಪ್ರೌಢೆ, ಮಗುವಿನ ತಾಯಿ
ನಿನ್ನ ಜೋಗುಳ ಕೇಳಿ ನಾನೂ ಮಗುವಾದೆ"

ಹೀಗೆ ಬದುಕಿನ ಅಮ್ಮನಿಗೆ ತೆಕ್ಕೆ ಬೀಳುವ ಸ್ನಿಗ್ಧ ಮುಗ್ಧತೆ ಎಂದೂ ಮಾಸದಿರಲಿ. ಇಂದಿನ ವಿಕ್ಷುಬ್ಧ ದಿನಗಳಲ್ಲಿ ಇದೇನೂ ಸುಲಭವಾಗಿ ಸಾಧಿಸುವಂತಹುದಲ್ಲ. " ಇಳೆಯ ನಗುವೆಲ್ಲ ಮಗುವಾಗಿ ಬಂತೋ... ದಶಕಗಳ ನೋವ ಮಾಯಿಸಿತ್ತೋ" ಎಂಬ ಹರ್ಷದ ಉದ್ಗಾರದಲ್ಲಿ ಬದುಕಿನ ಸಕಲ ಸಿರಿಯೂ ಹೂ ಚೆಲ್ಲಿ ಬಿಡುತ್ತದೆ. ಹೆರಿಗೆ ಬೇನೆಯ ಉತ್ಕಟತೆಯಲ್ಲೇ ಕಾವ್ಯ ಕ್ರಿಯೆಯನ್ನು ಕೊನೆ (ಲೇ?) ಮಾಡದ ಈ ಕವಿಯ "ಸೃಜನ ಶೀಲತೆಯ

ಶೀಲಸೌಭಾಗ್ಯವನ್ನು ಶುಚಿಮನಸ್ಸನ್ನೂ ರುಚಿಶುದ್ಧಿಯನ್ನೂ ನಾನು ತುಂಬಾ ಗೌರವಿಸುತ್ತೇನೆ - ಹೌದು, ಪ್ರೀತಿಸುತ್ತೇನೆ. ಪ್ರೀತಿಪ್ರಗಾಥ ಮಹಾಕಾವ್ಯವಾಗಿ ವಿಸ್ತರಿಸಿ ಪೂರ್ಣತೆಯನ್ನು ಮೈಗೂಡಿಸಿ ಕೊಳ್ಳಲಿ, ಖಂಡ ಕಾವ್ಯ ಅಖಂಡವಾಗಿ ಬೆಳೆಯಲಿ. ಕನ್ನಡದ ಹೊಸ "ಡಾಂಟೆ" ಮೂಡಿಬರಲಿ - ದೊರಂಗೌ ಅವರಲ್ಲಿ ದಿವ್ಯಪ್ರೇಮದ ಆಧ್ಯಾತ್ಮವನ್ನು ಮೈಗೂಡಿಸಿ ಕೊಂಡು. ಅಂಬರದ ಬೆಳ್ಳಕ್ಕಿಗೆ ಗಗನವೇ ಗುರಿಯಷ್ಟೇ?

"ಒಲವಿಗೆ ಮೊದಲುಂಟು
ತುದಿಯೆಂಬುದೆಲ್ಲುಂಟು?".

## ರಮ್ಯದ ಭಾವುಕತೆ; ನವ್ಯದ ಭಾಷೆ

✍ ಬರಗೂರು ರಾಮಚಂದ್ರಪ್ಪ

ದೊಡ್ಡರಂಗೇಗೌಡ ಅವರು ನನ್ನ ಬಾಲ್ಯದ ಗೆಳೆಯರು, ಬದುಕಿನ ಬೇವುಬೆಲ್ಲಗಳನ್ನು ಸಮಚಿತ್ತದಿಂದ ಸ್ವೀಕರಿಸುತ್ತಾ ಸೃಷ್ಟಿಶೀಲತೆಯಲ್ಲಿ ತೊಡಗಿಸಿಕೊಂಡವರು ನಾನು ಸಾಹಿತ್ಯ ಕ್ಷೇತ್ರದಲ್ಲಿ ತೊಡಲುತ್ತಿದ್ದಾಗಲೇ ಸ್ಫುಟವಾಗಿ ಮಾತಾಡಲು ಕಲಿತಿದ್ದ ಇವರು ರಮ್ಯಕಾವ್ಯದ ಭಾವುಕತೆ ಮತ್ತು ನವ್ಯ ಕಾವ್ಯದ ಭಾಷೆಗಳನ್ನು ಬೆಸೆದುಕೊಂಡು ಬೆಳೆಯುತ್ತಾ ಬರುತ್ತಿದ್ದ ಆ ದಿನಗಳು ನನ್ನ ಮನಸ್ಸಿನಲ್ಲಿ ಅಚ್ಚೊತ್ತಿವೆ. ನನ್ನ ಬಾಲ್ಯದ ಗೆಳೆಯ ಬೆರಗುಗೊಳಿಸುತ್ತಾ ಬೆಳೆಯುತ್ತಿದ್ದುದನ್ನು ಆತ್ಮೀಯವಾಗಿಯೇ ನೋಡುತ್ತಾ ಬಂದ ನನಗೆ ಅವರ ಚಲನಚಿತ್ರ ಗೀತೆಯ ರಚನೆಯ ಸಮೃದ್ಧಿ ಜನಪ್ರಿಯತೆಯನ್ನು ತಂದು ಕೊಡುತ್ತಲೇ ಸಷ್ಟಿ ಶೀಲತೆಯ ಮೇಲೆ ಪರಿಣಾಮ ಬೀರಿದೆ

ದೊರಂಗೌ ಅವರ 'ಪ್ರೀತಿ ಪ್ರಗಾಥ'ವು ಆಂಗ್ಲ ಸಾಹಿತ್ಯದ 'ODE'ಗಳ ಮಾದರಿಯಲ್ಲಿ ರಚಿತವಾಗಿವೆ. ಹೆಸರೇ ಸೂಚಿಸುವಂತೆ ಪ್ರೀತಿ ಪ್ರೇಮಗಳ ಉತ್ಕಟ ಕ್ಷಣಗಳನ್ನು ಕಾವ್ಯದಲ್ಲಿ ಅರಳಿಸುವ ಆಕಾಂಕ್ಷೆಯಿಂದ ಬೆಳೆದ ಪ್ರಗಾಥವಿದು.

ಪ್ರೇಮದ ವಸ್ತು ಅತ್ಯಂತ ಹಳೆಯದು. ಆದರೆ ನಮ್ಮ ಸಮಾಜದಲ್ಲಿ ಪ್ರೇಮಕ್ಕೆ ಒದಗಿ ಬರುವ ಕಂಟಕಗಳು ಅದಕ್ಕೊಂದು ಸಾಮಾಜಿಕ ಆಯಾಮವನ್ನು ಒದಗಿಸುತ್ತವೆ.

ಪ್ರೇಮದ ಸರಳ, ನೇರ ನಿರೂಪಣೆಯಾಗಿ ಬೆಳೆಯುತ್ತಾ ಸಮಾಜಿಕ ಆಯಾಮ ಪಡೆಯುವುದೇ 'ಪ್ರೀತಿ ಪ್ರಗಾಥ'ದ ವಿಷೇಶ.

# ಅನುಭವಾಮೃತದ ಬಿಂದುಗಳು

✍ ಕೆ. ಎಂ. ಬಾಲಕೃಷ್ಣ ಭಟ್, ವಿದ್ವಾನ್
ಅಧ್ಯಾಪಕರು

ಮನಸ್ಸನ್ನು ರಂಜಿಸಿ, ನೀತಿಯನ್ನು ಬೋಧಿಸಿ ಸದಾಚಾರದಿಂದ ಬದುಕನ್ನು ವಿಕಾಸಗೊಳಿಸುವುದಕ್ಕೆ ಪ್ರೇರಣೆ ನೀಡುವುದೇ ಸಾಹಿತ್ಯದ ಪ್ರಮುಖ ಉದ್ದೇಶ. ಹಿತವನ್ನುಂಟುಮಾಡುವ ಶಕ್ತಿಯಿರುವುದನ್ನೇ ಸಾಹಿತ್ಯವೆಂದು ಕರೆಯುವುದು.

ಒಳ್ಳೆಯ ಮಾತುಗಳಿಗ 'ಸುಭಾಷಿತಗಳೆಂದು ಹೆಸರು. ವಿಫುಲವಾದ ಸುಭಾಷಿತಗಳರಾಶಿ ಸಂಸ್ಕೃತ ಸಾಹಿತ್ಯದಲ್ಲಿದೆ, ಸುಭಾಷಿತಗಳ ಮಹತ್ವವನನ್ನು ವಿವರಿಸುತ್ತ ಸಂಸ್ಕೃತ ಭಾಷೆಯಲ್ಲಿ ಸುಭಾಷಿತಗಳ ರಸಸದ ಪರಿಣಾಮದಿಂದ ಸಕ್ಕರೆ ಕಲ್ಲು ಸಕ್ಕರೆಯಾಯಿತು ಎನ್ನುತ್ತಾರೆ.

ಕನ್ನಡ ಭಾಷೆಯಲ್ಲಿಯೂ ಅನೇಕ ಸುಭಾಷಿತಗಳು ದೊರೆಯುತ್ತವೆ. ವಚನಗಳಂತೆ ಸುಭಾಷಿತಗಳಂತೆ, ಜಾನಪದ ಸಾಹಿತ್ಯದಂತೆ ಸರಳವಾಗಿ ಸರ್ವಜ್ಞನ ವಚನಗಳು, ಡಿ.ವಿ.ಜಿ.ಯವರ "ಮಂಕುತಿಮ್ಮನ ಕಗ್ಗ" ಎಸ್. ವಿ ಪರಮೇಶ್ವರ ಭಟ್ಟರ "ನುಡಿಮುತ್ತುಗಳು" ಎಂದೆನಿಸಿದ "ಇಂದ್ರಚಾಪ" ಮೊದಲಾದ ರಚನೆಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿವೆ ಎಂದರೆ ತಪ್ಪಾಗಲಾರದು. ದಿನಕರ ದೇಸಾಯಿಯವರ ಚುಟುಕಗಳು ಹಾಗೂ ಬಿಡಿಬಿಡಿಯಾದ ಪದ್ಯಗಳು ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮವನ್ನು ಒದಗಿಸಿವೆ. ಈ ಮೇಲೆ ಹೇಳಿದ ಸಾಹಿತ್ಯಗಳ ಮಾದರಿಯಲ್ಲಿ, ಸರಳವಾದ ಮಾರ್ಗದಲ್ಲಿ ಶ್ರೀ ದೊಡ್ಡರಂಗೇಗೌಡರು "ಮಣ್ಣಿನ ಮಾತುಗಳು" ಎಂಬ ಬಿಡಿ ಬಿಡಿಯಾದ ನಾಲ್ಕು ಸಾಲಿನ ಪದ್ಯಗಳಿರುವ ಸಂಕಲನವನ್ನು ರಚಿಸಿ ಪ್ರಕಟಿಸಿದ್ದಾರೆ, ಅನುಭವಾಮೃತ ಬಿಂದುಗಳಾಗಿ ಈ ಕೃತಿಯಲ್ಲಿರುವ ಪ್ರತಿಯೊಂದು ಪದ್ಯಗಳು ಶೋಭಿಸುತ್ತವೆ. ಓದುಗರ ಮೇಲೆ ವಿಶಿಷ್ಟವಾದ ಪರಿಣಾಮವನ್ನು ಬೀರುತ್ತವೆ.

ಆಕಾಶದಲ್ಲಿ ನಕ್ಷತ್ರಗಳು ಮಿನುಗುವಂತೆ ಪದ್ಯಗಳು ಮಿನುಗುತ್ತವೆ ಓದುಗರ ಮನಸ್ಸನ್ನು ನೇರವಾಗಿ ಪ್ರವೇಶಿಸಿ ತುಸುಹೊತ್ತು ಚಿಂತನ ಶೀಲರನ್ನಾಗಿ ಮಾಡುತ್ತವೆ. ನೀರು ತುಂಬಿದ ಕೊಳಗಕ್ಕೆ ಎಣ್ಣೆಯ ಬಿಂದು ಬಿದ್ದರೆ ಆ ಪಾತ್ರೆಯ ನೀರಿನಲ್ಲಿ ಅದು ಹರಡುವುದಿಲ್ಲವೆ? ಅದೇ ರೀತಿಯ ಪರಿಣಾಮ ಈ ಕವಿತೆಗಳಿಂದ ಉಂಟಾಗುತ್ತದೆ.

ಬುದ್ಧಿಯನ್ನು ಪ್ರಚೋದನೆಗೊಳಿಸಿ ಅಭಿವೃದ್ಧಿಯ ಪಥದಲ್ಲಿ ಮಾನವರನು ಮುನ್ನಡೆಯಲು ಪ್ರಚೋದನೆ ಕೊಡುವುದು ಸಾಹಿತ್ಯದ ಉದ್ದೇಶವಷ್ಟೆ. ಈ ಕೆಲಸವನ್ನು ದೊಡ್ಡರಂಗೇಗೌಡರ "ಮಣ್ಣಿನ ಮಾತುಗಳು" ಎಂಬ ಕೃತಿಯ ಪ್ರತಿ ಪದ್ಯಗಳೂ ಮಾಡುತ್ತವೆ. "ಕ್ರಿಯಾಸಿದ್ಧಿ ಸತ್ವಮೇ ಭವತಿ" ಎಂಬಮಾತನ್ನು ಗಮನಿಸಿದಾಗ ಹೊಗಳಿಕೆತೆಗಳಿಕೆಗಳಿಂದ ಯಾವುದೇ ಒಂದು ಕೃತಿಯ

ಗುಣಧರ್ಮವನ್ನು ನಿರ್ಣಯಿಸುವುದು ಸಾಧ್ಯವಲ್ಲ. "ಮಣ್ಣಿನ ಮಾತುಗಳು" ಕೃತಿಯಲ್ಲಿರುವ ಸುಶೋಭಿತವಾದ ಮುಕ್ತಕಗಳು ಚಿರಂತನವಾಗಿ ಕನ್ನಡ ಸಾಹಿತ್ಯಾಕಾಶದಲ್ಲಿ ನಕ್ಷತ್ರಗಳಂತೆ ಮಿನುಗಬಲ್ಲುವು ಎಂಬುದು ನಿರ್ವಿವಿದಾವೆಂದು ನನ್ನ ಖಚಿತವಾದ ಅಭಿಪ್ರಾಯ.

ಗೂಗೆಗಳ ಪರಿವೆಯ ಕಾಗೆಗಳ ಗಾಯನ
ಕೋಣಗಳ ಚೆಂದಕ್ಕೆ ಕತ್ತೆಗಳ ಮೌಲ್ಯಮಾಪನ
ದಡ್ಡರ ಸಾಹಸಕ್ಕೆ ಹೆಡ್ಡರದೆ ಗುಣಗಾನ
ಮೂರ್ಖರಿಗೆ ಮೂರ್ಖಪ್ರಿಯ - ಮಣ್ಣಿನ ಮಗ. (ಮೂರ್ಖರು)

ದೊಡ್ಡರಂಗೇಗೌಡರು 'ಮಣ್ಣಿನ ಮಾತುಗಳು' ಪುಸ್ತಕದಲ್ಲಿ ಬರೆದ ಒಂದು ಮುಕ್ತಕ. ಇದನ್ನು ಗಮನಿಸಿದಾಗ ಇಂದಿನ ಸಮಾಜದಲ್ಲಿ ಬುದ್ಧಿ ಜೀವಿಗಳ ಬಗ್ಗೆ ಹಾಗೂ ಮೂರ್ಖರ ಬಗ್ಗೆ ಇರುವ ಭಾವನೆಗಳನ್ನು ಚಿತ್ರಿಸಿದ ರೀತಿ ಅರಿವಾಗುತ್ತದೆ. ಸಾರ್ವತಿಕ ದುಸ್ಥಿತಿಯನ್ನು ಪ್ರತಿಬಿಂಬಿಸುವ ಕನ್ನಡಿಯಾಗಿದೆ ಈ ಮುಕ್ತಕ. ಇಂದಿನ ಸಮಾಜದಲ್ಲಿ ಕೊಳೆತು ನಾರುತ್ತಿರುವ ಗುಂಪುಗಾರಿಕೆಯನ್ನು ಎಷ್ಟು ಸುಲಭವಾಗಿ ಸುಲಲಿತವಾಗಿ ಕವಿ ಬಿಂಬಿಸಿದ್ದಾರೆ.

ಇರಲಿಲ್ಲ ನಂಟರು ಬವಣೆಗಳು ಬೆಂಬಿಡದೆ ಕಾಡುವಾಗ
ಇರಲಿಲ್ಲ ಸ್ನೇಹಿತರು ಅಳಲುಗಳು ಮೈತುಂಬ ಮನೆಮಾಡಿದಾಗ•
ಇರಲಿಲ್ಲ ಬಂಧುಗಳು ಬಡತನವು ಬೆನ್ನು ಹತ್ತಿ ಬೇಯುವಾಗ
ಉಂಡುಟ್ಟುನಲಿದಾಗ ನೆಂಟರ ಬಳಗ -ಮಣ್ಣಿನ ಮಗ. (ನಂಟರು)

ಈ ಮುಕ್ತಕದಲ್ಲಿ ಹಣದಗಂಟಿದ್ದಾಗ ಊರೆಲ್ಲಾ ನೆಂಟರು ಹಣದಿಂದಲೇ ವ್ಯಕ್ತಿಯ ಯೋಗ್ಯತೆಯ ಏರುಪೇರು ಉಂಟಾಗುತ್ತದೆ ಹಣವಿಲ್ಲದವರು ಯಾರಿಗೂ ಬೇಡ. ಈ ಸಮಾಜ ಅರ್ಥಿಕ ತಳಹದಿಯ ಮೇಲೆ ನಿಂತಿದೆ! ಸ್ವಾರ್ಥಮಯ, ಅರ್ಥಮಯ ಪ್ರಪಂಚದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕೆಂಬ ಧ್ವನಿ ಎಷ್ಟು ಮಾರ್ಮಿಕವಾಗಿ ನಿರೂಪಿತವಾಗಿದೆ.

ಪ್ರೀತಿಸು ನಿನ್ನ ವೃತ್ತಿಯನು ಪ್ರೀತಿಸು ಸಮಾಜವನು
ಪ್ರೀತಿಸು ಮಾತೃಭೂಮಿಯನು ಪ್ರೀತಿಸು ಜನ್ಮಕೊಟ್ಟಮಾತೆಯನು
ಪ್ರೀತಿ ಯಿಲ್ಲದೆ ಬದುಕು ಮರುಭೂಮಿಯಂತೆ ಬರಡೆನ್ನು
ಪ್ರೀತಿಯಿರೆ ಜಗವು ಸುಂದರ-ಮಣ್ಣಿನ ಮಗ. (ಪ್ರೀತಿ)

ಪ್ರೀತಿಯಿಂದ ಜೀವನ ಸ್ವರ್ಗವಾಗುತ್ತದೆ. ಎಲ್ಲಾ ಸಮಸ್ಯೆಗಳೂ ಪರಸ್ಪರ ಪ್ರೀತಿಯಿಂದ ವಿಶ್ವಬಾಂಧವ್ಯದಿಂದ ನಿವಾರಣೆಯಾಗುತ್ತದೆ. ಹೃದಯ ಹೃದಯಗಳು ಬೆರೆತು ಸನ್ಮಾರ್ಗದಿಂದ ಬಾಳಬೇಕೆಂಬ ಕವಿಯ ಕರೆ ಎಷ್ಟು ಹೃದಯಂಗಮ!

ಶ್ರದ್ಧೆ ಭೂಮಿಯೊಳಗೆ ಶಿಸ್ತು ಬೆಳೆಯಲಿ
ಸನ್ನಡತೆಯ ಕುಲುಮೆಯೊಳಗೆ ಚಾರಿತ್ರ್ಯ ಹೊಳೆಯಲಿ
ಅಕ್ಕರೆಯಮಾನವೀಯತೆಗೆ ಹೃದಯ ತುಡಿಯಲಿ
ನಿನ್ನ ಏಳಿಗೆಗೆ ನೀನೇ ಶಿಲ್ಪಿಕಾಣೋ- ಮಣ್ಣಿನ ಮಗ (ರೂವಾರಿ)

ಶ್ರದ್ಧೆ ಹಾಗೂ ಶಿಸ್ತು ಜೀವನದ ಯಶಸ್ಸಿಗೆ ಮೂಲ. ಮನುಷ್ಯತ್ವವೇ ಧರ್ಮಗಳ ತಿರುಳು. ತಾನು ಶುಚಿಯಾದರೆ ಎಲ್ಲವೂ ಶುಚಿ. ತನ್ನಿಂದಲೇ ತನ್ನ ಉದ್ಧಾರ. "ಉದ್ಧರೇದಾತ್ಮನಾತ್ಮಾನಂ" ಭಗವದ್ಗೀತೆಯ ಅಮರ ಸಂದೇಶ.

ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿ ಜನ್ಮ ಸಾರ್ಥಕವನ್ನು ಪಡೆಯಬೇಕು. ಜೀವನ ಧರ್ಮವೆಂದರೇನೆಂಬದನ್ನು ಕವಿ ಎಷ್ಟು ಸುಂದರ ಹಾಗೂ ಸಮರ್ಥವಾಗಿ ವಿಶ್ಲೇಷಿಸಿದ್ದಾರೆ!

ಈ ಬಗೆಯ ಜೀವನದಲ್ಲಿ ಆವರಿಸಿರುವ ಕತ್ತಲನ್ನು ತೊಲಗಿಸಬಲ್ಲ ಅನೇಕ ಮುಕ್ತಕಗಳ ಸಂಗ್ರಹ ದೊಡ್ಡರಂಗೇಗೌಡರ 'ಮಣ್ಣಿನ ಮಾತುಗಳು' ಸಾಹಿತ್ಯ ಕ್ಷೇತ್ರದಲ್ಲಿ ಪ್ರಾಮಾಣಿಕವಾದ ಪ್ರಯತ್ನ ಹಾಗೂ ಸಾಧನೆಗಳಿಂದ ದೊಡ್ಡರಂಗೇಗೌಡರು ಸಹೃದಯಿಯಾಗಿ ವಿದ್ವಾಂಸರಹೃದಯಗಳನ್ನು ಗೆದ್ದು ಧನ್ಯರಾಗಿದ್ದಾರೆ. ಸಾಹಿತ್ಯ ಸಂಸ್ಕೃತಿ ಸಮಾಜದ ಪ್ರಗತಿಯ ಬಗ್ಗೆ ಚಿಂತನ ಶೀಲರಾಗಿ ಕ್ರಿಯಾಶೀಲರಾಗಿರುವ ದೊಡ್ಡರಂಗೇಗೌಡರ ಲೇಖನಿಯಿಂದ ಉತ್ತಮೋತ್ತಮ ಕೃತಿಗಳು ಮೂಡಿಬರಲಿ ಎಂದು ಹಾರೈಸುತ್ತೇನೆ.

## ಪ್ರೀತಿಯ ಕವಿ ದೊರಂಗೌ

✍ ಡಾ|| ರಂ. ಶ್ರೀ. ಮುಗಳಿ

ಶ್ರೀ. ದೊಡ್ಡರಂಗೇಗೌಡರು ಜೀವನದ ಬೇರೆ ಬೇರೆ ಸನ್ನಿವೇಶಗಳಲ್ಲಿ ಪಡೆದ ವಿವಿಧ ರಸಾನುಭವಗಳು ಸಹಜ ಸ್ಫೂರ್ತವಾದ ಭಾವಗೀತೆಗಳಾಗಿ ಮೂಡಿವೆ. ಅದು ಪ್ರೀತಿ, ನಿಸರ್ಗದ ಪ್ರೀತಿ, ಒಲಿದವರ ಪ್ರೀತಿ, ಕನ್ನಡದ ಪ್ರೀತಿ, ಜನತೆಯಪ್ರೀತಿ,. ಕವಿ ಸ್ವಂತವಾಗಿ ಉತ್ಕಟವಾಗಿ ಅಕ್ಕರೆಯ ಸಕ್ಕರೆಯನ್ನು ಸವಿದು ಭಾವಗೀತೆಗಳಲ್ಲಿ ಅದನ್ನು ಸವಿನುಡಿಯಾಗಿ ಹಾಡಾಗಿ ಅಭಿವ್ಯಕ್ತಗೊಳಿಸುತ್ತಾರೆ.

ತಮ್ಮ ವಿದ್ಯಾಭ್ಯಾಸದ ದಿನಗಳಲ್ಲಿ ಬೀಸುತ್ತಿದ್ದ ಸಾಹಿತ್ಯದ ಗಾಳಿಗೆ ಅವರು ಮನವೊಡ್ಡಿ ಅಂತ ಬರವಣಿಗೆ ಮಾಡಿದರು. ಆದರೆ ಬರುಬರುತ್ತಾ ಪ್ರೀತಿ ಅವರ ಬಾಳಿನಲ್ಲಿ ನುಗ್ಗಿ ಬಂದು ಬಂದು ಪರಿವರ್ತನವನ್ನೇ ಉಂಟು ಮಾಡಿರಬೇಕು. ಅಂತೇ ಅವರು ಹಿಂದಿನದನ್ನು ಅಳಿಯದೆ ಹೊಸ ಶ್ರುತಿಯನ್ನು ಹುಡುಕಿಕೊಂಡು ಹೊರಟಿದ್ದಾರೆ.

ಶ್ರೀ ದೊಡ್ಡರಂಗೇಗೌಡರು ಹೆಸರಿಗೆ ತಕ್ಕಂತೆ ದೊಡ್ಡಮನದವರಾಗಿ ತಮ್ಮ ಎತ್ತರಕ್ಕೆ ಬೆಳೆಯಲಿ, ದೊಡ್ಡ ಬರವಣಿಗೆಗೆ ವೀಳ್ಯವೆತ್ತಲಿ ಎಂದು ಹಾರೈಸುತ್ತೇನೆ.

# ಪ್ರೀತಿ ಪ್ರಗಾಥ : ಒಂದು ಅಧ್ಯಯನ

✍ ಎಸ್. ಜಿ. ಸಿದ್ಧರಾಮಯ್ಯ

ಪ್ರೀತಿ ಬದುಕಿನ ಜೀವ ತಾರಕ ಶಕ್ತಿ. ಜೀವ-ಜೀವಗಳ ಒಳಗಿನೊಳಗಿನ ಬೆಳಗು ಈ ಬೆಳಗು ಎಲ್ಲರಿಗೆ ನಿಲುಕಿದ್ದಲ್ಲ. ಮನುಕುಲದ ಚರಿತ್ರೆಯ ಹೋರಾಟದ ಪುಟಗಳಲ್ಲಿ ಇವರದೇ ಮೇಲುಗೈ ಮೆರವಣಿಗೆ, ಪ್ರೀತಿಯ ಆರ್ದ್ರತೆಯಲ್ಲಿ ನೆನೆಯದ ಯಾವ ಜೀವವೂ ಉತ್ತಮೋತ್ತಮವಾಗುವುದು ಸಾಧ್ಯವಿಲ್ಲ.

ಪ್ರೀತಿಯೆಂಬುದು ಗರಗಸದಂತೆ; ಆದರೂ ನೋವು, ಹೋದರೂ ಸೋವು. ಒಂದು ಸುಖದ ನೋವು ಮತ್ತೊಂದು ದುಃಖದ ಸಾವು. ಅಂತೆಯೇ ಇದು ಬತ್ತಲಗುದುರಿ ಇದ್ದಂತೆ. ಇದನ್ನು ಹತ್ತುವವನು(ಳು) ಹುಚ್ಚು ಸಾಹಸಿ. ಗೆದ್ದರೆ ಸಾಹಸ, ಸೋತರೆ ಹುಚ್ಚು. ಈ ಬತ್ತಲಗುದುರಿಯನ್ನೇರಿ ಇಪ್ಪತ್ತು ಸಂವತ್ಸರಗಳ ಮಾವು ಬೇವಿನ ಉಗಾದಿಯನ್ನು ಕಂಡುಂಡ ಜೀವ ಭಾವದ ಫಲ ಈ 'ಪ್ರೀತಿ ಪ್ರಗಾಥ' ಇಲ್ಲಿಯ ಪದ ಪದಗಳೂ ಅನುಭವದ ಮುನ್ನೀರಿನಲ್ಲಿ ಮಿಂದ ಅಮೃತ ಬಿಂದುಗಳು. ಪಟ್ಟಪಾಡು ಹುಟ್ಟು ಹಾಡಾಗಿದೆ.

ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವನಿಗೊಲಿದ ಅಕ್ಕ ಸಮಾಜ ಸಂಪ್ರದಾಯಗಳ ಕಟ್ಟು ಬಂಧಗಳನ್ನು ಕಿತ್ತೊಗೆದು ಬತ್ತಲಾಗಿ ಶ್ರೀಶೈಲದ ಕದಳಿಬನದ ಕಡೆ ನಡೆದಳು. ಅವಳು ನಡೆದ ನೆಲ ಪಡೆದ ಫಲಗಳ ಜೀವ ದ್ರವ್ಯವೇ ಅವಳ ವಚನಾಮೃತ. ನಿಜದಲ್ಲಿ ಇದೇ ಕನ್ನಡದ ಮೊದಲ ಪ್ರೀತಿ ಪ್ರಗಾಥ. ಕುಲ ಸೀಮೆಯ ಕಟ್ಟುಪಾಡನ್ನು ಕಿತ್ತೊಗೆದು ಸಮಾಜದ ಕುಹಕಕುತ್ಸಿತಗಳ ಮಲಸಾಗರವನ್ನು ದಾಟಿ 'ಪ್ರಾಯದೊಲುಮೆ ಪಲ್ಲವಿಸಿತ್ತು ಪರಿಶುದ್ಧ ರೀತಿಯಲ್ಲಿ' ಎಂದು ಹುಟ್ಟು ಹಾಡಾಗಿರುವ ಈ ಪ್ರೀತಿ ಪ್ರಗಾಥ ಈ ನೆಲೆ ಪಾತಳಿಯ ಎರಡನೆಯ ದನಿ. ಆದರೆ ಈ ಎರಡೂ ದನಿಗಳಲ್ಲಿಯ ಭಾವ ದೃಷ್ಟಿ, ದರ್ಶನಾಂಶ ಮತ್ತು ಭಿನ್ನ ಸ್ವರೂಪಗಳನ್ನು ಹೋಲಿಕೆಯ ಸಂದರ್ಭದಲ್ಲಿ ಮರೆಯದಿರುವುದು ಅಷ್ಟೇ ಮುಖ್ಯ.

ಹಿರಿಯ ಕವಿಗಳಾದ ತ್ರೀನಂಶ್ರೀ ಕುವೆಂಪು, ಕೆ. ಎಸ್. ನರಸಿಂಹಸ್ವಾಮಿ ಅವರ ಕವನಗಳಲ್ಲಿ ಈ ನೆಲೆಯ ಪ್ರೀತಿ ಸ್ವರೂಪವನ್ನು ಕಾಣಲಾಗುವುದಿಲ್ಲ. ಅದು ಸಂಪ್ರದಾಯದ ಚೌಕಟ್ಟಿನಲ್ಲಿ ಅರಳಿದ ದಾಂಪತ್ಯ ಪ್ರೇಮ. ಅಲ್ಲಿಯ ಸುಖ ಸಂತೋಷಗಳು ನೋವು ನರಳಿಕೆಗಳು ಆ ನೆಲೆ ಬೆಲೆಗಳೇ ಬೇರೆ. ಅಲ್ಲದೆ ವಿವಾಹೇತರ ಪ್ರೀತಿಯ ಅನುಭವವೂ ನಮ್ಮ ಕಾವ್ಯದಲ್ಲಿ ದನಿ ಪಡೆದಿದೆ. ಈ ಎಲ್ಲ ನೆಲೆಗಳ ಅರಿವಿನ ಹಿನ್ನಲೆಯಲ್ಲಿ ಈ 'ಪ್ರೀತಿ ಪ್ರಗಾಥ'ವನ್ನು ಪರಿಭಾವಿಸಿ ಇದರ ವಿಶಿಷ್ಟತೆಯನ್ನು ಮನಗಾಣಬೇಕಾಗುತ್ತದೆ.

"ಹೆಜ್ಜೆ ಇಟ್ಟಲ್ಲೆಲ್ಲ ಬರೀ ಮುಳ್ಳು ಜಾಲಿ
ಎತ್ತ ತಿರುಗಲಿ ನಾವು ಅಲ್ಲಿ ನೀತಿ ಬೇಲಿ

ನಾನು ಗಂಡು ನೀನು ಹೆಣ್ಣು ಪ್ರೀತಿಗಷ್ಟೇ ಸಾಕು ಸಾಕು
ಜಾತಿ ಎಂಬ ಮುಳ್ಳು ತಂತಿ ನಮ್ಮ ಮಧ್ಯೆ ತೊಲಗಬೇಕು"

"ಯಾರೇ ದೂರಾಗಿರಲಿ ನಂಟು ಚೂರಾಗಿರಲಿ
ಒಲವಿತ್ತು ನಮ್ಮ ಕಣ್ಣಾಲಿಯಲ್ಲಿ
ಮನಸಿತ್ತು ಕನಸಿತ್ತು ಕಡಲಿನೋಪಾದಿಯಲ್ಲಿ"

"ಆ ಕಡೆಗೆ ಕಾವ್ಯ ಈ ಕಡೆಗೆ ಕಾವ್ಯ
ಮನೆ ತುಂಬ ಮಾತ್ರ ದಾರಿದ್ರ್ಯ ನಿತ್ಯ"

ಎಂಬ ಇಲ್ಲಿಯ ಅನುಭವ ಸಂಕೀರ್ಣಕ್ಕೆ ಹಿನ್ನೆಲೆಯಾಗಿರುವುದು ಜಾತಿ ಅಂತಸ್ತು ನೀತಿಗಳ ಸಂಕುಚಿತ ನೆಲೆಯ ಸಾಮಾಜಿಕ ಸಾಂಸ್ಕೃತಿಕ ಆವರಣಗಳು. ಹೀಗಾಗಿ ಆಯಾ ಸಂಧರ್ಭ ವಿಶೇಷಗಳು ಕೊಟ್ಟ ಸಂಕಷ್ಟ ಸಂತಾಪಗಳು ವಿಭಿನ್ನ ಸ್ವರೂಪದವಾಗಿರುತ್ತವೆ.

ಈ 'ಪ್ರೀತಿ ಪ್ರಗಾಥ'ದಲ್ಲಿ ಇಪ್ಪತ್ತೈದು ಒಳ ಪಗರುಗಳಿವೆ. ಇವು ಒಂದೊಂದೂ ಬಿಡಿಬಿಡಿಗಳಲ್ಲ. ಜೀವಭಾವ ಒಲಿದು ನಗೆ ಹೊಗೆಯ ಒಳ ಹೊರಗನ್ನು ಒಂದೊಂದು ಪದರವೂ ನಿವೇದಿಸುತ್ತಿವೆ. ಈ ನಿವೇದನೆಯಲ್ಲಿ ಮಾಗಿದ ಭಾವವೊಂದು ಮೆಲುಕು ಹಾಕುವ, ಮೆಲುಕು ಹಾಕುತ್ತಲೇ ಬದುಕಿನ ಸಂದರ್ಭವನ್ನು ವಿಶ್ಲೇಷಿಸುವ, ವಿಶ್ಲೇಷಿಸುತ್ತಲೇ ಒಲುಮೆ ಬೆಳೆದು ಹದವಾಗಿ ಮುದವಾದ ಪರಿಯನ್ನು ಆನಂದಿಸುವ ರೀತಿ ಅನನ್ಯವಾಗಿ ಬೆಳೆದಿದೆ.

ಕೆಣಕುವ ಪ್ರಾಯದಲ್ಲಿ ಉಂಡ ಪ್ರೀತಿಯನ್ನು ಮೆಲುಕು ಹಾಕುತ್ತಾ ಕವಿ 'ಪ್ರಿಯೆ ನಮ್ಮ ಹರೆಯದ ಹುಚ್ಚಿಗೆಷ್ಟು ಅವತಾರ?' ಎಂದು ಪ್ರಶ್ನಿಸುತ್ತಾನೆ ಮರುಗಳಿಗೆಯಲ್ಲೇ 'ಒಲವಿಗೆ ಮೊದಲುಂಟು ತುದಿಯೆಂಬುದೆಲ್ಲುಂಟು?' ಎಂದು ಉತ್ತರವನ್ನು ಪ್ರಶ್ನಾರ್ಥಕವಾಗಿಯೇ ಕಂಡುಕೊಂಡಿದ್ದಾನೆ. ಈ ತುದಿ ಕಾಣವ ಒಲುಮೆ ಶುದ್ಧ ಮಡಿವಂತಿಕೆಯ ಗೊಡ್ಡು ಮಾತಾಗದೆ.

"ಬದುಕೆಂಬುದಿದುವೆ ಹೊಂದಿಕೆಯ ಆಟ
ಇಲ್ಲುಂಟು ನಂಬಿಕೆಯ ಪ್ರೇಮ ಪಾಠ"

"ನಿನ್ನಿರವಿನಿಂದ ನನ್ನ ಜೋಪಡಿಯಾಯ್ತು ಪ್ರೇಮ ಧಾಮ
ನಿನ್ನ ಧೃತಿಯಿಂದ ನನ್ನ ಬಾಳಿಗೆ ಬಂತು ಪ್ರೀತಿ ಧರ್ಮ"

ಎಂಬ ಅನುಭವವಾಗಿದೆ. ಈ ಅನುಭವದ ನೆಲೆಗೆ ತಲುಪುವಷ್ಟರಲ್ಲಿ ಈ ಜೀವಗಳು ಪಟ್ಟ ಬಾಳಿನ ಬವಣೆ ಅಷ್ಟಿಷ್ಟಲ್ಲ, ನೇರ ಮಾತುಗಳಲ್ಲಿ ರೂಪ ಕಾದಿ ವಕ್ರೋಕ್ತಿಗಳಲ್ಲಿ ಬಡತನದ ಬೇಗೆಯನ್ನು ಪರಿತ್ಯಕ್ತ ಸ್ಥಿತಿಯ ಬವಣೆಯನ್ನು ಕವಿ ಮತ್ತೆ ಮತ್ತೆ ಹಾಡಿದ್ದಾನೆ. ಇದು ಕೆಲವರಿಗೆ ಏಕತಾನತೆ ಅನ್ನಿಸಬಹುದು. ಆದರೆ ಸುಖದ ಕ್ಷಣಗಳು ಹ್ರಸ್ವ. ದುಃಖದ ಕ್ಷಣಗಳು ಧೀರ್ಘ, ಇಲ್ಲಿಯ ಬಡತನ, ಪರಿತ್ಯಕ್ತ ಸ್ಥಿತಿಗಳು ಬಾಳಿಗಂಟಿದ ಹೋರಾಟವಾಗಿರುವುದರಿಂದ ಪ್ರೀತಿಗೆ ಅವೇ ನಿಕಷವೂ ಆಗಿವೆ. ಈ ನಿಕಷದಲ್ಲಿ ಪ್ರೀತಿ ಗೆದ್ದಿದೆ.

"ಮಾತಿನಲ್ಲಿ ಮೌನದಲ್ಲಿ ಪ್ರೇಮ ಸಾಕ್ಷಾತ್ಕಾರ
ಹೃದಯ ಹೃದಯ ದೊಳಗು ಹೊರಗು ಒಲವಿನದೇ ಮಹಾಪೂರ"

"ಇಳೆಯ ನಗುವೆಲ್ಲ ಮಗುವಾಗಿ ಬಂತೋ
ಅವನ ಕಣ್ಣಲ್ಲಿ ನಕ್ಷತ್ರ ಕಾಂತಿಯಾಯ್ತೋ"

"ಆ ತೊದಲು ಆ ಹೆಜ್ಜೆ ಆ ಕೇಕೆ ಆ ಹರುಷ
ದಶಕ ದಶಕದ ನೋವು ಮಾಯಿಸಿತ್ತೋ"

"ನೀನೀಗ ಪ್ರೌಢ ಮಗುವಿನ ತಾಯಿ
ನಿನ್ನ ಜೋಗುಳ ಕೇಳಿ ನಾನೂ ಮಗುವಾದೆ"

"ಮಗು ಅಪ್ಪ ಎಂದಾಗ ನೀ ನನ್ನ ನೋಡಿದೆ
ಅದು ಅಮ್ಮ ಅಂದಾಗ ನಾ ನಿನ್ನ ನೋಡಿದೆ"

"ನನ್ನೆದೆಯ ಕಾವ್ಯ ಕಡಲುಕ್ಕಿ ಸಾವಿರದ ಸಂತೋಷ"

ಪ್ರೀತಿ ಮಾಗಿದ, ಪಾಡು ಹಾಡಾದ ಪರಿಯನ್ನು ಮೇಲಿನ ಉಕ್ತಿಗಳು ಧ್ವನಿ ಪೂರ್ಣವಾಗಿ ವ್ಯಂಜಿಸಿವೆ. ಈ ಹಾಡು ಸಾವಿರದ ಸಂತೋಷ.

ಪರಿಸ್ಥಿತಿ ಮತ್ತು ಭಾವಸ್ಥಿತಿಗಳ ಒತ್ತಡಕ್ಕನುಗುಣವಾಗಿ ಹುಟ್ಟು ಪಡೆದು ಇಲ್ಲಿಯ ಬಾಷೆ ಭಾವಗೀತಾತ್ಮಕವಾಗಿ ಆತ್ಮೀಯವೆನ್ನಿಸುತ್ತದೆ. "ಕೀಂಕುವ ಪ್ರಾಯದಲ್ಲಿ" "ಹಾಡಿತ್ತು ಹೃದಯದ ಹಕ್ಕಿ" ಇತ್ಯಾದಿ ಭಾಗಗಳಲ್ಲಿ ಪ್ರೇಮದ ಉತ್ಕರ್ಷಕ್ಕೆ ಜೀವ ಭಾವಗಳು ಗರಿಗೆದರಿದ ಪರಿಗೆ ತಕ್ಕಂತೆ ಭಾಷೆಯ ಓಟ ನಾದಮಯವಾಗಿದ್ದರೆ, "ಇರುಳು ನೌಕರಿ, ಹಗಲು ಕಾಲೇಜಿಗೆ ಹಾಜರಿ" ಭಾಗ ಹೆಚ್ಚು ಗದ್ಯಮಯವಾಗಿ ಬಂದಿದೆ. ಈ ಛಂದೋಗತಿಯ ವೈವಿಧ್ಯತೆ ಕೇವಲ ಪ್ರಯೋಗಕ್ಕಾಗಿ ಬಾರದೆ ಅಭಿನೀತಗೊಳ್ಳುವ ಪ್ರಕ್ರಿಯೆಯಾಗಿ ಅರಳಿದೆ.

"ಒಂದಲ್ಲ ಎರಡಲ್ಲ ಹತ್ತಲ್ಲ ನೂರಲ್ಲ ಸಾವಿರದ ಹಾಡು
ಒಂದೊಂದು ಹಾಡೂ ಒಂದೊಂದು ಭಾವ ಸಿವುಡು
ಭಾವ ಭಾವದಲ್ಲೂ ದಂಡಿ ವಂಡಿ ಅನುಭವದ ಸೊಗಡು"

ಪ್ರೀತಿ ತಮ್ಮೊಳಗೆ ಬೆಳೆದ ಬಗೆಯನ್ನು ನಿವೇದಿಸುವ ಈ ಸಾಲುಗಳು ಈ 'ಪ್ರೀತಿ ಪ್ರಗಾಥ'ದ ಲಕ್ಷ್ಯ ಲಕ್ಷಣಗಳೂ ಆಗುತ್ತವೆ.

ಕನ್ನಡ ಕಾವ್ಯಕ್ಷೇತ್ರದಲ್ಲಿ ದೊಡ್ಡರಂಗೇಗೌಡ ಅವರು ಈಗಾಗಲೇ ಸಾಕಷ್ಟು ಹೆಸರಾಗಿರುವ ಕವಿ, ಪ್ರೀತಿ ವಾತ್ಸಲ್ಯ ಅಂತಃಕರಣ ಇತ್ಯಾದಿ ಮಾನವೀಯ ಭಾವಗಳನ್ನು ಬದುಕಿನ ಉಸಿರಾಗಿಸಿಕೊಂಡಿರುವ ಆತ್ಮೀಯ ದೊರಂಗೌ ಅವರ ಕಾವ್ಯ, ಯಾವುದೇ ತತ್ವ ಸಿದ್ಧಾಂತಗಳ ಕಟ್ಟು ಪಾಡಿಗೆ ಬದ್ಧವಾದದ್ದಲ್ಲ. ಬದ್ಧತೆ ಎಂಬುದಿದ್ದರೆ ಅದು ಬದುಕಿಗೆ, ಮನುಷ್ಯತ್ವಕ್ಕೆ ಮಿಗಿಲಾಗಿ ಮಾನವೀಯ ಸಂಬಂಧಗಳ ನೇರ್ಪಿಗೆ. 'ಪ್ರೀತಿ ಪ್ರಗಾಥ' ಈ ಅಂಶಗಳನ್ನು ನಿಚ್ಚಳವಾಗಿ ಕಾಣಿಸಿದೆ.

# ದೊಡ್ಡರಂಗೇಗೌಡರ ಕಾವ್ಯ

✍ ಬಂಜಗೆರೆ ಜಯಪ್ರಕಾಶ

ಕಾವ್ಯಪ್ರೀತಿಗಾಗಿ, ಬರೆಯುವುದು, ಕಲಿಯುವ ಕುತೂಹಲಕ್ಕಾಗಿ. ದೊಡ್ಡರಂಗೇಗೌಡರ ಕವಿತೆಗಳನ್ನು ಸಿಕ್ಕಿದಲ್ಲೆಲ್ಲ ಓದುತ್ತಾ ಬಂದ ನನಗೆ ವಿಶೇಷವಾಗಿ ಅಲ್ಲದಿದ್ದರೂ ಹೇಳಬಹುದಾದ ಕೆಲವು ಅನಿಸಿಕೆಗಳು ಮತ್ತೊಮ್ಮೆ ಅವರ ಕಾವ್ಯಗಳ ಸಂಕಲನ ಓದಿದ ಮೇಲೆ ಅನ್ನಿಸಿವೆ.

ಇವರ ಕವಿತೆಗಳ ಸೊಬಗು, ವಿಷಯ ವೈವಿಧ್ಯಗಳೆರಡೂ ಗಮನಾರ್ಹ. ಕೆಲವು ಕವನಗಳು ಮತ್ತೆ ಮತ್ತೆ ಮೆಲುಕು ಹಾಕುವಷ್ಟು ಪ್ರಭಾವ ಪೂರ್ಣವಾಗಿವೆ.

'ಇದು ಥಳುಕಿನ
ಕಣ್ಬೆಳಕಿನ
ಮಾದಕ ಗುಂಡಿನ ಮೋಹಕ ದಂಡಿನ
ಮೋಸದ ಉಸುಕಿನ ಜೊಂಡಿನ
ಮುಗ್ಧರ ಒದೆಯುವ ಕಾಲ್ಚೆಂಡಿನ
ನಿಗಿನಿಗಿ ನಗರ' (ಇದು ಶಹರ)

ನಗರವೊಂದನ್ನು ನಮ್ಮ ಮುಂದೆ ಅದರ ಎಲ್ಲ ಅವಗುಣಗಳೊಂದಿಗೆ ಸಮರ್ಥವಾಗಿ ಹೇಳುವ ಸಾಲುಗಳಿವು. ಕವಿಗೆ ಭಾಷೆಯೊಂದಿಗೆ ಒಳ್ಳೆಯ ವ್ಯವಹಾರವಿದೆ. ಮಾತುಗಳನ್ನು ಧಾರಾಕಾರವಾಗಿ ಹರಿಯುವಂತೆ ಮಾಡಬಲ್ಲರು ಮತ್ತು ಆ ಮಾತುಗಳಲ್ಲಿ ತಾವು ನಗರದ ಬಗ್ಗೆ ಕಂಡುಕೊಂಡದ್ದನ್ನು ನಮಗೆ ತಲುಪಿಸಬಲ್ಲರು.

ಮೋಡಗಳು ಆಕಾಶದ ಬಟ್ಟೆ
ಕಲ್ರಗೆ ಕೊಳೆ ಮಾಡಿಕೊಂಡವು

ಎನ್ನುವಂತಹ ಕಡೆ ಅಥವಾ

'ಹೆಜ್ಜೆ ಹೆಜ್ಜೆಗೆ ಹಟ್ಟಿ ಹಟ್ಟಿಯಲ್ಲಿ ಮಲ್ಲಿಗೆ ಹಾಸಿಗೆ'

ಎನ್ನುವ ಕಡೆ

'ಇವನ ಉಸ್ತುವಾರಿಗೆ - ಸೋಫಾ ಕುರ್ಚಿ
ಟ್ರಂಕು ಹಾಸಿಗೆ ಪಡೆಯುತ್ತವೆ ಶೂರ್ಪನಖಿ ಚಿಕತ್ಸೆ'

ಎನ್ನುವಲ್ಲಿ

ನನ್ನಂಥ ಸಾಮಾನ್ಯನಿಗೆ ಬವಣೆಯಷ್ಟೇ ಬಿಂಕ
ಪ್ರತಿ ಬೆಳಗೂ ಕಟ್ಟಬೇಕು ಸಂಕಟದ ಸುಂಕ!

ಎನ್ನುವ ರೀತಿಯಲ್ಲಿ ಕವಿ ತನ್ನ ಕವಿತಾ ಶಕ್ತಿಯನ್ನು ಅರ್ಥಪೂರ್ಣವಾಗಿ ಬಳಸುತ್ತಾರೆ. ಒಟ್ಟು ಹೇಳಬೇಕಾದರೆ ಆಕರ್ಷಕವಾಗಿ ಓದಿಸಿಕೊಳ್ಳುತ್ತಾರೆ. ಈಗ ನಾನು ಬರೆದಿರುವ ಸಾಲು ಪ್ರಾತಿನಿಧಿಕ ಎಂದೇನಲ್ಲ. ಅಥವಾ ಅವರ ಎಲ್ಲಾ ಸಾಲುಗಳೂ ಇಷ್ಟೇ ಶಕ್ತಿಯುತವಾಗಿವೆ ಎಂದೂ ಅಲ್ಲ. ಆದರೆ ಕವಿಯೊಬ್ಬನ ಕವಿತ್ವ ಕೆಲವು ಕಡೆಗಳಲ್ಲಿ ಎದ್ದು ಕಾಣುವಂತಿರುತ್ತದೆ. ಮತ್ತೆ ಕೆಲವು ಕಡೆ ಒಂದೇ ಓದಿಗೆ ದಕ್ಕದೆ ಎರಡು ಮೂರನೇ ಓದಿಗೆ ತನ್ನ ಸಾಮರ್ಥ್ಯವನ್ನು ನಿರೂಪಿಸಬಲ್ಲ ಅಂತರ್ಗಾಮಿಯೂ ಆಗಿರುತ್ತದೆ.

ದೊಡ್ಡರಂಗೇಗೌಡರ ಪ್ರತಿಭೆಯನ್ನು ಕತೃತ್ವ ಶಕ್ತಿಯನ್ನು ಅರಿಯುವುದಕ್ಕೆ ನಾವು ಕಷ್ಟಪಡಬೇಕಿಲ್ಲ. ಓದುಗನೊಬ್ಬನನ್ನು ಇಬ್ಬಂದಿಗೆ ಸಿಲುಕಿಸದಂತೆ ಸಹಜ ರೀತಿಯಲ್ಲಿ ತನ್ನನ್ನು ತೆಗೆದುಕೊಳ್ಳುವುದು ಇವರ ಕವಿತೆಯ ಜಾಯಮಾನ; ಒಂದು ಮಾನದಿಂದ ಇದು ಅಪೇಕ್ಷಣೀಯ. ಮತ್ತೊಂದು ಮಾನದಿಂದ ಇದು ಅಕ್ಷೇಪಾರ್ಹ.

'ಹದಗೆಟ್ಟ ಗತಿಗೆ ನೂರು ಲಯ-
ಬಂತು ಪಟ್ಟಕ್ಕೆ - ಈಗ ಹರೆಯ'

ಪ್ರಾಸ ಮತ್ತು ಅರ್ಥ, ಸಾಮರಸ್ಯದೊಂದಿಗೆ ಇಂಥ ಕಡೆಗಳಲ್ಲಿ ಅಭಿವ್ಯಕ್ತಿಗೊಳ್ಳುತ್ತದೆ. ಇದೂ ಕೂಡ ಸುಂದರ ಕಾವ್ಯದ ಒಂದು ಪ್ರಕಾರವೇ.

'ಕಣ್ಣು ನಾಲಗೆ ಕಡಲು' ಸಂಕಲನದ ಒಂದು ಉತ್ತಮ ಕವಿತೆಯಾದ 'ಕಾಲದ ಎದುರು' ಎಂಬ ಕವಿತೆಯನ್ನು ಉದಾಹರಿಸುತ್ತಾ ಮಾತನಾಡುವುದಾದರೆ -

"ಮುಗಿಯದ ಜಗತ್ತಿನೆದುರು
ಕೆಲವರು ಗಡಿಯಾರವಾದರೆ
ಇನ್ನು ಕೆಲವರು
ಅಂಥ ಗಡಿಯಾರಗಳಿಗೆ
ಕೀ ಕೊಡುವ ಕಿಲಾಡಿಗಳಾಗುತ್ತಾರೆ"

"ಮುಂದುವರಿದವರು ರಿಪೇರಿ ಮಾಡುತ್ತಾರೆ
ಹಿಂದುಳಿದವರು ಗಡಿಯಾರ ಅಡವಿಡುತ್ತಾರೆ
ತಲೆಯಿದ್ದವರು
ತಾವೇ ಗಡಿಯಾರವಾಗಿ
ಗುಡಿಯಾಗುತ್ತಾರೆ!
ತಮ್ಮ ಸುತ್ತ ಗುಡಿ ಕಟ್ಟಿ
ಗಡಿದಾಟಿ ಬಿಟ್ಟುಹೋಗುತ್ತಾರೆ"

ಹೀಗೆ ಸಾಮಾಜಿಕ ಸಂದರ್ಭವನ್ನು ಕಾವ್ಯವಾಗಿಸುವಲ್ಲಿ, ವ್ಯಂಗ್ಯವಾಗಿ, ಗಂಭೀರ ವಸ್ತುವೊಂದನ್ನು ಉತ್ಪ್ರೇಕ್ಷಿಸದೆ ತಮ್ಮ ಅನುಭವಕ್ಕೆ ಬಂದದ್ದನ್ನು ಸಮತೋಲನದೊಂದಿಗೆ ಓದುಗರ ಮುಂದಿಡುವ ಶಕ್ತಿ ಇವರಲ್ಲಿದೆ. ಕವಿ ಅನಾಮಿಕ ಇತಿಹಾಸಕಾರ. ಅನಧಿಕೃತ ವಿಶ್ಲೇಷಣಕಾರ. ಇಂತಹ ಸಂದರ್ಭದಲ್ಲಿ ಒಂದು ಪರ ನಿಲ್ಲದೆ ಪರಿಭಾವಿಸುವ ಪ್ರಬುದ್ಧತೆ ಬೇಕಾಗುತ್ತದೆ. ಅದು ದೊಡ್ಡರಂಗೌ ಅವರಲ್ಲಿ ಸಿಗುತ್ತದೆ ಹೀಗಾಗಿ ಕನ್ನಡದ ಪರಿಶೀಲನಾರ್ಹ ಕವಿಯಾಗಿ ದೊರಂಗೌ ನಮಗೆಲ್ಲ ಕಾಣುತ್ತಾರೆ.

ಬದುಕಿನ ಬೇರೆ ಬೇರೆ ವಿವರಗಳನ್ನು ಪರಿಶೀಲಿಸುತ್ತಾ, ತಮ್ಮ ನಂಬಿಕೆಯ ಮತ್ತು ಅರ್ಥವಂತಿಕೆಯ ಅನುಸಾರ ಈ ಕವಿ ಪ್ರತಿಕ್ರಿಯಿಸುತ್ತಾ ಬಂದಿರುವುದು ನಿಜವಾದರೂ ಇವರ ಮುಖ್ಯ ಆಸ್ಥೆಯಾಗಿ ನಮಗೆ ಗೋಚರಿಸುವುದು ಪ್ರಕೃತಿ ಮತ್ತು ಪ್ರೇಮ. ಇಡೀ ಕನ್ನಡ ಕಾವ್ಯಲೋಕ ನವ್ಯದ ನಂತರ ಬಂಡಾಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವಾಗ ದೊರಂಗೌ ತಮ್ಮ ಮುಖ್ಯ ಆಸ್ಥೆಯಾಗಿ ಪ್ರಕೃತಿಯನ್ನೇ ಉಳಿಸಿಕೊಂಡಿರುವುದು ಸೋಜಿಗ. ಪ್ರತಿ ಕವಿಗೂ ತಾನು ಸಮಕಾಲೀನ ಎನಿಸಿಕೊಳ್ಳುವ ಹಂಬಲ ಇರುತ್ತದೆ. ಆ ಹೆಣಗಾಟ ದೊರಂಗೌ ಅವರಲ್ಲಿ ಕಂಡು ಅವರ ಕಾವ್ಯಾಭ್ಯಾಸದ ಮಧ್ಯದ ಮಜಲಿನಲ್ಲಿ ಸಾಮಾಜಿಕ ವಿಮರ್ಶೆಗೆ ತೊಡಗಿಸಿ ಕೊಂಡರೂ, ಓದುಗನಿಗೆ ಮಾತ್ರ ಈ ಕವಿ ಭಾವ ಕವಿಯಾಗಿ ಪ್ರಕೃತಿ ಕವಿಯಾಗಿಯೇ ಪ್ರಧಾನವಾಗಿ ಗೋಚರಿಸಿದ್ದಾರೆ. ಕನ್ನಡದ ಮಟ್ಟಿಗೆ ಹೇಳುವುದಾದರೆ ಕುವೆಂಪು ಜಿ. ಎಸ್. ಎಸ್. ನಂತರ ಈ ಪ್ರಕೃತಿ ಪ್ರೇಮವನ್ನು ಕಾಪಾಡಿಕೊಂಡು ಬಂದಿರುವ ಯುವ ಪೀಳಿಗೆಯವರಲ್ಲಿ ದೊಡ್ಡರಂಗೇಗೌಡ ಒಬ್ಬರು.

ದೊಡ್ಡರಂಗೇಗೌಡ ಅವರ ಆಯ್ದ ಕವನ ಸಂಕಲನ ಇಲ್ಲಿದೆ. ಆಯ್ದ ಕವನ ಸಂಕಲನ ಬರುವುದೆಂದರೆ ಕವಿ ಒಂದು ಘಟ್ಟವನ್ನು ಈಗಾಗಲೇ ತಲುಪಿದ್ದಾರೆಂಬುದರ ಸೂಚನೆಯಾಗುವುದರ ಜೊತೆಗೆ ಆ ಕವಿಯ ಕುರಿತು ಸಮಗ್ರ ಪರಿಶೀಲನೆಗೆ ಅನುವು ಮಾಡಿಕೊಟ್ಟು ಓದುಗನಿಗೆ ಕವಿಯು ಬೆಳೆದು ಬಂದ ದಾರಿಯನ್ನು ಗುರುತಿಸಲು ಸಹಾಯ ಮಾಡುತ್ತದೆ. ಈ ಗುರುತಿಸುವಿಕೆ ಎಷ್ಟೋಬಾರಿ ಕವಿ ತನ್ನನ್ನು ತಾನು ಪುನರ್ ವಿಮರ್ಶೆಗೆ ಗುರಿ ಮಾಡಿಕೊಂಡು ಮುಂದುವರೆಯಲು ಕಾರಣವಾದ ಉದಾಹರಣೆಗಳೂ ನಮ್ಮಲ್ಲಿವೆ.

ಈ ಸಂಕಲನ ದೊರಂಗೌ ಕಾವ್ಯದೊಂದಿಗೆ ನಡೆಸಿದ ೨೫ ವರ್ಷಗಳ ನಿಷ್ಠಾವಂತ ದಾಂಪತ್ಯಕ್ಕೆ ಸಾಕ್ಷಿ. ಹೀಗಿರುವಾಗ ನನಗೆ ಅನ್ನಿಸಿದ್ದೇನು? ಈ ದಾಂಪತ್ಯ ಕರ್ತವ್ಯವನ್ನು ಮಾತ್ರ ಗಮನಿಸಿಕೊಂಡು ನಡೆದಂತಿದೆ. ಅಂದರೆ ಕಾವ್ಯ ಮನಸ್ಸಿನ ಮುಜುಗುರ, ಸಣ್ಣತನ, ಉದಾತ್ತತೆ ಇತ್ಯಾದಿ ಎಲ್ಲವನ್ನೂ ಹಂಚಿಕೊಂಡು ಲಲ್ಲೆಯಾಡುತ್ತಾ ತನ್ನನ್ನು ಪೂರ್ಣ ತೆರೆದುಕೊಂಡು ಅವನನ್ನು ಪೂರ್ಣ ಒಳಗೊಂಡು ಬಳಕೆಯಾಗುವ ಅನೌಪಚಾರಿಕ ನಲ್ಲೆಯಾಗಿಲ್ಲ. ಔಪಚಾರಿಕತೆ ಕಣ್ಣಿಗೆ ಕಟ್ಟುವಂತಿದೆ. ಕಾವ್ಯದ ಏಕಾಂತದಲ್ಲೂ ಸಹ ಕವಿ ಕೇವಲ ಉದಾತ್ತತೆಯ ಕುರಿತು ಅಥವಾ ಲೋಕದ ಡೊಂಕು ಕುರಿತು ಉಪನ್ಯಾಸ ಮಾಡಿದಂತೆ ಕಾಣುತ್ತದೆ. ಕಾವ್ಯತನದ ಅಸ್ತಿತ್ವಕ್ಕೆ ಬೇಕಾದಷ್ಟು ತೊಂದರೆ ಮಾಡಬಲ್ಲದು.

ಹಾಗೇ ಕವಿಗೆ ಭಾಷಾ ಪ್ರೀತಿ ಪ್ರಾಸ ಪ್ರೀತಿ ಹೆಚ್ಚು. ಕೆಲವು ಕಡೆಗಳಲ್ಲಿ ಇದು ಮನಸ್ಸಿಗೆ ಮುದ ನೀಡುವಂತೆ ಭಾವಗಳನ್ನು ಮನಸ್ಸಿನಿಂದ ಮನಸ್ಸಿಗೆ ದಾಟಿಸುವ ದೋಣಿಯಾಗಿದೆ. ಆದರೆ ಕೆಲವು ಕಡೆ ಮೇಕಪ್ ಉದ್ದೇಶಕ್ಕಾಗಿ ಮೇಕಪ್ ಮಾಡಿಕೊಂಡು ಆ ಮೇಕಪ್ಪೇ ತನ್ನ ಅಸ್ತಿತ್ವವೆಂಬಂತೆ ಪರಿಭಾವಿಸುವ ಹುಡುಗಿಯೊಬ್ಬಳು ನೋಟಕರಲ್ಲಿ ಉಂಟು ಮಾಡುವ ನಿರ್ಲಕ್ಷ್ಯತೆಯನ್ನೂಉಂಟು ಮಾಡುತ್ತದೆ.

ಬಾಂದಳ, ಅಭೀಪ್ಸೆ, ಆಹ್ಲಾದ, ಅನೂಹ್ಯ, ವಿಕಲ್ಪ, ಅಕ್ರಾಂತ, ಲಾಸ್ಯ ಮುಂತಾದ ಪದ ಬಳಕೆಗಳು ಇವರಲ್ಲಿ ಹೆಚ್ಚು. ಹೆಚ್ಚೆಚ್ಚು ನವೋದಯದ ಛಾಪನ್ನು ಪ್ರತಿಬಿಂಬಿಸುತ್ತಾ, ಓದುಗರ ಮನಸ್ಸಿಗೆ ಇವರು ಹೇಳುವ ಗ್ರಾಮೀಣ ಬದುಕಿನ

ವಿವರ ನಿತ್ಯ ಪರಿಚಿತ. ಪ್ರಕೃತಿ ಕೂಡ ಆಪ್ತವಾಗದೆ ಎಲ್ಲೋ ಕೈಗೆಟುಕದ ಅಪರಿಚಿತ ಚಿತ್ರಗಳಾಗತೊಡಗುತ್ತವೆ.

ದೊರಂಗೌ ಅವರ ಅನುಭವದ ಮೂಲ ದ್ರವ್ಯ ಹಳ್ಳಿಗಾಡಿನ ಸೊಡಗನ್ನು ಬೆರೆಸಿಕೊಂಡಿದ್ದರೂ ಭಾಷೆ ಗ್ರಾಂಥಿಕವಾಗಿ ಕಾಣತೊಡಗಿದೊಡನೆ ಅವು ಮನೆ ಮಾತಾಗುವುದಿಲ್ಲ. ಗ್ರಾಮ್ಯ ಶಬ್ದಗಳನ್ನು ಅವರು ಎಷ್ಟೇ ಬಳಸಿದರೂ ದೊಡ್ಡ ಶಬ್ದಗಳ ಅಬ್ಬರ ಅವುಗಳ ಮೇಲು ದನಿಯನ್ನು ಮುಚ್ಚಿಹಾಕಿ ಬಿಡುತ್ತದೆ.

ಇವರ ಅತ್ಯಂತ ಜನಪ್ರಿಯ ಹಾಡಾದ 'ತೇರಾನೇರಿ ಅಂಬರದಾಗೆ ನೇಸರ ನಗುತಾನೆ' ಎನ್ನುವ ಹಾಡು ಅಚ್ಚ ಕನ್ನಡ ಶಬ್ದಗಳನ್ನು ಹೊಂದಿದ್ದರೂ ಅಪರಿಚಿತ ಲಕ್ಷಣಗಳನ್ನು ಹೊಂದಿದೆ ಇವರ ಬಹಳಷ್ಟು ಪ್ರಕೃತಿ ಗೀತೆಗಳು ಪ್ರಕೃತಿಯ ಹೊರ ಆಕೃತಿಯನ್ನು ಕಣ್ಣಿಗೆ ಕಟ್ಟಿಸಿ ಉಲ್ಲಾಸ ಮೂಡಿಸುತ್ತವೆಯಾದರೂ ಈ ಪ್ರಕೃತಿಯ ಜೀವಮಿಡಿತ ನಮ್ಮ ಅನುಭವಕ್ಕೆ ದಕ್ಕುವುದಿಲ್ಲ

ಈ ಕವಿಯಲ್ಲಿ ಮುಖ್ಯವಾಗಿ ನಾವು ಕಾಣುವುದು; ಕವಿತೆ ಬದುಕಿಗೆ ಜೋತು ಬೀಳುವುದಕ್ಕೆ ಒಂದು ಸಾಧನವಾಗದೆ, ಬದುಕಿನಿಂದ ವಿಮುಖವಾದಾಗ ಆತುಕೊಳ್ಳುವ ಆಸರೆಯಾಗಿ ಕಾಣುತ್ತದೆ. ಹೀಗಾಗಿ ಅವರು ಎಷ್ಟೇ ಪ್ರಯತ್ನಿಸಿದರೂ ತಪ್ಪದೆ ಒಂದು ಬಗೆಯ ತಾಟಸ್ಥ್ಯ ನಮಗೆ ಕಾಣುತ್ತದೆ ಮತ್ತು ಕವಿ ವಸ್ತುವಿನ ಹೊರಗೇ ಉಳಿದಾಗಲೆಲ್ಲಾ ಕವಿತೆಗೆ ಏರ್ಪಡುವ ವೈಯಕ್ತಿಕತೆ ಇಲ್ಲವಾಗಿಬಿಡುತ್ತದೆ.

ಇವೆಲ್ಲ ಕವಿಯನ್ನು ಮತ್ತು ಅವರ ಕಾವ್ಯ ನಿಷ್ಠೆಯನ್ನು ಮತ್ತಷ್ಟು ಪರೀಕ್ಷೆಗೊಳಪಡಿಸುವ ಸಹೃದಯ ಓದುಗನ ಅನಿಸಿಕೆಗಳೇ ಹೊರತು ಅವರ ಕಾವ್ಯದ ನೆಲೆಯನ್ನು ತೀರ್ಮಾನಿಸಲು ಯತ್ನಿಸುವ ಪ್ರಯತ್ನಗಳಲ್ಲ. ದೊರಂಗೌ ದನಿ ಕನ್ನಡದಲ್ಲಿ ಹಲವು ಕಾರಣಗಳಿಗೆ ತನ್ನ ಐಡೆಂಟಿಟಿ ಕಾಪಾಡಿಕೊಂಡಿದೆ.

ಜನಗಳಿಗೆ ಅರ್ಥವಾಗುವಂತೆ ನೇರವಾಗಿ ಬರೆಯುತ್ತಾ

"ಓಡುವ ನದಿಯ ತೊಡೆಯ ಮೇಲೆ
ಕಾಡು ಬೀಡು ಬಿಟ್ಟದೆ

ಗುಡ್ಡದ ತುದಿಯ ಮೇಲೆ
ಸೂರ್ಯ ಗೂಡು ಕಟ್ಟಿದೆ"

ಎಂಬಷ್ಟು ಸುಂದರವಾಗಿ ಪ್ರಕೃತಿಯನ್ನು ನಮ್ಮ ಮುಂದೆ ಸಾಕ್ಷಾತ್ಕರಿಸಬಲ್ಲ ದೊರಂಗೌ, ತಮ್ಮ ಹಾಗೂ ಕವನಗಳ ಸಾತ್ವಿಕತೆಯಿಂದ, ಸರಳ ಪ್ರೀತಿಯಿಂದ ನಮಗೆಲ್ಲಾ ಇಷ್ಟದ ಕವಿಯಾಗೇ ಉಳಿಯುತ್ತಾರೆ. ವಿಮರ್ಶಕ ಕೆ.ವಿ.ನಾರಾಯಣ ಅತ್ಯಂತ ಚೆನ್ನಾಗಿ ಕೆಲವು ಮಾತುಗಳಲ್ಲೇ ದೊರಂಗೌ ಅವರನ್ನು ಮೆಚ್ಚಿದ್ದಾರೆ. ಕವಿಯನ್ನು, ನಮ್ಮನ್ನೂ, ಆಲೋಚನೆಗೆ ಹಚ್ಚಿದ್ದಾರೆ.

# ಸಂಕೀರ್ಣ ಅನುಭವಗಳ ಜೀವಂತ ಅಭಿವ್ಯಕ್ತಿಯಾಗಿ ಮಣ್ಣಿನ ಮಾತುಗಳು

✍ ಬೈರಮಂಗಲರಾಮೇಗೌಡ
ಅಧ್ಯಾಪಕರು

ಬದುಕುವುದಕ್ಕಾಗಿ ಕೇವಲ ಮಣ್ಣನ್ನೇ ನಂಬಿಕೊಂಡಿರುವ ನಿರಂತರ ಒಡನಾಟ ಇರಿಸಿಕೊಂಡಿರುವ, ಎಷ್ಟು ದುಡಿದರೂ ಹೊಟ್ಟೆ ಬಟ್ಟೆಗೆ ಸಾಲದೆ ಸತತ ಶೋಕದಲ್ಲಿ ಮುಳುಗಿಹೋಗಿರುವವರಿಗಾಗಿ ಮರುಗುವ ಅವರನ್ನುದ್ಧರಿಸುವ ಹಲವು ಉಪಾಯಗಳನ್ನು ಬಲ್ಲವರಾಗಿದ್ದರೂ ಅಧಿಕಾರ ಬಲವಿಲ್ಲದೆ ಅವರಿಗಾಗಿ ಸ್ಪಂದಿಸುವ ಹೃದಯವುಳ್ಳ, ನೊಂದವರ ಬೆಂದವರ ಪಾಡನ್ನು ಹಾಡಾಗಿಸುವ ಮಾಂತ್ರಿಕ ಕಲೆ ಬಲ್ಲವರು ದೊಡ್ಡರಂಗೇಗೌಡರು. ಈ ಮಣ್ಣಿಗೆ ಅಂಟಿಕೊಂಡು ಬದುಕುತ್ತಿರುವ ಸಹಸ್ರ ಸಹಸ್ರ ಜನರ ಸಂಕೀರ್ಣ ಅನುಭವಗಳಿಗೆ ಗೌಡರು ಹೇಗೆ ಸ್ಪಂದಿಸಿದ್ದಾರೆ ಮತ್ತು ಆ ಅನುಭವಗಳನ್ನು ಎಷ್ಟೊಂದು ಜೀವಂತಾಗಿ ಅಭಿವ್ಯಕ್ತಿಸಿದ್ದಾರೆ ಎನ್ನುವುದಕ್ಕೆ ಅಕ್ಷರ ಸಾಕ್ಷಿಯಾಗಿರುವ "ಮಣ್ಣಿನ ಮಾತುಗಳು" ಅನ್ನುವ ಕೃತಿಯೇ ಬಂದು ಗೌರವಾನ್ವಿತ ಪ್ರಶಸ್ತಿಯಾಗಿ ಅವರನ್ನು ಬಹು ಎತ್ತರದಲ್ಲಿ ನಿಲ್ಲಿಸಿಬಿಡುತ್ತದೆ.

ಕನ್ನಡದಲ್ಲಿ ನವ್ಯಕಾವ್ಯ ಏಕಚಕ್ರಾಧಿಪತ್ಯವನ್ನ ಸ್ಥಾಪಿಸಿ ಉಳಿದೆಲ್ಲಕ್ಕೂ ಸೆಡ್ಡು ಹೊಡೆದು ಅಹಂಕಾರದ, ಮೆಟ್ಟಿಲುಗಳನ್ನು ದರ್ಪದಿಂದ ಏರಿಏರಿ ನಡೆಯುತ್ತಿದ್ದ ಕಾಲವಾಗಿದ್ದ ೧೯೭೬ರಲ್ಲಿ 'ಜಗಲಿ ಹತ್ತಿ ಇಳಿದು' ಕೃತಿಯ ಮೂಲಕ ಕಾವ್ಯ ಕ್ಷೇತ್ರವನ್ನು ಸಂಕೋಚದಿಂದ ಪ್ರವೇಶಿಸಿದ ದೊಡ್ಡರಂಗೇಗೌಡರು ಕಳೆದ ಇಪ್ಪತ್ತಾರು ವರ್ಷಗಳಿಂದ ಬರೆಯುತ್ತಲೇ ಇದ್ದಾರೆ. ಸರಾಸರಿ ಎರಡು ವರ್ಷಕ್ಕೊಂದರಂತೆ ಕವನಸಂಕಲನವನ್ನು ಪ್ರಕಟಿಸುತ್ತಲೇ ಬಂದಿದ್ದಾರೆ. ಕಾವ್ಯನಿರ್ಮಿತಿಯನ್ನು ಕುರಿತಾದ ಶ್ರದ್ಧೆ, ತನ್ಮಯತೆಗಳನ್ನುಳಿಸಿಕೊಂಡೇ ಗೌಡರು ಈಗಲೂ ಬರೆಯುತ್ತಿದ್ದಾರೆ. ನವ್ಯ ಕವಿತೆಗಳಿಂದ ಆರಂಭವಾದ ಅವರ ಕಾವ್ಯಕೃಷಿ ಕಾಲಧರ್ಮಕ್ಕನುಗುಣವಾಗಿ ಭಾವಗೀತೆಗಳತ್ತ ಹೊರಳಿದೆ, ಪ್ರಗಾಢವಾಗಿ ಬೆಳೆದಿದೆ. ಛಂದಸ್ಸು, ಭಾಷಾಪ್ರಯೋಗ, ನಿರೂಪಣಾ ವಿಧಾನಗಳಲ್ಲಿ ಸಂಕಲನದಿಂದ ಸಂಕಲನಕ್ಕೆ ಹೊಸತನ, ಪ್ರಯೋಗಶೀಲತೆ ಕಾಣಸಿಕೊಂಡಿದ್ದರೂ ಮೌಲ್ಯಗಳ ಅಧಃಪತನ, ಅನ್ಯಾಯ, ಅಸಮಾನತೆಗಳನ್ನು ಕಂಡಾಗ ಉಗ್ರವಾಗಿ ಪ್ರತಿಕ್ರಿಯಿಸುವುದನ್ನು ಅವರು ಬಿಟ್ಟುಕೊಟ್ಟಿಲ್ಲ, ಅವರ ಕಾವ್ಯಧಾರೆ ಕೆಲವೊಮ್ಮೆ ಮಳೆಗಾಲದ ತುಂಬು ಹೊಳೆಯಂತೆ ಎರಡೂ ದಡಗಳನ್ನು ಸವರಿಕೊಂಡು ಹರಿದಿರಬಹುದು, ಕೆಲವೊಮ್ಮೆ ಬಹುಬೇಸಗೆಯ ಹೊಡೆತಕ್ಕೆ ಬಸವಳಿದ ತೊರೆಯಂತೆ ಸೊರಗಿರಬಹುದು. ಆದರೆ ಎಂದೂ ಬತ್ತಿಹೋಗದೆ ಹರಿಯುತ್ತ ಇರುವುದೇ ಅದರ ಜೀವಂತಿಕೆಗೆ ಸಾಕ್ಷಿಯಾಗಿದೆ. ಬದುಕನ್ನು ತುಂಬ ಪ್ರೀತಿಸುವ ಗೌಡರು ಅಲ್ಲಿನ ಸಿಹಿಕಹಿಗಳನ್ನು

ಸಮಚಿತ್ತದಿಂದ ಸ್ವೀಕರಿಸುವ ಸ್ಥಿತಪ್ರಜ್ಞರಾಗಿಯೇ ಸೃಷ್ಟಿಶೀಲತೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ

ಗೌಡರ ಕಾವ್ಯಕ್ಕೆ ತನ್ನದೇ ಆದ ಒಂದು ಗತ್ತಿದೆ, ಬೆಡಗಿದೆ, ಸ್ವಾಭಿಮಾನದ ದನಿಯನ್ನು ಬಿಟ್ಟುಕೊಡದ ಕೆಚ್ಚಿದೆ. ಜನಸಾಮಾನ್ಯರ ಬದುಕಿನ ಮಿಡಿತಗಳಿಗೆ ತೆರೆದುಕೊಂಡಿರುವ ಅವರ ಕಾವ್ಯದಲ್ಲಿ ಮೊದಲ ಮಳೆ ಹೊತ್ತು ತರುವ ಮಣ್ಣಿನ ಗಂಧದ ಪುಳಕ ಸ್ವಭಾವಿಕವಾಗಿಯೇ ತುಂಬಿಕೊಂಡಿದೆ. ನೆಲದ ಸತ್ವ ತುಂಬಿಕೊಂಡು ನಳನಳಿಸುವ ಬೆಳೆಯನ್ನು ದೊಡ್ಡರಂಗೇಗೌಡರು ನೀಡಿದ್ದರೂ, ಸಿದ್ಧಯ್ಯ ಪುರಾಣಿಕರಂಥ ಚಿಂತನಶೀಲ ಸಾಹಿತಿ, ಜಿ. ಎಸ್. ಆಮೂರ್‌ರಂಥಹ ನಿಷ್ಠುರ ವಿಮರ್ಶಕರು ಗೌಡರ ಕಾವ್ಯ ಕುರಿತು ಒಳ್ಳೆಯ ಮಾತುಗಳನ್ನು ಆಡಿದ್ದರೂ ಗೌಡರಿಗೆ ಈ ವೇಳೆಗೆ ದೊರೆಯ ಬೇಕಿದ್ದ ಪ್ರಸಿದ್ಧಿ - ಸ್ಥಾನಮಾನಗಳಿಂದ ಅವರು ವಂಚಿತರಾಗಿರುವುದು ನಂಬಲೇಬೇಕಾದ ಕಹಿ ಸತ್ಯವೂ ತೀವ್ರತರ ವ್ಯಸನದ ಸಂಗತಿಯೂ ಆಗಿದೆ.

ಒಡಲಾಳದಲ್ಲಿ ನೋವಿನ ಕಿಚ್ಚುಗಳನ್ನಿಟ್ಟುಕೊಂಡು ಬದುಕು ಸೇರುವವರ ಬಗೆಗೆ, ನಿರಂತರವಾದ ಶೋಷಣೆ ಅನ್ಯಾಯ ದೌರ್ಜನ್ಯಗಳಿಗೆ ಬಲಿಯಾಗಿ ಸರಿಯಾಗಿ ಬದುಕುತ್ತಿರುವವರ ಬಗೆಗೆ ಸಹಾನುಭೂತಿಯಿಂದ ಪದ್ಯ ಬರೆಯುವ ದೊಡ್ಡರಂಗೇಗೌಡರೇ ಸಾಹಿತ್ಯ ಕ್ಷೇತ್ರದಲ್ಲಿ ಶೋಷಣೆಗೂ ಅನ್ಯಾಯಕ್ಕೂ ಗುರಿಯಾಗಿದ್ದಾರೆನ್ನುವುದು ಅವರನ್ನು ತೀರ ಹತ್ತಿರದಿಂದ ಬಲ್ಲ, ಅವರ ವ್ಯಕ್ತಿತ್ವ ಸ್ವಭಾವಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವ, ಅವರ ಸಾಹಿತ್ಯ ಶ್ರೇಷ್ಠತೆಯನ್ನು ಗುರುತಿಸಿರುವ ಸಹೃದಯರಿಗೆ - ಅಭಿಮಾನಿಗಳಿಗೆ ಚೆನ್ನಾಗಿ ಮನವರಿಕೆಯಾಗುವ ಸಂಗತಿ. ಎಲ್ಲ ಕಾಲಗಳಲ್ಲಿ ಎಲ್ಲ ದೇಶಗಳಲ್ಲಿ ನಿಜವಾದ ಯೋಗ್ಯತೆಯಿದ್ದೂ ವಿಮರ್ಶಕರ ಅವಜ್ಞೆಗೆ ಗುರಿಯಾದ ಶ್ರೇಷ್ಠ ಸಾಹಿತಿಗಳು ಇದ್ದೇ ಇರುವುದು, ಸಹೃದಯ ವಿಮರ್ಶಕ ಅವತರಿಸಿ ಮುಂದೊಬ್ಬ ನಿರ್ಲಕ್ಷ್ಯಕ್ಕೆ ಗುರಿಯಾದ ಸಾಹಿತಿಯ ಶ್ರೇಷ್ಠ ಸಾಹಿತ್ಯವನ್ನು ಸರಿಯಾದ ರೀತಿಯಲ್ಲಿ ಬೆಲೆಕಟ್ಟಿ ಅವನಿಗಾದ ಅನ್ಯಾಯವನ್ನು ಸರಿಪಡಿಸುವುದೂ ಸಾಹಿತ್ಯ ಚರಿತ್ರೆಯಲ್ಲಿ ಸಾಮಾನ್ಯವಾಗಿ ಕಂಡುಬರುವ ಸಂಗತಿ. ಅಂಥ ದಿನಗಳಿಗಾಗಿ, ಅಂಥ ವಿಮರ್ಶಕನಿಗಾಗಿ ಕಾಯುವ ಕಾಲ ಇದಾಗಿದೆಯೆಂದು ಗೌಡರ ಸಾಹಿತ್ಯಾಭಿಮಾನಿಗಳು ಸದ್ಯಕ್ಕೆ ಸಮಾಧಾನ ಪಟ್ಟುಕೊಳ್ಳಬೇಕಾಗಿದೆಯಷ್ಟೆ.

ಅಸಲು ಕಸುಬಿನ ಕುಸುರಿ ಕೆಲಸದ ಬೆವರ ಹನಿಯಾಗಿರುವ ಗೌಡರ ಕಾವ್ಯವನ್ನು ಶ್ರದ್ಧೆಯಿಂದ ಓದದೆಯೇ ಸಿನಿಮಾಕ್ಕೆ ಹಾಡು ಬರೆದಾಕ್ಷಣ ಅವರ ಕಾವ್ಯದ ಸತ್ವವೇ ಉಡುಗಿಹೋಯಿತೆಂಬಂತೆ ಮಾತನಾಡುವ ವಿಮರ್ಶಕ ಪ್ರಭೃತಿಗಳ ಅವಿವೇಕ ನಗೆತರಿಸುತ್ತದೆ. ಕಾಮಾಲೆಕಣ್ಣಿನ ಇಂತಹ ವಿಮರ್ಶಕ ಮಹಾಶಯರ ಬೇಜವಬ್ದಾರಿತನದ ಮಾತುಗಳ ನಡುವೆಯೂ ಗೌಡರು ಕೃತಿಯಿಂದ ಕೃತಿಗೆ ಬೆಳೆಯುತ್ತಲೇ ಎತ್ತರೆತ್ತರಕ್ಕೆ ಏರುತ್ತಲೇ ಇರುವ ಸತ್ಯವಿಯಾಗಿ ರೂಪುಗೊಂಡಿ ದ್ದಾರೆನ್ನುವುದು ಪೂರ್ವಾಗ್ರಹಗಳಿಲ್ಲದ ಸಹೃದಯರಿಗಂತೂ ಖಂಡಿತಾ ತಿಳಿಯುತ್ತದೆ. ದೊಡ್ಡರಂಗೇಗೌಡರ ಕಾವ್ಯ ಮತ್ತು ವ್ಯಕ್ತಿತ್ವ ಕುರಿತ ಈ ಮಾತುಗಳ ಬೆಳಕಿನಲ್ಲಿ ಇನ್ನು ಅವರ ಮಣ್ಣಿನ ಮಾತುಗಳು ಕೃತಿಯ ಅವಲೋಕನಕ್ಕೆ ತೊಡಗಬಹುದೆನಿಸುತ್ತದೆ.

'ಮಣ್ಣಿನ ಮಾತುಗಳು' ತಲಾ ನಾಲ್ಕು ಸಾಲುಗಳಿಂದ ಕೂಡಿರುವ ೭೮೬ ಪುಟಾಣಿ ಪದ್ಯಗಳ ಸಂಕಲನ. ಇವುಗಳನ್ನು ಗೌಡರು ಮುಕ್ತಕಗಳೆಂದು ಕರೆದಿದ್ದಾರೆ.

ಅರ್ಥದ ದೃಷ್ಟಿಯಿಂದ ಸ್ವಯಂಪೂರ್ಣವಾದ ಪದ್ಯ ಅಥವಾ ಕಾವ್ಯವನ್ನು ಮುಕ್ತಕ ಎಂದು ಗುರುತಿಸಲಾಗಿದೆ. ಭಾರತದ ಎಲ್ಲ ಭಾಷಾ ಸಾಹಿತ್ಯಗಳಲ್ಲೂ ಜನಪ್ರಿಯವಾಗಿರುವ ಮುಕ್ತಕಗಳ ಪರಂಪರೆ ತುಂಬಾ ಪ್ರಾಚೀನವಾದದ್ದು. ಹತ್ತುಕಟ್ಟುವ ಬದಲು ಒಂದು ಮುತ್ತು ಕಟ್ಟುವುದು ಕಿರಿದರಲ್ಲಿ ಹಿರಿದರ್ಥವನ್ನು ಮೈಗೂಡಿಸಿಕೊಂಡಿರುವುದು, ಕ್ಷಣದ ಚಿಂತನೆಗೆ ಮಿಂಚಿನ ಚೌಕಟ್ಟು ಹಾಕುವುದು ಮುಕ್ತಕಗಳ ವೈಶಿಷ್ಟ್ಯ. ಸರ್ವಜ್ಞನ ತ್ರಿಪದಿಗಳು, ಡಿ.ವಿ.ಜಿ. ಅವರ 'ಮಂಕುತಿಮ್ಮನ ಕಗ್ಗ', 'ಮರುಳ ಮುನಿಯನ ಕಂತೆ', ಸಿದ್ಧಯ್ಯ ಪುರಾಣಿಕರ 'ಮರುಳಸಿದ್ಧನ ಕಂತೆ' ಇತ್ಯಾದಿಗಳನ್ನು ಬಿಟ್ಟರೆ 'ಚುಟುಕ' ಎನ್ನುವ ಹೆಸರಿನಲ್ಲಿ ಮುಕ್ತಕಗಳನ್ನು ಬರೆದು ಪ್ರಸಿದ್ಧರಾದವರು ದಿನಕರ ದೇಸಾಯಿ. 'ಚುಟುಕ ಬ್ರಹ್ಮ' ಎಂದೇ ಹೆಸರಾದ ಅವರು ಸಮಾಜ ವಿಮರ್ಶೆಯ ಅಸ್ತ್ರವಾಗಿ ಚುಟಕಗಳನ್ನು ಬಳಸಿಕೊಂಡು ಚುರುಕು ಮೆಣಸಿನಕಾಯಿಯಿಂಥ ಶ್ರೇಷ್ಠ ರಚನೆಗಳಿಂದ ತಮಗೆ ತಾವೇ ಸಾಟಿಯಾದರು. ಅವರ ರಚನೆಗಳಿಂದಲೇ ಪ್ರೇರೇಪಣೆ ಪಡೆದುಕೊಂಡು ಅವರಿಂದಲೇ ಮೆಚ್ಚುಗೆ ಗಿಟ್ಟಿಸಿಕೊಂಡು, ಅವರ ಪರಂಪರೆಯನ್ನು ಅಷ್ಟೇ ಸಮರ್ಪಕವಾಗಿ ದೊಡ್ಡರಂಗೇಗೌಡರು ಮುಂದುವರೆಸಿಕೊಂಡು ಹೋಗಿರುವುದನ್ನು 'ಮಣ್ಣಿನ ಮಾತುಗಳು' ಕೃತಿಯಲ್ಲಿ ಕಾಣಬಹುದಾಗಿದೆ.

'ಮಣ್ಣಿನ ಮಗ' ಅಂಕಿತದಲ್ಲಿ ರಚನೆಯಾಗಿರುವ ಈ ಮುಕ್ತಕಗಳಲ್ಲಿ ಮಣ್ಣಿನ ಮಗನೊಬ್ಬನ ವೈವಿಧ್ಯಮಯವೂ ಸಂಕೀರ್ಣವು ಆದ ಅನುಭವಗಳು ಅನಿಸಿಕೆಗಳು ತೀವ್ರಭಾವನೆಗಳು ಬೆಳ್ಳಿಯ ಚೌಕಟ್ಟಿನಲ್ಲಿ ಬಂಧಿತವಾಗಿವೆ. ಉಲ್ಲಾಸ ಉತ್ಸಾಹಗಳು ಗರಿಗೆದರಿ ನರ್ತಿಸುವಂತೆ ವಿಷಾದ ಜಿಗುಪ್ಸೆಗಳು ಹಣಿಕಿವೆ. ಸಮಾಜ ವಿಮರ್ಶೆಯ ಜೊತೆಗೆ ಚಿಂತನಶೀಲತೆ, ನೀತಿಭೋದನೆ, ಕನಸುಗಾರಿಕೆಯೂ ಮೈದುಂಬಿಕೊಂಡಿದೆ.ಪ್ರೇಮ ಕಾಮ, ಸಂಸಾರ, ಸ್ವಾಭಿಮಾನ, ಸಾಹಿತ್ಯ ಸಂಸ್ಕೃತಿ, ವಿದ್ಯೆ, ಶೀಲ, ಪ್ರಕೃತಿ, ಪ್ರತಿಭೆ, ಭಕ್ತಿ, ಶಿಸ್ತು, ಮದುವೆ, ಸಾವು, ರಾಜಕಾರಣ... ಇತ್ಯಾದಿಯಾಗಿ ಬದುಕಿನಲ್ಲಿ ನಮಗೆ ಮುಖಾಮುಖಿಯಾಗುವ ನೂರಾರು ಸಂಗತಿಗಳು ಇಲ್ಲಿ ಸರಳ ಸುಂದರ ಚೌಪದಿಗಳಾಗಿ ಅವತರಿಸಿವೆ. ಮಣ್ಣಿನ ಮಗನ ತಾಜಾ ಅನುಭವಗಳು ಸಹೃದಯರನ್ನು ಎಷ್ಟರ ಮಟ್ಟಿಗೆ ಕೆಣಕುತ್ತವೆ, ಕಾಡುತ್ತವೆ, ಆತ್ಮಾವಲೋಕನಕ್ಕೊಳಪಡಿಸುವ ಮೋಡಿ ಹಾಕುತ್ತವೆ ಎನ್ನುವುದಕ್ಕೆ ಜೀವಂತ ನಿದರ್ಶನ ಈ ರಚನೆಗಳಲ್ಲಿ ದೊರೆಯುತ್ತದೆ.

ವರದಕ್ಷಿಣೆ ಎಂಬ ದುಷ್ಟರೋಗ ನಮ್ಮಕ್ಕತಂಗಿಯರ ಪಾಲಿಗೆ ಎಂಥ ಕ್ರೂರ ಪಾಶವಾಗಿದೆಯೆನ್ನಿಸುವುದು ನಮ್ಮೆಲ್ಲರ ಅನುಭವಕ್ಕೆ ವೇದ್ಯವಾಗಿರುವ ಸಂಗತಿ. ಗೌಡರ ದೃಷ್ಟಿಯಲ್ಲಿ ವರದಕ್ಷಿಣೆ ಎನ್ನುವುದು ನಮ್ಮ ಸಂಸ್ಕೃತಿಯ ಹಿರಿಮೆಯನ್ನು ಭಂಗಿಸುವ ಪಿಡುಗು. ನಮ್ಮ ನಾಡಿನ ಅರ್ಬುದ ರೋಗ, ಗಂಡುಗಳು ತಮ್ಮ ವ್ಯಕ್ತಿತ್ವವನ್ನು ಮರ‍್ಯಾದೆ ಬಿಟ್ಟು ಹರಾಜು ಹಾಕಿಕೊಳ್ಳುವ ಸಾಧನ. ಅನುರಾಗವನ್ನು ಸದೆಬಡಿದು ಸಮಾಜವನ್ನು ವಿಗತಿಗೆ ಕೊಂಡೊಯ್ಯುವ ಭೂತ. ಕನ್ನಡದ ವಿಷಯ ಬಂದಾಗಲಂತೂ ಗೌಡರು ರಸರೋಮಾಂಚನಕ್ಕೊಳಗಾಗಿ ಉಕ್ಕುವ ಅಭಿಮಾನದಿಂದ ಮಾತನಾಡುತ್ತಾರೆ. ಕನ್ನಡದ ಪ್ರೀತಿಯನ್ನು ಎಷ್ಟೆಲ್ಲಾ ರೀತಿಗಳಲ್ಲಿ ಅಭಿವ್ಯಕ್ತಿಸಿದರೂ ಅವರ ಮನತಣಿಯದು. ಕನ್ನಡದ ಬಗೆಗೆ ಅವರಿಗಿರುವ ಅಭಿಮಾನವನ್ನು ಮೊಗೆಮೊಗೆದು ಸುರಿದಿರುವ. ಹಲವು ಪದ್ಯಗಳನ್ನು ಈ ಸಂಕಲನದಲ್ಲಿ ಕಾಣಬಹುದಾಗಿದೆ. ಅವರು ಹೇಳುತ್ತಾರೆ - "ಕನ್ನಡದಲ್ಲಿ ಸಾಹಿತ್ಯ, ಸಂಗೀತ, ಶಿಲ್ಪಕಲೆ, ನಾಟ್ಯಕಲೆ ಎಲ್ಲವೂ ಇದೆ. ಸಂಸ್ಕೃತಿಯ ತವರಾಗಿರುವ ಕನ್ನಡದಲ್ಲಿ

ಇಲ್ಲದಿರುವುದು ಎಲ್ಲಿಯೂ ಇಲ್ಲ. ಕನ್ನಡವೆಂದರೆ ಹೃದಯದ ಸಿಹಿಮುದ ಸನ್ನೆಡೆ ಸಂಪದ. ಕನ್ನಡ ಭಾಷೆಗಿದೆ ಸಂಸ್ಕೃತಿಯ ಸಿಹಿಹದ. ಇದು ಕರ್ಣಾನಂದಕರ "ನಲ್ನುಡಿಯ ಕನ್ನಡವೇ ಕನ್ನಡಿಗರ ಕಲ್ಪವೃಕ್ಷವಾಗಿದ್ದರೂ ಕನ್ನಡಿಗರನ್ನು ಕನ್ನಡಿಗರೇ ಬೆಂಬಲಿಸದಿರುವುದರಿಂದಲೂ ನಮ್ಮವರೇ ನಮ್ಮ ಕಾಲೆಳೆಯುತ್ತಿರುವುದರಿಂದಲೂ, ನಮಗೆ ನಾವೇ ಅಡ್ಡಿಯಾಗಿರುವುದರಿಂದಲೂ ನಾವು ಸಾಧಿಸಬೇಕಾದ ಮುನ್ನಡೆ ಸಾಧಿಸಲಾಗದೆ ಹಿಂದುಳಿದಿದ್ದೇವೆ." ಎಂದು ಹೇಳುವುದರ ಮೂಲಕ ಕನ್ನಡದ ನಿಜವಾದ ಸಮಸ್ಯೆಗಳನ್ನು ಅವುಗಳ ಹಿಂದಿರುವ ಮನೋಧರ್ಮವನ್ನು ಗುರುತಿಸಿ ಅವುಗಳಿಂದ ಬಿಡಿಸಿಕೊಳ್ಳಲು ಅಗತ್ಯವಾದ ಸೂಚನೆಗಳನ್ನು ನೀಡುತ್ತಾರೆ. ಕನ್ನಡ ಜನರನ್ನು ಸೌಜನ್ಯಸಂಪನ್ನರೆಂದು ಕನ್ನಡ ಮನವನ್ನು ಸದ್ಭಾವನ ಬೃಂದಾವನವೆಂದೂ ಕನ್ನಡ ಗಣವನ್ನು ಔದಾರ್ಯದ ನವನಂದನವನವೆಂದೂ ಕರೆದು ಕನ್ನಡ-ಕನ್ನಡಿಗರನ್ನು ಕುರಿತು ತಮ್ಮ ಪ್ರೀತಿಯ ಮತ್ತೊಂದು ಮಜಲನ್ನು ತೋರಿದ್ದಾರೆ.

ಸತ್ಪುರುಷ ಲಕ್ಷಣವನ್ನು ಗೌಡರು ಗುರುತಿಸಿರುವುದು ಹೀಗೆ "ಎನಿತೆನಿತು ಚಿವುಟಲಿ ಬೆಳೆಯುವುದು ಬೇರಿರುವ ಮರ, ಎನಿತೆನಿತು ಮೋಡ ಮುಸುಕಲಿ ಹೊಳೆಯುವನು ಹುಣ್ಣಿಮೆ ಚಂದ್ರ, ಎನಿತೆನಿತು ಚಿಲುಮೆ ಮೊಗೆಯಲಿ ಉಕ್ಕುವುದು ನೀರಿನೊತ್ತರ ತಿಳಿಜಲದ ಒಜ್ಜರದಂತೆ ಸತ್ಪುರುಷ ಚಿತ್ತ."

ಎಲ್ಲಿಯೂ ಸಲ್ಲಲಾಗದ ಹುಂಬರು ಜಡಮತಿಗಳು, ಕೆಲಸಗಳ್ಳರು ಮಾಸ್ತರಿಕೆಯ ದರ್ಬಾರು ನಡೆಸುತ್ತಿರುವ ಇಂದಿನ ದಿನಗಳಲ್ಲಿ ಶೈಕ್ಷಣಿಕ ಕ್ಷೇತ್ರ ತಿಪ್ಪೆಗುಂಡಿಯ ಹೊಡೆಯಲಾರಂಭಿಸಿದೆ. ಶಿಷ್ಯರ ಉದ್ಧಾರಕ್ಕೆ, ಅವರ ಸರ್ವತೋಮುಖ ಬೆಳವಣಿಗೆಗೆ ದುಡಿಯುವ ಅಧ್ಯಾಪಕರೇ ಇಲ್ಲವೇನೋ ಎಂಬಂಥ ಸ್ಥಿತಿ ನಿರ್ಮಾಣಗೊಂಡಿರುವಾಗ ಗೌಡರು ಆದರ್ಶ ಅಧ್ಯಾಪಕನ ಲಕ್ಷಣಗಳನ್ನು ಹೀಗೆ ಪಟ್ಟಿ ಮಾಡುತ್ತಾರೆ. "ಅಭಿವ್ಯಕ್ತಿ ಅಧ್ಯಾಪಕನಿಗೆ ಅತ್ಯಗತ್ಯ, ಅಧ್ಯಯನ ಹೃದಯದಷ್ಟೇ ಮುಖ್ಯ. ಜ್ಞಾನ ಚಿಂತನ ಉಸಿರಾಟದಷ್ಟು ಸಖ್ಯ, ಚಾರಿತ್ರ ಅಧ್ಯಾಪಕನ ಹೃದಯ ಕವಾಟ."

ಕಾಲಾಧೀನನಾದ ಮಾನವ ಆಶಾಪಾಶಗಳಲ್ಲಿ ಬಂಧಿತನಾಗಿದ್ದಾನೆ. ಬದುಕು ಯಾವುದೇ ಕ್ಷಣದಲ್ಲಿ ಮುಗಿಯುವುದೆನ್ನುವುದು ಮತ್ತೆ ಮತ್ತೆ ಅರಿವಿಗೆ ಬರತ್ತಿದಾಗ್ಯೂ ತನಗಾಗಿ ತನ್ನವರಿಗಾಗಿ ನಾಳೆಗಾಗಿ ಬಡಿದಾಡುವುದನ್ನು ಅವನು ಬಿಟ್ಟವನೇ ಅಲ್ಲ. ಈ ಕ್ಷಣಭಂಗುರವಾದ ಬದುಕಿನಲ್ಲಿ ಮಾನವನ ಸ್ಥಿತಿ ಹೇಗಿದೆ ಎನ್ನುವುದನ್ನು ಗೌಡರು ಹೀಗೆ ಹೇಳುತ್ತಾರೆ.

ಚಿತ್ತವೆಂಬ ಏಡಿ ದೇಹವೆಂಬ ತೀರದಲ್ಲಿ
ಆಸೆಯೆಂಬ ಬಲವ ಹೊಕ್ಕು ಹೊಕ್ಕು
ಚಪಲವೆಂಬ ದೂಕರ ನೂರಜೆ ತಿನ್ನುತ್ತಾ
ಕಡಲ ಈಜುವುದು ನೋಡಾ.

ಗಂಡು ಹೆಣ್ಣಿನಲ್ಲಿ ವಯೋಧರ್ಮಕ್ಕನುಗುಣವಾಗಿ ಮೂಡುವ ಶಾರೀರಿಕ ಚಪಲಗಳನ್ನು ತೀರಿಸಿಕೊಳ್ಳುವುದಕ್ಕೆ, ಕಾಮದಾಹವನ್ನು ತಣಿಸಿಕೊಳ್ಳುವುದಕ್ಕೆ ಸಮಾಜ ನೀಡಿರುವ ಪರವಾನಗಿಯೇ ಮದುವೆ ಮತ್ತು ಅದರ ಫಲವಾದ ದಾಂಪತ್ಯ ಎಂಬ ತಪ್ಪು ತಿಳುವಳಿಕೆ ನಮ್ಮನ್ನು ಆವರಿಸಿಕೊಂಡಿದೆ. ಮದುವೆ ದಾಂಪತ್ಯಗಳ ನಿಜವಾದ ಅರ್ಥವನ್ನು ಗೌಡರು ಬಗೆಯುವುದು ಹೀಗೆ "ಗಂಡು ಹೆಣ್ಣು ಕೂಡಿದೆಲ್ಲ ಮದುವೆ

ಅಲ್ಲವಯ್ಯ ಎರಡು ಮನಗಳ ಮಿಲನ ಮದುವೆ ಕಾಣಯ್ಯ. ಎರಡು ದೇಹಗಳು ಒಟ್ಟಿಗೆ ಕೂಡಬಹುದಯ್ಯ, ಹೃದಯಗಳ ಕೊಡಿಕೆ ನಿಜದಾಂಪತ್ಯವಯ್ಯ." ಹೆಣ್ಣಿನ ನಡೆ-ನುಡಿ, ಬೆಡಗು ಬಿನ್ನಾಣ, ಸ್ವಭಾವ ಸ್ವರೂಪ ಸಹನೆ ಸಾಧನೆ ಇತ್ಯಾದಿಗಳನ್ನು ಕುರಿತು ಮಾತನಾಡದ ಜನರೇ ನಮ್ಮಲ್ಲಿಲ್ಲ. ಹೆಣ್ಣಿನ ಗುಣಾವಗುಣಗಳ ವಿಸ್ತಾರವಾದ ಚಿತ್ರಣ ನಮ್ಮ ಎಲ್ಲ ಕಾವ್ಯಗಳಲ್ಲೂ ಕಂಡುಬರುತ್ತದೆ. ಹೆಣ್ಣನ್ನು ಆದರ್ಶದ ಔನ್ನತ್ಯಕೇರಿಸಿ ಮೆಚ್ಚುಗೆಯ ನುಡಿಗಳನ್ನಾಡಿದವರಿರುವಂತೆಯೇ ಹೆಣ್ಣು ಎಲ್ಲ ಪಾಪಗಳ ಮೂಲವೆಂದು ಪಾತಾಳಕ್ಕೆ ತಳ್ಳಿ ಭತ್ಸರನೆ ಮಾಡಿರುವವರೂ ಉಂಟು. ಈ ಎರಡೂ ಅತಿರೇಕಗಳಿಂದ ಹೊರತಾಗಲು ಒಂದು ಸುವರ್ಣಮಾಧ್ಯಮದಲ್ಲಿ ಹೆಣ್ಣು ಇರಬಹುದೇನೋ ಅಥವಾ ನಮ್ಮ ಬುದ್ಧಿಭಾವಗಳಿಗೆ ಅನುಗುಣವಾಗಿ ಹೆಣ್ಣು ಗೋಚರಿಸುತ್ತಾಳೋ ಏನೋ. ಈ ಎಲ್ಲಾ ಅಭಿಪ್ರಾಯ ಮತ್ತು ಅನುಭವಗಳಿಂದ ಪೋಷಿತರಾಗಿ ಗೌಡರು ಹೆಣ್ಣನ್ನು ಕುರಿತು ವ್ಯಕ್ತಪಡಿಸುವ ನಿಲುವು ಹೀಗಿದೆ.

"ಗಂಡಿನವನತಿಗೆ ಹೆಣ್ಣು ಕಾರಣವಯ್ಯ ಗಂಡಿನುನ್ನತಿಗೂ ಹೆಣ್ಣೇ ಕಾರಣವಯ್ಯ, ಗಂಡು ಹೆಣ್ಣು ಪರಸ್ಪರ ಅರಿಯಬೇಕಯ್ಯ. ಅರಿತರೆ ಮಾತ್ರ ಸುಖ ಸಂಸಾರವಯ್ಯ"

ಋಷಿತನವನ್ನು ಮೈಗೂಡಿಸಿಕೊಳ್ಳದವನು, ಆವಾಹಿಸಿಕೊಳ್ಳದವನು, ಕವಿಯಾಗಲಾರ ಎಂಬ ಮಾತಿದೆ. ಮಾಗದ ಅನುಭವಗಳನ್ನು ಜಾಳುಜಾಳಾಗಿ ಹಸಿಹಸಿಯಾಗಿ ಉದುರಿಸುವ ಸಂತೆಯ ಹೊತ್ತಿಗೆ ಮೊಳನೇಯುವ ಕುಕವಿಗಳೇ ಅಧಿಕ ಸಂಖ್ಯೆಯಲ್ಲಿರುವ ಪ್ರಸ್ತುತ ಸಂದರ್ಭದಲ್ಲಿ ಕವಿ-ಕಾವ್ಯ ಸ್ವರೂಪವನ್ನು ಕುರಿತಂತೆ ಗೌಡರ ಅಭಿಪ್ರಾಯ ಹೀಗೆ ವ್ಯಕ್ತವಾಗುತ್ತದೆ. "ಯುಗಯುಗದ ಚಿಂತನೆಗಳು ಮಾತಾಗುತ್ತವೆ ಕವಿಯಲ್ಲಿ ಕೋಟಿ ಕೋಟಿ ಮೌನಗಳು ನಾಲಗೆಯಾಗುತ್ತವೆ ಕವಿಯ ಕಾವ್ಯದಲ್ಲಿ. ಎಲ್ಲಿ ಸಮುದಾಯದ ಕಳಕಳಿ ಅಲ್ಲಿ ಚೈತನ್ಯಮಯ ವಾಗರ್ಥ ರಂಗವಲ್ಲಿ, ಮಹಾಕವಿ ಜಗದ ದ್ರಷ್ಟಾರ ಕಾಣೋ."

ಮಾತಿನ ಮಹತ್ವವನ್ನು ಕುರಿತು ಒಂದು ನಾಣ್ನುಡಿ 'ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು' ಎನ್ನುತ್ತದೆ ಬಸವಣ್ಣ 'ನುಡಿದರೆ ಮುತ್ತಿನ ಹಾರದಂತಿರಬೇಕು' ಎನ್ನುತ್ತಾರೆ, ಪುರಂದರದಾಸರು ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ', ಎನ್ನುತ್ತಾರೆ ಸರ್ವಜ್ಞನಾದರೂ 'ಮಾತಿನಿಂ ನಡೆನುಡಿಯು ಮಾತಿನಿಂ ಹಗೆಹೊಲೆಯು' ಎನ್ನುತ್ತಾನೆ. ಈ ಎಲ್ಲ ವಿಚಾರಗಳ ಅಂತಸತ್ವವನ್ನು ಅರಗಿಸಿಕೊಂಡು ಗೌಡರು ಅಭಿಪ್ರಾಯ ತಳೆಯುವುದು ಹೀಗೆ. "ಮಾತು ಮಲ್ಲಿಗೆಯುಹುದು, ಹೂವು ಪರಿಮಳ ತಹುದು. ಜೋತು ಬಿದ್ದರೆ ನುಡಿವ ಚಪಲಕ್ಕೆ ಗರಳವಾಗುವುದು, ಕಾತು ಹಣ್ಣಾದರೆ ಹೃದಯದನಿತು ಬಿತ್ತು. ಮಾತು ಸ್ನೇಹದ ಸೇತು."

ದೇಶದ ಉದ್ಧಾರದಲ್ಲಿ ಪ್ರಮುಖ ಪಾತ್ರ ವಹಿಸಬೇಕಾದವರೆಲ್ಲ, ಅಖಂಡ ಭ್ರಷ್ಟಾಚಾರದಲ್ಲಿ ಮುಳುಗಿಹೋಗಿ ಕಬಳಿಕೆಯಲ್ಲಿ ವಿಶ್ವದಾಖಲೆಯನ್ನೇ ಸೃಷ್ಟಿಸಲು ಹೊರಟಿದ್ದಾರೆ, ಸತ್ಯ ನ್ಯಾಯ, ಕರ್ಮಗಳ ಅಣಿಮುತ್ತುಗಳುದುರಿಸುವ ಮಂತ್ರಿ ಮಾನ್ಯರು. ಹೆಣ್ಣು-ಹೆಂಡಗಳ ಸೆರೆಯಲ್ಲಿ ಬಂಧಿತರಾಗಿದ್ದಾರೆ. ಈ ಊಸರವಳ್ಳಿಗಳ ಜಾಲದಲ್ಲಿ ಸಿಲುಕಿ ಶ್ರೀ ಸಾಮಾನ್ಯ ಜರ್ಝರಿತನಾಗಿದ್ದಾನೆ, ಜೀವಂತ ಹೆಣವಾಗಿದ್ದಾನೆ. ದೋಚುವುದಕ್ಕೆ ಕೊನೆಯೇ ಇಲ್ಲದ ಈ ಪರಿಸ್ಥಿತಿಯನ್ನು ಕುರಿತು ಗೌಡರು ಹೀಗೆ ಹೇಳತ್ತಾರೆ "ಸಿಕ್ಕದ್ದ ದೋಚುವ ಆಳುಗಳು, ಲಂಚ ತಿನ್ನುವ

ಅಧಿಕಾರಿಗಳು ಸ್ವಾರ್ಥ ಲಾಲಸೆಯ ರಾಜಕಾರಣಿಗಳು ಹೀಗಿರುವ ದೇಶದುದ್ಧಾರವೆಲ್ಲಿ"?

ದೊಡ್ಡರಂಗೇಗೌಡರಿಗೆ ಬದುಕನ್ನು ಕುರಿತು ಗಾಢವಾದ ಪ್ರೀತಿಯಿದೆ. ತಾವು ಪ್ರೀತಿಯಿಂದ ಆ ಬದುಕಿನಲ್ಲಿ ತಮ್ಮನ್ನು ತಾಗಿದ ತಟ್ಟಿದ ಸಂಕೀರ್ಣ ಅನುಭವಗಳನ್ನು ಜೀವಂತವಾಗಿ ಕಟ್ಟಿಕೊಡುವ ಸಾಮರ್ಥ್ಯವಿದೆ. ಬದುಕಿನಲ್ಲಿ ತಾವು ದೊಡ್ಡದು ಎಂದು ಭಾವಿಸುವ ಎಲ್ಲದರಿಂದ ಗೌಡರು ಸ್ಫೂರ್ತಿ, ಪ್ರೇರಣೆಗಳನ್ನು ಪಡೆದುಕೊಂಡು ಜನಮನದಲ್ಲಿ ಬಹುಕಾಲ ನಿಲ್ಲುವ ಈ ಮುಕ್ತಕಗಳನ್ನು ಗೌಡರು ಸಹೃದಯರಿಗೆ ನೀಡಿದ್ದಾರೆ ಗೌಡರ ಅನುಭವದ ಮಾತುಗಳು ಕೆಲವೊಮ್ಮೆ ಸಹೃದಯರ ಮಾತುಗಳೂ ಆಗಿ ಆತ್ಮಾವಲೋಕನಕ್ಕೆ ಕಾರಣವಾಗುತ್ತವೆ. ಅಲ್ಲದೆ ಇಲ್ಲಿನ ಒಂದು ಚಿಂತನೆ, ಒಂದು ವಿವರ ಓದುಗರ ಮನದಲ್ಲಿ ಹಲವು ಸ್ಪಂದನಗಳನ್ನೆಬ್ಬಿಸಲು ಕಾರಣವಾಗುತ್ತವೆ. ಇಂತಹ ಚಿಂತನಶೀಲ ಕಾವ್ಯದ ಹಲವು ಆಯಾಮಗಳನ್ನು ಗೌಡರು ಕನ್ನಡಕಾವ್ಯಲೋಕಕ್ಕೆ ಹಲವು ವರ್ಷಗಳಿಂದ ಕೊಡುತ್ತಾ ಬಂದಿದ್ದಾರೆ. ಇದು ದಾಖಲಿಸಬೇಕಾದ ವಿಷಯ.

## ಕವಿತೆಗಳನ್ನು ಕಟ್ಟುವ ಕಾಯಕ

ಡಾ|| ಕೆ. ವಿ. ನಾರಾಯಣ

ಗೆಳೆಯ ದೊರಂಗೌ ಅವರ ಕವಿತೆ ಬರೆಯುವ ಉಮೇದು ಕಾಲೇಜು ದಿನಗಳಲ್ಲಿ ದಂತಕಥೆಯಾಯಿತು. ಈಗಲೂ ಸಮಾರು ದಶಕ ಕಳೆದರೂ ಅವರ ಈ ತವಕ ಹಾಗೇ ಇದೆ. ಅಥವಾ ಸೆಳೆಯುತ್ತಿರುವ ಮಿಸುನಿ ಜಿಂಕೆಯ ಬೆನ್ನುಹತ್ತಿ ನಿಡುದಾರಿ ಸವೆಸಿದ್ದಾರೆ. "ಜಗಲಿ ಹತ್ತಿ ಇಳಿದು" ೧೯೬೯ ರಲ್ಲಿ ಪ್ರಕಟವಾದಾಗ ಅವರು ನವ್ಯ ಕವಿಗಳ ರಚನೆಯ ಮೋಡಿಯನ್ನು ತಮ್ಮ ಮಾತುಗಳಲ್ಲಿ ಕಂಡುಕೊಳ್ಳಲು ಯತ್ನಸುತ್ತಿದ್ದರು.

೧೯೮೦ರ ಹೊತ್ತಿಗೆ ಗೀತೆಗಳ ಗಾರುಡಿಗೆ ಒಳಗಾದರು. ದೊರಂಗೌ ಕವಿತೆಗಳನ್ನು ಕಟ್ಟುವ ಕಾಯಕದಲ್ಲಿ ಭಾಷೆಯೊಡನೆ ಹಲವು ಸಂಧಾನಗಳಿಗೆ ತೊಡಗಿದ್ದಾರೆ. ಎಲ್ಲಿ ಈ ಸಂಧಾನದ ಪ್ರಮಾಣ, ಒಪ್ಪಂದ ಸಮ್ಮುಖತೆ ಕಡಿಮೆಯಾಗಿದೆಯೋ ಅಲ್ಲಿ ಅವರ ಒಳ್ಳೆಯ ಕವಿತೆಗಳು ಕಾಣಸಿಗುತ್ತವೆ. ಅದಕ್ಕಾಗಿ ಅವರು ರೂಪಕಗಳನ್ನೂ ಪ್ರತಿಮೆಗಳನ್ನೂ ಚಿತ್ರಗಳನ್ನೂ ರಚಿಸುತ್ತಾರೆ. ಅದನ್ನು ಸುಭದ್ರವಾಗಿ ನೆಲೆಯೂರಿಸುತ್ತಾರೆ.

# ದೊರಂಗೌರವರ ವೈಚಾರಿಕ ಗದ್ಯಲೇಖನಗಳು

✍ ಎಂ. ಉದಯಕುಮಾರಿ
*ಕನ್ನಡ ಉಪನ್ಯಾಸಕಿ*

ನಮ್ಮ ನಾಡಿನ ಶ್ರೇಷ್ಠಕವಿಯಾಗಿ, ಚಲನಚಿತ್ರಗೀತರಚನಕಾರರಾಗಿ ಭಾವಗೀತಕಾರರಾಗಿ ಪ್ರಸಿದ್ಧರಾಗಿರುವ ಶ್ರೀ ದೊರಂಗೌರವರು ಬರೀ ಕವಿಗಳಷ್ಟೇ ಅಲ್ಲ ಉತ್ತಮ ಗದ್ಯಕಾರರೂ ಕೂಡ ಹೌದು ಎಂಬುದು ಬಹಳಷ್ಟು ಓದುಗರಿಗೆ ತಿಳಿದಿರಲಾರದು. ಇವರ ಲೇಖನಗಳು ನಾಡಿನಾದ್ಯಂತ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ ಇಲ್ಲಿಯವರೆಗೂ ಕವಿಯಾಗಿ ಭಾವಗೀತಕಾರರಾಗಿ, ನಮ್ಮ ಕಣ್ಣಮುಂದಿರುವ ದೊರಂಗೌ ಅವರನ್ನು ಬದಿಗೆ ಸರಿಸಿ ನೋಡಿದರೆ ವಿಚಾರಶೀಲ ವಿಮರ್ಶಕ ದೊರಂಗೌ ನಮ್ಮ ಕಣ್ಣ ಮುಂದೆ ಕಾಣಿಸಿಕೊಳ್ಳುತ್ತಾರೆ, ನಿರ್ಮಲ ಪ್ರೀತಿಯನ್ನು ಕುರಿತು ಭಾವಪೂರ್ಣವಾಗಿ ಬರೆಯುವ ಇವರು ಗದ್ಯ ಬರಹಗಳಲ್ಲಿ ಅಷ್ಟೇ ನಿಷ್ಠುರರಾಗುತ್ತಾರೆ, ಕಟುವಾಗುತ್ತಾರೆ. ಮನಸ್ಸಿಗೆ ನಾಟುವಂತೆ ಬರೆಯುತ್ತಾ ಹೋಗುತ್ತಾರೆ.

ಪ್ರಸ್ತುತ ದೊರಂಗೌರವರ ಲೇಖನಗಳನ್ನು ಈ ರೀತಿ ವಿಭಾಗ ಮಾಡಿಕೊಳ್ಳುವುದು ಸಮಂಜಸವೆನಿಸುತ್ತದೆ.

೧. ಪರಿಸರವನ್ನು ಕುರಿತ ಕಾಳಜಿ ವ್ಯಕ್ತಪಡಿಸುವಂತಹವು

೨. ಶಿಕ್ಷಣ ವ್ಯವಸ್ಥೆ - ಶಿಕ್ಷಕ - ವಿದ್ಯಾರ್ಥಿ ಇವು ಕೇಂದ್ರವಾಗುಳ್ಳವು

೩. ನಾಡು ನುಡಿ-ಸಂಸ್ಕೃತಿಗೆ ಸಂಬಂಧಿಸಿದಂತಹವು

೪. ಪ್ರಾಯೋಗಿಕ ವಿಮರ್ಶಾ ಲೇಖನಗಳು

ನಿಸರ್ಗದ ಜೊತೆ ಅನನ್ಯ ಸಂಬಂಧವನ್ನು ಹೊಂದಿರುವ ಮಾನವ ಇಂದು ವಿಕಾಸದ ಹಾದಿಯನ್ನು ಸಾಕಷ್ಟು ಕ್ರಮಿಸಿದ್ದಾನೆ. ಪ್ರಕೃತಿಯ ನಿಗೂಢತೆಯನ್ನು ಬೇಧಿಸುವ ನಿಟ್ಟಿನಲ್ಲಿ ಉತ್ಸುಕನಾಗಿದ್ದಾನೆ. ಇದರ ಫಲ ನಿರಂತರವಾಗಿ ಸೂರೆಯಾಗುತ್ತಿರುವ ಪ್ರಕೃತಿ ಇಂದು ಬರಡಾಗುತ್ತಿದೆ, ಬಂಜೆಯಾಗುತ್ತಿದೆ, ಪರಿಸರ ಮಲೀನವಾಗುತ್ತಿದೆ.

ನಾಗರಿಕತೆ ಮುಂದುವರೆದಂತೆ ಹೊಸಹೊಸದರ ಆವಿಷ್ಕಾರವಾದಂತೆಲ್ಲಾ ಪ್ರಕೃತಿಯ ಮೇಲಿನ ದೌರ್ಜನ್ಯ ಹೆಚ್ಚಾಗುತ್ತಿದೆ. ಮಾನವನಿಗೆ ಆಸರೆಯಾಗಿ ಪ್ರೇರಣಾಶಕ್ತಿಯಾಗಿ, ಚೈತನ್ಯದ ಚಿಲುಮೆಯಾಗಿರುವ ಈ ನಿಸರ್ಗದ ಸೊಬಗು ವಿನಾಶದ ಅಂಚು ತಲುಪುತ್ತಿದೆ. ಯಂತ್ರನಾಗರಿಕತೆ ಪರಿಸರದ ನಾಶಕ್ಕೆ ಪ್ರಮುಖ ಕಾರಣವಾಗಿರುವ ಈ ಸಂದರ್ಭದಲ್ಲಿ ಪರಿಸರ ಪ್ರೇಮಿ. ಕವಿಹೃದಯಿ ವಿಚಾರಶೀಲ

ದೊರಂಗೌ ಜಾಗೃತರಾಗುತ್ತಾರೆ. ದೂರದೃಷ್ಟಿಯ ಅಭಾವವೇ ಇವೆಲ್ಲಕ್ಕೂ ಕಾರಣ ಎನ್ನುವ ಸತ್ಯಾಂಶವನ್ನು ಮುಂದಿಡುತ್ತಾ ನಾಗರಿಕತೆಯ ಅವಲಂಬನೆ ತೊರೆದು ನೈಸರ್ಗಿಕವಾಗಿ ಬದುಕುವ ಛಲಗಾರಿಕೆಯ ಅವಶ್ಯಕತೆಯನ್ನು ಎತ್ತಿ ಹಿಡಿಯುತ್ತಾರೆ.

ಪ್ರಕೃತಿ - ಪುರುಷರ ಸಂಬಂಧ ಅನನ್ಯವಾದುದು. ಅಸೀಮವಾದದು. ಅಷ್ಟೇ ಆತ್ಮೀಯವೂ ಕೂಡ ಹೌದು. ಮಾನವ ತನ್ನ ಮಿತಿಯನ್ನರಿತು ವರ್ತಿಸುವುದು ಅಗತ್ಯವಾಗಿದೆ, ಎನ್ನುವಲ್ಲಿ ದೊರಂಗೌ ಇತರ ಪರಿಸರವಾದಿಗಳಿಗಿಂತ ಹೇಗೆ ಭಿನ್ನರೆಂಬುದನ್ನು ಗುರುತಿಸಬಹುದು. ಪರಿಸರಪ್ರೇಮ ಚರ್ಚೆ, ವಿಚಾರಸಂಕಿರಣಗಳು ಅರ್ಥಕಳೆದುಕೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಕೇವಲ ಭಾಷಣಗಳ ಮೂಲಕ ಲೇಖನಗಳನ್ನು ಬರೆಯುವುದರ ಮೂಲಕ ಪರಿಸರ ಸಂರಕ್ಷಣೆ ಸಾಧ್ಯವಿಲ್ಲ, ಎಂಬ ಕಟುಸತ್ಯದ ಅರಿವಿನೊಂದಿಗೇ ನಮ್ಮನ್ನು ಚಿಂತನೆಗೆ ಹಚ್ಚುವ ಕೆಲಸವನ್ನು ದೊರಂಗೌರವರ ಲೇಖನಗಳು ಮಾಡುತ್ತವೆ. ಮೂಲತಃ ನಿಸರ್ಗ ಪ್ರೇಮಿಯಾದ ದೊರಂಗೌರವರಲ್ಲಿ ಪರಿಸರ ಪ್ರೇಮ ತೋರಿಕೆಯದಾಗದೇ ಅಂತರಾಳದಿಂದ ಚಿಮ್ಮುವ ನೈಜಸೆಲೆಯಾಗಿ ಕಾಣಿಸಿಕೊಳ್ಳುತ್ತದೆ.

"ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ" ಎಂಬಮಾತನ್ನು ಉದಹರಿಸುತ್ತ ಗುರು-ಶಿಷ್ಯರ ಸಂಬಂಧದ ಬಗ್ಗೆ ದೊರಂಗೌ ಹರಿಸುವ ವಿಚಾರಧಾರೆ ಸ್ತುತ್ಯರ್ಹವಾದದ್ದು. ಸ್ವತಃ ಅಧ್ಯಾಪಕರಾಗಿ ೨೩ ವರ್ಷಗಳ ಸುದೀರ್ಘ ಅವಧಿಯಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ವಿದ್ಯಾರ್ಥಿಗಳನ್ನು ಹತ್ತಿರದಿಂದ ಕಂಡವರು.

ಇಂದು ಸಮಾಜ ಬದಲಾದಂತೆ ಕೆಲವು ನಿರ್ದಿಷ್ಟ ಮೌಲ್ಯಗಳೂ ಬದಲಾಗುತ್ತಿರುವ ಇಂದಿನ ವ್ಯವಸ್ಥೆಯಲ್ಲಿ ಕುಸಿಯುತ್ತಿರುವ ಶಿಕ್ಷಣ ಮಟ್ಟ, ಹದಗೆಡುತ್ತಿರುವ ಗುರು-ಶಿಷ್ಯರ ಸಂಬಂಧವು ದೊರಂಗೌರವರ ಅನೇಕ ಲೇಖನಗಳಿಗೆ ವಸ್ತುವಾಗಿದೆ. ಇಂದಿನ ವಿದ್ಯಾರ್ಥಿಗಳ ಅಧಃಪತನಕ್ಕೆ ನಿಜವಾದ ಕಾರಣ ಶಿಕ್ಷಣ ವ್ಯವಸ್ಥೆಯೇ ಎನ್ನುವಲ್ಲಿ ವ್ಯವಸ್ಥೆಯ ಭಾಗವಾಗಿ ಬೋಧಕಸ್ಥಾನದಲ್ಲಿರುವ ವ್ಯಕ್ತಿ ಇಷ್ಟು ದಿಟ್ಟತನದಿಂದ ತನ್ನದೇ ಕ್ಷೇತ್ರದ ಹುಳುಕುಗಳನ್ನು ಮುಚ್ಚಿಡದೇ ಎತ್ತಿಹೇಳುವುದು ನಿಜಕ್ಕೂ ಮೆಚ್ಚುವಂತಹುದು. ವಿದ್ಯಾರ್ಥಿಗಳ ವ್ಯಕ್ತಿತ್ವದ ವಿಕಸನಕ್ಕೆ ಅನುಕೂಲವಾದ ಶಿಕ್ಷಣವನ್ನು ನೀಡುವಲ್ಲಿ ನಾವು ವಿಫಲರಾಗಿದ್ದೇವೆ. ಎನ್ನುವ ದೊರಂಗೌರವರ ಮಾತು ಅಕ್ಷರಶಃ ಸತ್ಯ. ಕೇವಲ ಪಠ್ಯವನ್ನು ನಾಲ್ಕು ಗೋಡೆಗಳ ನಡುವೆ ನಿಂತು ಬೋಧಿಸುವುದಕ್ಕಿಂತ ಮೌಲ್ಯಗಳ ಪ್ರಸಾರ ಕಾರ್ಯ ನಡೆಯಬೇಕಾಗಿದೆ. ನೈತಿಕ ಶಿಕ್ಷಣವು ಪಠ್ಯದಲ್ಲಿಲ್ಲದಿದ್ದರೂ ಶಿಕ್ಷಕರಾದವರು ಬೋಧಿಸಬೇಕಾದಂತಹ ಸಂದರ್ಭವನ್ನು ವಿದ್ಯಾರ್ಥಿ ಸಮುದಾಯ ಸೃಷ್ಟಿಸಿದೆ ಎನ್ನುತ್ತಾರೆ.

ಗುರು-ಶಿಷ್ಯರ ಸಂಬಂಧವನ್ನು ಕುರಿತು ಮಾತನಾಡುವಾಗ ದೊರಂಗೌ ಭಾವುಕರಾಗುತ್ತಾರೆ. ಅತ್ಯಂತ ಪವಿತ್ರವಾದ ಈ ಸಂಬಂಧ ಇಂದು ವಿಮುಖವಾಗುತ್ತಿದೆ. ಗುರುವಿಗೆ ವಿದ್ಯಾರ್ಥಿಗಳನ್ನು ಕಂಡರೆ ತಾತ್ಸಾರ. ವಿದ್ಯಾರ್ಥಿಗಳಿಗೂ ಗುರುವೆಂದರೆ ಅಸಡ್ಡೆ. ಈ ಸ್ಥಿತಿಯ ನಿರ್ಮಾಣಕ್ಕೆ ಪರಸ್ಪರ ಇಬ್ಬರೂ ಕಾರಣರು. "ಗುರುವಿನ ಸ್ಥಾನದಲ್ಲಿರುವವರು ಭ್ರಷ್ಟರಾದರೆ ವಿದ್ಯಾರ್ಥಿ ಹೇಗೆ ಬೆಲೆಕೊಟ್ಟಾನು? ಎಂದು ಪ್ರಶ್ನಿಸುತ್ತಾರೆ. ಇಂಥ ಕಡೆ ದೊರಂಗೌರವರ ಭಾಷೆ ಹರಿತವಾಗುತ್ತದೆ. ವಸ್ತುಸ್ಥಿತಿ ಓದುಗರ ಮನಮುಟ್ಟುವಂತೆ ಮಾಡುವಲ್ಲಿ ಸಫಲಗೊಳ್ಳುತ್ತದೆ. ಇಲ್ಲಿ ಲೇಖಕರು ಓದುಗರ ಮುಂದೆ ಸಮಸ್ಯೆಯನ್ನು ಮಾತ್ರ

ತೆರೆದಿಡದೇ ಅದಕ್ಕೆ ಕಾರಣವನ್ನು, ಪರಿಹಾರೋಪಾಯವನ್ನು ವಾಸ್ತವ ನೆಲೆಗಟ್ಟಿನ ಮೇಲೆ ನಿರೂಪಿಸುತ್ತಾ ಹೋಗುತ್ತಾರೆ.

ಇಂದಿನ ಯುವ ಜನಾಂಗ ದ್ವಂದ್ವತೆಗಳ ಮಧ್ಯೆ ಸಿಲುಕಿ ನರಳುತ್ತಿದೆ. ಸೂಕ್ತ ಮಾರ್ಗದರ್ಶನದ ಕೊರತೆಯಿಂದ, ನಿರುದ್ಯೋಗ ಸಮಸ್ಯೆಗೆ ಪಕ್ಕಾಗಿರುವ ಯುವ ಜನತೆಯ ವೈಫಲ್ಯಕ್ಕೆ ಕಾರಣವನ್ನು ನಮ್ಮ ಮುಂದೆ ತೆರೆದಿಡುತ್ತಲೇ ಅದಕ್ಕೆ ಸರಳ ಪರಿಹಾರೋಪಾಯವನ್ನು ಸೂಚಿಸುತ್ತಾರೆ. ವಿದ್ಯಾವಂತ ಯುವ ಜನಾಂಗ 'ವೈಟ್‌ಕಾಲರ್ಡ್‌ಜಾಬ್'ನ ಹಂಬಲವನ್ನು ಬಿಟ್ಟು ತಮ್ಮ ಕೈಗೆಟಕುವ ಯಾವುದೇ ಸ್ವಉದ್ಯೋಗದಲ್ಲಿ ತೊಡಗಿ ಸ್ವಾವಲಂಬಿಗಳಾಗುವುದರಲ್ಲಿ ದೇಶದ ಪ್ರಗತಿಯಿದೆ, ಎಂಬ ದೊರಂಗೌರವರ ಮಾತು ಯುವ ಜನಾಂಗಕ್ಕೆ ದಾರಿದೀಪವಾಗಬಲ್ಲುದು.

ಭಾರತೀಯ ಸಂಸ್ಕೃತಿಯ ಬಗ್ಗೆ ಅಪಾರ ಗೌರವವನ್ನು ಹೊಂದಿರುವ ದೊರಂಗೌ ಇತ್ತೀಚಿನ ಭಾರತೀಯ ಸಮಾಜ ಪಡೆದುಕೊಳ್ಳುತ್ತಿರುವ ಬದಲಾವಣೆಯನ್ನು, ಸಂಸ್ಕೃತಿಯ ಅಧಃಪತನವನ್ನು ಕಂಡು ತಳಮಳಗೊಳ್ಳುತ್ತಾರೆ. ಎರಡು ದಶಕಗಳ ಹಿಂದಿನ ಸಾಮಾಜಿಕ ವಾತಾವರಣ ಇಂದು ಇಲ್ಲವಾಗುತ್ತಿರುವುದರ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾರೆ. ಇಂದಿನ ಜಗತ್ತು ಒಂದಲ್ಲ ಒಂದು ಕ್ಷೋಭೆಯಿಂದ ನರಳಲು ಕಾರಣ. ಅಧಾರ್ಮಿಕ ನಡುವಳಿಕೆಯೇ. ಅಂದಮಾತ್ರಕ್ಕೆ ಧರ್ಮವೆಂದರೆ ಮತಧರ್ಮವೆಂಬರ್ಥದಲ್ಲಿ ಬಳಸದೇ "ಯಾವುದ್ದನ್ನು ಮಾಡುವುದರಿಂದ ಈ ಲೋಕದ ಸುಖವೂ ಪರಲೋಕದ ಸುಖವೂ ದೊರೆಯುವುದೋ ಅದು ಧರ್ಮ" ಎಂಬ ವ್ಯಾಖ್ಯಾನದೊಂದಿಗೆ 'ಧರ್ಮ'ಕ್ಕೆ ವಿಶಾಲಾರ್ಥವನ್ನೊದಗಿಸುತ್ತಾರೆ.

ಆಧುನಿಕ ಸಮಾಜದಲ್ಲಿ ಕವಿಗಳಿಗಿರಬೇಕಾದ ಕರ್ತವ್ಯದ ಬಗ್ಗೆ ಎಚ್ಚರಿಸುತ್ತಾ ಕವಿ ದಾರ್ಶನಿಕನಾಗಬೇಕು. ಯುಗದಧ್ವನಿಯಾಗಬೇಕು. ಬರೀ ಪ್ರೀತಿ-ಪ್ರೇಮ, ನಿಸರ್ಗ ಇಷ್ಟನ್ನೇ ಕುರಿತು ಕಾವ್ಯ ರಚನೆಯಲ್ಲಿ ತೊಡಗುವುದಕ್ಕೆ ಬದಲಾಗಿ ಸಮಾಜದಲ್ಲಿನ ಭ್ರಷ್ಟತೆ, ವಂಚನೆ, ಅನ್ಯಾಯ ಅಸತ್ಯಗಳ ವಿರುದ್ಧ ಝಳಪಿಸುವ ಖಡ್ಗವಾಗಬೇಕೆಂಬಲ್ಲಿ ದೊರಂಗೌರವರಲ್ಲಿರುವ ಸಾಮಾಜಿಕ ಕಳಕಳಿಯ ಅರಿವಾಗುತ್ತದೆ.

ವೈಚಾರಿಕ ಬರಹಗಳ ಮೂಲಕ ಓದುಗನನ್ನು ಚಿಂತನೆಗೆ ಹಚ್ಚುವ ದೊರಂಗೌ ವಿಮರ್ಶೆ ದೃಷ್ಟಿಕೋನವನ್ನು ಮೈಗೂಡಿಸಿಕೊಂಡ ಕವಿ. ಶ್ರೇಷ್ಠ ಸಾಹಿತಿಗಳ ಕೃತಿಗಳನ್ನು ಮೌಲಿಕವಾಗಿ ಅಧ್ಯಯನಮಾಡಿ ನಿರ್ಧಿಷ್ಟವಾಗಿ ತೂಗಿ, ನೇತ್ಯಾತ್ಮಕ ಅಂಶಗಳಿಗಿಂತ, ಇತ್ಯಾತ್ಮಕ ಅಂಶಗಳ ಕಡೆ ಹೆಚ್ಚು ಒತ್ತುಕೊಡುವ ಮೂಲಕ ಕೃತಿಗಳಿಗೆ ಸೂಕ್ತ ನ್ಯಾಯವನ್ನು ಒದಗಿಸುವ ಪ್ರಯತ್ನ ಅವರದು.

ತೇಜಸ್ವಿಯವರ 'ಯಮಳ ಪ್ರಶ್ನೆ' ನಾಟಕವನ್ನು ಕುರಿತಂತೆ ದೊರಂಗೌ ಮಾಡಿರುವ ಪ್ರಾಯೋಗಿಕ ವಿಮರ್ಶೆಯ ಬಗ್ಗೆ ಹೇಳುವುದಾದರೆ ನಾಟಕದ ಕರ್ತೃ ನಾಟಕದಲ್ಲಿ ಅಳವಡಿಸಿಕೊಂಡಿರುವ ತಂತ್ರ. ಜೀವನದ ಆಳವಾದ ಸಮಸ್ಯೆಗಳ ಬಗ್ಗೆ ಅದು ಎತ್ತಿಕೊಳ್ಳುವ ಪ್ರಶ್ನೆ ಇವುಗಳನ್ನು ಓದುಗರಿಗೆ ಪರಿಚಯ ಮಾಡಿಕೊಟ್ಟು, ಕೃತಿ ವಿಶ್ಲೇಷಣೆಗೆ ತೊಡಗುವ ರೀತಿ ಅನನ್ಯವಾದುದು. ವಿಮರ್ಶೆಯಲ್ಲಿ ಒಂದೆಡೆ "ಬೇಕೆಂದೇ ಇಲ್ಲಿ ಅಸಂಗತ ವಿಷಯಗಳನ್ನು ತುರುಕಿಲ್ಲ ಎಂಬುದು ಸ್ಪಷ್ಟವಾಗುತ್ತದೆ ನಾಟಕದ ಹೆಣಿಗೆಯಲ್ಲಿಯೇ ಅಸಂಗತ ಆವಿರ್ಭವಿಸಿದೆ. ನಾಟಕದ ಕೊನೆಯ ಭಾಗಗಳಲ್ಲಿ ಮುಖ್ಯ ಅನ್ನಿಸುವ ಸಂಗತಿಗಳು ನಮ್ಮನ್ನು ಎದುರು ತಾಕಿದಾಗ

ನಾಟಕಕ್ಕೆ ಗಂಭೀರ ಆಯಾಮ ಪ್ರಾಪ್ತವಾಗುತ್ತದೆ. ಲೇಖಕ ಎತ್ತಿಕೊಂಡ ಸಮಸ್ಯೆಯತ್ತ ನೋಟಕರನ್ನು ಕರೆದುಕೊಂಡು ಹೋಗಲು ಅಪ್ಪಟ ಇರುವಿಕೆಯಲ್ಲೇ ಬರುವ ಚಿತ್ರಣದಲ್ಲಿ ಕಲಾವಂತಿಕೆಯೂ ಇದೆ" ಎಂಬ ಮಾತು ಕೃತಿಯ ಅರ್ಥೈಸುವಿಕೆಗೆ ಸಾಕ್ಷಿಯಾಗಿವೆ.

ಬೇಂದ್ರೆಯವರ ಒಟ್ಟು ಇಪ್ಪತ್ತೈದು ಕವನ ಸಂಗ್ರಹಗಳನ್ನು ಕುರಿತು 'ಬೇಂದ್ರೆಯವರ ಕಾವ್ಯ ವಿಕಾಸದ ಹಂತಗಳು', ದೊರಂಗೌರವರ ಸಹೃದಯ ವಿಮರ್ಶೆಗೆ ಮತ್ತೊಂದು ಉದಾಹರಣೆಯಾಗಿದೆ. ಬೇಂದ್ರೆಕಾವ್ಯ ಶಕ್ತಿಯ ಪರಿಚಯ ಮಾಡಿಕೊಡುತ್ತಾ ವಸ್ತು ವೈವಿದ್ಯತೆಯನ್ನು, ತಿರುವುಗಳನ್ನು ಗುರುತಿಸುತ್ತಾರೆ. "ಒಂದು ಪರಂಪರೆಯ ನಿರ್ಮಾತೃವಾಗಿ ಖ್ಯಾತಿಗಳಿಸಿದ ಬೇಂದ್ರೆ ಅರಳು-ಮರಳು ಕೃತಿಯ ನಂತರದ ಕವನ ಸಂಕಲನಗಳಲ್ಲಿ ಡೂ.ನೋ. ಇತ್ಯಾದಿ ಪದ್ಯಗಳಲ್ಲಿ ನಾದದ ಬೆನ್ನು ಹತ್ತಿ ಹೊರಟ ಸಂಶೋಧಕನಾಗಿ ಕಾಣಿಸಿಕೊಳ್ಳುತ್ತಾರೆ." ಈ ಸಾಲುಗಳಲ್ಲಿ ವಸ್ತು ನಿಷ್ಠ ವಿಮರ್ಶೆಯನ್ನು ಕಾಣಬಹುದು. ಬೇಂದ್ರೆ ಕಾವ್ಯ ಕೊನೆ ಕೊನೆಯಲ್ಲಿ ಆಧ್ಯಾತ್ಮಿಕ ಅತಿರೇಕವನ್ನು ಮುಟ್ಟಿ. ಕಾವ್ಯತ್ವಕ್ಕೆ ಲೋಪವಾಗಿರುವ ಅಂಶವನ್ನು ಗುರುತಿಸುತ್ತಾರೆ.

ಹೀಗೆ ದೊರಂಗೌರವರ ಬರಹಗಳು ವೈಚಾರಿಕ ನೆಲೆಗಟ್ಟಿನ ಮೇಲೆ ಕಟ್ಟಿಕೊಳ್ಳುತ್ತಾ ಹೋಗುತ್ತವೆ. ಇವರ ಬರಹಗಳಲ್ಲಿ ಸಾಮಾಜಿಕ ಕಾಳಜಿಯಿದೆ. ಯುವಜನಾಂಗದ ಬಗೆಗೆ ತುಡಿಯುವ ಮನಸ್ಸಿದೆ. ಶೋಷಣೆಯ ವಿರುದ್ಧ ಬಂಡಾಯದ ದನಿಯಿದೆ. ಎಲ್ಲಕ್ಕಿಂತ ಮಿಗಿಲಾಗಿ ಸಮಾನವಾಗಿ ಸ್ಪಂದಿಸುವ ಸಹೃದಯತೆ ಇದೆ. ಆದ್ದರಿಂದ ಇವು ಓದುಗನ ಮನದಲ್ಲಿ ಮುದ್ರೆಯೊತ್ತಿ ನಿಲ್ಲುತ್ತವೆ. ಈ ನಿಟ್ಟಿನಲ್ಲಿ ಯಶಸ್ಸು ಸಾಧಿಸುವ ಮೂಲಕ ದೊರಂಗೌ ಗದ್ಯ ಬರವಣಿಗೆಯಲ್ಲೂ ಸಿದ್ಧಹಸ್ತರೆನಿಸಿದ್ದಾರೆ. ಇವರು ಬರೆದಿರುವ ನೂರಾರು ಕೃತಿಗಳ ಮುನ್ನುಡಿಗಳು ವಿಮರ್ಶೆಗಳೇ ಇದಕ್ಕೆ ಸಾಕ್ಷಿಯಾಗಿವೆ.

## ಛಂದಸ್ಸಿನಲ್ಲಿ ವೈವಿಧ್ಯ

✍ ಡಾ॥ಎಚ್. ಎಸ್. ವೆಂಕಟೇಶ ಮೂರ್ತಿ

ದೊಡ್ಡರಂಗೇಗೌಡರ 'ಪ್ರೀತಿ ಪ್ರಗಾಥ'ದಲ್ಲಿ ಸರಳತೆ, ಮುಗ್ಧತೆ, ಪ್ರಾಮಾಣಿಕ ಭಾವಸ್ಪಂದನ - ವಿಶೇಷವಾಗಿ ಗಮನಿಸಬೇಕಾದ ಅಂಶಗಳು. ರಮ್ಯತೆಯ ಮನೋಧರ್ಮ ಉದ್ದಕೂ ನಂಬಿಕೆಯೊಂದಿಗೆ ಅಭಿವ್ಯಕ್ತವಾಗಿದೆ. ಛಂದಸ್ಸಿನ ದೃಷ್ಟಿಯಿಂದ ವೈವಿಧ್ಯವಿದೆ ಎಲ್ಲಾಕಡೆಯಲ್ಲೂ ಮುಖ್ಯ ಓಟ ಗದ್ಯ ಗಂಧಿಯಾದ ವಚನ ಲಯ. ಭಾಷೆಯ ರೂಪಕವಾಗದೆ ನಿರೂಪಣೆಯ ನೆಲೆಯಲ್ಲಿ ಕೆಲಸಮಾಡುತ್ತದೆ. ಇದು ಸೃಷ್ಟಿಯ ನೆಲೆಯಲ್ಲೇ ನಿರೂಪಿತವಾಗಿದೆ, ಹದವಾದ ಮಾತುಗಾರಿಕೆ ಕವಿತೆಯ ಉದ್ದಕ್ಕೂ ಸಿಗುತ್ತವೆ.

# ಪರಿಪಕ್ವ ಮನಸ್ಸಿನ ಸಮಾಜಮುಖಿ ಸಾಹಿತಿ

✍ ಅರಳು ಮಲ್ಲಿಗೆ ಪಾರ್ಥಸಾರಥಿ

ನಾನು ಸೆಂಟ್ರಲ್ ಕಾಲೇಜಿನಲ್ಲಿ ಎಂ.ಕಾಂ.ಗೆ ಸೇರಿದಾಗ ಬಿ.ಎ ಆನರ್ಸ್ ಹಾಗೂ ಕನ್ನಡ ಎಂ.ಎ.ಗೆ ಸೇರಿದ್ದ ಅನೇಕರು ನನಗೆ ಪರಿಚಿತರಾದರು. ನಾನು ವಾಣಿಜ್ಯ ವಿದ್ಯಾರ್ಥಿಯಾಗಿದ್ದರೂ ನನ್ನ ಹೆಚ್ಚಿನ ಸಂಬಂಧ ಸಹವಾಸವೆಲ್ಲ ಕನ್ನಡ ವಿಭಾಗದ ವಿದ್ಯಾರ್ಥಿಗಳೊಡನೆಯೇ ಇತ್ತು. ಆಗ ಕನ್ನಡ ವಿಭಾಗದ ಎಲ್ಲ ಕಾರ್ಯಕ್ರಮಗಳಲ್ಲೂ ಅತ್ಯಂತ ಲವಲವಿಕೆ ಉತ್ಸಾಹದಿಂದ ಓಡಾಡುತ್ತಿದ್ದ, ಹಿತವಾಗಿ ಮಾತನಾಡಿ ಗೆಳೆತನಕ್ಕೆ ಸನಿಹವಾಗುತ್ತಿದ್ದ ಒಬ್ಬ ಯುವಕನನ್ನು ನನಗೆ ಪರಿಚಯಿಸಿದಾಗ ಬೆಳೆಯುವ ಪೈರು ಮೊಳಕೆಯಲ್ಲೇ ಎಂಬಂತೆ, ಆತ ಮುಂದೆ ಉತ್ತಮ ಕವಿಯಾಗುವ ಎಲ್ಲ ಭರವಸೆಗಳನ್ನು ನನ್ನಲ್ಲಿ ಮೂಡಿಸಿದ್ದರು. ಕನ್ನಡ ವಿಭಾಗದ ವಿದ್ಯಾರ್ಥಿ ವಿಧ್ಯಾರ್ಥಿನಿಯವರಿಗೆ ಹಾಗೂ ಅದ್ಯಾಪಕವರ್ಗದವರಿಗೆ ದೊಡ್ಡರಂಗೇಗೌಡರೇ ತಮ್ಮ 'ಜಗಲಿ ಹತ್ತಿ ಇಳಿದು' ಕೃತಿಯಿಂದ ಈ ವಿಶ್ವಾಸವನ್ನು ಆತ್ಮೀಯತೆಯನ್ನು ಹೀಗೆ ಬಿತ್ತಿದ್ದವರು, ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಿಂದ ದೊಡ್ಡರಂಗೇಗೌಡರ ಸಂಪಾದಕತ್ವದಲ್ಲಿ ಅವರು ವಿದ್ಯಾರ್ಥಿಯಾಗಿದ್ದಾಗಲೇ ಪ್ರಕಟಿಸಿದ ಒಂದು ಕವನಸಂಗ್ರಹದಲ್ಲಿ ನನ್ನ ಒಂದು ಕವನವನ್ನು ಅವರು ಸೇರಿಸಿ ನಮ್ಮ ಸ್ನೇಹದ ಬಳ್ಳಿಗೆ ಅವರು ನೀರೆರೆದಿದ್ದರು. ವಿದ್ಯಾರ್ಥಿನಿಯಾಗಿದ್ದ ಕುಮಾರಿ ರಾಜೇಶ್ವರಿಯವರು ಮೂಲತಃ ಕವಿತೆಗೆ, ಸಾಹಿತ್ಯಕ್ಕೆ ಮನಸೋತವರು. ಹಾಗಾಗಿಯೇ ಆಗಲೇ ಕವಿಗೂ ಮನಸೋತರು. ಹಾಡು ಹಕ್ಕಿಗಳಂತೆ ಅವರಿಬ್ಬರೂ ಸೆಂಟ್ರಲ್ ಕಾಲೇಜಿನ ಅಂಗಳದಲ್ಲಿ, ಹಸಿರುಹಾಸಿನಲ್ಲಿ, ಕ್ಯಾಂಟೀನಿನಲ್ಲಿ ಗ್ರಂಥಾಲಯದಲ್ಲಿ ಪ್ರೇಮದ ಸಂಭ್ರಮವನ್ನು ಸಾಹಿತ್ಯದ ಮಾತುಗಳಿಂದ ತುಂಬಿಕೊಂಡವರು.

ವಿದ್ಯಾರ್ಥಿದೆಸೆಯಲ್ಲೇ ದೊಡ್ಡರಂಗೇಗೌಡರಲ್ಲಿ ನಾನು ಕಂಡಿದ್ದು ಮಣ್ಣಿನ ಮುಗ್ಧ ಸಹಜತೆ ಹಾಗೂ ನಿಜವಾದ ಕವಿ ಹೃದಯ. ಗೆಳೆತನದ ಮಾತುಗಳಲ್ಲಿ ಪ್ರಾಮಾಣಿಕ ಆತ್ಮೀಯತೆಯನ್ನು ತುಂಬಿ ಆ ಸ್ನೇಹ ನಿರಂತರವಾಗಿ ಉಳಿಯುವಂತೆ ಪೋಷಿಸಿದ ನಿರ್ಗವಿಗಳು ಗೌಡರು.

## 2

ದೊಡ್ಡರಂಗೇಗೌಡರಿಗಿಂತ ಎರಡು ವರ್ಷಮುಂಚಿತವಾಗಿಯೇ ಎಂ.ಕಾಂ. ಮುಗಿಸಿದ ನಾನು ಆಮೇಲೂ ಅವರು ಎಂ, ಎ, ಓದುತ್ತಿದ್ದಾಗ ಸಾಹಿತ್ಯ ಸಮಾರಂಭ, ವಿಚಾರ ಸಂಕಿರಣಗಳಲ್ಲಿ ಅವರೊಡನೆ ಬೆರೆಯುತ್ತಿದ್ದೆ. ಅವರು ಎಂ.ಎ. ಮುಗಿಸಿ ಅಧ್ಯಾಪಕವೃತ್ತಿ ಹಿಡಿದರು. ಕವಿಯಾಗಿ ಮುನ್ನಡೆದರು ಸಾಹಿತಿಯಾಗಿ ಹೆಸರು ಪಡೆದರು ಕಾವ್ಯದ ಕಡಲನ್ನು ಕಡೆದರು. ಸಾಹಿತ್ಯ ಗುಂಪಿನ

ಪ್ರಲೋಭನೆಗಳನ್ನು ತಡೆದರು. ಹನ್ನೆರಡು ಕಾವ್ಯಸಂಕಲನಗಳನ್ನು ಹಡೆದರು. ಕುಸುಮಕವನಗಳನ್ನು ಪ್ರಾಸದ ಹಸಿವಿನ ಮೇಲೆ ಮೃದು ಮಂದಹಾಸದಿಂದ ಜನಸಾಮಾನ್ಯರತ್ತ ತುಂಬಿಬಿಟ್ಟರು. ಜನಮನದ ಅಂಗಳದಲ್ಲಿ ಹರಡಿಕೊಂಡ ಆ ಕವನಗ್ರಂಥ ಬೆಳಗಾಗುವುದರೊಳಗಾಗಿ ದೊಡ್ಡರಂಗೇಗೌಡರನ್ನು ಜನಪ್ರಿಯ ಕವಿಯನ್ನಾಗಿ ಮಾಡಿಬಿಟ್ಟಿತು.

ನವ್ಯದ ವಿಭಿನ್ನ ಅವಸ್ಥೆಗಳ ಕಾವ್ಯಕಾಯಕದಿಂದ ತಮ್ಮ ಕ್ರಿಯಾತ್ಮಕಗೀತರಚನೆಗಳನ್ನು ಪ್ರಾರಂಭಿಸಿದ ದೊಡ್ಡರಂಗೇಗೌಡರಿಗೆ ಬಹಳ ಬೇಗ ಜನತೆಗೆ ಬೇಕಾದ ಕಾವ್ಯದ ಗುಟ್ಟು ಗೊತ್ತಾಯಿತು. ಮೃದು ಸ್ನೇಹ, ಸೌಹಾರ್ದ ಹಾಗೂ ಹೃದಯತುಂಬಿದ ಭಾವನೆಗಳ ಅಭಾವವಿದ್ದ, ಅನಾಥಪ್ರಜ್ಞೆ, ಸಾಹಿತ್ಯದ, ಸಾಹಿತಿಗಳ ಮುಖದಲ್ಲಿ ವಿಜೃಂಭಿಸುತ್ತಿದ್ದ ದಿನಗಳಲ್ಲಿ ಯಶಸ್ವಿ ಕಾವ್ಯದ ದಾರಿ ಭಾವಗೀತೆಯೆಂದು ಸ್ಥಿರವಾಗಿ, ಅರಿತ ಗೌಡರು ಅದನ್ನೇ ಸ್ವೀಕರಿಸಿದರು, ಸಾಹಿತಿಕ ಹಿನ್ನೆಲೆಯ ಜನಪ್ರಿಯ ಭಾವಗೀತೆಗಳನ್ನೇ ಚಲುವ ಚಿತ್ರಗೀತೆಯನ್ನಾಗಿ ನೀಡಿ ಜನಪ್ರಿಯ ಚಿತ್ರಸಾಹಿತಿಯಾದರು, ಕೆಲವೇ ವರ್ಷಗಳಲ್ಲಿ ಅವರು ಸಂಪಾದಿಸಿದ ಈ ಅಪಾರ ಜನಪ್ರಿಯತೆಗೆ ಅವರ 'ಗೀತಗಾರುಡಿ'ಯೇ ಕಾರಣ. ಆದರೆ ನನಗೆ ಇನ್ನು ಆಶ್ಚರ್ಯವಾಗುತ್ತಿರುವುದು ದೊಡ್ಡರಂಗೇಗೌಡರು ಹಾಗೂ ರಾಜೇಶ್ವರಿಯವರಲ್ಲಿ ಯಾವ ಕಾರಣಕ್ಕೂ ಆರದ ಪ್ರೀತಿಯಾಗಿಯೇ ಇರುವ 'ತೀರದ ತುಡಿತ, ಇದೊಂದು ಅಪರೂಪವಾದ ಆದರ್ಶ "ಪ್ರೇಮಾಂಜಲಿ'.

ಎಲ್ಲನೋವು ನಲಿವುಗಳನ್ನು ಮೀರಿನಿಂತು ದಶಕಗಳ ಕಾವ್ಯಕರ್ಮವೆನ್ನುವ 'ಕುದಿಯುವ ಕುಲುಮೆ'ಯಲ್ಲಿ ಎದ್ದು ಬಂದು ಪುಟಕ್ಕಿಟ್ಟ ಚಿನ್ನದಂತಾಗಿರುವ ದೊಡ್ಡರಂಗೇಗೌಡರು ಕಷ್ಟಸಂಕಷ್ಟಗಳ, ದುಃಖ ದುಮ್ಮಾನಗಳ, ಪ್ರೀತಿಯೆತ್ತರಗಳ ಹಾಗೆಯೇ ಜನಪ್ರಿಯತೆಯ "ಸಪ್ತಶೃಂಗ'ವನ್ನು ಏರಿ ನಡೆದು ಸಾಗಿದ್ದಾರೆ, ಒಟ್ಟಿನಲ್ಲಿ ಹೇಳುವುದಾದರೆ ಅವರ ಬದುಕೇ ಒಂದು "ಪ್ರೀತಿ ಪ್ರಗಾಥ".

## 3

"ಸಂಘರ್ಷ", "ಸ್ವಾಮೀಜಿ", "ದೇವರೇದಿಕ್ಕು" ಮುಂತಾದ ಚಿತ್ರಗಳಿಗೆ ಚಿತ್ರಕಥೆ ಬರೆದ ನಾನು, ಒಂದು ಚಿತ್ರನಿರ್ಮಾಣ ಹಾಗೂ ನಿರ್ದೇಶನಕ್ಕೂ ಕೈ ಹಚ್ಚಿದೆ. ಆಗ ಅವರ ಹತ್ತಿರ ಬರೆಯ ಬೇಕು ಎಂದು ಕೇಳಿದೆ, ಇಬ್ಬರೂ ಕುಳಿತೆವು. ನಂತರ ಅವರು, ಮದ್ರಾಸಿಗೂ ನನ್ನೊಡನೆ ಬಂದರು ಸ್ವಾಗತ್ ಹೋಟಲಿನಲ್ಲಿ ಉಳಿದೆವು. ಉತ್ತಮವಾದ, ಮನತಣಿಯುವ, ಕಣ್ ಕುಣಿಯುವ ಹಾಡು ರಚಿಸಿದರು. ಒಂದು ಚಿಕ್ಕ ಹಾಡಿನಲ್ಲಿ ಒಲವಿನ ಮಹಾಪೂರವನ್ನೇ ಹರಿಸಿದರು ಆದರೆ ಆ ಹಾಡು ನಿಮಿತ್ತವಾಯಿತು. ಅವರು ನಿಜವಾಗಿ ಹರಿಸಿದ್ದು ನಮ್ಮ ಸ್ನೇಹ ಗಂಗೆಯನ್ನು.

೧೯೬೮ ರಿಂದ ೧೯೭೫ರವರೆಗೂ ನಾನು ದೊಡ್ಡರಂಗೇಗೌಡರು ನಮ್ಮ ನಮ್ಮದೇ ಆದ ವಿಭಿನ್ನ ದಾರಿಗಳಲ್ಲಿ ನಡೆದು ಬಂದಿದ್ದೇವೆ. ಆದರೆ ಮುಂಚಿನಷ್ಟು ಹೆಚ್ಚಾಗಿ ಅಲ್ಲದಿದ್ದರೂ, ಆಗಾಗ್ಗೆ ಸಾಹಿತ್ತಿಕ ಸಂದರ್ಭಗಳಲ್ಲಿ ಭೇಟಿಯಾಗಿರುತ್ತೇವೆ. ಆದರೆ ಯಾವಾಗ ಗೌಡರು ಸಿಕ್ಕರೂ ಅದೇ ಸ್ನೇಹದ ಮುಖ. ಆತಂಕವಿಲ್ಲದ, ಅಹಂಕಾರವಿಲ್ಲದ, ಆಡಂಬರವಿಲ್ಲದ ಕವಿಸಹಜ ಸಹೃದಯತೆ. ಇದು ಬಹಳ ಅಮೂಲ್ಯ ಮತ್ತು ಅಪರೂಪವಾಗುತ್ತಿರುವ ವಸ್ತು ಕೂಡ, ಅವರಿಂದಾಗಿಯೇ ಗೌಡರ ನನ್ನಸ್ನೇಹದ ಸೆಲೆ ಸ್ವಲ್ಪವೂ ಬತ್ತಿಲ್ಲ.

ಕಳೆದ ವರ್ಷ ಕೆ. ವಿ. ಚಂದ್ರಣ್ಣಗೌಡರು, ಕುಮಾರಸ್ವಾಮಿ, ಹಾಗೂ ತುಮಕೂರು ಮಹದೇವಯ್ಯನವರ ಸಹಕಾರ ಆಸಕ್ತಿ ಆಸ್ಥೆಗಳಿಂದಲೂ ಅವರ ಆ ಕೃತಿ ಕನ್ನಡ ಸಾಹಿತ್ಯಪರಿಷತ್ತಿನಲ್ಲಿ ಪರಮಸಂಭ್ರಮದಿಂದ ಬಿಡುಗಡೆಯಾಯಿತು. ಆ ಸಮಾರಂಭದಲ್ಲಿ ಕೃತಿಕುರಿತು ಮಾತನಾಡುವ ಅವಕಾಶ ನನಗೆ ದೊರಕಿತು.

## 4

ಕನ್ನಡದಲ್ಲಿ ಮಂಕುತಿಮ್ಮನ ಕಗ್ಗ ಕೃತಿ ಹೊಸ ರೀತಿಯ ಮುಕ್ತಕಗಳ ಪರಂಪರೆಯೊಂದನ್ನೇ ಪ್ರಾರಂಭಿಸಿತು. ಡಿ.ವಿ.ಜಿ.ಯವರ 'ಮರುಳ ಮುನಿಯನ ಕಂತೆ' ಬಸವಣ್ಣನವರ 'ಬೋರು ಬಸವನ ಬೊಂತೆ' ಸಿದ್ದಯ್ಯ ಪುರಾಣಿಕರ 'ಮರುಳಸಿದ್ಧನ ಕಂತೆ' ಈ ಪರಂಪರೆಯ ಮುಂದಿನ ಕೃತಿ ದೊಡ್ಡರಂಗೇಗೌಡರ ಮಣ್ಣಿನ ಮಾತುಗಳು. ಮುಕ್ತ ಅನಿಸಿಕೆಯ ಯಾವುದೇ ರೀತಿಯ ಬಂಧನವಿಲ್ಲದ, ಈ ಕೃತಿ ಓಂಕಾರನ ಮನದ ಮೂಲಕ ಪ್ರಾರಂಭವಾಗುವುದು ಇದರ ವೈಶಿಷ್ಟ್ಯ.

ಓಂಕಾರ ಎನ್ನುವುದು ಬೀಜಾಕ್ಷರ
ಹೃನ್ಮನವ ಮೀಟುವ ಮಂತ್ರಾಕ್ಷರ
ಸಮಸ್ತ ವಾಙ್ಮಯದ ಮೂಲಾಕ್ಷರ
ಓಂಕಾರ ಸ್ವರೂಪಿಗೆ ನಮಿಸೋ - ಮಣ್ಣಿನ ಮಗ

'ಓಂ' ಶಬ್ದ ಓಂಕಾರವಾಗಿ ಅನುರಣಿತವಾಗಿ ವ್ಯಾಹೃತಿಯಾಗಿ ಗಾಯತ್ರಿಯಾಗಿ ವಿಷ್ಣುಸಹಸ್ರನಾಮಯವಾಗಿ, ಕಡೆಗೆ ವೇದಸ್ವರೂಪವಾಗಿ ಅರಳುವ ಜ್ಞಾನಬಿಂದು ಆ ಜ್ಞಾನ ಬಿಂದುವಿಗೆ ನಮಿಸುತ್ತಾ ಕೃತಿಯನ್ನು ಗೌಡರುಪ್ರಾರಂಭಿಸಿದ್ದಾರೆ.

ಎಂಟನೆಯ ಪದ್ಯವೇ ದೊಡ್ಡರಂಗೇಗೌಡರ ಸ್ವಭಾವ ಭಾವ, ಪ್ರಭಾವ, ಹಾಗೂ ಅವರ ವಿನಯವಿವೇಕ ವಿಶ್ವಾಸಗಳ ವ್ಯಕ್ತಿತ್ವದ ವಿಶಿಷ್ಟ ಪದ್ಯವಾಗಿ ಪಲ್ಲವಿಸಿದೆ.

ಯುವ ಶಕ್ತಿ ಸೃಷ್ಟಿಸುವುದು ಈ ಜಗವ
ಆ ಚೇತನಕೆ ವಂದಿಸದೇ -ಮಾನವ ಸ್ವಭಾವ
ವಿನಯವಿಶ್ವಾಸವಿರೆ ಗೆಲ್ಲಬಹುದು ವಿಶ್ವವೆಲ್ಲವ
ಪ್ರೀತಿಮೈತ್ರಿಯಿಂದ ಮುನ್ನಡೆ - ಮಣ್ಣಿನ ಮಗ

ಗೌಡರ ದೃಷ್ಟಿಯಲ್ಲಿ "ಪ್ರೇಮವೆಂಬುದೇನು? ಹೃದಯಹೃದಯದ ಜೇನು ಪ್ರೇಮ ಬದುಕಿನ ಭಾನು" ಪ್ರೀತಿಯ ಬಗ್ಗೆಯೂ ಅವರು ಇದೇ ನಿಲುವು 'ಪ್ರೀತಿಸು ನಿನ್ನ ವೃತ್ತಿಯನು, ಪ್ರೀತಿಸು ಸಮಾಜವನು, ಪ್ರೀತಿಸು ಮಾತೃಭೂಮಿಯನು ಜನ್ಮ ಮಾತೆಯಲು ಪ್ರೀತಿಯಿಲ್ಲದ ಬದುಕು ಮರುಭೂಮಿಯಂತೆ ಬರಡೆನ್ನು, ಪ್ರೀತಿಯ ಜಗವು ಸುಂದರ ಮಣ್ಣಿನ ಮಗ.

ದೊಡ್ಡರಂಗೇಗೌಡರು ಎಂದೂ ಯಾವ, ಯಾರ ಗುಂಪಿಗೂ ಸೇರದೆ, ಗುಂಪಿನಲ್ಲಿ ಗೋವಿಂದ ಆಗದೆ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡವರು. ಅವರದೇ ಒಂದು ಪದ್ಯ ಹೇಳುತ್ತದೆ.

"ನಾಲ್ಕು ಜನಕೆ ತಿನ್ನಿಸು. ಕುಡಿಸು. ನಿನ್ನದು ಒಂದು ಪಂಥ
ನೀನು 'ಒ'ಎಂದೆಯೋ ಅವರು 'ಠೋ' ಎನ್ನುತ್ತಾರೆ ಜೀಗುತ್ತಾ
ಬೆವರು ಸುರಿಸು, ಸೃಜಿಸು-ಕಟ್ಟೆಟ್ಟ ಬುತ್ತಿ ನಿನಗೆಏಕಾಂತ
ಈಗ ಗುಂಪುಗಾರಿಕೆಯೇ ನಿಜ ರಾಜಕೀಯ ಮಣ್ಣಿನ ಮಗ."

ಗೌಡರ ಮಣ್ಣಿನ ಮಾತುಗಳು ಹಾಗು 'ಪ್ರೀತಿ ಪ್ರಗಾಥ'ದಲ್ಲಿರುವ ಮೃದು ಭಾವನೆಗಳ ಪ್ರಬಂಧ, ಸರಳ ಸುಂದರ ಶೈಲಿ, ತಾವು ಹೇಳಬೇಕೆಂದಿರುವ ವಿಷಯವನ್ನು ನೇರವಾಗಿ ನಿರ್ದುಷ್ಟವಾಗಿ, ನಿಖರವಾಗಿ, ಕೆಲವೆಡೆ ಪ್ರಖರವಾಗಿ ಹೇಳುವ ಗುಣ, ಸುತ್ತಲೂ ಕಾಣುವ ಬದುಕಿನಿಂದ ವಿಷಯಗಳನ್ನು ಕಾವ್ಯಕ್ಕೆ ಎಳೆದುಕೊಳ್ಳುವ ಪರಿ, ಇವುಗಳಿಂದಾಗಿ ಜೀವಂತ ಕಾವ್ಯಧಾರೆ ಸಾಧ್ಯವಾಗಿದೆ ಗೌಡರಿಗೆ ಗೊತ್ತು ಹಾಡು ಮೂಡುವ ಜಾಡು. ಅದಕ್ಕೇ ಅವರು ಹೇಳುತ್ತಾರೆ

ಹಕ್ಕಿಯಂತೆ ಉಬ್ಬುಬ್ಬಿ ಹಾಡಿದ ಹಳ್ಳಿಗನೊಬ್ಬ
ಠಕ್ಕನಂತೆ ತಬ್ಬಿಬ್ಬಾಗಿ ತೊದಲಿದ ಪೇಟೆಯ ಸುಬ್ಬ
ರೆಕ್ಕೆ ಪುಕ್ಕವಿದ್ದು ಅಬ್ಬಬ್ಬ ಎಂದ ಹೊಟ್ಟೆ ಡುಬ್ಬ
ಮುಕ್ಕಿದರೆ ಮೂಡದಯ್ಯ ಹಾಡು- ಮಣ್ಣಿನ ಮಗ"

ನವ್ಯಸಾಹಿತ್ಯ, ನವೋದಯದ ಎಲ್ಲ ಭಾವನೆಗಳನ್ನು ಸುರುಟಿ ಬೆಳೆಯತೊಡಗಿದ ಕಾಲದಲ್ಲೇ ಕಾವ್ಯ ಕ್ರೀಯೆಗೆ ತಮ್ಮನ್ನು ಒಡ್ಡಿಕೊಂಡಿದ್ದ ಗೌಡರು, ನವ್ಯದ ನಾಲಿಗೆ ಒಣಗುತ್ತಾ ಬಂದುದನ್ನು ಕಂಡವರು. ನವ್ಯೋತ್ತರದ ಎಲ್ಲ ವಿಭಿನ್ನ ವರ್ಗಗಳ ಕವಿತಾರೂಪಗಳನ್ನು ಕಂಡುಂಡ ಗೌಡರು, ಅನಗತ್ಯ ಆರೋಪ, ಹಾಗೂ ದ್ವೇಷರೋಷಗಳ ಅಮಾನವೀಯ ಸಾಹಿತ್ಯವನ್ನು ಬರೆಯುವುದಾಗಲೀ ಅಂತಹ ಗುಂಪಿನ ನಾಯಕನೆನಿಸಿಕೊಳ್ಳಬೇಕೆನ್ನುವ ಹಂಬಲವನ್ನಾಗಲೀ ಇಟ್ಟುಕೊಳ್ಳದೆ, ಪವಿತ್ರ ಪ್ರೇಮದ, ಶುದ್ಧ ಭಾವನೆಗಳ ಸಾರ್ವತ್ರಿಕ ಮೌಲ್ಯಗಳ ಉತ್ತಮ ಕಾವ್ಯವನ್ನು ನೀಡಿದವರು, ಹಾಗಾಗಿಯೇ ಗೌಡರ ಸಾಹಿತ್ಯಕ್ಕೆ ಆಯಸ್ಸು ಹೆಚ್ಚು, ಸಹೃದಯವ ಭಾವವೀಣೆಯನ್ನು ಮೀಟುವ ವೈಣಿಕನ ಬೆರಳುಗಳ ನಾಡಕ್ರಿಯೆಯೇ ಗೌಡರಲ್ಲಿ ಕಾವ್ಯ ಕ್ರೀಯೆಯಾಗಿ ಮಡುಗಟ್ಟಿದೆ.

ರಾಜ ಮಹಾರಾಜರು ಒಂದಲ್ಲ ಒಂದು ದಿನಸತ್ತರು
ಎಂಥೆಂಥ ರಥರಥಿಕರೋ ಅರೆಘಳಿಗೆ ಅತ್ತರು
ಸತ್ತಿಲ್ಲ ಬುದ್ಧ, ಕ್ರಿಸ್ತ, ಬಸವ, ಗಾಂಧಿಯಂಥ ಮಾಹಾವರೇಣ್ಯರು
ಹಬ್ಬಿದ ಮಬ್ಬಿಗವರ ತತ್ವವೇ ಹೊಂಗದಿರು-ಮಣ್ಣಿನಮಗ

ದೊಡ್ಡರಂಗೇಗೌಡರ ಸಾಹಿತ್ಯ ಪ್ರತಿಪಾದಿಸುವ ಮೌಲ್ಯ ಇದು. ಹೊರಗಿನ ನೋಟದ ಬಹಿರಂಗ ಆಡಂಬರದ ಗೋಜಲು ಬದುಕು ಪೂರ್ಣ ಬದುಕಲ್ಲ ಅಂತರಂಗದೊಳಗೆ ತನ್ನನ್ನು ತಾನು ಕಂಡುಕೊಳ್ಳುವ ಕಾಣ್ಕೆಪೂರ್ಣಬದುಕು, ಒಳಗಣ್ಣಿನೊಳಗಿಂದ ತನ್ನರಿವು ಮೂಡಿಸಿಕೊಳ್ಳುವ ಪ್ರಕ್ರಿಯೆ ಬಾಳಿನ ಸಾರ್ಥಕತೆ. EwāyōQ® fœrālā‰

"ನೋಡುತ್ತಾ ನೋಡುತ್ತಾ ಒಳಗಣ್ಣು ತೆರೆದು ನೋಡಣ್ಣಾ
ಕೇಳುತ್ತಾ ಕೇಳುತ್ತಾ ದೀನರಳಲ ಕೇಳಿ ಕರಗಣ್ಣಾ
ಕಾಣುತ್ತಾ ಕಾಣುತ್ತಾ ಅಂತರಂಗದರಿವು ಕಾಣಣ್ಣ
ಕಾಣದೆ ಕೇಳಧೆ ನೋಡದೆ ಬಾಳು ಪೂರ್ಣವಲ್ಲ - ಮಣ್ಣಿನ ಮಗ

ಎಂದಿದ್ದಾರೆ,

ದೊಡ್ಡರಂಗೇಗೌಡರು ಈ ಎರಡು ಮೂರು ದಶಕಗಳಲ್ಲಿ ಈ ಪ್ರಪಂಚದೊಡನಿರುವ ತಮ್ಮ ಸಂಬಂಧದ ಅನುಭವವನ್ನೇ ಕವನಗಳ ಝುರಿಯಾಗಿ, ತೊರೆಯಾಗಿ ಹರಿಯಬಿಟ್ಟಿದ್ದಾರೆ.

ಈ ಸಂಬಂಧವು ಹೃದಯದ ಭಾವನೆಗಳ ಸಂಸ್ಕರಣಕ್ಕೆ ದಾರಿಮಾಡಿಕೊಟ್ಟಿರುವುದರಿಂದ ಈ ಕವಿತೆಗಳ ಮಾರ್ಗವೂ ಪ್ರೇಮಗೀತೆಯ ಮೂಲಕ ತನ್ನ ಆದ್ಯಾತ್ಮಿಕ ನೆಲೆಯನ್ನು ಶೋಧಿಸುತ್ತವೆ. ಈ ಕವಿತೆಗಳ ಹಿಂದಿರುವ ಮನಸ್ಸು ಶುದ್ಧವಾಗಿದೆ, ನಿರ್ಮಲವಾಗಿದೆ, ಲೋಕಸಂಬಂಧವನ್ನು ಸಮರಸ ಮಧುರಸ್ನೇಹವಾಗಿ ಮಾಡಿಕೊಳ್ಳುವ ಆಶಯವಿದೆ ಇಲ್ಲಿ. ಹಿರಿಯಶಕ್ತಿಗಳಲ್ಲಿ ಗೌರವ, ಸಮಾನರಲ್ಲಿ ಸ್ನೇಹ, ಕಿರಿಯರಲ್ಲಿ ವಿಶ್ವಾಸ, ಈ ಜಾಡು, ಈ ಕವಿತೆಗಳ ಧ್ವನಿಯಾಗಿದೆ.

ಲೇಖಕರು ತಮ್ಮ ಪರಿಸರದಲ್ಲಿ ಕಂಡ ಅನುಭವದ ಸಾರವೇ ಅವರ ಸಂಪೂರ್ಣ ಕವನಸಂಕಲನಗಳಲ್ಲಿ ಘನೀಭೂತವಾಗಿ ಮಡುಕಟ್ಟನಿಂತಿದೆ. ಈ ಅನುಭವದ ಸೂಕ್ತಿಗಳೇ ಮಣ್ಣಿನ ಮಗನ ಮಾತಾಗಿ ಮಾತು ಹಾಡಾಗಿ, ಕೃತಿಯನ್ನು ಅಲಂಕರಿಸಿವೆ, ಸಹೃದಯನನ್ನು ನೇರವಾಗಿ ಸೇರುವಂತೆ ಬರೆಯುವ ಚಾತುರ್ಯ ದೊಡ್ಡರಂಗೇಗೌಡರ ವೈಯಕ್ತಿಕಸ್ವತ್ತು. ಶುಭ್ರವಾದ, ಪ್ರಸನ್ನವಾದ, ಲಲಿತವಾದ ಅವರ ಕಾವ್ಯಶೈಲಿ ಓದುಗರನ್ನು ಮೂರುದಶಕಗಳಿಂದಲೂ ಆಕರ್ಷಿಸುತ್ತಲೇ ಬಂದಿದೆ.

## ಹೊಸ ತನದ ಹಾಡುಗಳ ಸೃಷ್ಟಿ

✍ ಶೇಖರ್ ಕತ್ರಿಗೆ

ಕವಿ ಹೃದಯ ಸಿನಿಮಾ ಕ್ಷೇತ್ರಗಳು ತನ್ನನ್ನು ಒದಗಿಸಿಕೊಂಡ ಉದಾಹರಣೆಯೆಂದರೆ ದೊಡ್ಡರಂಗೇಗೌಡರು ಕನ್ನಡ ಚಿತ್ರಗೀತೆಗಳ ಶ್ರೋತೃಗಳಿಗೆ ಆತ್ಮೀಯ ಹೆಸರು. ಕೇವಲ ಪ್ರಾಸಗಳ ಮಧ್ಯೆ ಗಿರ್ಕಿ ಹೊಡೆಯುವ ಪ್ರೀತಿ, ಪ್ರೇಮ, ಬದುಕು, ರೊಮಾನ್ಸ್, ಎಂಬ ಕೆಲವೇ ಶಬ್ದಗಳೇ ಹಾಡುಗಳಾಗುತ್ತಿರುವ ಈ ಯಾಂತ್ರೀಕೃತ ವರ್ತುಲದಲ್ಲಿ ಒಂದಿಷ್ಟು ಹೊಸತನದ ಹಾಡುಗಳನ್ನು ಸೃಷ್ಟಿಸುವ ಗೌಡರು ಇದುವರೆಗೂ ತಮ್ಮ ಹಾಡುಗಳಲ್ಲಿ ಸಾಹಿತ್ಯಕ ಅಂಶಗಳನ್ನು ಉಳಿಸಿಕೊಂಡು ಬಂದಿದ್ದಾರೆ. ತಮ್ಮ ವೈಶಿಷ್ಟ್ಯವೆಂಬಂತೆ ಜಾನಪದ ಸೊಗಡನ್ನು ಚಿತ್ರಗೀತೆಗಳಲ್ಲಿ ತುಂಬಿಸುವ ಯತ್ನ ಮಾಡಿ ಗೆದ್ದವರಿವರು. ಬಹುಶಃ ಈ ಯತ್ನವೇ ಅವರನ್ನು ಉಳಿದ ಗೀತರಚನೆಕಾರರಿಗಿಂತ ಬೇರೆಯಾಗಿಸಿದೆ. ಎನ್ನಬಹುದು

# ದೊಡ್ಡರಂಗೇಗೌಡರಿಗೆ ಸನ್ಮಾನ

✍ ಪ್ರೊ|| ವಿ. ಕೃಷ್ಣಶೆಟ್ಟಿ

ದೊಡ್ಡರಂಗೇಗೌಡರಿಗೆ ಇಂದು ಶಿಷ್ಯರಿಂ ಸನ್ಮಾನ
ಅವರನ್ನು ಬಲ್ಲ ಸರ್ವರಿಗೆ ಇದರಿಂದ ಅತಿ ಸುಮ್ಮಾನ||

ಚಿತ್ರಗೀತೆಯು ಮತ್ತೆ ಭಾವಗೀತೆಯು - ಎರಡರೊಳು ಕೀರ್ತಿ
ತ್ರಿವಿಕ್ರಮನಾಗಿ ಬೆಳೆಯಲಿ ನಮ್ಮ ಈ ವಾಮನನ ಮೂರ್ತಿ ||

ಕವಿಯ ಮೊಗದೊಳು ಪಸರಿಸಿದೆ ಮುಗಳುನಗೆ ಮಲ್ಲಿಗೆಯ ಕಂಪು
ಗೀತೆಗಳ ಸಾಲಿನಲಿ ಉಸಿರಾಡುತಿದೆ ಕನ್ನಡದ ಪೆಂಪು ||

ಬಯಸಿದಗೆ ಮಾರ್ಗದರ್ಶನಕೆ ಲಭ್ಯ ಸಹೃದಯ ಶ್ರೀಮಂತ
ಮೌಲ್ಯಗಳ ಕುಸಿತಕ್ಕೆ ಸದಾ ಕಸಿವಿಸಿಗೊಳ್ಳುವ ಧೀಮಂತ ||

ಗುಂಪುಗಾರಿಕೆಯಿಂದ ದೂರ ಉಳಿದುದೆ ದೊಡ್ಡ ಸಾಧನೆಯು
ವೃತ್ತಿ ಸಂತೃಪ್ತಿ ದಾಂಪತ್ಯ ಸಾಮರಸ್ಯವೆ ಬೋಧನೆಯು ||

ಇಂಥ ನೇಹಿಗನ ಸಖ್ಯವೆ ಬಾಳಿನಲಿ ಹಿರಿಯ ಸಂಪದವು
ಸರಸಮಯ ಸಹಬಾಳ್ವೆ ಸಂತಸದಿ ನಡೆಸೆ ತೆರೆವುದು ಕದವು||

ಕರುಣಿಸಲಿ ಪರಮಾತ್ಮ ಅವರಿಂಗೆ ಸರ್ವವಿಧ ಸೌಭಾಗ್ಯ
ದೊರೆಕೊಳುಗೆ ಚಿತ್ತಶಾಂತಿಯು ಮತ್ತೆ ವೃದ್ಧಿಸಲಿ ಆರೋಗ್ಯ ||

ದೀರ್ಘ ಸಮಯದ ಬಾಳು ಮೀಸಲಾಗಲಿ ನಡಿ ಉಪಾಸನೆಗೆ
ಸರ್ವಶುಭ ಆಶಿಸುವೆ ಮಿತ್ರರಿಗೆ ಮೇಣವರ ಸವಿ ಮನೆಗೆ.

# ಹಿರಿಯಾಸೆ

✍ ಕೋ. ವೆಂ. ರಾಮಕೃಷ್ಣೇಗೌಡ

ಮುಗ್ಧಮನದ
ಸ್ನಿಗ್ಧನಗೆಯ
ಮುದ್ದುಮೊಗದ ದೊರಂಗೌ
ನಿಮ್ಮ ಗೀತಗಾರುಡಿ
ನಾಡ ನಾಡಿಮಿಡಿಸಿದೆ
ಕಿಡಿ ಹಾರಿಸಿದೆ ಹಲವರಲ್ಲಿ
ಸಿಡುಕಿದವರ ಕಣ್ಣು ತೆರೆಸಿದೆ

ಬಾಳ ಪಥದಲ್ಲಿ
ಅಗಣಿತ ಬವಣೆಗಳುದಿಸಿ
ನೋವನುಂಡರೂ ತಾವು
ನಲಿವ ಉಣಿಸಿದಿರಿ ರಸಿಕರಿಗೆ

ಬಣ್ಣದ ಬದುಕನು
ಸಣ್ಣಗೆ ಕಾಣುವಂದೂ
ಒಡನಾಡಿಯಾದಿರಿ ನಿರಾಶೆಗೊಳ್ಳದೆ;
ಜಯಿಸಿದಿರಿ ಮುನ್ನುಗ್ಗಿ ನಿರ್ಭೀತಿಯಿಂದ

ಮಣ್ಣ ಮಕ್ಕಳ ಬದುಕ
ಮೂಲ ವಾಹಿನಿಯಲ್ಲಿ
ಹರಿದಿಹ ನಿಮ್ಮ ಕಾವ್ಯಹೊಳೆ
ಅಸಮತೆಯ ತೊಲಗಿಸಲಿ
ಸಮತೆಯನು ನೆಲೆಗೊಳಿಸಿ

ಸಿದ್ಧಿಯ ಶಿಖರಕ್ಕೇರುತ್ತಿರುವ
ನೀವು, ದೊಡ್ಡರಂಗಕ್ಕೇ
'ಗೌಡ'ರಾಗ ಬೇಕೆಂಬುದೇ
ನನ್ನ ಹಿರಿಯಾಸೆ

# ನಾ ಕಂಡ ದೊರಂಗೌ

✍ ಬುಕ್ಕಾಪಟ್ಟವಾಸು

ಬಿಳಿಯ ಹಾಳೆಯ ಮೇಲೆ
ಪ್ರಕೃತಿ ಸೆರೆಹಿಡಿದು.......
ಎಳೆಯ ಹೃದಯಗಳಿಗೆ
ಜೀವನ ರೂವಾರಿ ಪಾಠ ಹೇಳುತ್ತಾ
ಪ್ರೀತಿ ಪ್ರೇಮಗಳ ಚಿಗುರಿಸುತ್ತಾ
ಸಮಾಜದ ಪಿಡುಗಳ ಕಂಡು ಸಿಡಿದೇಳುತ್ತಾ
ಅಬ್ಬರ ಆಡಂಬರವಿಲ್ಲದ
ಸರಳ ಬಾಳುವೆಯ, ಮಾದರಿ ಸಮಾಜದ
ಆದರ್ಶ ವ್ಯಕ್ತಿತ್ವದ ದೊರಂಗೌರ ಕಂಡೇ!

* * * *

ಉಗಮದಲಿ ಕಿರಿದಾಗಿ
ಹರಿಯುತ್ತಾ ಹಿರಿದಾಗಿ
ನುಡಿನದಿಯ ಉಕ್ಕಿಸಿ
ಭಾವನೆಗಳ ಹೆಚ್ಚಿಸಿ
ತುಡಿತಗಳ ಚಿಮ್ಮಿಸಿ
ಹಾಲುತೊರೆ ಹರಿದಂತೆ ನೆಡೆವ
ಜೇನುಹನಿ ಹನಿದಂತೆ ನುಡಿವ
ಜೇನುಹನಿ ಹನಿದಂತೆ ನುಡಿವ
ಜೀವನವೇ ಕನ್ನಡಕ್ಕಾಗಿ ಮಿಡಿವ
ಜೀವನವೇ ಕನ್ನಡಕ್ಕಾಗಿ ಮಿಡಿವ
ಮಣ್ಣಿನಮಗ ದೊರಂಗೌರ ಕಂಡೇ!

# ದೊಡ್ಡರಂಗೇಗೌಡರ
# ಮುಕ್ತಮನಸ್ಸಿನ ಸಂದರ್ಶನ
## ಸಂದರ್ಶಕ : ಬುಕ್ಕಾಪಟ್ಣವಾಸು

# ಐವತ್ತರ ಐಸಿರಿಯು ದೊರಂಗೌ

✍ ಬುಕ್ಕಾಪಟ್ಟಣ ವಾಸು
ಛಾಯಾಗ್ರಾಹಕರು

ಕನ್ನಡ ನಾಡಿನ ಸಹೃದಯ ಜನತೆಗೆ ಕವಿ ದೊಡ್ಡರಂಗೇಗೌಡರ ಹೆಸರು ಚಿರಪರಿಚಿತ, ಸಾಹಿತ್ಯಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ದೊರಂಗೌರವರು ಕಳೆದ ಮೂರು ದಶಕಗಳಿಂದಲೂ ಸಾರ್ಥಕ ಸೇವೆ ಸಲ್ಲಿಸಿ ಕನ್ನಡ ಸಾರಸ್ವತ ಲೋಕದಲ್ಲಿ ಶಾಶ್ವತ ಸ್ಥಾನಗಳಿಸಿದವರು.

ಕಥೆ, ಕಾವ್ಯ, ಪ್ರಬಂಧ, ಪ್ರಗಾಥ, ಮುಕ್ತಕ, ವಿಮರ್ಶೆ ಹೀಗೆ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಕೃಷಿ ಮಾಡುತ್ತಿರುವ ದೊರಂಗೌ ಐವತ್ತು ವಸಂತಗಳನ್ನು ಕಂಡವರು. ಕವಿಯಾಗಿ, ಶ್ರೇಷ್ಠ ಗೀತರಚನಕಾರರಾಗಿ, ಉತ್ತಮ ಅಧ್ಯಾಪಕರಾಗಿ, ಸಹೃದಯ ಚಿಂತಕರಾಗಿ, ಸದಾ ನಗುಮುಖದಿಂದ, ಸ್ನೇಹಪರತೆ ಸಹೃದಯತೆ, ಸರಳತೆಯಿಂದ ಮೌಲ್ಯಯುತ ಬದುಕನ್ನು ನಡೆಸುತ್ತಾ ಎಲ್ಲರ ಮೆಚ್ಚುಗೆಗಳಿಸಿ ಪ್ರಿಯರಾಗಿ ಜನಮನದಲ್ಲಿ ಆತ್ಮೀಯವಾಗಿ ಗುರುತಿಸಲ್ಪಟ್ಟ ಹೆಸರು ದೊಡ್ಡರಂಗೇಗೌಡ ಅವರದು.

ಮೂಲತಃ ಭಾವುಕ ಮನಸ್ಸಿನ ಕವಿ ದೊರಂಗೌರವರಿಗೆ, ಪರಂಪರೆಯನ್ನು ಒಪ್ಪಿ ಸೃಜನಶೀಲತೆಗೆ ಸ್ಪಂದಿಸುವ ಮನಸ್ಸು, ಮೌಲ್ಯಗಳಿಗೆ, ಆದರ್ಶಗಳಿಗೆ ಚಡಪಡಿಸುವ ಮನಸ್ಸು, ಆದ್ದರಿಂದಲೆ ಅವರ ಒಳ್ಳೆಯ ವ್ಯಕ್ತಿತ್ವ ರೂಪಣದಲ್ಲೆ ಒಳ್ಳೆಯ ಬರಹದ ದಾಖಲೆಯೂ ಇದೆ.

ಜನರ ಮೂಕ ಭಾವನೆಗಳಿಗೆ ಲೇಖಕ ನಾಲಗೆಯಾದಾಗ ಅದರಲ್ಲಿಯೂ ಸಮೂಹ ಮಾಧ್ಯಮದಲ್ಲಿ ಅದು ಕ್ರಿಯಾಶೀಲವಾಗಿ ಪ್ರಯೋಗವಾದಾಗ ಜನರು ಅದನ್ನು ತಮ್ಮದೆಂದು ಸ್ವೀಕರಿಸುತ್ತಾರೆಂದು ಗುಟ್ಟನ್ನು ಬಿಚ್ಚಿಟ್ಟು ಅದೇ ಮಾರ್ಗದಲ್ಲಿ ಇಂದಿಗೂ ನಡೆದು ಲೇಖನಿಯನ್ನು ಪವಿತ್ರವಾಗಿ ಕಾಪಾಡಿಕೊಂಡು ಬಂದ ವಿಭಿನ್ನ ಸಾಹಿತಿ ಎಂದರೆ ಬಹುಶಃ ದೊಡ್ಡರಂಗೇಗೌಡರೊಬ್ಬರೇ!

"ಜನ್ಮ ನೀಡಿದ ಭೂತಾಯಿಯ ನಾ ಹೇಗೆ ತಾನೆ ಮರೆಯಲಿ" ಎಂದು ಗೀತೆಯನ್ನು ಬರೆಯುವುದರ ಮೂಲಕ ತಮ್ಮ ಮನಸ್ಸಿನ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುತ್ತಿರುವ ಗೌಡರು ಮಣ್ಣಿನಮಗನಾಗಿ ಗ್ರಾಮೀಣ ಪರಿಸರದ ಜೀವಸತ್ವವನ್ನು ಹೀರಿ ಚಿತ್ರಗೀತೆಗಳಲ್ಲಿ ಜಾನಪದ ಸೊಡಗನ್ನು ತುಂಬಿದ್ದಾರೆ. ಬೆಳ್ಳಿತೆರೆಯ ಹಾಡಿನ ಸೃಜನಶೀಲ ಸಾಹಿತ್ಯ ಕೊಟ್ಟು ಜನರನ್ನು ಹಾಡಿನಲ್ಲೆ ಮೋಡಿ ಮಾಡಿದ ಗೌಡರು ಹುಟ್ಟಿ ಬೆಳೆದಿದ್ದು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಕುರುಬರಹಳ್ಳಿಯಲ್ಲಿ ೭-೨-೧೯೪೬ ರಂದು.

ದೊಡ್ಡರಂಗೇಗೌಡರ ತಾತ ನೇಗಿಲು ಹಿಡಿದು ಕೃಷಿ ಮಾಡಿದರೆ, ಮೊಮ್ಮೊಗ ಲೇಖನಿ ಹಿಡಿದ ಕೃಷಿಕ. ತಂದೆ ರಂಗೇಗೌಡರು ಬಾರುಕೋಲು ಹಿಡಿಯುವ ಬದಲು ಸೀಮೆ ಸುಣ್ಣ ಹಿಡಿದು ಪ್ರಾಥಮಿಕ ಶಾಲೆಯ ಉಪಾಧ್ಯಾಯರಾದ್ದರಿಂದ ಮನೆಯ ವಾತಾವರಣ ಬದಲಾಯಿತು. ರಂಗೇಗೌಡರು ಕನ್ನಡ ಪದ್ಯಗಳನ್ನು ತಪ್ಪಿಲ್ಲದೆ ರಾಗವಾಗಿ ಹಾಡುವ, ಚೆನ್ನಾಗಿ ಪದ ವಿಭಾಗ ಮಾಡುವ, ವ್ಯಾಖ್ಯಾನಿಸುವ ಜಾಣ್ಮೆಯನ್ನು ದೊರಂಗೌರವರಿಗೆ ಚಿಕ್ಕಂದಿನಲ್ಲೇ ತಿಳಿಸಿಕೊಟ್ಟರು. ತಂದೆಯವರ ಪ್ರಭಾವದಿಂದ ದೊರಂಗೌರವರಿಗೆ ಸಾಹಿತ್ಯದಲ್ಲಿ ತೀವ್ರಾಸಕ್ತಿ ಬೆಳೆಯಿತು. ಪರಿಣಾಮವಾಗಿ, ಓದುತ್ತಿದ್ದಾಗಲೆ ಶಾಲೆಯ ವಾರ್ಷಿಕ ಸಂಚಿಕೆಗಳಿಗೆ ಪದ್ಯಗಳನ್ನು ಬರೆಯಲಾರಂಭಿಸಿದರು. ಆ ದಿನಗಳಲ್ಲಿ "ಮನುಜ" ಎಂಬ ಕಾವ್ಯನಾಮದಿಂದ ಬರೆದು ವಿದ್ಯಾರ್ಥಿ ವೃಂದದಲ್ಲೂ ದೊರಂಗೌ ಪ್ರಸಿದ್ಧರಾಗಿದ್ದರು.

ಹಳ್ಳಿಯ ಸೊಗಡನ್ನು ಸವಿಯುಂಡ ದೊರಂಗೌ ಜಾನಪದ ಅಧ್ಯಯನದಲ್ಲಿ ತೀವ್ರಾಸಕ್ತಿ ಬೆಳೆಸಿಕೊಂಡು ೧೯೭೨ರಲ್ಲಿ ಬೆಂಗಳೂರು ವಿಶ್ವ ವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿಯನ್ನು ಪಡೆದು ಕೊಂಡರು, ಪ್ರಸ್ತುತ ಬೆಂಗಳೂರಿನ ಶ್ರೀ ಲ. ನ. ಮಹಾವಿದ್ಯಾಲಯದಲ್ಲಿ ಉನ್ನತ ಶ್ರೇಣಿಯ ಕನ್ನಡ ಅಧ್ಯಾಪಕರಾಗಿ ಕಳೆದ ೨೩ ವರ್ಷಗಳಿಂದಲೂ ಸೇವೆ ಸಲ್ಲಿಸುತ್ತಿದ್ದಾರೆ.

ಕಳೆದ ಮೂರು ದಶಕಗಳಿಂದಲೂ ನಿರಂತರ ಕಾವ್ಯ ಕೃಷಿಕರಾದ ದೊರಂಗೌರವರ ಮೊದಲ ಕವನ ಸಂಕಲನ "ಜಗಲಿ ಹತ್ತಿ ಇಳಿದು" ೧೯೬೩ರಲ್ಲಿ ಹೊರಬಂತು, ನಂತರ ೧೯೭೨ರಲ್ಲಿ "ಕಣ್ಣು ನಾಲಿಗೆ ಕಡಲು" ಎರಡನೆ ಕವನ ಸಂಕಲನ ಪ್ರಕಟವಾಯಿತು ಈ ಕೃತಿಗೆ "ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡಮಿ" ಬಹುಮಾನ ದೊರಕಿತು, ಇದರಿಂದ ಮತ್ತಷ್ಟು ಉತ್ಸಾಹಿತರಾದ ಗೌಡರು ನಿರಂತರ ಶ್ರಮವಹಿಸಿ ಅದಮ್ಯ ಚೈತನ್ಯ ತುಂಬಿಕೊಂಡು ಇದುವರೆಗು ೨೦ ಕೃತಿಗಳನ್ನು ಪ್ರಕಟಿಸಿದ್ದಾರೆ. ೧೯೯೧ರಲ್ಲಿ ತಮ್ಮ ವೈಯಕ್ತಿಕ ಜೀವನವನ್ನೆ ಕಾವ್ಯದ ಮೂಲ ವಸ್ತುವನ್ನಾಗಿ ಮಾಡಿಕೊಂಡು "ಪ್ರೀತಿ ಪ್ರಗಾಥ" ರಚಿಸಿದ್ದಾರೆ. ಈ ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ವರ್ಷದ ಶ್ರೇಷ್ಠ ಕಾವ್ಯ ಕೃತಿಯೆಂದು ಹೆಸರಿಸಿ "ರತ್ನಾಕರ ವರ್ಣಿ ಮುದ್ದಣ ಕಾವ್ಯಪ್ರಶಸ್ತಿ" ಲಭಿಸಿದೆ. ದಿನಕರ ದೇಸಾಯಿರವರ ಚೂಟಿಯಾದ ಚುಟಕಗಳ ಪ್ರೇರಣೆ ಮತ್ತು ಡಿ.ವಿ.ಜಿಯವರ ಮಂಕುತಿಮ್ಮನ ಕಗ್ಗದ ಪ್ರಭಾವದಿಂದ ಗೌಡರು 'ಮಣ್ಣಿನ ಮಗ' ಅಂಕಿತದಿಂದ ಮುಕ್ತಕಗಳನ್ನು ಬರೆದು "ಮಣ್ಣಿನ ಮಾತುಗಳು" ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಇದೊಂದು ಗೌಡರ ಮಹತ್ವದ ಕೃತಿ.

ಕನ್ನಡ ಚಿತ್ರರಂಗಕ್ಕೆ ದೊರಂಗೌ ಅವರು ನೀಡಿದ ಕೊಡುಗೆಯನ್ನು ಯಾರೂ ಮರೆಯುವಂತಿಲ್ಲ. "ಮಾಗಿಯ ಕನಸು" ಚಿತ್ರಕ್ಕೆ "ಬಂದಿದೆ ಬದುಕಿನ ಬಂಗಾರದ ದಿನ" ಗೌಡರು ಬರೆದ ಸಿನಿಮಾ ಗೀತೆಯ ಮೊದಲನೆಯ ಸಾಲು, ಈ ಗೀತೆಯನ್ನು ವಿಜಯಭಾಸ್ಕರ್ ರಾಗ ಸಂಯೋಜಿಸಿದ್ದಾರೆ. ಇತ್ತೀಚಿಗೆ ಬಿಡುಗಡೆಯಾದ ಕೆ.ವಿ. ಜಯರಾಂ ನಿರ್ದೇಶನದ 'ರಶ್ಮಿ' ಗೌಡರು ಸಾಹಿತ್ಯ ಒದಗಿಸಿದ ೨೦೦ನೇ ಚಿತ್ರ. "ಇಬ್ಬನಿ ತಬ್ಬಿದ ಇಳೆಯಲಿ ರವಿತೇಜ ಕಣ್ಣು ತೆರೆದು" ದೊಡ್ಡರಂಗೇಗೌಡರು ರಚಿಸಿದ ೪೦೦ ನೇ ಚಿತ್ರಗೀತೆ. ಗೌಡರ ಸೃಜನಶೀಲ ಬರಹ, ಹತ್ತಾರು ಪ್ರಶಸ್ತಿಗಳಿಗೆ ಪಾತ್ರವಾಗಿದೆ.

"ಎಲ್ಲ ಮೇಲು ಕೀಳು ಸುಳ್ಳು ಭೇದ ಭಾವ ಬಗೆದ ಮನುಜ ಕಣೊ" ೧೯೮೧-೮೨ರಲ್ಲಿ ಅಲೆಮನೆ ಚಿತ್ರಕ್ಕಾಗಿ ಬರೆದ ಗೀತೆಗಾಗಿ ಅದರಲ್ಲಿನ ಭಾವೈಕ್ಯ

ಭೋದನಾಂಶ, ಇತ್ಯಾತ್ಮಕ ಧೋರಣೆಗಾಗಿ, ಮನುಕುಲವನ್ನು ಒಳಿತಿನತ್ತ ನಡೆಸುವ ಸಂದೇಶಕ್ಕಾಗಿ ಶ್ರೇಷ್ಠ ಗೀತರಚನಾ ಪ್ರಶಸ್ತಿ ಕರ್ನಾಟಕ ರಾಜ್ಯ ಸರ್ಕಾರದಿಂದ ದೊರಕಿದೆ. ಮತ್ತೆ ಎರಡನೆಯ ಭಾರಿ ೧೯೯೦-೯೧ರಲ್ಲಿ 'ಗಣೇಶನ ಮದುವೆ' ಚಿತ್ರಕ್ಕೆ ಬರೆದ "ಅನುರಾಗದ ತೋಟದಲ್ಲಿ" ಗೀತೆಗೆ ಶ್ರೇಷ್ಠ ಗೀತರಚನಾ ಪ್ರಶಸ್ತಿ ದೊರೆತಿದೆ.

೧೯೮೬ರಲ್ಲಿ ಅರುಣರಾಗ ಚಿತ್ರದ "ನಾನೊಂದು ತೀರ ನೀನೊಂದು ತೀರ" ಹಾಡಿಗೆ ಅಖಿಲ ಕರ್ನಾಟಕ ಚಲನಚಿತ್ರ ರಸಿಕರ ಸಂಘ ವರ್ಷದ ಶ್ರೇಷ್ಠಗೀತೆ ಎಂದು ಹೆಸರಿಸಿ ಪ್ರಶಸ್ತಿ ನೀಡಿದೆ. ಹೀಗೆ ಹಲವು ಹತ್ತಾರು ಪ್ರಶಸ್ತಿ ಪಡೆದ ಗೌಡರು ವಿದೇಶಿಯರ ಗಮನವನ್ನೂ ಸೆಳೆದಿದ್ದಾರೆ.

ಅಮೇರಿಕನ್ ಬಯೊಗ್ರಾಫಿಕಲ್ ಸೆಂಟರ್‌ನವರು ಹೊರತಂದಿರುವ ಉದ್ಗ್ರಂಥ ೧೯೯೨/೯೩ "Most Admired Men & Women Of The Year Annual Poll" ನಲ್ಲಿ ೫೦೦ ಜನ ವಿಶ್ವ ಪ್ರತಿಭಾವಂತರ ಪಟ್ಟಿಯಲ್ಲಿ ಕನ್ನಡದ ಕವಿ ದೊಡ್ಡರಂಗೇಗೌಡರ ಹೆಸರು ಉಲ್ಲೇಖವಾಗಿದೆ. ABI North Corolina ನಿಂದ ದಾಖಲೆ ಪತ್ರ ಮತ್ತು ಕವಿಯ ಸಂಪೂರ್ಣ ಜೀವನ ವಿವರಗಳು ಇಂಗ್ಲೀಷ್‌ನಲ್ಲಿ ಪ್ರಕಟವಾಗಿದೆ. ದೊಡ್ಡರಂಗೇಗೌಡರ ಸಾಧನೆ ಮೆಚ್ಚಿ Cambridge ನಿಂದ Men Of Achivementನ ಪ್ರಶಸ್ತಿ ಪತ್ರ ದೊರಕಿದೆ. ಇದಷ್ಟೆ ಅಲ್ಲದೆ ಹಲವಾರು ಕನ್ನಡ ಸಂಘ ಸಂಸ್ಥೆಗಳು ಅನೇಕ ಬಿರುದುಗಳನ್ನು ನೀಡಿ ದೊರಂಗೌರವರನ್ನು ಗೌರವಿಸಿದ್ದಾರೆ.

ದೊಡ್ಡರಂಗೇಗೌಡರು ಚಿತ್ರಗೀತೆಗಳಷ್ಟೇ ಅಲ್ಲದೆ ಭಕ್ತಿಗೀತೆ ಮತ್ತು ಭಾವಗೀತೆಗಳನ್ನೂ ರಚಿಸಿದ್ದಾರೆ. ಅವರ ನೂರಾರು ಗೀತೆಗಳು 'ರಾಗ ಸಂಯೋಜನೆ'ಯಾಗಿ ಆಕಾಶವಾಣಿ, ದೂರದರ್ಶನದಲ್ಲಿ ಪ್ರಸಾರವಾಗಿವೆ. ಇದುವರೆಗೆ ಗೌಡರ ರಚನೆಯ ಒಟ್ಟು ೧೬ ಧ್ವನಿ ಸುರುಳಿ ಬಿಡುಗಡೆಯಾಗಿವೆ. "ಮಾವು-ಬೇವು" ಧ್ವನಿಸುರುಳಿಯಲ್ಲಿ ಎಸ್. ಪಿ. ಬಾಲಸುಬ್ರಹ್ಮಣ್ಯಂ ಹಾಡಿ ಸಿ. ಅಶ್ವತ್ಥ್ ಸ್ವರಸಂಯೋಜಿಸಿದ್ದಾರೆ. ಈ ಧ್ವನಿ ಸುರುಳಿ ದೊಡ್ಡರಂಗೇಗೌಡರವರಿಗೆ ಹೆಚ್ಚಿನ ಜನಪ್ರಿಯತೆ ಗಳಿಸಿಕೊಟ್ಟಿದೆ.

ಮೊದಲನಿಂದಲೂ ಹಾಡುತ್ತಲೇ ಪದ ಹೆಣೆಯುತ್ತಿದ್ದ ಗೌಡರ ಧ್ವನಿ ಸುರುಳಿಯಲ್ಲಿ ಹಾಡುವ ಮೂಲಕ ಗಾಯಕರೂ ಆಗಿದ್ದಾರೆ. ಅಂಕುರ ಧ್ವನಿ ಸುರುಳಿಯಲ್ಲಿ ಮೂರು ಹಾಡುಗಳನ್ನು ಹಾಡಿದ ನಂತರ ಅವರ ಕಂಠಸಿರಿಗೆ ಮಾರು ಹೋದ ಸಂಗೀತ ನಿರ್ದೇಶಕರು ಗಾಯಕರಾಗಿಯೂ ಮುಂದುವರೆಯುವಂತೆ ಪ್ರೋತ್ಸಾಹಿಸಿದ್ದಾರೆ.

ಬಹುಮುಖ ಪ್ರತಿಭೆಯ ದೊರಂಗೌ ಪತ್ರಿಕಾಕರ್ತರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ವಿದ್ಯಾರ್ಥಿ ದೆಸೆಯಲ್ಲಿ ಕೆಲವು ಗೆಳೆಯರ ಜೊತೆಗೂಡಿ 'ಬೃಂದಾವನ' ಪತ್ರಿಕೆ ಪ್ರಾರಂಭಿಸಿದರು. ಆಗಿನಿಂದಲೂ 'ಅಗಸ್ತ್ಯ' ಎಂಬ ಗುಪ್ತನಾಮದಿಂದ ಬರೆಯುತ್ತಿದ್ದವರು ಗೌಡರೆಂದು ಎಷ್ಟೋ ಜನಕ್ಕೆ ಇಂದಿಗೂ ತಿಳಿದಿಲ್ಲ. 'ವಿಚಾರ ವೀಚಿ' ಎಂಬ ಅಂಕಣದಲ್ಲಿ ಗದ್ಯ ಲೇಖನಗಳನ್ನೂ, 'ಹಿತಚಿಂತಕ' ಎಂಬ ಹೆಸರಿನಲ್ಲಿ ನೀತಿ ಬರಹಗಳನ್ನೂ ಇಂದಿಗೂ ಬರೆಯುತ್ತಿರುವವರು ದೊಡ್ಡರಂಗೇಗೌಡರೇ! 'ಜ್ಞಾನಭಾರತಿ ಸಮಾಚಾರ್' ಪತ್ರಿಕೆಯ ಸಂಪಾದಕರಾಗಿಯೂ ದೊರಂಗೌರವರು ಸೇವೆಸಲ್ಲಿಸಿದ್ದಾರೆ.

ಹೀಗೆ ಕಥೆ-ಕಾವ್ಯ ವಿಮರ್ಶೆ ಚುಟಕ ಎಲ್ಲಾ ಸಾಹಿತ್ಯ ಪ್ರಕಾರದಲ್ಲೂ ಕೃಷಿಮಾಡಿ ಪ್ರತಿಭಾ ಸಂಪನ್ನರಾಗಿದ್ದಾರೆ. ಇವೆಲ್ಲದರ ಜೊತೆಗೆ ಎಲ್ಲಕ್ಕಿಂತ ಮೊದಲು ಉತ್ತಮ ಬದುಕಿಗೆ ಪ್ರಾಧಾನ್ಯತೆ ನೀಡಿದ್ದಾರೆ. ಒಳ್ಳೆಯ ಬದುಕಿನ ನಂತರ ಒಳ್ಳೆಯ ಕಾವ್ಯ ಬರೆಯುವುದಕ್ಕೆ ಸಾಧ್ಯ ಎನ್ನುವ ಗೌಡರು ನನ್ನ ಬದುಕು ಮತ್ತು ಕಾವ್ಯ ಬೇರೆಯಲ್ಲ ಎನ್ನುವಷ್ಟು ಸಾಹಿತ್ಯವನ್ನು ಮೈಗೂಡಿಸಿಕೊಂಡಿದ್ದಾರೆ.

ಇದೀಗ ೫೦ ವಸಂತಗಳನ್ನು ಕಾಣುತ್ತಿರುವ ದೊರಂಗೌ, ಬರಹದಷ್ಟೇ ಬದುಕಿನಲ್ಲೂ ಶ್ರೀಮಂತ ಸಹೃದಯ ಸೃಜನಸಂಪನ್ನ ಜೀವನೋತ್ಸಾಹಿ. ಮೈಮನಗಳ ಸುಕುಮಾರತೆ ಅವರ ಚಿಂತನ ಕ್ರಮದ ಫಲಶ್ರುತಿ. ಸಾಧನೆಯಲ್ಲೆ ಸಂತೃಪ್ತಿ ಕಾಣುವ ದೊರಂಗೌ ಯಾವುದೆ ಗುಂಪುಗಳಿಂದ ಹೊರಗುಳಿದು, ಎಲೆ ಮರೆಯ ಹೂವಾಗಿ ಅರಳಿದವರು.

ದೊರಂಗೌ ತಮ್ಮ ಕವಿತೆಗಳಲ್ಲಿ ತಮ್ಮ ಬದುಕಿನ ಬಗೆಗಿನ ನಿಲುವುಗಳನ್ನೂ ತಮ್ಮ ಕಾವ್ಯದ ಆಶಯಗಳನ್ನೂ ಈ ರೀತಿ ಸೂಚಿಸಿದ್ದಾರೆ.

ನನ್ನ ಕವಿತೆ ಕಂಬಳಿ ಹುಳ
ಚಿಟ್ಟೆಯಾಗುತ್ತೆ
ಓದುಗನ ಹೃದಯದಲ್ಲಿ;

ನನ್ನ ಕವಿತೆ ಮುದ್ದೆ ಸೊಪ್ಪಿನ ಸಾರು
ಧಾತುವಾಗುತ್ತೆ
ಹಳ್ಳಿಗರ ಹೊಟ್ಟೆಯಲ್ಲಿ;

ನನ್ನ ಕವಿತೆ ಮಗುವಿನ ನಗೆ-
ಹೊನಲಾಗುತ್ತೆ
ಅಮ್ಮನಕ್ಕರೆ ಮಡಿಲಿನಲ್ಲಿ.....

ನನ್ನ ಕವಿತೆ ಕದಂಬದ ಹೂ-
ಬೆಳ್ದಿಂಗಳಾಗುತ್ತೆ
ಹೆಣ್ಣಿನ ಮುಡಿಯಲ್ಲಿ.

ನನ್ನ ಕವಿತೆ ಹಂಸದಂಥ ಹಣತೆ
ಬೆಳಕ ಬಳ್ಳಿಯಾಗುತ್ತೆ
ಕಗ್ಗತ್ತಲ ಗರ್ಭದಲ್ಲಿ;

ದೊಡ್ಡರಂಗೇಗೌಡರ ಬದುಕು-ಬರಹದ ಸಾಧನೆಯನ್ನು ಗುರುತಿಸಿದ ಅವರ ಅಭಿಮಾನಿ ಬಳಗ ಅವರನ್ನು ಸನ್ಮಾನಿಸುವ ಕಾರ್ಯಕ್ರಮ ಹಮ್ಮಿಕೊಂಡಿರುವುದು-ಅತ್ಯಂತ ಸಕಾಲಿಕ, ಅಭಿಮಾನಿಗಳ ಉತ್ಸಾಹಕ್ಕೆ ಮುಜುಗುರದಿಂದ ಮಣಿದ ದೊರಂಗೌ ಅವರನ್ನು ಸಂದರ್ಶಿಸಿದಾಗ ಹೊರಬಂದ ಅವರ ವಿಚಾರ ರಶ್ಮಿಗಳು ಬೆರಗು ಪಡಿಸುತ್ತವೆ.

# ದೊಡ್ಡರಂಗೇಗೌಡರ ಮುಕ್ತ ಮನಸ್ಸಿನ ಸಂದರ್ಶನ

✍ ಬುಕ್ಕಾಪಟ್ಟಣವಾಸು

***ರೈತನ ಮಗನಾಗಿ ನೇಗಿಲನ್ನು ಹಿಡಿಯಬೇಕಾದ ಕೈ ಲೇಖನಿ ಹಿಡಿದ ಬಗೆ ಹೇಗೆ?***

ನಮ್ಮ ತಾತ ಅಪ್ಪಟ ರೈತರು; ಜೊತೆಗೆ ಊರಿನ ಪಟೇಲರು ಆಗಿದ್ದರು; ನಮ್ಮ ತಂದೆ ಪ್ರಾಥಮಿಕ ಶಾಲಾ ಮಾಸ್ತರಾಗಿ, ಮುಖ್ಯೋಪಾಧ್ಯಾಯರಾಗಿ ಶಿಸ್ತಿನ ಜೀವನ ನಡೆಸುತ್ತಲೇ ನಿವೃತ್ತರಾದರು. ತಾತನ ಕಾಲಕ್ಕೆ ವ್ಯವಸಾಯ ಇತ್ತು. ಅಪ್ಪನ ಕಾಲಕ್ಕೆ ನಾವು ಹಳ್ಳಿ ಬಿಟ್ಟು ಪೇಟೆ ಸೇರಿದ್ದೆವು. ಅಪ್ಪನೇ ಬಾರುಕೋಲು ಹಿಡಿಯುವ ಬದಲು ಸೀಮೆಸುಣ್ಣ ಹಿಡಿದಿದ್ದರಿಂದ ನಮ್ಮ ಮನೆಯಲ್ಲಿ ಬದಲಾವಣೆ ಗಾಳಿ ಬೀಸಿತ್ತು. ನನ್ನ ಕಾಲಕ್ಕೆ "ನಾನು ಬರೀ ನೇಗಿಲ ಚಿತ್ರ ಮಾತ್ರ ಬರೆಯುವಷ್ಟು" ಉಳಿದು ಬೇಸಾಯದಿಂದ ದೂರ ಬಂದೆ;

ಅಪ್ಪನಿಗೆ ಹಳೆಗನ್ನಡಕಾವ್ಯ ಚೆನ್ನಾಗಿ ಓದುವ, ರಾಗವಾಗಿ ಹಾಡುವ, ಸರಿಯಾಗಿ ಪದವಿಭಾಗ ಮಾಡುವ ಹವ್ಯಾಸವಿತ್ತು. ನನ್ನ ಎಂಟನೇ ತರಗತಿ ಓದಿನವರೆಗೂ ಅವರೆ ತರಗತಿಯಲ್ಲೂ ಮೇಸ್ಟ್ರು. ಹೀಗಾಗಿ ಆ ಪ್ರಭಾವದಿಂದಲೇ ಸಾಹಿತ್ಯದತ್ತ ಒಲಿದೆ ಓದುತ್ತಾ ಓದುತ್ತಾ ಕಾವ್ಯವೇ ನನ್ನ ಮಾಧ್ಯಮವಾಯ್ತು. ಜಾನಪದ ಗೀತೆಯು ಈ ಆಸಕ್ತಿ ವಿಷಯವಾಗಿ ಕಾವ್ಯದಲ್ಲೇ ಮುಂದುವರೆದೆ.

***ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದ ಸಂದರ್ಭ, ಆದರೆ ಜೊತೆ ಬೆಳೆಯುತ್ತಾ ನೀವು ಕಾವ್ಯದಲ್ಲಿ ಕಾವ್ಯ ಜಗತ್ತನ್ನು ಕಂಡ ರೀತಿಯ ಬಗ್ಗೆ ವಿವರಿಸುತ್ತೀರಾ?***

ಚಿಕ್ಕಂದಿನಲ್ಲಿ ನಮ್ಮ ಹಳ್ಳಿಯಲ್ಲಿ ನನ್ನ ತಂದೆ ನನಗೆ ಅಪ್ಪ ಆಗಿರೋದರ ಜೊತೆಗೆ ಶಾಲೆಯಲ್ಲಿ ನನಗೆ ಮೇಸ್ಟ್ರು ಹೌದು; ಕನ್ನಡದ ಕವಿತೆಗಳನ್ನು ತುಂಬಾ ರಾಗವಾಗಿ ಹಾಡುತ್ತಿದ್ದರು. ಚೆನ್ನಾಗಿ ಓದಿ ತೋರಿಸುತ್ತಿದ್ದರು. ನಾಟಕೀಯವಾಗಿ ಹೆಚ್ಚು ಭಾವುಕವಾಗಿ ಅವರು, ಪದ್ಯ, ಪಾಠ ಹೇಳುತ್ತಿದ್ದ ರೀತಿ ನಿಜಕ್ಕೂ ನನ್ನ ಮೇಲೆ ಪ್ರಭಾವ ಬೀರಿದೆ; ಅವರು ತೆಂಕಣಗಾಳಿಯಾಟ, ಹುತ್ತರಿ ಹಾಡು ಮೂಡುವನು ರವಿ ಮೂಡುವನು - ಪದ್ಯ ಓದುತ್ತಿದ್ದ ಹಾಗೂ ವಿವರಿಸುತ್ತಿದ್ದ ರೀತಿ-ನನ್ನ ಮನಸ್ಸನ್ನು ಸೆಳೆಯಿತು. ಒಂದು ರೀತಿಯಲ್ಲಿ ಅದು ಕಾವ್ಯ ಮೋಡಿಯೇ! ಅವರು ಶ್ರದ್ಧೆಯಿಂದ ಪಾಠ ಮಾಡುತ್ತಿದ್ದರು. ನನಗೆ ಅದೇ ಸ್ಫೂರ್ತಿ. ಕಲಿಯುವ ಸ್ಫೂರ್ತಿ. ಹೊರಗೆ ಹಳ್ಳಿಯ ಪ್ರಶಾಂತ ನಿಸರ್ಗ, ಹಳ್ಳ.... ಹಳ್ಳದ ದಂಡೆ; ವಡ್ಡು-ವಡ್ಡಿನ ಪಕ್ಕದ ತೋಪು, ಗದ್ದೆಗಳು, ತೋಟಗಳು ಸುತ್ತಲೂ ಗಿಡಮರ ಹೂವು ಹಣ್ಣು ಹಕ್ಕಿಪಕ್ಕಿ ಒಟ್ಟಾರೆ ಗ್ರಾಮೀಣ ಪರಿಸರ ನನ್ನ ಮನಸ್ಸಿನಲ್ಲಿ ಆಗಲೇ ಅನೇಕ ಭಾವನೆಗಳನ್ನು ಹುಟ್ಟಿಸುತ್ತಿತ್ತು. ನಿಮಗೆ ಆಶ್ಚರ್ಯವಾಗಬಹುದು - ನಾನು ನನ್ನ ತಮ್ಮಂದಿರನ್ನ ತಂಗಿಯರನ್ನ ನನ್ನ ಸೋದರತ್ತೆ ಮಕ್ಕಳನ್ನೆಲ್ಲಾ ಕಲೆ

ಹಾಕಿಸಿಕೊಂಡು ನಮ್ಮ ಮಾವ ಅವರ ತೆಂಗಿನ ತೋಟದಲ್ಲಿ ಹಳ್ಳದ ದಂಡೆಯ ಮೋಹಕ ಹಸಿರ ಹಿನ್ನೆಲೆಯಲ್ಲಿ, ನಾಟಕ ಕಲಿಸುತ್ತಿದ್ದೆ. ಇಂಗ್ಲೀಷ್ ಬಗ್ಗೆ ಕೂಡ ಬಹಳವ್ಯಾಮೋಹ ಇತ್ತು. ಹಾಡು ಕಟ್ಟುತ್ತಾ ಇದ್ದೆ. ನನ್ನದೇ ಧಾಟಿಯಲ್ಲಿ ಹಾಡು ಹೇಳಿಕೊಡುತ್ತಿದ್ದೆ ನನ್ನ ತಮ್ಮಂದಿರು, ನಮ್ಮತ್ತೆ ಮಕ್ಕಳು ಶ್ರದ್ಧೆಯಿಂದ ಕಲಿತು ಕೊಳ್ಳುತ್ತಿದ್ದರು. ಅದೆಲ್ಲಾ ನೆನಸಿಕೊಂಡರೆ ನಗು ಬರುತ್ತೆ ಈಗ. ಮಧ್ಯೆ ಮಧ್ಯೆ ಇಂಗ್ಲೀಷ್ ಹಾಡಿನ ತುಣುಕುಗಳು ಇರುತ್ತಿದ್ದವು. ಅಂದರೆ ಅಪ್ಪರ ಮಟ್ಟಿಗೆ ನನ್ನ ತಂದೆ, Poetry, ಅವರು ನಾಟಕದಲ್ಲೂ ಹಾರ್ಮೋನಿಯಂ ಮಾಸ್ಟರ್ ಆಗಿದ್ದರಿಂದ ಅದೆಲ್ಲಾ ಒಟ್ಟಾರೆ ನನ್ನ ಮೇಲೆ ಪ್ರಭಾವ ಬೀರಿತು. ನಾನು ಅದೇ ಹಾದಿಯಲ್ಲಿ ಹಾಡುಕಟ್ಟುವತ್ತ ಗಮನ ಹರಿಸಿದ್ದೆ.

***ನೀವು ಮೇಸ್ಟ್ರು ಆಗಿರುವುದರಿಂದ ಬಹಳ ಯುವಕ ಯುವತಿಯರನ್ನು ಕಂಡಿದ್ದೀರಿ. ಅವರಿಗೆ ಪುಸ್ತಕದ ವಿಷಯ ಬಿಟ್ಟು ಬೇರೆ ಹೇಳುವ ವಿಷಯವೇನು ಸಾರ್!***

ಇದುವರೆಗೆ ಇಪ್ಪತ್ತೂಮ್ರು ವರ್ಷಗಳ ಕಾಲ ಸಾವಿರಾರು ಜನ ವಿದ್ಯಾರ್ಥಿಗಳಿಗೆ ಪಾಠ ಹೇಳಿದ್ದೇನೆ. ಅಧ್ಯಾಪನ ನನಗೆ ಖುಷಿ ಕೊಟ್ಟಿದೆ. ಪಾಠ ಹೇಳುವುದರಲ್ಲಿ ಎಷ್ಟೊಂದು ಸಂತೋಷ ಇದೆ ಎಂಬುದು ಪ್ರಾಮಾಣಿಕವಾದ ಮೇಸ್ಟ್ರುಗಳಿಗೆಲ್ಲಾ ಗೊತ್ತಿರುವ ವಿಷಯವೇ!

ಇದರಲ್ಲಿ ಒಂದು ಬಹಳ ಮುಖ್ಯ ವಿಷಯವಿದೆ; ನನಗೆ ಗುರುಗಳಾಗಿದ್ದ ಪ್ರೊ|| ಸಣ್ಣ ಗುಡ್ಡಯ್ಯ, ಪ್ರೊ|| ಸಿದ್ಧಲಿಂಗಯ್ಯ, ಪ್ರೊ|| ವಿ. ಪುಟ್ಟಮಾದಪ್ಪ, ಪ್ರೊ|| ಸಂಪತ್ಕೈಯಂಗಾರ್, ಪ್ರೊ|| ಸುಂದರ್ ರಾಜ ಅಯ್ಯಂಗಾರ್, ಪ್ರೊ|| ಪ್ರಹ್ಲಾದರಾವ್ ಇವರುಗಳು ನನಗೆ ಪದವಿಪೂರ್ವ ತರಗತಿಗಳಲ್ಲಿ ಹಾಗೂ ಪದವಿ ತರಗತಿಗಳಲ್ಲಿ ನನಗೆ ಗುರುಗಳಾಗಿದ್ದವರು. ಅವರುಗಳೆಲ್ಲಾ Text ಅನ್ನುವುದನ್ನು Pre-Text ಮಾಡಿಕೊಂಡು ಸಾಹಿತ್ಯ ಕಲೆ ಸಂಗೀತ ಸಮಾಜ, ಪ್ರಸಕ್ತ ವಿಷಯಗಳ ವಿಶ್ಲೇಷಣೆ ಮಾಡುತ್ತಾ ಜ್ಞಾನ ಬಾಗಿನವನ್ನೇ ನೀಡಿದರು. ಅದು ನನಗೆ ಮೇಸ್ಟ್ರಾಗಿ ಇಂದಿಗೂ ಉಪಯುಕ್ತವಾಗಿದೆ.

ಇನ್ನು ಆನರ್ಸ ಹಾಗೂ ಎಂ. ಎ. ತರಗತಿಗಳಲ್ಲಿ ಪ್ರೊ|| ರಂ. ಶ್ರೀ ಮುಗಳಿ ಪ್ರೊ|| ಜಿ. ಎಸ್. ಶಿವರುದ್ರಪ್ಪ, ಡಾ|| ಎಂ. ಚಿದಾನಂದ ಮೂರ್ತಿ, ಡಾ|| ಲಕ್ಷ್ಮೀನಾರಾಯಣಭಟ್ಟ, ಡಾ|| ಚಂದ್ರಶೇಖರಕಂಬಾರ್ ಪ್ರೊ|| ಹಂಪನಾ, ಪಿ. ಲಂಕೇಶ್ - ಇವರುಗಳಿಂದ ನಾನು ಕಾವ್ಯ ಕಾವ್ಯಮೀಂಸೆ ಸೃಜನಶೀಲತೆಯ ಗುಟ್ಟುಗಳನ್ನು ಕಲಿತೆ, ವಿಮರ್ಶೆ ಹೇಗಿರಬೇಕೆಂಬುದನ್ನು ಅರಿತೆ, ಬದುಕಿನ ಬಗ್ಗೆ ತಿಳಿದುಕೊಂಡೆ.

ಸಾಮಾಜಿಕ ಪ್ರಜ್ಞೆ, ವ್ಯಕ್ತಿಯ ಜವಾಬ್ದಾರಿ, ಸಮುದಾಯದ ಚಿಂತನೆ, ವರ್ಗ ತಾರತಮ್ಯದ ಹಾಲಾಹಲಗಳು, ವರ್ಣದ್ವೇಷದ ಪ್ರತಿಕೂಲಗಳು ಮಾನವೀಯತೆಯ ಅಗತ್ಯ ಪ್ರೀತಿಯಮಹತ್ವ, ಸೌಂದರ್ಯದ ಅಹ್ಲಾದತೆ, ಜಾನಪದ ಸಾಹಿತ್ಯದ ಔನ್ನತ್ಯ, ವೈಚಾರಿಕತೆಯ ಅನಿವಾರ್ಯತೆ, ವೈಜ್ಞಾನಿಕ ವಿಚಾರಧಾರೆ ಅಳವಡಿಕೆ, ಪ್ರಕೃತಿಯ ನಿಗೂಢತೆ, ಜನಪರ ಧೋರಣೆಗಳ ಬಗೆಗಿನ ಒಲವುಗಳನ್ನು ತಮ್ಮ ಪಾಠ ಪ್ರವಚನಗಳಲ್ಲಿ ಅಂತರ್ಗತಗೊಳಿಸಿ ಹೇಳುತ್ತಿದ್ದರು. ಶ್ರೀ ಖಾದ್ರಿಶಾಮಣ್ಣ, ಸಿ. ವಿ. ರಾಜಗೋಪಾಲ್, ಅನಂತಕೃಷ್ಣನ್, ತಾರಕನ್, ಪ್ರೊ|| ಬಿ. ವಿ. ವೈಕುಂಠರಾಜು, ಜಿ.ಎಸ್. ಸದಾಶಿವ, ಜಿ. ಎನ್. ರಾಗನಾಥರಾವ್ ಇವರೆಲ್ಲಾ ಸಮೂಹ ಮಾಧ್ಯಮಗಳ ಬಗ್ಗೆ ಪತ್ರಿಕೋಧ್ಯಮದ ಬಗ್ಗೆ ನನ್ನ ಜ್ಞಾನ ದಿಗಂತ ವಿಸ್ತರಿಸಿದ

ಮಹನೀಯ. ಅವರೆಲ್ಲರ ದೃಷ್ಟಿಕೋನಗಳನ್ನು ಅರಿತು ಅವುಗಳಲ್ಲಿನ ಒಳ್ಳೆಯದನ್ನೆಲ್ಲಾ ನನ್ನಲ್ಲಿ ರೂಢಿಸಿಕೊಂಡು - ಅದನ್ನೇ ನನ್ನದನ್ನಾಗಿಸಿಕೊಂಡು ನನ್ನ ವಿಧ್ಯಾರ್ಥಿಗಳಿಗೆ ಪಾಠ ಹೇಳಿದ್ದೇನೆ.

ನನ್ನ ಹಿರಿಯರಿಂದ ನಾನು ಕಲಿತದ್ದು ಅಪಾರ; ಅದನ್ನೇ ವೈಜ್ಞಾನಿಕ ಆಲೋಚನೆಗೆ ಹಚ್ಚಿ ಪ್ರಸ್ತುತ ಸಂದರ್ಭಗಳ ಹಿನ್ನೆಲೆಯಲ್ಲಿ ವಿಚಾರಮಾಡಿ ನಮ್ಮದೇ ಆದ ನಿಲುವುಗಳನ್ನು ಪ್ರತಿಯೊಂದರ ಬಗೆಗೂ ರೂಪಿಸಿಕೊಂಡಿದ್ದೇನೆ. ನನಗೆ ಸರಿ ಅನ್ನಿಸಿದ್ದನ್ನು ಪಾಠ ಮಾಡುವಾಗ ಪಠ್ಯದ ಜೊತೆಗೆ ಸೂಕ್ತ ಅನ್ನಿಸಿದ್ದನ್ನೆಲ್ಲಾ ಮುಕ್ತವಾಗಿ ಹೇಳುತ್ತಾ ಬಂದಿದ್ದೇನೆ. ಸ್ವವಿಮರ್ಶೆ ಹಿನ್ನೆಲೆಯಲ್ಲಿ ..ಯಾವತ್ತೂ ಪಠ್ಯವೊಂದೇ ಎಲ್ಲವೂ ಅಲ್ಲ; ಜೀವನದ ಅನುಭವಗಳು ಎಂದೆಂದೂ ಮಹತ್ವ ಪೂರ್ಣವಾದವುಗಳು! ನಾನು ಸಾಕಷ್ಟು ಬವಣೆ ಕಂಡವನು; ಆಳಲಲ್ಲೇ ಮುಳುಗಿ ಹೋಗುವುದು ಮುಖ್ಯವಲ್ಲ. ಭಾರತದಲ್ಲಿ ನನ್ನಂಥವರು ಕೋಟಿ ಗಟ್ಟಲೆ ಇದ್ದಾರೆ! ಅವರೆಲ್ಲಾ ಕಣ್ಣೀರಲ್ಲೇ ಕೈತೊಳೆವವರು; ದುಃಖ ನುಂಗಿಯೂ ಬದುಕು ಸುಂದರವಾಗಿ ರೂಪಿಸಿಕೊಳ್ಳಲು ಸಾಧ್ಯ. ಬಾಳುವೆ ಹಸನಾಗಬೇಕು. ಅದಕ್ಕೆ ಸಂಕಲ್ಪ ಬೇಕು. ಸರಿಯಾದ ಅರಿವು ಬೇಕು. ಅಂಥ ಅರಿವು ಪಡೆವ ಶಿಕ್ಷಣವೇ ಸಾರ್ಥಕವಾಗಹು.. ಆ ದಿಸೆಯಲ್ಲಿ ನನ್ನ ಸ್ಪಷ್ಟವಾದ ವಿಚಾರಗಳನ್ನೆಲ್ಲವನ್ನೂ ತರಗತಿಯಲ್ಲಿ ಹೇಳುತ್ತಾ ಬಂದಿದ್ದೇನೆ.

ಮೌಲ್ಯಗಳನ್ನು ಯುವ ಜನಾಂಗದಲ್ಲಿ ಸರಿಯಾಗಿ ಬಿತ್ತಬೇಕು. ಹಾಗಾಗಬೇಕಾದರೆ - ಅಧ್ಯಾಪಕನಿಗೆ ಇತ್ಯಾತ್ಮಕ ಚಿಂತನೆ ಅವಶ್ಯ. ಪರಂಪರೆ ಬಗ್ಗೆ ಖಚಿತ ಜ್ಞಾನ ಇರಬೇಕು ಸಂಸ್ಕೃತಿಯ ಹಿರಿಮೆ ಗೊತ್ತಿದ್ದರೆ ಯುವಕ ಯುವತಿಯರಿಗೆ ಸರಿಯಾದ ಬುದ್ಧಿ ಹೇಳಲು ಸಾಧ್ಯವಾಗುತ್ತದೆ. ಮೃಗೀಯ ಭಾವನೆಗಳನ್ನು ಮರೆಯಾಗಿಸಿ, ಕ್ರಮೇಣ ಇಲ್ಲವಾಗಿಸಿ ಮಾನವೀಯ ಚಿಂತನೆಗಳು ಪಲ್ಲವಿಸುವ ಹಾಗೆ ಮಾಡಲು ಅಧ್ಯಾಪಕ ನಿತ್ಯ ನಿತ್ಯ ಶ್ರಮಿಸಬೇಕಾಗುತ್ತದೆ; ಪ್ರೀತಿಯ ಅಗತ್ಯ ಅದರ ಪರಿಶುದ್ಧತೆ, ಶೀಲದ ಘನತೆ, ಚಾರಿತ್ರ್ಯದ ಪ್ರಾಮುಖ್ಯತೆ, ಪರಿಸರವನ್ನು ಪ್ರೀತಿಸುವ ಮನೋಭಾವ, ರಾಷ್ಟ್ರವನ್ನ ಗೌರವಿಸುವ ಕರ್ತವ್ಯ, ಪ್ರಜೆಯಾಗಿ ಜವಾಬ್ದಾರಿ ಭ್ರಷ್ಟವಾಗದಿರಲು, ಅಕ್ರಮಕ್ಕೆ ಹೋಗದಿರಲು, ಅನ್ಯಾಯಕ್ಕೆ ಬಾಗದಿರಲು, ಅಸತ್ಯಕ್ಕೆ ಶರಣೆನ್ನದಿರಲು, ವಿಧ್ಯಾರ್ಥಿಗಳನ್ನು ರೂಪಿಸುವುದೇ ಅಧ್ಯಾಪಕನ ಕಾರ್ಯ. ಅದು ಗುರುತರ ಹೊಣೆಗಾರಿಕೆ. ಉತ್ತಮ ವ್ಯಕ್ತಿತ್ವ ಬೆಳೆಸಿಕೊಳ್ಳುವಂತೆ ವಿಧ್ಯಾರ್ಥಿಗಳನ್ನು ಚಿಂತನೆಗೆ ತೊಡಗಿಸವುದೇ ನನ್ನ ಕಾಯಕ. ಅದನ್ನೇ ನಿಷ್ಠೆಯಿಂದಮಾಡಿದ್ದೇನೆ.

***ಪತ್ರಿಕೋದ್ಯಮಿಯಾಗಿಯೂ ನೀವು ಸೇವೆ ಸಲ್ಲಿಸಿದ್ದೀರಿ ಎಂದು ಕೇಳಿದ್ದೇನೆ. ಈ ಬಗ್ಗೆ ಸ್ವಲ್ಪ ವಿವರವಾಗಿ ತಿಳಿಸುತ್ತೀರಾ ಸಾರ್?***

ಚಿಕ್ಕವಯಸ್ಸಿನಿಂದಲೂ ನಾನು ಒಂದು ರೀತಿಯಲ್ಲಿ ಸಾಹಸಿಯೇ. ಏನಾದರೂ ಹೊಸತನ್ನು ಮಾಡುವುದು ನನ್ನ ಜಾಯಮಾನ. ನಾನು ೧೯೬೧ ರಲ್ಲಿ ಪಿಯೂಸಿನಲ್ಲಿರುವಾಗ ನನ್ನ ಸ್ನೇಹಿತರ ಜೊತೆಸೇರಿ ಒಂದು ಹೊಸ ಪ್ರಯತ್ನ ಮಾಡಿದೆವು. ನನ್ನ ಆಪ್ತ ಗೆಳೆಯರೊಬ್ಬರಿದ್ದಾರೆ ಸ್ವಾಮಿ ವಿವೇಕಾನಂದ ಅಂತ; ಅವರು ನಿಜಕ್ಕೂ ಕ್ರಾಂತಿಕಾರಿ; ಚಿಂತನ ಶೀಲ. ಅನ್ವೇಷಣೆ ಅವರ ತುಡಿತ-ಮಿಡಿತ. ನಾವೆಲ್ಲ ೬೧-೬೪ರವರೆಗೆ ತುಮಕೂರು ಪ್ರಥಮದರ್ಜೆ ಕಾಲೇಜಿನ ವಿದ್ಯಾರ್ಥಿಗಳು. ನಾನು ಪಿ.ಯೂ.ಸಿ. ಹಾಗೂ ಬಿ.ಎಸ್ಸಿ. ಮಾಡಿದ್ದು ಅಲ್ಲೇ... ವಿದ್ಯಾರ್ಥಿ ದೆಸೆಯಲ್ಲೇ ನಾವು ಸಾಕಷ್ಟು ಹೆಸರು ಮಾಡಿದ್ದೆವು. ನಾನು, ಟಿ. ಎಸ್. ಲೋಹಿತಾಶ್ವ (ಈಗ

ಪ್ರಖ್ಯಾತವಾಗಿರುವ ಚಲನಚಿತ್ರ ಕಲಾವಿದ); ಟಿ. ಎನ್. ಕುಮಾರಸ್ವಾಮಿ (ಈಗ ಪ್ರಖ್ಯಾತ ಪತ್ರಕರ್ತ, ಅನೇಕ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವ ಶಿಕ್ಷಣಪ್ರೇಮಿ) ಎಂದೂ ಅಗಲದ ಗೆಳೆಯರು; ಮೊದಲು ಕನ್ನಡ ಬೆರಳಚ್ಚು ಬಂದ ಕೂಡಲೇ keyBord ಉಪಯೋಗಿಸಿ ಪುಸ್ತಕ ಮಾಡಿದೆವು. ಅದರಿಂದ ಪ್ರೇರಿತರಾಗಿ ವಾರಪತ್ರಿಕೆ ಮಾಡಲು ಸಾಹಸ ಮಾಡಿದೆವು. ಏನೋ ಹುರುಪು - ಉತ್ಸಾಹ.

ಶ್ರೀ ಸ್ವಾಮಿ ವಿವೇಕಾನಂದ ಅವರ ನಿರಂತರ ಉತ್ಸಾಹದಿಂದ ನಾವು ನಾಲ್ಕೈದು ಗೆಳೆಯರು ಕೂಡಿ "ಬೃಂದಾವನ" ವಾರಪತ್ರಿಕೆ ಪ್ರಾರಂಭಿಸಿದೆವು. ಶ್ರೀ ವಿವೇಕಾನಂದ ಸಂಪಾದಕೀಯ ಹಾಗೂ ಸಂಪೂರ್ಣ ವ್ಯವಸ್ಥಾಪಕ ಹೊಣೆ ಹೊತ್ತರು; ನಾನು ಶ್ರೀ ತಾ. ನಂ. ಕುಮಾರಸ್ವಾಮಿ, ಶ್ರೀ ಟಿ. ಎಸ್. ಲೋಹಿತಾಶ್ವ ಬರವಣಿಗೆ ಕಾರ್ಯದ ಜವಬ್ದಾರಿ ವಹಿಸಿಕೊಂಡೆವು. ಆಗ ನಾನು "ಮನುಜ" "ಅಗಸ್ತ್ಯ" ದೊರಂಗೌ, ಡಿಆರ್‌ಜಿ ಎಂದೆಲ್ಲಾ ಹೆಸರುಗಳಿಂದ ಬರೆದೆ.. ಪತ್ರಿಕೆ ಒಂದೆರಡು ತಿಂಗಳು ನಡೆಯಿತು ಅಷ್ಟೇ.. ಆದರೆ ಪತ್ರಿಕೋಧ್ಯಮದ ಅನೇಕ ಆಯಾಮಗಳು ಗೊತ್ತಾದವು. 'ಮನುಜ' ಎಂಬ ಕಾವ್ಯ ನಾಮದಿಂದ ಬರೆಯುವ ಹುಚ್ಚ ಬಿಡಿಸಿದವರು ಒಬ್ಬರು ನನ್ನ ನೆಚ್ಚಿನ ಮೇಸ್ಟ್ರು ಶ್ರೀ ಪಿ. ಲಂಕೇಶ್ ಅವರು. ಮತ್ತೊಬ್ಬರು ಪತ್ರಿಕಾಕರ್ತರು ಪ್ರಜಾವಾಣಿ ಸಾಪ್ತಾಹಿಕದ ಸಂಪಾದಕರಾಗಿದ್ದ ಶ್ರೀ ಬಿ. ವಿ. ವೈಕುಂಠರಾಜು ಅವರು. ನನ್ನ ಕವಿತೆಯನ್ನು ನನ್ನ ನಿಜವಾದ ಹೆಸರಿಂದಲೇ ಪ್ರಕಟಿಸಿದರು. ಅಂದಿನಿಂದ ಇಂದಿನವರೆಗೂ ನನ್ನ ಸ್ವಂತ ಹೆಸರಲ್ಲೇ ಬರೆಯುತ್ತಾ ಬಂದಿದ್ದೇನೆ.

ಒಂದೆರಡು ವಾರ ಪತ್ರಿಕೆಯ ಸಂಪಾದಕರು ಹೇಗೂ ನಿಮ್ಮ ಸ್ವಂತ ಹೆಸರಲ್ಲೇ ಕವಿತೆಗಳನ್ನು ಪ್ರಕಟಿಸುತ್ತಾ ಬಂದಿದ್ದೇವೆ. ಅದರ ಜೊತೆಗೆ ತಪ್ಪದೆ ವಾರ ವಾರವೂ ಒಂದಂಕಣ ಬರೆಯಿರಿ ಎಂದು ಒತ್ತಾಯಿಸಿದರು. ಹೀಗಾಗಿ "ವಿಚಾರ ವೀಚಿ" ಹಾಗೂ "ಸಿನಿಮಾ ಅಂಕಣ"ಗಳನ್ನು ಗುಪ್ತನಾಮದಿಂದ ತಪ್ಪದೆ "ಅಗಸ್ತ್ಯ" ಎಂಬ ಹೆಸರಿಂದಲೇ ಗದ್ಯ ಬರೆಯುತ್ತಾ ಬಂದಿದ್ದೇನೆ 'ಮಣ್ಣಿನ ಮಗ' ಎಂಬ ಅಂಕಿತದಲ್ಲಿ ಒಂದು ಸಾವಿರ ಚೌಪದಿ ಬರೆದಿದ್ದೇನೆ, ಕಾಲೇಜಿನ ವಾರ್ಷಿಕ ಸಂಚಿಕೆಗಳಲ್ಲಿ ಈ ಇಪ್ಪತ್ತಾರು ವರ್ಷದಿಂದ "ಹಿತ ಚಿಂತಕ" ಎಂದು ವಿದ್ಯಾರ್ಥಿಗಳಿಗೆ ನೀತಿ ಬೋಧೆ ಬರಹಗಳನ್ನು, ಕಿವಿಮಾತುಗಳು ಬರೆದವನು ನಾನೇ. ಇದೆಲ್ಲಾ ಅನಿವಾರ್ಯ; "ಅಗಸ್ತ್ಯ" ಎಂಬ ಹೆಸರಲ್ಲಿ "ಸದ್ಭಾವನಾ" ಗೀತೆಗಳನ್ನು ರಾಷ್ಟ್ರಾಭಿಮಾನದ ಗೀತೆಗಳನ್ನು ಬರೆದು ಕೊಟ್ಟಿರುವವನು ನಾನೇ... ಕೆಲವೊಮ್ಮೆ ಈ ಬಗೆ ಸಾಹಿತ್ಯ ಸ್ಪಂದನ ಅನಿವಾರ್ಯ.

BS Communication ಒಂದು ವರ್ಷ ಅಧ್ಯಯನ ಮಾಡಿದ್ದೇನೆ "ಜ್ಞಾನ ಭಾರತಿ ಸಮಾಚಾರ್" ಸಂಪಾದಕನಾಗಿಯೂ ಕೆಲಸಮಾಡಿದ್ದೇನೆ.

***ನಿಮ್ಮ ಮೆಚ್ಚಿನ ಕವಿಗಳು ಯಾರು? ಯಾರು? ಏಕೆ ಅವರನ್ನು ನೀವು ಮೆಚ್ಚಿಕೊಳ್ಳುತ್ತೀರಿ?***

ನನ್ನ ಮೆಚ್ಚಿನ ಬರಹಗಾರರು ಅನೇಕರಿದ್ದಾರೆ? ಅವರನ್ನು ನಾನು ಹೆಸರಿಸುತ್ತಾ ಹೋದರೆ ದೊಡ್ಡ ಪಟ್ಟಿಯೂ ಆಗಬಹುದು. ನಾನು ಪಿಯೂಸಿ ಓದುವಾಗಿನಿಂದಲೂ ಕುವೆಂಪು, ಬೇಂದ್ರೆ, ರಾಜರತ್ನಂ, ಕೆ.ಎಸ್.ನ., ಡಾ. ರಂ. ಶ್ರೀ, ಮುಗುಳಿ, ಪ್ರೊ|| ಜಿ. ಎಸ್. ಶಿವರುದ್ರಪ್ಪ, ಕೆ. ಎಸ್. ನಿಸಾರ್ ಅಹಮದ್, ಪಿ. ಲಂಕೇಶ್, ಹೆಚ್. ಜಿ. ಸಣ್ಣಗುಡ್ಡಯ್ಯ, ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ -

ಅವರುಗಳನ್ನು ಬಹಳವಾಗಿ ಮೆಚ್ಚಿಕೊಳ್ಳುತ್ತೇನೆ. ಕಾರಣ ಸ್ಪಷ್ಟ. ಈ ಒಬ್ಬರೊಬ್ಬರು ಒಂದೊಂದು ರೀತಿಯಿಂದ ಎಳೆಯರ ಮೇಲೆ ಪ್ರಭಾವ ಬೀರುವಂಥವರು.

ಕುವೆಂಪು ಅವರ ನಿಸರ್ಗರಾಧನೆ, ಬೇಂದ್ರೆ ಅವರ ಜಾನಪದೀಯ ಶೈಲಿ ರಾಜರತ್ನಂ ಅವರ ಗ್ರಾಮ್ಯ ಪದಗಳ ಬಳಕೆ, ಕೆಎಸ್‌ನ ಅವರ ಪ್ರೀತಿಯ ಅನನ್ಯ ಭಾವನೆಗಳು ಜಿ.ಎಸ್.ಎಸ್. ಅವರ ಸಮನ್ವಯ ಗುಣ ಪ್ರೊ॥ ಮುಗುಳಿ ಅವರ ವಿಮರ್ಶಾಧಾಟಿ - ಹೀಗೆ ನಾನು ಎಲ್ಲರಿಂದಲೂ ರೂಪಿತನಾದವನು.

ಪ್ರೊ. ಜಿ.ಎಸ್. ಅವರ ನಿರ್ಭಯತೆ; ವೈಚಾರಿಕ ದೃಷ್ಟಿಕೋನ, ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ ಅವರ ಮಾತಿನ ಮೋಡಿ, ಲಂಕೇಶ್ ಅವರ ಮೊನಚು ಗದ್ಯ ಡಾ ಯು.ಆರ್. ಅನಂತ ಮೂರ್ತಿ ಅವರ ಸ್ವೋಪಜ್ಞ ವಿಚಾರಧಾರೆ - ಹೀಗೆ ಎಲ್ಲವೂ ನನ್ನ ಮನಸ್ಸಿನ ಮೇಲೆ ಪರಿಣಾಮ ಬೀರಿವೆ, ಡಾ. ಶಿವರಾಮಕಾರಂತರ ಬರವಣಿಗೆ ನನಗೆ ಇಷ್ಟ. ಪ್ರೋ ಗೋಪಾಲಕೃಷ್ಣ ಅಡಿಗರ ಕವಿತೆಗಳನ್ನು ಮನಸಾರೆ ಮೆಚ್ಚಿಕೊಂಡವ ನಾನು. ವರ್ಡ್ಸ್‌ವರ್ತ್ ಬರ್ನ್ಸ್ ಎಲಿಯಟ್‌ನ್ನು ಸಾಕಷ್ಟು ಓದಿಕೊಂಡು ಪ್ರಭಾವಿತನಾಗಿದ್ದೇನೆ, ಧೋರಣೆಗಳ ದೃಷ್ಟಿಯಿಂದ ಜೆನ್‌ಪಾಲ್. ಸಾರ್ತ್ರೆ ನನ್ನ ಹೃದಯಮಂಡಲ ಹೊಕ್ಕಿದ್ದಾನೆ ಗಾಂಧೀಜಿ, ಟಾಲ್ ಸ್ಟಾಯಿ, ರವೀಂದ್ರ ಅವರುಗಳನ್ನು ಮತ್ತೆ ಮತ್ತೆ ಓದುತ್ತಿದ್ದೇನೆ. ಏಕೆಂದರೆ ಅವರು ನನ್ನ ಮೆಚ್ಚಿನವರು. ಡಿವಿಜಿ, ದಿನಕರ ದೇಸಾಯಿ ನನ್ನ ಚೌಪದಿಗಳಿಗೆ ಕಾರಣ ಕರ್ತರು.

***ನಿಮ್ಮ ಬರಹಕ್ಕೆ ಸ್ಫೂರ್ತಿ ಯಾವುದು? ಏಕೆ?***

ಮೊದಲಿಗೆ ಪ್ರಕೃತಿ; ಅನಂತರ ಪ್ರೀತಿ

ಋತುಮಾನಗಳ ಬದಲಾವಣೆಗೆ ನಿಸರ್ಗದ ಸಹಜ ರೀತಿಗಳಿಗೆ ಸ್ಪಂದಿಸದವರು ಯಾರು? ನಾಮ ಹಾಗೇನೆ. ಪ್ರೀತಿ ಜೀವನಕ್ಕೆ ಅತ್ಯಗತ್ಯ. ಅದಿಲ್ಲವೆಂದರೆ ಬದುಕೇ ಇಲ್ಲ.

ಸಮಾಜದಲ್ಲಿನ ಅನ್ಯಾಯ, ಅಕ್ರಮ, ಅನೀತಿ, ಅಧರ್ಮ, ಅಸತ್ಯ ಇವುಗಳನ್ನು ಕಂಡಾಗ ತಪ್ತನಾಗಿ ಬರೆದಿದ್ದೇನೆ. ವರ್ಗಬೇಧ, ವರ್ಣಬೇಧ ನನಗೆ ಇಷ್ಟವಾಗಲಿಲ್ಲ ಮಾನವೀಯತೆ ಮುಖ್ಯ. ಸ್ನೇಹ ಮುಖ್ಯ, ಸುಂದರ ಬದುಕು ರೂಪಿಸಿಕೊಳ್ಳುವುದು ಮುಖ್ಯ, ಜೀವನದಲ್ಲಿ ನೆಮ್ಮದಿ ಕಂಡುಂಡು ಸದ್ದು ಗದ್ದಲವಿಲ್ಲದೆ ಸಾರ್ಥಕ ಕಾರ್ಯ ಮಾಡಿ "ಎಲೆ ಮರೆ ಹೂ" ವಂತೆ ಇರುವುದು ನನಗೆ ಅತ್ಯಂತ ಪ್ರಿಯವಾದುದು. ಆಡಂಬರಕ್ಕೆ ನಾನು ಹೊರತು. ಭಾಜಾಭಜಂತ್ರಿ ನನಗಿಷ್ಟವಿಲ್ಲ. ಶ್ರದ್ಧೆ ಪ್ರಾಮಾಣಿಕತೆ ಬದುಕಿಗೆ ಅಗತ್ಯ.

***ನಿಮ್ಮ ಬರಹದ ಯಶಸ್ಸಿನ ಗುಟ್ಟೇನು?***

ಭಾವನೆಗಳ ಅಪ್ಪಟ ಅಭಿವ್ಯಕ್ತಿ; ಹೇಗೆ ಹೇಗೆ ಅನ್ನಿಸುತ್ತದೋ ಹಾಗೆ ಹಾಗೆ ನೇರವಾಗಿ ಸರಳವಾಗಿ ಪ್ರಾಮಾಣಿಕವಾಗಿ ಬರೆಯುವುದು.

ಭಾವುಕತೆ ಬರಹದ ಜೀವ ಜೀವಾಳ; ಹಾಗೆಂದು ವೈಚಾರಿಕತೆಯನ್ನು ಕಳೆದುಕೊಳ್ಳುವ ಅಗತ್ಯವಿಲ್ಲ; ಸ್ವೋಪಜ್ಞತೆ ಬಹಳ ಮುಖ್ಯ.

ಅವರು ಹಾಗೆ ಹೇಳುತ್ತಾರೆ, ಇವರು ಹೀಗೆ ಹೇಳುತ್ತಾರೆ ಎಂದು ಸಾವಿರ ಉಕ್ತಿ ಉಲ್ಲೇಖಿಸುವುದರ ಬದಲು ನನಗೆ ಒಂದು ವಿಷಯದ ಬಗ್ಗೆ ಏನೇನು ಅನ್ನಿಸುತ್ತದೆ ಅದನ್ನೆಲ್ಲಾ ವ್ಯವಸ್ಥಿತವಾಗಿ ಮುಚ್ಚುಮರೆ ಇಲ್ಲದೆ ಹೇಳುವುದು ಮುಖ್ಯ. ಆತ್ಮ ವಿಮರ್ಶೆ ಅತ್ಯಗತ್ಯ.

ಲೋಕವನ್ನು ಸೂಕ್ಷ್ಮಾತೀಸೂಕ್ಷ್ಮವಾಗಿ ಅವಲೋಕಿಸಬೇಕು; ವ್ಯಕ್ತಿಗಳನ್ನು ಅವರ ಮನಸ್ಸುಗಳನ್ನು ಅರಿಯಬೇಕು ಪ್ರಸ್ತುತ ವಿಷಯಗಳಿಗೆ ನಿರಂತರವಾಗಿ ಸ್ಪಂದಿಸಬೇಕು. ಬರೆಯುವಾಗ ಸನ್ನಿವೇಶದ ಪುನರ್ ಸೃಷ್ಟಿ ಬಗ್ಗೆ ಪಾತ್ರಗಳ ಪರಕಾಯ ಪ್ರವೇಶದ ಬಗ್ಗೆ ಲೇಖಕನಿಗೆ ಚೆನ್ನಾಗಿ ಗೊತ್ತಿರಬೇಕು.

ಯಾವ ಲೇಖಕನಿಗೆ ಪರಂಪರೆಯ ಅರಿವಿರುತ್ತದೆ, ತಾನು ಬೆಳೆದ ಸಂಸ್ಕೃತಿಯ ಅರಿವಿರುತ್ತದೆ - ಅಂಥವನಿಗೆ ತನ್ನ ನಾಡಿನ ನುಡಿಯ ಹಿನ್ನೋಟ ಇರುತ್ತದೆ. ವರ್ತಮಾನದ ಅರಿವೂ ಇದ್ದು ಎಂಥ ಬದುಕು ನಡೆಸುವತ್ತ ನಾನು ಸಾಗಬೇಕು, ನಮ್ಮ ಸಮಾಜ ಹೇಗಿರಬೇಕು ಎಂಬ ಮುನ್ನೋಟವೂ ಇದ್ದರೆ ಬರಹಗಾರನ ಬರಹಕ್ಕೆ ಸಮಗ್ರತೆಯೂ ಪ್ರಾಪ್ತವಾಗುತ್ತದೆ.

ಸದಾ ಅದ್ಯಯನ ನಿರತನಾಗಿರುವುದು, ಸ್ವಂತ ಅಭಿವ್ಯಕ್ತಿಗೆ ನಿರಂತರ ದುಡಿಯುವುದು, ಬದುಕಿನ ಬಗ್ಗೆ ಗೌರವ ಇರಿಸಿಕೊಂಡಿರುವುದು, ಮನುಕುಲದ ಬಗ್ಗೆ ಪ್ರೀತಿ ವಿಶ್ವಾಸ ಸ್ನೇಹಭಾವ ಹೊಂದಿರುವುದು, ವೈಶಾಲ್ಯವಾಗಿ ಯೋಚಿಸುವುದು ಬಹಳ ಮುಖ್ಯ.

ಅನ್ಯ ಸಾಹಿತ್ಯಸಂಪರ್ಕ, ಬಿಡುವು ಸಿಕ್ಕಾಗೆಲ್ಲ ಮಾಡುವ ಪ್ರವಾಸ, ಸಾಮಾಜಿಕ ಸಮಸ್ಯೆಗಳ ಬಗ್ಗೆ ತಿಳುವಳಿಕೆ, ಮಹತ್ವಾಕಾಂಕ್ಷೆ, ಆದರ್ಶಗಳ, ಮೌಲ್ಯಗಳು ಇವೆಲ್ಲವೂ ಒಬ್ಬ ಲೇಖಕನನ್ನು ರೂಪಿಸುತ್ತವೆ. ನಾನು ಕೂಡ ಹಾಗೆ ರೂಪುಗೊಂಡವನು. ಮಾನವೀಯತೆ ನನ್ನ ಕಾಳಜಿ. ಧೀನ ದರಿದ್ರರ ಬಗೆಗೆ ಅನುಕಂಪ ಇರದವನು, ಅನ್ಯಾಯಗಳ ಬಗ್ಗೆ ಅಕ್ರಮಗಳ ಬಗ್ಗೆ ಅಸತ್ಯಗಳ ಬಗ್ಗೆ ಸಿಡಿದು ನಿಲ್ಲದವನು ಆರೋಗ್ಯವಂತ ಬರಹಗಾರ ಹೇಗಾದಾನು?

ಇತ್ಯಾತ್ಮಕ ಚಿಂತನೆ ಅವಶ್ಯ; ರಾಷ್ಟ್ರಾಭಿಮಾನ ಬಹಳ ಮುಖ್ಯ, ತಾಯ್ನಾಡು ತಾಯ್ನುಡಿ ಬಗ್ಗೆ ಅತ್ಯಂತ ಅಭಿಮಾನ ಸರಿಯಾದ ನಿಲುವು, ಮಾನ್ಯತೆಗಾಗಿ ಕ್ರಿಯಾತ್ಮಕ ಒಲವು - ಇವೆಲ್ಲವೂ ಯಶಸ್ಸಿನ ಏಳಿಗಳು

ಒಳ್ಳೆಯ ಬದುಕು ಒಳ್ಳೆಯ ಬರಹಕ್ಕೆ ನಾಂದಿ, ಒಳ್ಳೆಯ ಭಾವನೆಗಳು ಒಳ್ಳೆಯ ಬಹರದ ಯಶಸ್ಸಿನ ಮೂಲ ಮಿಡಿತ; ಒಳ್ಳೆಯ ವ್ಯಕ್ತಿತ್ವ ರೂಪಣದಲ್ಲೇ ಒಳ್ಳೆಯ ಬರಹದ ದಾಖಲೆಯೂ ಇದೆ. ಜೀವನದರ್ಥದ ಶೋಧನೆ ನಡೆಸಿದ್ದಷ್ಟೂ ಬರಹ ಗಂಭೀರವಾಗುತ್ತದೆ. ಬರಹಕ್ಕೆ ಬಹುಮುಖತೆ ಪ್ರಾಪ್ತವಾಗುತ್ತದೆ.

ನೈಜ ಅಭಿವ್ಯಕ್ತಿಗಾಗಿ ಚಡಪಡಿಸುವುದರಲ್ಲಿ ಅದನ್ನು ಸೃಜನಶೀಲವಾಗಿ ರೂಪಿಸುವಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸುವುದರಲ್ಲಿ ಜೀವನದ ಸರಿಯಾದ ಗ್ರಹಿಕೆಯಲ್ಲಿ ಬರಹಗಾರನ ಗೆಲುವಿದೆ, ಎಲ್ಲಿ ಮನುಕುಲದ ಬಗೆಗೆ ಹತ್ಪೂರ್ವಕ ಅಕ್ಕರೆ ಒಲವು ಅಲ್ಲಿ ಗೆಲವು ಸಿಕ್ಕೇಸಿಗುತ್ತದೆ. ಜನ ಖಂಡಿತಾ ಅಂಥದನ್ನು ಗುರುತಿಸುತ್ತಾರೆ ಗೌರವಿಸುತ್ತಾರೆ, ಅಭಿಮಾನ ಪಡುತ್ತಾರೆ. ನಮ್ಮ ಮೂಕ ಭಾವನೆಗಳಿಗೆ ಈ ಲೇಖಕ ನಾಲಿಗೆಯಾಗಿದ್ದಾನೆ ಅನ್ನಿಸಿದಾಗ ಅಭಿಮಾನಿಗಳಾಗುತ್ತಾರೆ. ಪತ್ರ ಬರೆಯುತ್ತಾರೆ ಅಭಿನಂದಿಸುತ್ತಾರೆ. ಪತ್ರ ಮಿತ್ರರಾಗುತ್ತಾರೆ. ಸಾಹಿತಿಯ ಹಿತೈಷಿಗಳಾಗಿ ಸಲಹೆ ಸೂಚನೆಗಳನ್ನು ಕೊಡುತ್ತಾ ಲೇಖಕ ಸಾಯುವವರೆಗೂ ಜೀವಂತವಾಗಿರಲು ಪರೋಕ್ಷವಾಗಿ ಸಮಾಜವು ಇಂಬಾಗಿ ನಿಲ್ಲುತ್ತದೆ. ಅದೇ ಪ್ರೇರಕಶಕ್ತಿ. ಸಮುದಾಯದ ಏಳು ಬೀಳುಗಳೇ ಸ್ಫೂರ್ತಿ.

***ನಿಮಗೆ ಇಷ್ಟವಾದ ಬರವಣಿಗೆ ಎಂಥದ್ದು? ವಿವರಿಸುತ್ತೀರಾ ಸಾರ್?***

ಓದುಗನ ಮನಸ್ಸನ್ನು ಸೆರೆ ಹಿಡಿಯ ಬೇಕು. ಎಲ್ಲಕ್ಕೂ ಮೊದಲು ಬರಹಕ್ಕೆ ಓದಿಸಿಕೊಂಡು ಹೋಗುವ ಶಕ್ತಿ ಇರಬೇಕು. ಸುಲಲಿತವಾಗಿರಬೇಕು. ಸಮಸ್ಯೆ ಸನ್ನಿವೇಶ ಸಕಾರಣವಾಗಿರಬೇಕು. ಸಂಭಾವ್ಯ ಎನ್ನಿಸಬೇಕು ಸಹೃದಯನಿಗೆ.

ಸಹೃದಯ ಅಭಿರುಚಿಯನ್ನು ಬೆಳೆಸುವಂಥ ಮೇಲೆತ್ತುವಂಥ ಅವನ ಅರಿವಿನ ಪರಿಧಿಯನ್ನು ವಿಸ್ತರಿಸುವಂಥ ಬರಹವೇ ಯಾವತ್ತೂ ಶ್ರೇಷ್ಠ; ಮನೋರಂಜನೆ ಹೆಸರಲ್ಲಿ ಕೀಳಾಗಿ ಬರೆಯುವುದು, ನಮ್ಮ ಸಂಸ್ಕೃತಿಯನ್ನು ವಿಕೃತವಾಗಿ ಚಿತ್ರಿಸುವುದು, ಹೆಣ್ಣನ್ನು ಕನಿಷ್ಠವಾಗಿ ಕಾಣುವುದು, ಅಶ್ಲೀಲ ಬಳಸುವುದು-ನನಗೆ ಯಾವತ್ತೂ ಇಷ್ಟವಾಗಿಲ್ಲ. ಅಂಥ ಕೆಳದರ್ಜೆ ಬರಹವನ್ನು ನಾನು ಎಂದೂ ಮೆಚ್ಚಿಕೊಂಡಿಲ್ಲ, ಅಂಥದ್ದನ್ನು ನಾನು ಯಾವತ್ತೂ ಬರೆಯಲು ಇಷ್ಟಪಡುವುದಿಲ್ಲ.

ಬದುಕಿನಲ್ಲಿ ಪ್ರಕೃತಿಯಲ್ಲಿ ಸೌಂದರ್ಯ ಇದೆ, ಶೃಂಗಾರ ಇದೆ, ಹಾಗೆಂದು ಅದನ್ನು ರಸವತ್ತಾಗಿ ಚಿತ್ರಿಸುವ ಭರದಲ್ಲಿ ಶೀಲದ ಗಡಿದಾಟಿ ಹೊಗಿ ಅಶ್ಲೀಲವಾಗುವುದನ್ನು ನಾನು ಒಪ್ಪುವುದಿಲ್ಲ. ಕಾಮದಂಥ ವಿಚಾರವನ್ನು ಎಷ್ಟು ಹೇಳಬೇಕು ಯಾವ ಪ್ರಮಾಣ ಅನುಸರಿಸಬೇಕು ಪರೋಕ್ಷವಾಗಿ ಬರೆಯಲೇ ಬೇಕಾದ ಸಂದರ್ಭ ಒದಗಿಬಂದಾಗ ಅದನ್ನು ಹೇಗೆ ಜಾಣತನದಿಂದ ನಿಭಾಯಿಸಬೇಕು ಎಂಬೆಲ್ಲ ಎಚ್ಚರ ಲೇಖಕನಿಗಿರಬೇಕು ಅದೇ ನನ್ನ ನಿಲುವು. ಅಂಥಾ ಮೌಲಿಕವಾದ ಮಾನವೀಯವಾದ ಸುಸಂಸ್ಕೃತ ಕಾಳಜಿಯೇ ನನ್ನ ಹೃದಯದ ಒಲವು. ನಾನು ಎಂದೂ ನನ್ನ ಲೇಖನಿಯನ್ನು ಅಪವಿತ್ರಗೊಳಿಸಿಲ್ಲ.

***ಸಾರ್, ಚಿತ್ರರಂಗ ನಿಮ್ಮನ್ನು ಗುರುತಿಸಿದ್ದು ಹೇಗೆ?***

ನಾನು ೧೯೬೦ರಿಂದಲೂ ಕವಿತೆಗಳನ್ನು ಬರೆಯುತ್ತಾ ಬಂದವನು. ೧೯೬೪-೬೫ರ ಹೊತ್ತಿಗೆ ನಾಡಿನ ಎಲ್ಲ ಪ್ರಮುಖ ಪತ್ರಿಕೆಗಳಲ್ಲೂ ನನ್ನ ಕವಿತೆಗಳು ಬೆಳಕು ಕಂಡಿದ್ದವು. ೧೯೬೯ರಲ್ಲಿ ನನ್ನ ಮೊದಲ ಕವನ ಸಂಕಲನ "ಜಗಲಿ ಹತ್ತಿ ಇಳಿದು" ಹೊರ ಬಂತು. ೧೯೭೨ ರಲ್ಲಿ "ಕಣ್ಣು ನಾಲಿಗೆ ಕಡಲು" - ನನ್ನ ಎರಡನೇ ಸಂಕಲನ ಪ್ರಕಟವಾಯ್ತು. ಅದಕ್ಕೆ "ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ" ಬಹುಮಾನ ಸಿಕ್ಕಿತು. ಹೀಗಾಗಿ ನಾನು ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧಿಗೆ ಬಂದೆ. ೧೯೭೩ರಲ್ಲಿ ಸಾಮಾಜಿಕ ಪ್ರಜ್ಞೆಯ ಕವಿತೆಗಳನ್ನಷ್ಟೇ ಆಯ್ಕೆ ಮಾಡಿ "ನಾಡಾಡಿ" ಎಂಬ ಚಿಂತನ ಶೀಲ ಕವಿತೆಗಳ ಸಂಕಲನವನ್ನು ಹೊರತಂದೆ. ಸಾಹಿತ್ಯ ಪತ್ರಿಕೆಗಳು ನನ್ನ ಕಾವ್ಯ ಕೃಷಿಯನ್ನು ಸರಿಯಾಗಿ ಗುರುತಿಸಿದ್ದು-ನನ್ನ ಲೇಖನಗಳನ್ನು ಪ್ರಕಟಿಸಿದ್ದು ಆಗಲೇ. ಹೀಗಾಗಿ ಸಾಕಷ್ಟು ಪ್ರಸಿದ್ಧಿಗೆ ಬಂದ ಮೇಲೆ ಚಿತ್ರರಂಗದ ಕಣ್ಣಿಗೆ ಬಿದ್ದೆ.

ಪ್ರಖ್ಯಾತ ಚಲನ ಚಿತ್ರ ನಿರ್ದೇಶಕರಾದ ಶ್ರೀ ರವೀ ಅವರು ಮೊದಲಿಗೆ ನನ್ನ ಗುರುತಿಸಿದವರು, ಅವರ ನಿಜವಾದ ಹೆಸರು ಶ್ರೀ.ಕೆ.ಎಸ್.ಎಲ್. ಸ್ವಾಮಿ ಅವರು ಕವಿಯೂ ಹೌದು; ಗಾಯಕರೂ ಹೌದು; ಹೊಸ ಪ್ರತಿಭೆಗಳನ್ನು ಪ್ರೋತ್ಸಾಹಿಸಿ ಬೆಂಬಲಿಸುವ ಉದಾರ ಮನಸ್ಸು ಅವರದು. ಅವರು ನಿರ್ದೇಶಿಸಲಿದ್ದ ಹೊಸ ಚಿತ್ರ "ಮಾಗಿಯ ಕನಸು" ಕಾದಂಬರಿ ಆಧರಿಸಿದ ಚಿತ್ರಕ್ಕೆ ಚಲನಚಿತ್ರ ಗೀತೆ ರಚನೆಕಾರರ ಹತ್ತಿರ ಹಾಡು ಬರೆಸುವುದರ ಬದಲು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಆಗ ಪ್ರಸಿದ್ಧರಾಗಿದ್ದ ಕವಿಗಳಿಂದ ಕವಿತೆಗಳನ್ನು ಬರೆಸುವ ಪ್ರಯತ್ನ ಮಾಡಿದರು ಹೀಗಾಗಿ ನಾನು, ನನ್ನ ಗೆಳೆಯ ಶ್ರೀ ಎಂ. ಎನ್. ವ್ಯಾಸರಾವ್, ನನ್ನ ನೆಚ್ಚಿನ ಜಾನಪದ

ಗುರುಗಳಾದ ಡಾ|| ಚಂದ್ರಶೇಖರ ಕಂಬಾರ ಅವರಿಂದ ಅವರ ಹೊಸ ಚಿತ್ರಕ್ಕೆ ಕವಿತೆಗಳನ್ನು ಬರೆಸಿಕೊಂಡರು.

***ಇದುವರೆಗೆ ನೀವು ಎಷ್ಟು ಚಿತ್ರಗಳಿಗೆ ಹಾಡು ಬರೆದಿದ್ದೀರಿ? ಒಟ್ಟು ಎಷ್ಟು ಹಾಡುಗಳು ನಿಮ್ಮಿಂದ ರಚನೆಯಾಗಿದೆ?***

ಇದುವರೆಗೆ ನಾನು ೨೦೦ ಚಿತ್ರಗಳಿಗೆ ಹಾಡುಗಳನ್ನು ಬರೆದಿದ್ದೇನೆ. ಒಟ್ಟು ೪೦೦ಕ್ಕೂ ಹೆಚ್ಚು ಹಾಡುಗಳು ಈ ತನಕ ನನ್ನಿಂದ ರಚನೆಯಾಗಿವೆ.

***ಇಲ್ಲಿಯವರೆಗೂ ಬಂದಿರುವ ಪ್ರಶಸ್ತಿಗಳಾವುವು? ಯಾವ ಹಾಡಿಗೆ ಮತ್ತು ಆ ಹಾಡಿನ ಗುಣ ವಿಶೇಷವೇನು?***

ಇದುವರೆಗೆ ನನಗೆ ಎರಡು ಬಾರಿ "ಕರ್ನಾಟಕ ರಾಜ್ಯ ಸರ್ಕಾರ"ದಿಂದ

"ಅತ್ಯುತ್ತಮ ಗೀತ ರಚನೆಕಾರ" ಪ್ರಶಸ್ತಿ ಬಂದಿದೆ

೧೯೮೧ - ೮೨ ರಲ್ಲಿ "ಆಲೆಮನೆ" ಚಿತ್ರಕ್ಕಾಗಿ ನಾನು ಬರೆದ ಗೀತೆ "ಎಲ್ಲ ಮೇಲು ಕೀಳು ಸುಳ್ಳು ಭೇದ ಭಾವ ಬಗೆದಾ ಮನುಜ ಕಾಣೋ" ಎಂಬದನ್ನು ಗುರುತಿಸಿ ಅದರಲ್ಲಿನ ಭಾವೈಕ್ಯ ಬೋಧನಾಂಶಗಳಿಗಾಗಿ ಉತ್ತಮ ಸಾಹಿತ್ಯಕ ಶೈಲಿಗಾಗಿ ಇತ್ಯಾತ್ಮಕ ಧೋರಣೆಗಾಗಿ ಮನುಕುಲವನ್ನು ಒಳಿತಿನತ್ತ ನಡೆಸುವ ಸಂದೇಶಕ್ಕಾಗಿ "ವಿಶೇಷ ಗೀತ ರಚನಾ ಪ್ರಶಸ್ತಿ" ಎಂದು ಕರೆದು ಬಹುಮಾನ ನೀಡಿದ್ದಾರೆ; ಬೆಳ್ಳಿ ಪದಕ ಕೊಟ್ಟಿದ್ದಾರೆ. ಆ ಹಾಡು ಕೂಡ ಅತ್ಯಂತ ಜನಪ್ರಿಯವಾದದ್ದು. ಚಿತ್ರವೂ ಯಶಸ್ವಿಯಾಯ್ತು. ನಾನು ಬರೆದ ಆ ಗೀತೆಗೆ ಹೇಳಿ ಮಾಡಿಸಿದ ಹಾಗೆ - ಸಂಗೀತ ನಿರ್ದೇಶಕರಾದ ಶ್ರೀ ಸಿ. ಅಶ್ವತ್ಥ್ ರಾಗ ಸಂಯೋಜನೆ ಮಾಡಿದ್ದಾರೆ. ಅದರ ಮತ್ತೊಂದು ವಿಶೇಷ ಜಾನಪದೀಯ ಧಾಟಿಯಲ್ಲಿ ಸ್ವರ ಸಂಯೋಜಿಸಿದ ಆ ಹಾಡನ್ನು ಅವರೇ ಹಾಡಿರುವುದು ಒಂದು ಮಹತ್ವದ ವಿಷಯ. ಏಕೆಂದರೆ ನಮ್ಮಲ್ಲಿ ತುಂಬಾ ಅಪರೂಪದ ಗಾಯಕರೆಂದು ಶ್ರೀ ಸಿ. ಅಶ್ವತ್ಥ್ ಅವರು. ಅವರದೇ ಆದ ತಾರಕ ದನಿಯ ವಿಶಿಷ್ಟ ಶೈಲಿಯ ಛಾಪು ಆ ಗೀತೆ ಯಶಸ್ವಿಯಾಗಲು ಕಾರಣವಾಯ್ತು ಎಂದು ನನ್ನ ಅಭಿಪ್ರಾಯ.

ಮತ್ತೆ ಎರಡನೆ ಬಾರಿ ನನಗೆ ೧೯೯೦-೯೧ರಲ್ಲಿ "ಗಣೇಶನ ಮದುವೆ" ಚಿತ್ರಕ್ಕೆ ಬರೆದ "ಅನುರಾಗ ತೋಟದಲ್ಲಿ" ಎಂಬ ಕವಿತೆಗಾಗಿ "ಅತ್ಯುತ್ತಮ ಗೀತೆ ರಚನೆಯ ವಿಶೇಷ ಪ್ರಶಸ್ತಿ" ಬಂತು. ಅದನ್ನು ನಾನು ನಿರ್ದೇಶಕ ಶ್ರೀ ಫಣಿರಾಮಚಂದ್ರ ಅವರು ಹೇಳಿದ ಸನ್ನಿವೇಶಕ್ಕೆ ಅನುಗುಣವಾಗಿ ಬರೆದೆ, ನಾನು ಆ ಹಾಡು ಬರೆಯುವ ಸಂದರ್ಭದಲ್ಲಿ ಉಪಸ್ಥಿತರಿದ್ದ ಕನ್ನಡ ನಾಡಿನ ಅತ್ಯಂತ ಜನಪ್ರಿಯ ಸಂಗೀತ ನಿರ್ದೇಶಕರುಗಳಾದ ಶ್ರೀ ರಾಜನ್ ನಾಗೇಂದ್ರ ಅವರುಗಳು ಕೂಡ ಕವಿತೆ ಮೂಡಿದ ಪರಿಯನ್ನು ಗಮನಿಸಿ ಚೆನ್ನಾಗಿಮೂಡಿಬಂದಿದೆ; ಚಿತ್ರದಲ್ಲಿ ಇದನ್ನು ಮತ್ತೆ ಮತ್ತೆ ಬಳಸಿದರೆ ಇನ್ನು ಚೆನ್ನಾಗಿರುತ್ತೆ ಎಂದರು; ನಿರ್ದೇಶಕರಾದ ಶ್ರೀ ಫಣಿ ಅವರು ಕೂಡ ಇದು ಒಬ್ಬ ಹೊಸ ಗಾಯಕಿ ಆಕಾಶವಾಣಿಯ "ಸುಗಮ ಸಂಗೀತದ"ದ ಕಾರ್ಯಕ್ರಮದಲ್ಲಿ ಹಾಡುವುದರಿಂದ ಸೂಕ್ತವಾಗಿದೆ; ಚಿತ್ರದ ನಾಯಕ ಈ ಹಾಡನ್ನು ಕೇಳಿಸಿಕೊಡವನು ಆಕರ್ಷಿತನಾಗಿ ಅದನ್ನು ಮತ್ತೆ ಮತ್ತೆ ಕೇಳಲು ಹಂಬಲಿಸಿ ಅನಂತರ ಆ ಗಾಯಕಿಯಲ್ಲೇ ಅನುರಕ್ತವಾಗುವ ಸನ್ನಿವೇಶಕ್ಕೆ ಇದು ನಿಜಕ್ಕೂ ಭಾವ ಪೂರಕವಾಗಿದೆ ಎಂದು ನನ್ನ ಬೆನ್ನು ತಟ್ಟಿದರು, ಜೊತೆಯಲ್ಲಿದ್ದ ವಾದ್ಯಗಾರರು, ಸಹ ನಿರ್ದೇಶಕರುಗಳು, ಆ ಚಿತ್ರಕ್ಕೆ ಬೇರೆ ಬೇರೆ ಹಾಡು ಬರೆಯಲು ಬಂದ ನನ್ನ ಗೆಳೆಯರುಗಳಾದ ವ್ಯಾಸ, ಕುಲಕರ್ಣಿ, ಶಾಸ್ತ್ರಿ

ಅವರುಗಳೂ ಅಂದೇ ಅದನ್ನು ಮೆಚ್ಚಿಕೊಂಡಿದ್ದರು. ಚಿತ್ರ ಗೀತೆ ಅನ್ನುವ ಬದಲು ಅದು ಒಂದು "ಸುಂದರವಾದ ಕವಿತೆ" ಎಂಬ ಅಭಿಪ್ರಾಯವೇ ಆ ಹೊತ್ತು "ಕಂಪೋಸಿಂಗ್ .ರೂಂ" ನಲ್ಲಿ ಮಾರ್ಧನಿಸಿತ್ತು. ಆ ಹಾಡಿನ ಬಗ್ಗೆ ನಮಗೆ ಬಹಳ ಭರವಸೆ ಇತ್ತು. ಅದು "ಅತ್ಯುತ್ತಮ ಗೀತೆ" ಎಂಬ ಆಯ್ಕೆ ಆದದ್ದು ಅನಿರೀಕ್ಷಿತವೇನಾಗಿಲ್ಲ. ಅದುಕೂಡ ನನಗೊಂದು ಪದಕ ತಂದು ಕೊಟ್ಟಿತು.

ಅಖಿಲ ಕರ್ನಾಟಕ ಚಲನ ಚಿತ್ರ ರಸಿಕರ ಸಂಘ ೧೯೮೬ರಲ್ಲಿ ನನ್ನ "ಅರುಣರಾಗ" ಚಿತ್ರದ ಹಾಡಿಗೆ "ವರ್ಷದ ಶ್ರೇಷ್ಠ ಗೀತೆ" ಪ್ರಶಸ್ತಿ ನೀಡಿದರು. ಅದೊಂದು ದುಃಖ ಗೀತ; ಚಿತ್ರದಲ್ಲಿ ವಿನೂತನವಾಗಿ ಚಿತ್ರಿತವಾಗಿದೆ, ಕಲಾತ್ಮಕವಾಗಿ ಚಿತ್ರೀಕರಣ ನಡೆಸಿ ಅದಕ್ಕೊಂದು ಭಾವೋತ್ಕರ್ಷ ತಂದುಕೊಡಲಾಗಿದೆ; ನಾನು ಬರೆದ "ನಾನೊಂದು ತೀರ; ನೀನೊಂದು ತೀರ; ಮನಸು ಮನಸು ದೂರ; ಪ್ರೀತಿ ಹೃದಯ ಭಾರ" ಎಂಬ ಹಾಡು ಬರೆದ ದಿನದಿಂದ ನಮ್ಮ ಜನಪ್ರಿಯ ಚಲನಚಿತ್ರ ನಿರ್ದೇಶಕರೂ, ನನ್ನ ಆತ್ಮೀಯ ಗೆಳೆಯರೂ ಆದ ಶ್ರೀ ಕೆ. ವಿ. ಜಯರಾಂ ಹಾಗೂ ಪ್ರಖ್ಯಾತ ಛಾಯಾಗ್ರಾಹಕ ಶ್ರೀಮಾಪಾಕ್ಷಿ ಅವರೂ ತುಂಬಾ ವಿಭಿನ್ನವಾಗಿರಬೇಕೆಂದು ನಿರಂತರ ಶ್ರಮಿಸಿದ್ದರ ಫಲ ಆ ಹಾಡು "ಕ್ಲಿಕ್" ಆಯ್ತು. ಕವಿ ಕೇವಲ ಭವ್ಯಕಾವ್ಯ ಬರೆದರೆ ಸಾಲದು; ತಂತ್ರಜ್ಞರು ತಮ್ಮ ಪ್ರತಿಭೆ, ಕಲ್ಪನೆಗಳಿಂದ ಅನನ್ಯವಾಗಿಸಿದ್ದಾರೆ. ಕಲಾವಿದರಾದ ಶ್ರೀ ಅನಂತನಾಗ್ ಹಾಗೂ ಶ್ರೀಮತಿ ಗೀತಾ ಅವರುಗಳು ಕಲಾತ್ಮಕವಾಗಿ ಅಭಿನಯಿಸಿದ್ದಾರೆ. ಎಲ್ಲಕ್ಕೂ ಮಿಗಿಲಾದ ಮತ್ತೊಂದು ವಿಶೇಷ - ಅದನ್ನು ಸುಶ್ರವ್ಯವಾಗಿ ಶ್ರೀ ಜೇಸುದಾಸ್ ಹಾಗೂ ಶ್ರೀಮತಿ ಚಿತ್ರಾ ಅವರುಗಳು ಭಾವುಕವಾಗಿ ಹಾಡಿರುವುದು. ಅದೊಂದು ಅದ್ಭುತ ದಾಖಲೆ. ಆ ಹಾಡು ಎಲ್ಲೆಲ್ಲೂ ಮೊಳಗಿತು. ಅದರ ಪ್ರಶಸ್ತಿ ಪತ್ರಿಕೆಗಳಲ್ಲಿ ಪ್ರಕಟವಾದಾಗ ನಾನು ರಾಯಚೂರಿನ "ಕಾವ್ಯ ಕಮ್ಮಟದಲ್ಲಿ" ನಿರ್ದೇಶಕನಾಗಿ ಪಾಲ್ಗೊಂಡಿದ್ದೆ. ಅಲ್ಲಿಯ ಸ್ಥಳೀಯ ಪತ್ರಿಕೆಗಳು ಅಲ್ಲಿನ ವಿದ್ಯಾರ್ಥಿಗಳು, ರಸಿಕರು, ಸಾಹಿತಿಗಳು ಮುಕ್ತವಾಗಿ ಪ್ರಶಂಸಿಸಿದ್ದನ್ನು ನೆನಪಲ್ಲಿ ಇನ್ನು ಹಸಿ ಹಸಿರಾಗಿದೆ. ಅಲ್ಲಿನ ಪತ್ರಿಕೆಗಳು ನನ್ನ ಡಿಥೀರ್ ಸಂದರ್ಶನಗಳನ್ನು ಪ್ರಕಟಿಸಿದವು ಕವಿ ಪರಿಚಯ ಲೇಖನಿಗಳನ್ನು ಬರೆದು ಬಿತ್ತರಿಸಿದವು.

***ನಿಮ್ಮ ಚಿತ್ರ ಗೀತೆಗಳಲ್ಲಿ ನೀವು ಹಿಂದಿನಿಂದಲೂ ಕಾಪಾಡಿಕೊಂಡು ಬಂದಿರುವ ವಿಷಯ ಯಾವುದು?***

ನಾನು ಮೂಲತಃ ಭಾವುಕ. ಪ್ರಕೃತಿ, ಪ್ರೀತಿ, ತಾತ್ವಿಕ ವಿಚಾರಗಳು ಸೂಕ್ಷ್ಮವಾಗಿ ಸಮಾಜ ವಿಮರ್ಶೆ, ಆಧ್ಯಾತ್ಮ ದೃಷ್ಟಿಕೋನ, ಬದುಕಿನ ಬಗೆಗೆ ಅನನ್ಯ ಶ್ರದ್ಧೆ, ಪರಂಪರೆ ಬಗ್ಗೆ ಗೌರವ, ಸಂಸ್ಕೃತಿಯ ಬಗ್ಗೆ ಕಾಳಜಿ, ವೈಜ್ಞಾನಿಕ ಧಾರೆ, ಮಾನವೀಯ ಸಂಬಂಧಗಳ ಪ್ರಾಮುಖ್ಯತೆ, ಮೌಲ್ಯಗಳ ಆರಾಧನೆ, ಅನುಸರಣೆ, ಹಿರಿಯರ ಬಗ್ಗೆ ಅಕ್ಕರೆ ಸಹಜತೆ ಸೌಜನ್ಯ -ಇವೆಲ್ಲಾ ನನ್ನ ಹೃದಯದ ಮೂಲ ಮಿಡಿತಗಳು.

ನನ್ನ ಗೀತೆಗಳಿಗೆ ಚಿತ್ರಮಂದಿರಗಳಲ್ಲಿ ತಕ್ಷಣ ಸ್ಪಂದಿಸವುದನ್ನು ನಾನು ಪ್ರೇಕ್ಷಕರ ಮಧ್ಯೆ ಕುಳಿತು ಕಣ್ಣಾರೆ ಕಂಡಿದ್ದೇನೆ. ಜನ ಅತ್ತಿದ್ದಾರೆ; ಆ ಪಾತ್ರಕ್ಕೆ ಹೀಗಾಗಬಾರದಿತ್ತು ಎಂದು ಕಣ್ಣೀರಿಟ್ಟಿದ್ದಾರೆ. ಆಗೆಲ್ಲಾ ಯಾವ ಅಂಶ ಸಹೃದಯ ಪ್ರೇಕ್ಷಕನ ಮನಸ್ಸು ಮುಟ್ಟಿದೆ ಎಂದು ಆತ್ಮ ವಿಮರ್ಶೆ ಮಾಡಿಕೊಂಡಿದ್ದೇನೆ. ಅಲ್ಲಿ ಇಲ್ಲಿ ಜನರು ನಿಮ್ಮ ಹಾಡು ನಮಗೆಲ್ಲ ಇಷ್ಟ ಆಯಿತು ಎಂದಾಗ "ಯಾಕೆ" ಎಂದು ಕೇಳಿ ಆ ನಿಮಿಷದಲ್ಲಿ ಸಹಜವಾಗಿ ಏನೆಲ್ಲಾ ಹೃದಯತುಂಬಿ ಹೇಳುತ್ತಾರೆ

ಎಂದು ಕೇಳಿಸಿಕೊಂಡಿದ್ದೇನೆ. ನನಗೆ ಗೊತ್ತಿದೆ ನನ್ನ ಬರವಣಿಗೆ ಗುಟ್ಟು. ಭಾವನೆಗಳನ್ನು ನಾನು ವೈಭವೀಕರಿಸುತ್ತೇನೆ ಮಣ್ಣಿನ ಮಗನಾಗಿ, ಸಾಮಾನ್ಯವಾಗಿ ಆವನ ಭವಣೆಗಳೇ ನನ್ನವು ಎಂಬಂತೆ ಬಡತನ ಅಂತರಾಳದಲ್ಲಿ ಕುಳಿತು ಅನುಭವಿಸಿ ಬರೆಯುತ್ತೇನೆ.

ನಾನು ಅನುಭವಕ್ಕೆ ಸಮರ್ಥ ಆಕಾರ ಕೊಡಲು ಸದಾ ಪ್ರಯತ್ನಿಸುತ್ತೇನೆ. ಹಳ್ಳಿ ಪದಗಳನ್ನು ನುಡಿಗಟ್ಟುಗಳನ್ನು ಜನಸಾಮಾನ್ಯರ ಭಾಷೆಯನ್ನು ಗ್ರಾಮೀಣ ಉಪಭಾಷೆಯನ್ನು ಸಮೃದ್ಧವಾಗಿ ಬಳಸುತ್ತೇನೆ. ನನ್ನ ಜಾನಪದೀಯ ಶೈಲಿ ನನ್ನನ್ನು ಜನಗುರುತಿಸುವಂತೆ ಮಾಡಿದೆ; ಅವರಿಗೆ ನನ್ನ ಭಾಷೆ ಗ್ರಾಂಥಿಕ ಅನ್ನಿಸಿಲ್ಲ, ಸಹಜ ಅನ್ನಿಸಿದೆ. ಅವರ ನಾಲಿಗೆಯಲ್ಲಿ ನರ್ತಿಸುವ ಪದಗಳನ್ನೇ ಹೆಕ್ಕಿ ನಾನು ವಿವಿದಾರ್ಥ ಬಿತ್ತಿ ಧ್ವನಿ ಸಾಧಿಸಲು ಹವಣಿಸುತ್ತೇನೆ, ವಾಗರ್ಥಗಳ ಮೇಳವೇ ಅದು. ರಚನೆ ನನಗೆ ಒಂದು ದೈನಂದಿನ ಆಟ, ಅದರಲ್ಲಿ ತನ್ಮಯನಾಗುತ್ತೇನೆ. ನನ್ನದೇ ಭಾವಲೋಕ ಸೃಷ್ಟಿಸಿಕೊಳ್ಳುತ್ತೇನೆ, ಕಲ್ಪನೆಗೂ ಹಾರುತ್ತೇನೆ ಯಾವತ್ತೂ ಸಕಾರಾತ್ಮಕ ಅಂಶಗಳನ್ನೇ ಹೇಳುತ್ತೇನೆ. ನನ್ನದು ಇತ್ಯಾತ್ಮಕ ಧೋರಣೆ ವೈಶಾರಣ್ಯದ ಅಗ್ನಿಕುಂಡದಲ್ಲಿ ನಾನು ಬೆಂದಿದ್ದರೂ, ಪಾತ್ರಗಳು ಜೀವನದ ಅಂಥ ವಿಷಯ ಸಾಂದರ್ಭಗಳಲ್ಲಿ ಸಿಲುಕಿಕೊಂಡಿದ್ದರೂ ಆಶಾಕಿರಣ ಕಾಣುವಂತೆ ಆಶಾವಾದಿಯಾಗಿ ಬೆರೆಯುತ್ತೇನೆ. ಒಬ್ಬ ಹಳ್ಳಿಗ ನೈಜವಾಗಿ ಮಾತಾಡಿದಂತೆ ಇರುತ್ತೆ ನನ್ನ ಬಾಷೆ. ಆದ್ದರಿಂದ ನಾನು ಬರೆದದ್ದು ಕಡಿಮೆ ಆದರೂ ಗೀತೆಗಳು ಹುಸಿಆಗಿಲ್ಲ, ಯಶಸ್ಸು ಕಂಡಿವೆ. ಅದು ನನ್ನ ಪ್ರಾಮಾಣಿಕ ಪ್ರಯತ್ನದ ಫಲ. ಕಾವ್ಯ ಕೃಷಿ ಕೂಡ ಒಂದು ಕಲಾತ್ಮಕ ಕಸುಬು.

***ಸಾರ್, ಹಿಂದೆ ನಿಮ್ಮ ಗೀತೆಗಳೆಲ್ಲಾ "ಸೂಪರ್ ಹಿಟ್" ಆಗುತ್ತಿದ್ದವು ಇತ್ತೀಚಿನ ಹಾಡುಗಳು?***

೧೯೮೧ ರಿಂದ ಇತ್ತೀಚೆಗೆ ಈ ಹದಿನಾಲ್ಕು (೧೪) ವರ್ಷಗಳಲ್ಲಿ ನಾನು ಬರೆದದ್ದು ಕಡಿಮೆ. ವರ್ಷದಲ್ಲಿ ಏಳೆಂಟು ಗೀತೆ ಬರೆದಿರಬಹುದು. ಹಿಂದೆ ಹಾಗಲ್ಲ ೧೯೭೭ರಿಂದ ಒಂದೈದು ವರ್ಷ ಚೆನ್ನಾಗಿ ಬರೆದೆ. ದೊಡ್ಡ ಚಲನಚಿತ್ರ ನಿರ್ದೇಶಕರ ಜೊತೆ ಕೆಲಸಮಾಡಿದೆ. ಅವರೆಲ್ಲಾ ಅಂಥಾ ಮಹತ್ವಾಕಾಂಕ್ಷಿಗಳಾಗಿದ್ದರು, ಗೀತೆ ರಚನೆಕಾರರಿಗೆ ಅಷ್ಟೇ ಗೌರವ ಕೊಡುತ್ತಿದ್ದರು.

ಉದಾ : ಶ್ರೀ ಮಾರುತಿ ಶಿವರಾಂ; ಶ್ರೀ ಪುಟ್ಟಣ್ಣಕಣಗಾಲ್; ಶ್ರೀ ವಿಜಯ್, ಶ್ರೀ ರೇಣುಕಾಶರ್ಮ; ಶ್ರೀ ಟಿ. ಎಸ್. ನಾಗಾಭರಣ, ಶ್ರೀ ಸಿದ್ದಲಿಂಗಯ್ಯ, ಶ್ರೀ ಕೆ. ವಿ. ಜಯರಾಂ, ಶ್ರೀ ಭಾರ್ಗವ, ಶ್ರೀ ಕೆ. ವಿ. ರಾಜು ಹೀಗೆ ಅವರೆಲ್ಲ ದೊಡ್ಡ ದೊಡ್ಡ ಚಿತ್ರಗಳನ್ನು ಮಾಡಬೇಕೆಂದು ಹಗಲಿರುಳು ಹಂಬಲಿಸುವವರು. ಅಂಥ ಹಿರಿಯ ನಿರ್ದೇಶಕರ ಜೊತೆ ಕೆಲಸ ಮಾಡುವಾಗ ಖುಷಿ ಅನ್ನಿಸುತ್ತಿತ್ತು. ಹಿಂದೆ ಒಂದು ಚಿತ್ರದಲ್ಲಿ ಎಲ್ಲಾಗೀತೆಗಳನ್ನು ಒಬ್ಬ ಲೇಖಕನೇ ಬರೆಯುತ್ತಿದ್ದರಿಂದ ಇಡೀ ಚಿತ್ರಕ್ಕೆ ಒಂದು ಬಂಧ, ಸರಿಯಾದ ಭಾವದ ಹೆಣಿಗೆ, ಸನ್ನಿವೇಶಗಳ ಪರಿಮಿತದ ಕಲಾತ್ಮಕತೆ, ಎಲ್ಲ ಪಾತ್ರಗಳ ಆಂತರಿಕ ಸಂಬಂಧ ಎಲ್ಲಾ ಎಲ್ಲಾ ಅರ್ಥವಾಗುತ್ತಿದ್ದವು. ಈಗ ಹಾಗಲ್ಲವಲ್ಲ, ಕಥೆ - ಅಂದರೆ ಟೈಟಲ್ ಮಾತ್ರ ಹೊಳೆದು ಪ್ರಚಾರ ಆರಂಭವಾಗಿರುತ್ತೆ. ಮೂಗಿಗಿಂತ ಮೂಗುತಿಭಾರ, ಪಬ್ಲಿಸಿಟಿ ಕೇಳಿದರೆ ನೀವು ದಂಗಾಗಬೇಕು ಮೂಲ ಕಥಾ ಹಂದರವೂ ಸರಿಯಾಗಿ ಸಿದ್ಧವಾಗಿರೋಲ್ಲ. ಆಗಲೇ ಸಾಂಗ್ ಕಂಪೋಸಿಂಗ್ ಪ್ರಾರಂಭವಾಗಿರುತ್ತದೆ. ಒಂದು ಡ್ಯುಯೆಟ್ ಬರೆಯಿರಿ ಸಾರ್; ಒಂದು ಹೀರೋ ಸಾಂಗ್ ಬರೀರಿ ಸಾರ್, ಒಂದು

ಕ್ಯಾಬರೆ ಬರೀರಿ ಸಾರ್ ಒಂದು ಕಾಮಿಡಿಸಾಂಗ್ ಬರೀರಿ ಸಾರ್ ಅಂದರೆ ಕಥೆಯನ್ನು ಸರಿಯಾಗಿ ರಚಿಸದೆಯೇ ಹೀಗೆ ಅದ್ದೂರಿ ಹಾಡುಗಳಮಾಡಿ (ಅಬ್ಬರದ ಹಾಡುಗಳು) ಆಮೇಲೆ ಕಥೆಯ ನಾಯಕನ ಜೊತೆ ನಾಯಕಿ ಜೊತೆ ತೇಪೆ ಹಾಕುವ ಕೆಲಸ ಆರಂಭವಾಗಿರುತ್ತೆ ಹೀಗೆ ತಯಾರಿಸಿದ ಸಿನಿಮಾ ಯಶಸ್ಸು ಪಡಿ ಎಂದರೆ ಎಲ್ಲಿಂದ ಗೆಲುವು ಸಿಗುತ್ತದೆ?

ಹಿಂದಿನವರು ಹಾಗಿರಲಿಲ್ಲ; ಪುಟ್ಟಣ್ಣ ಕಣಗಾಲ್ ಆರು ತಿಂಗಳು ಒಂದೊಂದು ಸಾರಿ ಒಂದು ವರ್ಷ ಅಥವಾ ಕನಿಷ್ಠ ಮೂರು ತಿಂಗಳಾದರೂ ಮಹತ್ವದ ಕಥೆ ಬರೆಸಿ ಬಿಗಿಯಾದ ಚಿತ್ರನಾಟಕ ತಯಾರಿಸಿ ಆನಂತರ ಸಂಭಾಷಣೆಕಾರರ ಒಂದು ತಂಡವನ್ನೇ ಒಗ್ಗಟ್ಟನಿಂದ ಒಕ್ಕೊರಲಿನಿಂದ ಎಂಬಂತೆ ಸಾಹಿತ್ಯ ಸಿದ್ಧಪಡಿಸುವಂತೆ ಎಚ್ಚರಿಗೆ ವಹಿಸಿ ಮತ್ತೆ ಅದನ್ನು ಇಂಪ್ರೂವ್ ಮಾಡಿ ನಲವತ್ತು ನಲವತ್ತೈದು ದಿನ ಚಿತ್ರೀಕರಣ ನಡೆಯುಸುತ್ತಿದ್ದರು ಸಾಹಿತ್ಯಕ್ಕೆ ಸಾಹಿತಿಗೆ ಆಗ ಮರ್ಯಾದೆ ಇರುತ್ತಿತ್ತು. ಈಗ ಎರಡೂ ನಾಪತ್ತೆ!

***ಇಂದು ಚಿತ್ರರಂಗದಲ್ಲಿ ಸೃಜನಶೀಲತೆ ಮಾಯವಾಗಲು ಕಾರಣಗಳೇನು?***

ವಾಸು, ಚಿತ್ರರಂಗದಲ್ಲಿ ಸೃಜನಶೀಲತೆಗೆ ಬರವೇನೂ ಇಲ್ಲ; ಸಮೃದ್ಧವಾಗಿದೆ. ಆದರೆ ನನ್ನ ಆತಂಕ ಏನು ಅಂದರೆ ನಮ್ಮ ಪ್ರತಿಭಾವಂತ ಬುದ್ಧಿ ಜೀವಿಗಳು ತಂತ್ರಜ್ಞರು ಕತೆಗಾರರು ಗೀತರಚನೆಕಾರರು ಕಲಾವಿದರು ನಿರ್ಮಾಪಕರು ಹೀಗೆ ಪ್ರತಿಯೊಬ್ಬರೂ ಇಲ್ಲಿ ವ್ಯಾಪಾರೀ ದೃಷ್ಟಿಯಿಂದ ಯಶಸ್ಸು ಪಡೆಯಬೇಕೆಂಬ ಒಂದೇ ಒಂದು ಕಾರಣದಿಂದ ತಮ್ಮ ತಮ್ಮ ಅದ್ಭುತ ಪ್ರತಿಭೆಗಳನ್ನು ನೇತ್ಯಾತ್ಮಕವಾಗಿ ಬಳಸುವುದನ್ನೇ ನೋಡುತ್ತೇವೆ.

ಆದ್ದರಿಂದ ಇಲ್ಲಿ ಸೃಜನಶೀಲತೆ ನನ್ನ ದೃಷ್ಟಿಯಲ್ಲಿ ಮಾಯವಾಗಿಲ್ಲ, ಅದರ ಬದಲು ದುರುಪಯೋಗವಾಗುತ್ತಿದೆ ಸಮಾಜದ ಹಿತ ದೃಷ್ಟಿಯಿಂದ ಮಾರಕವಾಗಿ ಪ್ರಯೋಗವಾಗುತ್ತಿದೆ.

ಕಾರಣಗಳು ಎಲ್ಲರಿಗೂ ಗೊತ್ತಿರುವಂಥವೇ. ಹಾಕಿದ ಬಂಡವಾಳ ವಾಪಾಸು ಪಡೆಯಬೇಕು. ಅದಕ್ಕಾಗಿ ಕಸರತ್ತು, ಕಲೆಗಿನ್ನ ಮಿಗಿಲಾಗಿ ಕೀಳು ಸರಕು ತಯಾರು ಮಾಡಿ ಮಾಡುವ ದೊಡ್ಡ ದಂಧೆ.

ಹೆಸರಿಗೆ-ಸಿನಿಮಾ; ಕಲೆ; ವಾಸ್ತವವಾಗಿ ವ್ಯಾಪಾರ. ಅದು ನೀಯತ್ತಿಲ್ಲದ ವ್ಯಾಪಾರ. ಹೊರನೋಟಕ್ಕೆ ಸಾಹಿತ್ಯ ಸಂಗೀತ ಕಲೆ ಎಲ್ಲ ದೊಡ್ಡ ಪದಗಳು ಬಳಕೆ. ಕೆಟ್ಟರೀತಿಯಲ್ಲಿ, ಸಮಾಜ ಘಾತುಕ ರೀತಿಯಲ್ಲಿ ಇದೂ ಅಲ್ಲದೆ "ಸಮಾಜದಲ್ಲಿ ಇಲ್ಲದೆ ಇರುವುದನ್ನು ನಾವೇನು ತೋರಿಸುತ್ತಿಲ್ಲವಲ್ಲ" ಎಂಬ ಹುಸಿ ಸಮರ್ಥನೆ, ಇದೊಂದು ಡಂಬಾಚಾರ ಅಷ್ಟೆ ಕಪಟನಾಟಕ, ಹೊರಗೊಂದು ಒಳಗೊಂದು ಸಮಾಜದಲ್ಲಿ ಅಂಥ ಕೆಟ್ಟದನ್ನೇ ಇನ್ನಷ್ಟು ವೈಭವೀಕರಿಸಿ ರೊಚಕವಾಗಿಸಿ ಪ್ರೇಕ್ಷಕರನ್ನು ಉದ್ದೀಪಿಸಿ ಲಂಪಟತನಕ್ಕೆ ಅವರನ್ನೆಳೆದು ದುಡ್ಡು ದೋಚುವ ತಂತ್ರ.

ನಾವು ಸುಮ್ಮನೆ ಇಂಥವರಿಂದ ಇತ್ಯಾತ್ಮಕ ಕೊಡುಗೆ ನಿರೀಕ್ಷಸುವುದೇ ತಪ್ಪು! ಪಂತುಲು, ಅಂಥವರು RNR ಅಂಥವರು ವಿಠಲ್ ಅಂಥವರು ವೈಆರ್. ಸ್ವಾಮಿ ಅಂಥವರು ಪುಟ್ಟಣ್ಣ ಕಣಗಾಲ್ ಅಂಥವರು ಸಿದ್ದಲಿಂಗಯ್ಯ ಅಂಥವರು - ಕಲೆ ಮತ್ತು ವ್ಯಾಪಾರ - ಎರಡನ್ನು ಸಮನ್ವಯ ಗೊಳಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ.

ಅಲ್ಲೂ, ಹದತಪ್ಪಿದಾಗ ಬರೀ ವ್ಯಾಪಾರ ದೃಷ್ಟಿಕೋನವೇ ವಿಜೃಂಭಿಸಿದಾಗ ಕಲೆಗೆ ಅಪಚಾರವಾಗಿದೆ.

ಆಶಯಗಳು ಶುದ್ಧವಾಗಿದ್ದಾಗ ಹೀಗಾಗುವುದಿಲ್ಲ

ಆಶಯಗಳೇ ಚಿತ್ರರಂಗದಲ್ಲಿ ಮಲಿನವಾಗಿರುವಾಗ - ಅಪ್ಪಟ ಸೃಜನಶೀಲತೆ, ಕಲಾ ಸೌಂದರ್ಯ, ಶುದ್ಧಾಭಿರುಚಿ ಸಂಸ್ಕೃತಿಯ ಔನ್ನತ್ಯ, ಸಾಹಿತ್ಯದ ಶ್ರೀಮಂತಿಕೆ ಎಲ್ಲವೂ ನಾಪತ್ತೆ ಆಗುವುದು ಸಹಜ ತಾನೇ? ಅದೇ ಈ ಹೊತ್ತು ನಾವು ಕಾಣುತ್ತಿರುವ ನಗ್ನ ಸತ್ಯ.

***ಗೀತ ರಚನೆಯಲ್ಲದೆ ಬೇರೇನಾದರೂ ಕಥೆ ಸಂಭಾಷಣೆ ಬರೆದಿರುವಿರಾ?***

ಕಥೆ ಸಿನಿಮಾಗಾಗಿ ಬರೆದಿಲ್ಲ ಸಂಭಾಷಣೆ ಬರೆದಿದ್ದೇನೆ ಏಳೆಂಟು ಚಿತ್ರಗಳಿಗೆ ಅಷ್ಟೇ.

ನಾನು ಸಂಭಾಷಣೆ ಬರೆದ ಚಿತ್ರಗಳು, ಕಪ್ಪುಕೊಳ, ಬೂದಿ ಮುಚ್ಚಿದ ಕೆಂಡ, ಬಿಳೀಗುಲಾಬಿ; ಅವಳ ಜವಳಿ, ಹದ್ದಿನ ಕಣ್ಣು ಅಗ್ನಿದಿವ್ಯ; ದಾಹ.

***ಚಿತ್ರರಂಗದಲ್ಲಿ ನಿಮ್ಮ ಶ್ರಮಕ್ಕೆ ತಕ್ಕ ಸಂಭಾವನೆ ಸಿಕ್ಕಿದೆಯಾ ಸಾರ್?***

ಬಾಂದಳದಷ್ಟು ವಿಶಾಲ ಕೀರ್ತಿ ಸಿಕ್ಕಿದೆ, ಕಡಲ ಅಗಾಧತೆಯಷ್ಟು ಜನಪ್ರಿಯತೆ ಸಿಕ್ಕಿದೆ, ಸಂಭಾವನೆ ನಿರ್ಮಾಪಕರು ಕೊಟ್ಟರೆ ಉಂಟು, ಕೊಟ್ಟಷ್ಟು! ಇಸ್ಕೊಂಡಷ್ಟು! ಲೇಖಕರಿಗೆ ಸರಿಯಾಗಿ ಸಂಭಾವನೆ ಸಿಕ್ಕಿದ್ದರೆ ಜೀವನದಲ್ಲಿ ಜೀಕಂತ ಸುಮ್ಮ ಸುಮ್ಮನೆ ಬವಣೆ ಯಾರು ಪಡುತ್ತಾರೆ?

***ಚಿತ್ರಗೀತೆಗಳನ್ನು ಬಿಟ್ಟು ನಿಮ್ಮ ಎಷ್ಟು ಭಾವಗೀತೆಗಳಿಗೆ ರಾಗ ಸಂಯೋಜನೆ ಆಗಿದೆ?ಯಾರ್‍ಯಾರು ರಾಗ ಸಂಯೋಜನೆ ಮಾಡಿದ್ದಾರೆ***

ವಾಸು, ನಿಖರವಾಗಿ ನಾನು ಲೆಕ್ಕ ಇಟ್ಟಿಲ್ಲ. ಆದರೆ ಪ್ರತಿ ನಿತ್ಯವೂ ಒಬ್ಬರಲ್ಲ ಒಬ್ಬರು ಸಂಗೀತ ನಿರ್ದೇಶಕರು ನನ್ನ ಭಾವಗೀತೆಗಳನ್ನು ಆಯ್ಕೆ ಮಾಡಿಕೊಂಡು ರಾಗ ಸಂಯೋಜಿಸಿ ಉತ್ತಮ ಗಾಯಕ ಗಾಯಕಿಯರ ಹತ್ತಿರ ಹಾಡಿಸುತ್ತಲೇ ಇದ್ದಾರೆ. ಆಕಾಶ ವಾಣಿ, ದೂರದರ್ಶನ, ಸಂಗೀತ ಸಂಜೆಗಳು, ಸುಗಮ ಸಂಗೀತದ ಕಾರ್ಯಕ್ರಮಗಳು, ಹವ್ಯಾಸಿ ಗಾಯಕ ಗಾಯಕಿಯರ ಗುಂಪುಗಳು ಕರ್ನಾಟಕದ ಬೇರೆ ಬೇರೆ ಬಾನುಲಿ ಕೇಂದ್ರಗಳು, ದೂರದರ್ಶನ ಒಂದೆರಡು ಛಾನೆಲ್ ನನ್ನ ಭಾವಗೀತೆಗಳಿಗೆ ಮನ್ನಣೆ ನೀಡಿವೆ. ಹಾಗೆ ನೋಡಿದರೆ ನನ್ನ ಭಾವಗೀತೆಗಳು ಸಮೃದ್ಧವಾಗಿ ಅಲ್ಲಿ ಇಲ್ಲಿ ಪ್ರಸಾರವಾಗಿವೆ ಎಂದು ಹೇಳಲು ಸಂತೋಷವಾಗುತ್ತದೆ. ಕನಿಷ್ಠ ಒಂದು ನೂರು ಭಾವಗೀತೆಗಳಾದರೂ ಸಂಗೀತ ಸಂಯೋಜನೆ ಗೊಂಡಿವೆ. ಕೆಲವು ಕ್ಯಾಸೆಟ್ ರೂಪದಲ್ಲಿ ಹೊರಬಂದಿವೆ.

ಉದಾಹರಣೆಗೆ ಶ್ರೀ ಸಿ. ಅಶ್ವತ್ ರಾಗ ಸಂಯೋಜಿಸಿ ಮಧುರವಾಗಿ ಶ್ರೀ ಎಸ್. ಪಿ. ಬಾಲಸುಬ್ರಮಣ್ಯಂ ಹಾಡಿರುವ "ಮಾವು ಬೇವು" ನನಗೆ ಒಳ್ಳೆಯ ಹೆಸರು ತಂದು ಕೊಟ್ಟಿದೆ. ಅಮೇರಿಕಾ ಇಂಗ್ಲೆಂಡ್ ದುಬಾಯಿಗಳಲ್ಲೂ ಈ ಕ್ಯಾಸೆಟ್ ಅಲ್ಲಿಯ ಕನ್ನಡಿಗರಿಗೆ ಪ್ರಿಯವಾಗಿದೆ; ಅಲ್ಲಿಂದಲೂ ಅಭಿಮಾನಿಗಳು ಮುಕ್ತವಾಗಿ ಮೆಚ್ಚಿ ಕಾಗದಗಳನ್ನು ಬರೆದಿದ್ದಾರೆ, ಅದರಿಂದ "ಪತ್ರ - ಮೈತ್ರಿ" ಸಾಧ್ಯವಾಗಿದೆ. ನಿಜವಾದ ಸಾಹಿತ್ಯಭಿಮಾನಿಗಳ ಭಾವ ಸಂಸರ್ಗ ಸಿಕ್ಕಿದೆ.

***ಇದುವರೆಗೂ ಹಾಡು ಬರೆಯುತ್ತಿದ್ದ ನೀವು, ಈಗ ಹಾಡುತ್ತೀರಿ ಅಂತ ಗೊತ್ತಾಯ್ತು. ಆ ಬಗ್ಗೆ ಹೆಚ್ಚಿನ ವಿವರಗಳನ್ನು ಹೇಳ್ತೀರಾ ಸಾರ್?***

ನಾನು ಮೂಲತಃ ಬರಹಗಾರ, ಬರೆಯುವಾಗ ಹಾಡಿಕೊಳ್ಳುವುದು ಸಹಜ; ಗುನುಗಿಕೊಂಡೇ ಭಾವಗೀತೆ ಬರೆಯುವುದು ನನ್ನ ಜಾಯಮಾನ. ಸಭೆ ಸಮಾರಂಭಗಳಲ್ಲಿ ನನ್ನ ಅಭಿಮಾನಿಗಳ ಒತ್ತಾಯಕ್ಕೆ ಮಣಿದು ಹಾಡಿದ್ದೇನೆ. ಕನ್ನಡ ನಾಡಿನಾದ್ಯಂತ ನಾನು ಸಭೆ ಸಮಾರಂಭಗಳಲ್ಲಿ ಪಾಲ್ಗೊಂಡಿದ್ದೇನೆ. ಹೀಗಾಗಿ ಕರ್ನಾಟಕದ ಜನಕ್ಕೆ ನನ್ನ ಹಾಡುಕಾರಿಕೆ ಇಷ್ಟವಾಗಿದೆ. ಸರಿ ಅದು ಅಭಿಮಾನವಾಗಿ ಮಹಾಪೂರವಾಗಿ ಕೆಲವೊಮ್ಮೆ ಅಗ್ರಹವಾಗಿ ಬದಲಾವಣೆಗೆ ನಾಂದಿ ಹಾಕಿದಂತಾಗುತ್ತದೆ. ನನ್ನ ಸ್ನೇಹಿತ ಕರುನಾಡ ಕಶ್ಯಪ್ ಅವರಿಗೆ ಆಡಿಯೋ ವೀಡಿಯೋ ಕ್ಯಾಸೆಟ್ ವಿತರಣ ಕ್ಷೇತ್ರ ಚೆನ್ನಾಗಿ ಪರಿಚಯವಿದೆ; ಅವರು ಸಂಗೀತ ಬಲ್ಲವರು; ಹವ್ಯಾಸಿ ಬರಹಗಾರರು ಕೂಡ, ಅವರು ಒಮ್ಮೆ ಧಾರವಾಡ ಬಿಜಾಪುರ ಹುಬ್ಬಳ್ಳಿ ಗುಲ್ಬರ್ಗ ರಾಯಚೂರು ಗದಗ ಬಾದಾಮಿ ಕಡೆ ಹೋದಾಗ - ಎಂಥಹ ಧ್ವನಿ ಸುರುಳಿಗೆ ಬೇಡಿಕೆ ಇದೆ ಎಂದು ಎಲ್ಲ ವಿತರಕರನ್ನು ಮಾರಾಟಗಾರರನ್ನು ಪ್ರಶ್ನಿಸುತ್ತಾ ಹೋದರಂತೆ. ಆಗ ಎಲ್ಲೆಡೆ ದೊರಂಗೌಡರ ಹಾಡುಗಳಿಗೆ ಭಾವಗೀತೆಗಳಿಗೆ ಅಪಾರ ಬೇಡಿಕೆ ಇದೆ ಎಂದು ತಿಳಿದ ಮೇಲೆ ನನ್ನ ಕೈಲಿ ಧ್ವನಿಸುರುಳಿಯಲ್ಲಿ ಹಾಡಿಸುವ ಹಠ ಹಿಡಿದರು. ನಾನು ಅವರ "ಅಂಕುರ" ಧ್ವನಿ ಸುರುಳಿಯುಲ್ಲಿ ಮೂರು ಹಾಡುಗಳನ್ನು ಶ್ರದ್ಧೆಯಿಂದ ಹಾಡಿದ್ದೇನೆ Casette ಈಗ Click ಆಗಿದೆ.

***ಇದುವರೆಗೆ ಯಾವ್ಯಾವ ಧ್ವನಿ ಸುರುಳಿಯಲ್ಲಿ ಹಾಡಿದ್ದೀರಿ? ಮತ್ತು ಆ ಧ್ವನಿಸುರುಳಿಗಳ ಸಂಗೀತ ನಿರ್ದೇಶಕ ಯಾರು?***

ಇಲ್ಲಿಯವರೆಗೆ ನಾನು ನಾಲ್ಕು ಧ್ವನಿಸುರುಳಿಯಲ್ಲಿ ಹಾಡಿದ್ದೇನೆ

೧) ಅಂಕುರ : ಸಂ. ನಿ. ಕಾರ್ನಾಡ್ ಕಶ್ಯಪ್ (ಭಕ್ತಿಗೀತೆ)

೨) ಶಕ್ತಿ ಕೊಡು ಪ್ರಭುವೇ : ಸಂ. ನಿ. ಶ್ರೀ ಬಾಲುಶರ್ಮ •

೩) ಶಕ್ತಿಸನ್ನಿಧಿ ಸಂ. ನಿ. ಶ್ರೀ ಬಿ. ವಿ. ಶ್ರೀನಿವಾಸ್

೪) ಕಾಡು ಮಲ್ಲಿಗೆ : ಸಂ. ನಿ. ಶ್ರೀ ಮನೋಹರ್

ವಿಶೇಷ ಶ್ರೀ ಸನ್ನಿದಿಯಲ್ಲಿ ನನ್ನ ಹಾಡನ್ನು (ನಾನು ಬರೆದ ಭಕ್ತಿ ಗೀತೆಯನ್ನು ನಾನೇ ಹಾಡಿದ್ದೇನೆ) - ನಾನೇ ಹಾಡಿದ್ದೇನೆ.

ಕಾಡು ಮಲ್ಲಿಗೆಯಲ್ಲಿ ನನ್ನ ಎರಡು ಭಾವಗೀತೆಗಳನ್ನು ಸಂ.ನಿ, ಶ್ರೀಮನೋಹರ್ ನೇತೃತ್ವದಲ್ಲಿ ನಾನು ಹಾಡಿದ್ದೇನೆ. ಅದರಲ್ಲಿ ಒಂದು ತಾತ್ವಿಕ ಗೀತೆ. ಚಿಂತನಶೀಲ ಅಂಶಗಳುಳ್ಳಂಥದ್ದು. ಮತ್ತೊಂದು ಗ್ರಾಮ್ಯ ಶೈಲಿಯದು ಪ್ರೇಮಗೀತೆ, ಹಳ್ಳಿಯ ಸೊಗಸು ಇರುವಂಥದ್ದು.

***ನಿಮ್ಮ ಮೆಚ್ಚಿನ ರಾಗ ಯಾವುದು?***

'ಮೋಹನ' ರಾಗದ ಮಾಧುರ್ಯವೇ ಮಾಧುರ್ಯ ಹಾಗಂತ ನಾನು ಬೇರೆ ರಾಗದಲ್ಲಿ ಸ್ವರ ಸಂಯೋಜನೆಗೊಂಡ ಗೀತೆಗಳನ್ನು ಕೇಳುದಿಲ್ಲವೆಂದೇನಲ್ಲ ಭಾಗ್ಯಶ್ರೀ, ಕಲ್ಯಾಣಿ, ಶಂಕರಾಭರಣ ಅವುಗಳು ನನಗಿಷ್ಟ.

***ಶಾಸ್ತ್ರೀಯ ಸಂಗೀತದಲ್ಲಿ ಒಲವಿದೆಯಾ? ಶಾಸ್ತ್ರೀಯವಾಗಿ ಏನಾದರೂ ಅಭ್ಯಾಸ ಮಾಡಿರುವಿರಾ?***

ಒಲವಿದೆ; ನಿಜ; ಅಭ್ಯಾಸ ಮಾಡಿಲ್ಲ; ಶಾಸ್ತ್ರೀಯವಾಗಿ ಕಲಿಯುವ ಆಸೆ ಇತ್ತು. ಆಗ ಹೊಟ್ಟೇಪಾಡೇ ಮುಖ್ಯವಾದ್ದರಿಂದ ಅತ್ತ ಕಡೆ ಸಂಪೂರ್ಣ ನಿಮಗ್ನನಾಗಲಿಲ್ಲ. ಶಾಸ್ತ್ರೀಯ ದಾಟಿಗಳನ್ನು ಗುನುಗುಟ್ಟುತ್ತೇನೆ.

***ಬಿಡುವಿನ ವೇಳೆಯಲ್ಲಿ ನಿಮ್ಮ ಹವ್ಯಾಸವೇನು?***

ಬರೆಯುವುದು; ಪತ್ರಮಿತ್ರತ್ವ;' ಪ್ರವಾಸ; ಸುಗಮಸಂಗೀತ ಭಾವಗೀತೆಗಳನ್ನು ಹಾಡಿಕೊಳ್ಳುವುದು, ಬೇರೆ ಕವಿಗಳ ಭಾವಗೀತೆಗಳನ್ನು ಹಾಡುವುದು ಇತ್ಯಾದಿ.

***ಅಭಿಮಾನಿಗಳ ಜೊತೆ ಸ್ಮರಣೀಯ ಪ್ರಸಂಗಗಳಿವೆಯೇ? ಇದ್ದರೆ ಯಾವುದಾದರೂ ಒಂದೆರಡನ್ನು ತಿಳಿಸುತ್ತೀರಾ?***

ನನ್ನ ಕವಿತೆಗಳು ಕನ್ನಡ ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗ ತೊಡಗಿದ ಮೇಲೆ -ನನ್ನ ಸಾಹಿತ್ಯ ಇಷ್ಟ ಪಡುವ ಅಭಿಮಾನಿಗಳು ಆಗಾಗ್ಗೆ ನನ್ನ ಸಂಪರ್ಕಿಸಿದ್ದಾರೆ.

ಬಸ್ಸಲ್ಲಿ, ಮಾರುಕಟ್ಟೆಯಲ್ಲಿ ಸಭೆಸಮಾರಂಭಗಳಲ್ಲಿ ನನ್ನ ಗುರುತಿಸಿ ಮಾತನಾಡಿಸಿದ್ದಾರೆ. ಯೋಗ ಕ್ಷೇಮ ವಿಚಾರಿಸಿಕೊಂಡಿದ್ದಾರೆ. ಮುಂದಿನ ಬರವಣಿಗೆ ಬಗ್ಗೆ ಯೋಜನೆಗಳೇನು ಎಂದು ತಿಳಿದುಕೊಂಡಿದ್ದಾರೆ. ಯಾವ ಯಾವ ಚಿತ್ರಗಳಿಗೆ ಇತ್ತೀಚೆಗೆ ಹಾಡುಗಳನ್ನು ಬರೆದಿರಿ -ಎಂದೆಲ್ಲಾ ಕೇಳುತ್ತಿರುತ್ತಾರೆ.

ಕೆಲವು ಅವಿಸ್ಮರಣೀಯ ಶುಭ ಸನ್ನಿವೇಶಗಳು ಇವೆ. ೧೯೭೨ರಲ್ಲಿ ನನ್ನ "ಕಣ್ಣು ನಾಲಿಗೆ ಕಡಲು" ಕೃತಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಯಿಂದ ಬಹುಮಾನ ಬಂದ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾದಾಗ-ನಾನು ಇನ್ನು ಎದ್ದು ನಿತ್ಯ ಕರ್ಮಗಳಲ್ಲಿ ತೊಡಗಿರುವಾಗ- ನನ್ನ ಕವಿತೆಗಳನ್ನು ಓದಿರುವ ಮೆಚ್ಚಿಕೊಂಡವರು ಸುದ್ದಿ ಪತ್ರಿಕೆಗಳಲ್ಲಿ ಓದಿ ಹೂವಿನ ಹಾರಗಳನ್ನು ತಂದು ನನ್ನ ಕೊರಳಿಗೆ ಹಾಕಿ ಕೈಕುಲುಕಿ ಅಭಿನಂದಿಸಿದ್ದು ನನಗಿನ್ನು ನೆನಪಲ್ಲಿದೆ, ನೆನಪು ಹಸಿಹಸಿರಾಗಿದೆ- ಸಾರ್ವಜನಿಕವಾಗಿ ನನ್ನನ್ನು ಒಪ್ಪಿಕೊಂಡ ಸಹೃದಯರು ಬಹಳ ಮುಗ್ಧವಾಗಿ ಮುಕ್ತವಾಗಿ ತಮ್ಮ ಪ್ರೀತಿ ಅಕ್ಕರೆಗಳ ಸೂಚಿಸುತ್ತಾರೆ. ಬರಹಗಾರನಿಗೆ ಅದೇ ಸಂತೋಷ.

ಕೆಲವು ಘಟನೆಗಳು ಅತ್ಯಂತ ಅನಿರೀಕ್ಷಿತ, ಒಮ್ಮೆ ಹೀಗಾಯಿತು ನಮ್ಮ ಮನೆಯಲ್ಲಿ ಒಂದು ದಸರಾ ಸಂದರ್ಭದಲ್ಲಿ "ವಿಜಯದಶಮಿ" ಹಿಂದಿನ ದಿನ ಮೈಸೂರಿಗೆ ಅದು ಸಂಜೆವೇಳೆ ಹೊರಟು ದಸರಾ ಉತ್ಸವದಲ್ಲಿ ಪಾಲ್ಗೊಳ್ಳುವ ಆಸೆಯಾಯಿತು ನನ್ನ ಕುಟುಂಬದವರಿಗೆ, ಸರಿ ಡಿಢೀರ್ ಹೊರಟೆವು ಬಸ್ ನಿಲ್ದಾಣದಲ್ಲಿ ಜನವೋ ಜನ!

ತುಂಬಾ ಜನಸಂದಣಿ; ಕಷ್ಟ ಪಟ್ಟು ಕಾದು ಕಾದು ಬಸ್ ಹಿಡಿದು ಮೈಸೂರು ತಲುಪಿದಾಗ ಅವೇಳೆ, ನಾವು ಮೈಸೂರಿನಲ್ಲಿ ಹೋಟೆಲಲ್ಲೇ ಉಳಿದುಕೊಳ್ಳಬೇಕಾಗಿತ್ತು. ಅಲ್ಲಿ ಎಲ್ಲಿ ನೋಡಲಿ ಜನ ಯಾವ ಹೋಟೆಲಿಗೆ ಹೋದರೂ ರೂಂ ಇಲ್ಲ ; ಹತಾಶೆ, ಹೆಂಡತಿ ಮಕ್ಕಳಿಗೆ ಆತಂಕ ಇಷ್ಟು ಹೊತ್ತಲ್ಲಿ ಎಲ್ಲಿ ಇರುವುದು?

ಈ ರಾತ್ರಿ ಹೇಗೆ ಕಳೆಯುವುದು? ಹೋಟೆಲಿಂದ ಹೋಟೇಲಿಗೆ ಅಲೆತ ಎಲ್ಲೆಡೆ ಒಂದೇ ಉತ್ತರ. ರೂಂ ಕಾಲಿ ಇಲ್ಲ. ರೂಂ ಕಾಲಿ ಇಲ್ಲ. ಕೊನೆಗೆ ಒಂದು ಹೋಟೆಲನಲ್ಲಿ ರೆಸಿಪ್ಷನ್ ಕೌಂಟರ್ ಬಳಿ ಹೋಗಿ ರೂಂ ಕೇಳಿದಾಗ ಅದೂ ಆ ವೇಳೆಯಲ್ಲಿ - ಆ ರೆಸಿಪ್ಷನಿಸ್ಟ್ ನನ್ನನ್ನು ಗುರುತು ಹಿಡಿದು - ನೀವು ಕವಿಗಳಲ್ಲವಾ ಸಾರ್? ದೊಡ್ಡರಂಗೇಗೌಡ ನೀವೇ ಅಲ್ಲವಾ ಸಾರ್? ಎಂದು ಗರುತಿಸಿ ಅವನು ಬಿಡುವಿರದ ದುಡಿಮೆಯ ನಡುವೆಯೂ ಈಗ ದಸರಾ ನೋಡಿ ಸಾರ್ ಜನಜಾಸ್ತಿ ರೂಂ ಸಿಗಲು ಸಾಧ್ಯವೇ ಇಲ್ಲ, ಎಂಥ ಟೈಂನಲ್ಲಿ ಬಂದು ಬಿಟ್ಟರಿ ಎಂದು ಆ ಹತಾಶ ಸ್ಥಿತಿಯಲ್ಲಿ ತಾನು ಪೇಚಾಡುತ್ತಾ - ನಮ್ಮನ್ನು ಹಾಗೆ ವಾಪಾಸ್ ಕಳುಹಿಸಲು ಇಷ್ಟವಿಲ್ಲದೆ ಬಹಳ ಪ್ರಯತ್ನ ಪಟ್ಟು ಹೋಟೆಲ್ ಮಾಲೀಕರಿಗೆ ನನ್ನ ಬಗ್ಗೆ ಉಬ್ಬುಬ್ಬಿ ಹೇಳಿ ಪರಿಚಯಿಸಿ ಕೊನೆಗೆ ಕೊಠಡಿಯೇ ಪ್ರವಾಸಿಗರಿಗೆ ಸಿಗದೆ ಇದ್ದ ಸಂದರ್ಭದಲ್ಲೂ ತನ್ನ ಕೋಣೆಯನ್ನೇ ಬಿಟ್ಟು ಕೊಟ್ಟ ಕಾವ್ಯಾಭಿಮಾನಿ ಅಕ್ಕರೆಯ ವರ್ತನೆ ಕಂಡು ಪದ್ಯಬರೆದದಕ್ಕೂ ಸಾರ್ಥಕವಾಯಿತು ಅನ್ನಿಸಿತು. ನನ್ನ ಕಾವ್ಯಕೃಷಿ ಕೂಡ ಲೌಕಿಕವಾಗಿ ಅದೂ ಸಂಕಷ್ಟದ ಸಂದರ್ಭದಲ್ಲಿ ಆಸರೆಗೆ ಬಂದು - ಪರವಾಗಿಲ್ಲ ಲೇಖಕರಿಗೂ ಪ್ರಾಣಕ್ಕೆ ಪ್ರಾಣಕೊಡುವ ಅಭಿಮಾನಿಗಳಿರುತ್ತಾರೆ. ಎಂಬ ವಾಸ್ತವ ಸಂಗತಿ ಮನವರಿಕೆಯಾಯ್ತು.

ನೋಡಿ ವಾಸು, ಮತ್ತೊಂದು ಸರಿ ಹೀಗಾಯಿತು. ನಾನು ಬಿಜಾಪುರದ ಬಳಿ ಇರುವ ಹುನುಗುಂದ್‌ನ ಕಾಲೇಜೊಂದರ ವಾರ್ಷಿಕೋತ್ಸವಕ್ಕೆ ಹೋಗಿದ್ದೆ ತುಂಬಾ ಚನ್ನಾಗಿ ಆಯ್ತು. ನಮ್ಮ ಮನೆಯವರೂ ಬಂದಿದ್ದರು ನನ್ನ ಬಾಳಸಂಗಾತಿಕೂಡ ಸಮಾರಂಭದಲ್ಲಿ ಚನ್ನಾಗಿ ಮಾತನಾಡಿದಳು. ಅಲ್ಲಿಯ ಸಮಾರಂಭಕ್ಕೆ ಬಾದಾಮಿಯ ಕೆಲವು ಗಣ್ಯರು ಬಂದಿದ್ದರು ಅವರು ಕೂಡ ತಮ್ಮೂರಿನ ಸಭೆಗೆ ಬರಬೇಕೆಂದು ಕೇಳಿಕೊಂಡರು. ಇಬ್ಬರೂ ಹೋದೆವು ಐತಿಹಾಸಿಕ ಸ್ಥಳ ತಾನೆ ಬಾದಾಮಿ, ಅಲ್ಲಿನ ಮುಖ್ಯಸ್ಥರು ಬಾದಾಮಿಯ ಗುಹಾಂತರ ದೇವಾಲಯಗಳನ್ನು ತೋರಿಸಿದರು. ನಾನು ಈ ಹಿಂದೆಯೇ ನೋಡಿದ್ದೆ ಆದರೆ ಈ ಸಾರಿ ನನ್ನ ಪ್ರೀತಿಯ ಬಾಳಸಂಗಾತಿಯು ಜೊತೆಗಿದ್ದುದರಿಂದ ಪ್ರವಾಸ ಇನ್ನಷ್ಟುಹರ್ಷವಾಗಿತ್ತು.

ಸಭೆಗೆ ಮೊದಲು ಸಾರ್ ನೀವು ಒಂದು ವಸ್ತು ಪ್ರದರ್ಶನ ಉದ್ಘಾಟನೆ ಮಾಡಬೇಕೆಂದರು ಆಯ್ತು ಎಂದೆ. ಕಲೆಗೆ ಸಂಬಂಧ ಪಟ್ಟ ಪ್ರದರ್ಶನ ಇದು ಎಂದು ಕಾರ್ಯಕರ್ತರು ಹೇಳಿದರು. ಮತ್ತಷ್ಟು ಸಂತೋಷ ಎಂದು ಮುಚ್ಚಿದ ಸಭಾಂಗಣ ಬಾಗಿಲ ಬಳಿ ಹೋದೆವು tape ಕಟ್ಟಿದ್ದರು ಅದನ್ನು ಕತ್ತರಿಸಬೇಕಿತ್ತು. ಬಣ್ಣದ ಟೇಪ್ ಕತ್ತರಿಸಿ ಮುಚ್ಚಿದ ಕದ ಹಿಂದೆ ತಳ್ಳಿದೆ . ದೊಡ್ಡ ಸಭಾಂಗಣ ಅಲ್ಲಿ ನನ್ನನ್ನೇ ಬೆರಗುಗೊಳಿಸಿದ ಒಂದು ಅದ್ಭುತ ನನ್ನ ಸ್ವಾಗತಿಸಿತು.

ಸಭಾಂಗಣದ ಮಧ್ಯಕ್ಕೆ ಸರಿಯಾಗಿ - ಬಾಗಿಲು ತೆಗೆದ ತಕ್ಷಣ ಕಾಣುವ ಹಾಗೆ - ನನ್ನ ಪ್ರತಿಕೃತಿಯನ್ನು ಅಚ್ಚು ಕಟ್ಟಾಗಿ ಬಹಳ ಸುಂದರವಾಗಿ ೧೦೦%ನನ್ನ ತದ್ರೂಪ್ ಚಿತ್ರವನ್ನು (ಬೃಹತ್ತಾದದ್ದು) ಎಲ್ಲರ ಗಮನ ಸೆಳೆವಷ್ಟು ಪ್ರಭಾವ ಶಾಲಿಯಾಗಿ ರಂಗೋಲಿಯಲ್ಲಿ ಬಿಡಿಸಿದ ಬಾದಾಮಿ ಜನರ ಅಕ್ಕರೆ ಪ್ರೀತಿ ಅಭಿಮಾನದ ಚಪ್ಪಾಳೆ ಕಂಡು ಒಂದು ಕ್ಷಣ ಅವಕ್ಕಾದೆ. ಕಣ್ಣಂಚಲ್ಲಿ ಆನಂದ ಬಾಷ್ಪ. ಆ ಜನರ ಪ್ರೀತಿ ಮುಂದೆ ನಾನು ಏನು ತಾನೇ ಕೊಡಲಿ? ಮನದುಂಬಿ ಹೃದಯತುಂಬಿ ಸಭೆಯಲ್ಲಿ ಮಾತಾಡಿದೆ. ನಮ್ಮ ಮನೆಯವರು ಮೊದಲೇ ಚರಿತ್ರೆ ಚೆನ್ನಾಗಿ ಓದಿಕೊಂಡವಳು ಅಲ್ಲಿನ ಐತಿಹಾಸಿಕ ಮಹತ್ವಗಳ ಬಗ್ಗೆ ಮನದಟ್ಟುವ ಹಾಗೆ ಮಾತಾಡಿದಳು. ಆ ಜನರ ಹರ್ಷೋದ್ಗಾರ ಅಭಿಮಾನದ ಮಹಾಪೂರ

(ಐದು ಸಾವಿರ ಜನ ಇದ್ದರು ಅಂತ ಕಾಣುತ್ತೆ)ಕಂಡು ದಂಗಾಗಿ ಹೋದೆ. ಮೂಕ ವಿಸ್ಮಿತನಾದೆ ಈ ನಾಡಿನಲ್ಲಿ ತಮ್ಮ ಮೆಚ್ಚಿನ ಕವಿಯನ್ನು ಕಂಡು ಹೀಗೆ ಆರಾಧಿಸುವ ಅಕ್ಕರೆ ವ್ಯಕ್ತಪಡಿಸುವ ಪರಿ ಕಂಡು ಹೇಳುವುದೇನಿದೆ? ಅಂದಿನಿಂದ ನನ್ನ ಜವಬ್ದಾರಿಯನ್ನುಇನ್ನೂ ಹೆಚ್ಚಿನದೆಂದು ಭಾವಿಸಿ ಈಗ ಪ್ರತಿಯೊಂದನ್ನು ಎಚ್ಚರಿಕೆಯಿಂದ ಬರೆಯುತ್ತೇನೆ.

***ಸಹಳ ಉಡುಪು ಸದಾ ನಗು ಮುಖ –ಬಸ್ಸಿನಲ್ಲಿ ಪ್ರಯಾಣ ಇವುಗಳ ಅಂತರಂಗದ ತಿರುಳೇನು?***

ಸರಳ ಜೀವನ ನನ್ನ ಬದುಕಿನ ವಿಧಾನ. ಸರಳತೆ ಸದಾ ನನಗಿಷ್ಟ. ಯಾವ ಪುರುಷಾರ್ಥಕ್ಕೆ ಆಡಂಬರ ಜೀವನ ನಡೆಸಬೇಕು? ನಮ್ಮ ನಾಡಿನ ಲಕ್ಷಲಕ್ಷಜನ ಒಪ್ಪೊತ್ತಿನ ಊಟಕ್ಕೆ ಬವಣೆ ಪಡುತ್ತಿರುವಾಗ ನಾನು ವೈಭವಯುತ ಬಾಳುವೆ ನಡೆಸಲು ಆಶಿಸುವುದೇ ತಪ್ಪು. ನಾನು ಕಡು ಬಡವನ ಕುಟುಂಬದಿಂದಲೇ ಬಂದವನು, ಬಡತನ ವಿನಯವನ್ನು ಕಲಿಸುತ್ತೆ, ಅನ್ಯಧನ ಆಶಿಸದೆ ಇರುವುದನ್ನು ಕಲಿಸುತ್ತೆ, ಪ್ರಾಮಾಣಿಕತೆಯನ್ನು ಕಾಪಾಡಿಕೊಳ್ಳುವುದನ್ನು ಕಲಿಸುತ್ತೆ. ಜೀವನದ ಅನೇಕ ಸಂಗತಿಗಳನ್ನು ಅಗಣಿತ ಆಯಾಮಗಳನ್ನು ಕಂಡಿದ್ದೇ ನಾನು ನನ್ನ ಬಡತನದ ಸಹಜ ಪರಿಸರದಿಂದ.

ನಗು ನಗುತಾ ಬಾಳಬೇಕು ಎನ್ನುವುದು ನನ್ನ ಅಭಿಪ್ಸೆ, ಕಷ್ಟಗಳು ಎಲ್ಲರಿಗೂ ಬರುತ್ತವೆ; ಎಲ್ಲರ ಬದುಕಿನಲ್ಲೂ ಇರುತ್ತವೆ ಹಾಗಂತ ಸಪ್ಪೆಮುಖ ಹಾಕಿಕೊಂಡು ಬದುಕುವುದು ಏನು ಚಂದ?

ನಾನು ಗಾಂಧೀಜಿಯವರನ್ನು ಅವರ ಬದುಕನ್ನು ಮೆಚ್ಚಿಕೊಂಡವನು. ಅವರ ಸರಳತೆಯನ್ನು ಇಷ್ಟಪಟ್ಟವನು. ಗಾಂಧೀಜಿಯಂತೆ ಲಾಲ್‌ಬಹದ್ದೂರರಂತೆ, ಜೆ.ಪಿಯಂತೆ-ಸರಳವಾಗಿ ಜೀವನ ನಡೆಸುವುದು ನನ್ನ ಆದರ್ಶ. ಬಸ್ಸಿನಲ್ಲಿ ಪ್ರಯಾಣ ಅನಿವಾರ್ಯ. ಸಾಲಮಾಡಿ ಕಾರುತೆಗೆದುಕೊಂಡು ಓಡಾಡುವ ಚಪಲ ನನ್ನ ಸ್ವಭಾವಕ್ಕೆ ಹಿಡಿಸುವಂಥದಲ್ಲ! ಕಾರು ಇಟ್ಟುಕೊಳ್ಳುವುದು 'ಲಕ್ಸುರಿ" ಅಂತಲೂ ನನಗೆ ಅನ್ನಿಸಿಲ್ಲ .. ಬೆಂಗಳೂರಿನಂಥ ಬೃಹತ್ ನಗರದಲ್ಲಿ ಇಲ್ಲಿ ಸ್ವಂತ ವಾಹನ ಇದ್ದರೆ ಸಮಯದ ಉಳಿತಾಯವಾಗುತ್ತದೆ. ಆದರೆ ನನ್ನ ಪರ್ಸಿಗೆ ಅದು ಎಟುಕಿಲ್ಲ ಅಷ್ಟೇ ಅದಕ್ಕಿಂತ ಮೂಲ ಅಗತ್ಯಗಳು ಬೇಕಾದಷ್ಟು ಇವೆ. ಮೊದಲು ನನಗೆ ಅದೇ ಸಾಧ್ಯವಾಗಿಲ್ಲ ..ಬೆಟ್ಟದಷ್ಟು ಕೀರ್ತಿ ಇದೆ! ಅದರಿಂದ ವ್ಯಾವಹಾರಿಕವಾಗಿ ಏನೂ ಪ್ರಯೋಜನ ಪಡೆದುಕೊಳ್ಳಲಿಲ್ಲ, ಸರಳತೆ ನನ್ನ ಜಾಯಮಾನ, ಪ್ರಾಮಾಣಿಕತೆ ಶುದ್ಧ ಅಭಿರುಚಿ ನನ್ನ ಬಾಳಿನ ಉಸಿರು. ಅದೇ ನನ್ನ ಬಾಳಿನ ಅವಿಭಾಜ್ಯ ಅಂಗ.

***ನಿಮ್ಮದು ಪ್ರೇಮ ವಿವಾಹವಾದ್ದರಿಂದ ಅಂದು ನಿಮ್ಮ ಹಿರಿಯರ ಪ್ರತಿಕ್ರಿಯೆ ಹೇಗಿತ್ತು?***

ಪ್ರೇಮ ವಿವಾಹವಾದ್ದರಿಂದ ಹಿರಿಯರ ಪ್ರಬಲ ವಿರೋಧವಿತ್ತು.ನಮ್ಮ ನಮ್ಮ ಹಿರಿಯರಿಗೆ ಜಾತಿ ಪದ್ಧತಿಯೇ ಮುಖ್ಯವಾದ ಹಾಗೆ ಕಾಣುತ್ತಿತ್ತು. ಅವರೆಲ್ಲಾ ಪಂರಂಪರಾನುಗತ ಪದ್ಧತಿಗಳನ್ನು ಒಪ್ಪಿಕೊಂಡರು; ಆದ್ದರಿಂದ ನನ್ನ ದೃಷ್ಟಿಯಲ್ಲಿ ನಮ್ಮ ಹಿರಿಯರು Connservative ನಾನು ಹಾಗೆ ಎಂದೂ ಯೋಚಿಸಿದವನಲ್ಲ, ನಾನು ಅಂದೂ ಅಷ್ಟೇ ಇಂದೂ ಅಷ್ಟೆ ಮುಕ್ತನಾಗಿ ಯೋಚಿಸಿದವನು. ಮುಕ್ತ ಮನಸ್ಸು ಮುಖ್ಯ, ಮೂಲತಃ ನಾವು ಮಾನವರು ಅಷ್ಟು ಬಿಟ್ಟರೆ ಉಳಿದೆಲ್ಲಾ ಅರ್ಥವಿಲ್ಲದದು! "ಶ್ರೇಣೀಕೃತ ಸಮಾಜ" ನಮ್ಮನ್ನು ಪ್ರಗತಿಯತ್ತ ಕೊಂಡಯ್ಯುತ್ತದೆ.

ಹೀಗಾಗಿ ನಮ್ಮ ಹಿರಿಯರು ಎರಡು ಮನೆಯವರು ನಮ್ಮ ಮದುವೆ ವಿಷಯ ಪ್ರಸ್ತಾಪ ಆದಾಗ ಕೆಂಡಮಂಡಲವಾದರು. ಉರಿಸಾಲಿಗೆಯವರಾದರು; ನಮ್ಮನ್ನು ವಿರೋಧೀ ಬಣದಲ್ಲಿರಿಸಿದರು ಇದರಿಂದ ನಾನು ನನ್ನ ಹೆಂಡತಿ ೧೦-೧೨ವರ್ಷ ಬಹಳ ಕಷ್ಟಪಟ್ಟೆವು.

***ಪ್ರತಿಯೊಬ್ಬ ಯಶಸ್ವೀ ವ್ಯಕ್ತಿಯ ಹಿಂದೆ ಹೆಣ್ಣಿನ ಕೈವಾಡ ಇರುತ್ತದೆ" ಎಂಬ ಮಾತಿದೆ; ನಿಮ್ಮ ಜೀವನಕ್ಕೂ ಈ ಮಾತು ಅನ್ವಯಿಸುತ್ತದೇನು? ಆ ಬಗ್ಗೆ ಸ್ವಲ್ಪ ವಿವರವಾಗಿ ಹೇಳುತ್ತೀರಾ ಸಾರ್?***

ಖಂಡಿತಾ ಆ ಪಾಶ್ಚಾತ್ಯರ ಮಾತು ಸತ್ಯ Behind every successful man there is an woman ಎಂಬ ಹೇಳಿಕೆ ನನ್ನ ಬಾಳಿಗೂ ಅನ್ವಯಿಸುತ್ತದೆ.

ನಾನು ಬಹಳ ಅದೃಷ್ಟವಂತ ವಾಸು; ನಾನು ಬಿ.ಎ (ಆನರ್ಸ) ಅಂತಿಮ ವರ್ಷದ ವಿದ್ಯಾರ್ಥಿಯಾಗಿದ್ದಾಗಲೇ ಒಬ್ಬ ಪ್ರತಿಭಾವಂತ ಹುಡುಗಿ ಪರಿಚಯ ಆಯ್ತು. ಆಕೆ ವಾಚಾಳಿಯೂ ಹೌದು; ವಾಗ್ಮಿಯೂ ಹೌದು; ಕವಯತ್ರಿಯೂ ಹೌದು; ಒಳ್ಳೆ ಬರಹಗಾರ್ತಿಯೂ ಹೌದು ಅಂಥ ಸೂಕ್ಷ್ಮ ಮನಸ್ಸಿನ ಸೃಜನಶೀಲ ಹುಡುಗಿ ನನ್ನ ಬಾಳಸಂಗಾತಿಯಾದಳು. ಆಕೆನೇ ಶ್ರೀಮತಿ ಕೆ. ರಾಜೇಶ್ವರಿ. ಈ ಸಂಸಾರ ಎನ್ನುವುದಿದೆಯಲ್ಲ ಅದರ ಎಳ್ಳಷ್ಟೂ ತೊಂದರೆಯನ್ನು ನನ್ನ ತಲೆಗೆ ಹಚ್ಚದೆ ಎಲ್ಲಾ ನಿಭಾಯಿಸಿಕೊಂಡು ಹೋಗುವವಳು ನನ್ನ ಶ್ರೀಮತೀನೇರಿ ಮದುವೆಯಾದ ಪ್ರಾರಂಭದ ಏಳೆಂಟು ವರ್ಷ ನಾವು ಪಟ್ಟ ಬವಣೆ ಅಷ್ಟಿಷ್ಟಲ್ಲ ಆಗೆಲ್ಲಾ ನನ್ನ ಸಹಧರ್ಮಿಣಿ ನನಗೆ ಒಂದಿಷ್ಟು ಗಾಸಿಯಾಗದಂತೆ ಸಂಸಾರ ನಡೆಸಿಕೊಂಡು ಹೋಗುವ ದಿಟ್ಟೆ ಆಕೆ. ಅವಳೇ ನನ್ನ ಸ್ಫೂರ್ತಿ.

***ವೈವಾಹಿಕ ಜೀವನ ಬಗ್ಗೆ ನಿಮ್ಮ ಅಭಿಪ್ರಾಯವೇನು?***

ಗಂಡು-ಹೆಣ್ಣು ಪರಸ್ಪರ ಅರಿಯಬೇಕು; ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಂಡಾಗಲೇ ಅರ್ಥಪೂರ್ಣವಾದ ಬದುಕು; ಸಂಸಾರ. ಎರಡು ಮನಸ್ಸುಗಳ ಹೊಂದಾಣಿಕೆ ಇಬ್ಬರ ಮನೋಧರ್ಮ ಎಷ್ಟೆಷ್ಟು ಅನ್ಯೋನ್ಯವಾಗಿ ಅರಿತು ಬೆರೆತು ಬದುಕು ಸಾಗಿಸಲು ಅನುವಾಗುತ್ತೆ ಅಷ್ಟಷ್ಟು ಪ್ರೀತಿ ಬಂಧ ಗಟ್ಟಿಯಾಗುತ್ತೆ.

***ಐವತ್ತರ ಮೆಟ್ಟಲೇರುತ್ತಿರುವ ಈ ಸಂದರ್ಭದಲ್ಲಿ ನಿಮ್ಮ ಮುಂದಿನ ಗುರಿಯೇನು?***

ಒಳ್ಳೆಯ ಬದುಕನ್ನು ನಡೆಸುವುದು; ಪ್ರಾಮಾಣಿಕವಾಗಿರುವುದು; ವಿದ್ಯಾರ್ಥಿಗಳಿಗೆ ಉತ್ತಮ ತಿಳುವಳಿಕೆ ನೀಡಬಲ್ಲ ಮೌಲಿಕ ಬೋಧನೆ ನೀಡುವುದು, ಬಿಡುವಿನ ಸಂದರ್ಭದಲ್ಲಿ ಜಗತ್ತಿನ ಬೇರೆ ಬೇರೆ ಸಾಹಿತ್ಯವನ್ನು (ಇಂಗ್ಲೀಷ್ ಅನುವಾದಗಳ ಮೂಲಕ) ಓದುವುದು; ಎಲ್ಲಕ್ಕಿನ್ನ ಮುಖ್ಯವಾಗಿ ಸಾರ್ಥಕವಾದದ್ದನ್ನು ಬರೆಯುವುದು ಈಗಾಗಲೇ ನಾನು ಕೆಲವು ತಿಂಗಳಿಂದ "ಸ್ವಾತಂತ್ರ್ಯ ಸೂರ್ಯ" ಎಂಬ ಮಹಾಕಾವ್ಯ ಬರೆಯುತ್ತಿದ್ದೇನೆ. ಅದನ್ನು ಬರೆದು ಮುಗಿಸುವುದು, ಒಮ್ಮೆ ಜಗತ್ತನ್ನು ಸುತ್ತಿ ಬರಬೇಕೆಂಬ (ಪ್ರವಾಸ) ಪ್ರಬಲವಾದ ಆಸೆ ಇದೆ; ನೋಡಬೇಕು ಸಮಯ ಒದಗಿ ಬಂದರೆ, ನನ್ನೆಲ್ಲ ಸ್ಥಿತಿ ಗತಿ ಸುಧಾರಿಸಿದರೆ ಗೋಳದ ಮೇಲೊಂದು ಸುತ್ತ ತಿರುಗಿ ಬರುವಾಸೆ. ನಿವೃತ್ತಿಯ ನಂತರ ನನ್ನೆಲ್ಲಾ ಬರವಣಿಗೆಯನ್ನು ಸಮರ್ಪಕವಾಗಿ , ಸಂತಯಿಸಿ ಗದ್ಯ ಕೃತಿಗಳನ್ನು ಪ್ರಕಟಿಸುವಾಸೆ ಇದೆ. ಸಾಕಷ್ಟು ನನ್ನ ಕವಿತೆಗಳು ಬೇರೆ ಬೇರೆ ಲೇಖಕರಿಂದ ಆಂಗ್ಲ ಭಾಷೆಗೆ

ಅನುವಾದವಾಗಿದೆ; ಅದನ್ನು ಒಂದು ಕೃತಿರೂಪದಲ್ಲಿ ಹೊರತರುವ ಬಯಕೆ ಕೂಡ ಇದೆ. ನೊಡೋಣ ಎಲ್ಲಾ ಹೇಗಾಗುತ್ತೆ.

*****

ಹೃದಯ ಗುಡಿಯಲಿ ಇದ್ದಾನೆ ಒಬ್ಬ ಅರ್ಜುನ ಜೋಗಿ
ಬಾಳ ನೀಡಲು ಅವನೂ ಬೀಸಬೇಕು ರಾಗಿ -
ಕಲ್ಲುಮುಳ್ಳ ದಾರಿಯಲಿ ಎಂಥವರೂ ಏಗಿ ಏಗಿ
ಮರೆಯಾಗುತ್ತಾರೆ ಕೊನೆಗೆ ನಡುಬಗ್ಗಿ - ಮಣ್ಣಿನ ಮಗ.

* * *

ಯಮನ ಆಲೆಯ ಮನೆಯ ಕಬ್ಬುಕಾಣೋ ನೀನು
ಯಾರನೂ ಬಿಡದೆ ಕಬ್ಬನ್ನರೆವಂತೆ ಅರೆವನವನು-
ಯಾರೂ ಹೆಚ್ಚಲ್ಲ, ಯಾರೂ ಕಮ್ಮಿಯಲ್ಲ, ಅವನ ಲೆಕ್ಕವೊಂದೇ
ಕರೆ ಬಂದಗೆಲ್ಲರೂ ಕರಗಲೇ ಬೇಕೋ - ಮಣ್ಣಿನ ಮಗ.

* * *

ಹೆಜ್ಜೆ ಇಟ್ಟಷ್ಟೂ ಇದ್ದದ್ದೇ ಪಾಡು
ಗೆಜ್ಜೆ ಪಟ್ಟಿಕೋ, ಮುಕ್ತವಾಗಿ ಹಾಡು
ಸೆಜ್ಜೆ ಮರೆತಷ್ಟೂ ಕಲಾಸಕ್ತಿ ಬೀಡು
ಬಿಜ್ಜೆ ಮರೆತಷ್ಟೂ ಕಲಾಸಕ್ತಿ ಬೀಡು
ಬಿಜ್ಜೆ ಇರೆ ದುಗುಡ ಹೊರೆ ಹಗುರ - ಮಣ್ಣಿನ ಮಗ.



# ದೊರಂಗೌ ಅವರ
# ಸ್ನೇಹ
# ಸಾಹಿತ್ಯ ಸೌರಭ

# ದೊಡ್ಡರಂಗೇಗೌಡರನ್ನು ನಾನು ಕಂಡಂತೆ

✍ ವಿಜಯ ಭಾಸ್ಕರ
ಸಂಗೀತ ನಿರ್ದೇಶಕರು

ಶ್ರೀ ದೊಡ್ಡ ರಂಗೇಗೌಡರ ಬದುಕು ಮತ್ತು ಅವರ ಕವಿತೆ ಹಂತ ಹಂತವಾಗಿ ಬೆಳದ ಬೆಳಿವಣಿಗೆಯನ್ನು ಅವರ ಸೃಷ್ಟಿಯಲ್ಲಿ ಕಾಣಬಹುದು. ನವೋದಯ ಕವಿಗಳ ತಲೆಮಾರಿನ ಕವಿಗಳಲ್ಲಿ ಗಮನಾರ್ಹ ಸ್ಥಾನವನ್ನುಗಳಿಸಿಕೊಂಡು ಜನಪ್ರಿಯವಾಗಿರುವವರು. ಇವರ ಕವನ ಕೃಷಿಯಲ್ಲಿ ಎದ್ದುಕಾಣುವ ಬೆಳಸು. ಅಲ್ಲಿ, ಮೂಡಿನಿಂತಿರುವ ಜೀವನೋತ್ಸಾಹ ಹಾಗೂ ಸೌಂದರ್ಯಪ್ರಿಯತೆ ಅದನ್ನು ಬಿಂಬಿಸಲು ಕವಿ ಭಾಷೆಯನ್ನು ಹೊಳೆದಂತೆ ಸುಕ್ಕು ಸಿಕ್ಕಿಲ್ಲದೆ ಓಡಿಸುವ ಪದ ಗಮನಾರ್ಹವಾದ ಅಂಶ. ತನ್ನದೇ ಆದ ತನ್ನ ಹಳ್ಳಿ ಜೀವನದ್ದೇ ಆದ ಅನುಭವಗಳನ್ನು ತನ್ನದಾಗಿಸಿಕೊಳ್ಳುತ್ತಾ ತಾನು ಕಂಡುಂಡ ನೋವು ನಲಿವುಗಳನ್ನು ಗ್ರಾಮೀಣ ನುಡಿಗಟ್ಟಿನಲ್ಲಿ ಎರಕ ಹೊಯ್ಯುತ್ತಾ ವಾಗರ್ಥಗಳ ಸಾಮರಸ್ಯ ಕಾಣಲು ಪ್ರಯತ್ನಿಸಿದ್ದು ಅನುಭವಕ್ಕೆ ಬರುತ್ತದೆ.

ಪ್ರಕೃತಿಯ ರಮಣೀಯತೆಯನ್ನು ಮಾನವ ಪ್ರಕೃತಿಯೊಡನೆ ಸಮೀಕರಿಸಿ ಚಿತ್ರಿಸುವ ಕಲೆ ಸಂಸಾರ ಜೀವನದ ಸರಸ-ವಿರಸ ಹಂಬಲ ಆವರ್ಶ, ಮಿಡಿತ-ತುಡಿತಗಳಿಗೆ ನುಡಿಕೊಡುವುದು ಒಂದು ಹಂತದಲ್ಲಿ ಅನಿವಾರ್ಯವಾಗುತ್ತದೆ ಆ ಅನಿವಾರ್ಯ ತೀವ್ರವಾದಾಗ ಮೂಡಿ ಬಂದ ಕವನಗಳನ್ನು ಇವರಲ್ಲಿ ಕಂಡಿದ್ದೇನೆ. ಏನೇ ಬರೆದರೂ ಈ ಕವಿಯಲ್ಲಿರುವ ಒಂದು ಮುಖ್ಯಗುಣ ಅನುಭವದ ಜೀವಂತ ಮಿಡಿತ. ಆದುದರಿಂದ ಸಂವಹನ ಸ್ಪಷ್ಟತೆ ಮೂಡಿ ಬರುತ್ತದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹುಟ್ಟಿ ಕೊಂಡಿರುವ ಹೊಸ ಹೊಸ ಪ್ರಕಾರಗಳನ್ನು ಭಾವಗೀತೆಯೂ ಒಂದು. ಇದು ಕವಿಯು ಎದುರಿಗಿದ್ದ ಜಗತ್ತು ಅದರ ಒಳತಿರುಳನ್ನು ಕಾಣುವ ಒಳಗಣ್ಣು ಜಗದರಹಸ್ಯವನ್ನೇ ಕುರಿತು ವಿಚಾರ ಪರಂಪರೆಯ ಮಾಲೆಗಳನ್ನು ಹೆಣೆಯುವ ಬುದ್ಧಿಶಕ್ತಿ ಹಾಗೂ ಜಗವ ರೀತಿ ನೀತಿಗಳಿಂದ ಸ್ಪಂದನ ಗೊಂಡು ಮಿಡಿಯುವ ಭಾವನಾಶಕ್ತಿ-ಇವೆಲ್ಲವುಗಳು ಕವಿಯ ವ್ಯಕ್ತಿತ್ವದಲ್ಲಿ ಕೂಡಿಕೊಂಡು ಶಬ್ದಸೃಷ್ಟಿಯಲ್ಲಿ ರೂಪುಗೊಂಡಾಗ ಭಾವಗೀತೆಯು ಹುಟ್ಟುವುದು. ಮೇಲಾಗಿ, ಉಳಿದ ಸಾಹಿತ್ಯ ವಿಭಾಗಗಳಿಗಿಂತ ಭಾವಗೀತೆಯಲ್ಲಿ ವ್ಯಕ್ತಿತ್ವ ಒಡಮೂಡುವದು ಹೆಚ್ಚು. ಆದ್ದರಿಂದ ಭಾವಗೀತೆಯಲ್ಲಿ ಲೇಖಕನ ದರ್ಶನ, ಭಾವ ಮೊದಲಾದ ಮಾನಸಿಕ ಪರಿಶುದ್ಧತೆಯಿಂದ ರೂಪಿಗೊಂಡು ವ್ಯಕ್ತಿತ್ವಕ್ಕೇನೆ ಮೊದಲಸ್ಥಾನ.

ಈ ವ್ಯಕ್ತಿ ಗುಣವು ಶ್ರೀ ದೊಡ್ಡರಂಗೇಗೌಡರ ಭಾವಗೀತೆಗಳಲ್ಲಿ ಸ್ಪಷ್ಟವಾಗಿ ನಮಗೆ ನೋಡಲು ಸಿಕ್ಕುವುದು ಇವರ ಕವಿತೆಗಳ ಸುಗಮ ಸಂಗೀತಕಾರರು ಕನ್ನಡನಾಡಿನ ಉದ್ದಗಲಕ್ಕೂ ಹಾಡಿ ಸಹಸ್ರಾರು ಸಾಹಿತ್ಯ ಪ್ರೇಮಿಗಳನ್ನು ಸಂತೋಷಪಡಿಸಿದ್ದಾರೆ ಹೀಗೆ ಇವರ ಕಾವ್ಯ ಪರಿಶ್ರಮ ವಿಸ್ತಾರವಾಗಿ ಹರಡಿ ಸತ್‌ಫಲಗಳನ್ನು ಕೊಟ್ಟಿದೆ.

ನನಗೆ ಶ್ರೀ ದೊಡ್ಡರಂಗೇಗೌಡರ ಪರಿಚಯವಾದದ್ದು ಅಕ್ಟೋಬರ್ ೧೯೭೭ರಲ್ಲಿ. ಆಗ ನಾನು ಮದರಾಸಿನಲ್ಲಿ "ಮಾಗಿಯ ಕನಸು" ಚಿತ್ರಕ್ಕೆ ಸಂಗೀತ ರಚನೆಯ ಕಾರ್ಯದಲ್ಲಿ ನಿರತನಾಗಿದ್ದೆ. ಆಗ ನನ್ನ ಮಿತ್ರರು ಮತ್ತು ಚಿತ್ರದ ನಿರ್ದೇಶಕರಾಗಿದ್ದ ಶ್ರೀರವಿಯವರು ಮೊದಲಿಗೆ ಶ್ರೀ ದೊಡ್ಡರಂಗೇಗೌಡರನ್ನು ಪರಿಚಯ ಮಾಡಿದರು.

ಗೌಡರ ಮಾತಿನಲ್ಲಿ ನಯ ವಿನಯಗಳು ಹಸುಮಗುವಿನಂತೆ ಮುಗ್ಧ ಹೃದಯವನ್ನು ಕಂಡುಕೊಂಡೆ ಶ್ರೀ ರವಿಯವರು ಇವರು ಈ ಚಿತ್ರಕ್ಕೆ ಕೆಲವು ಕವಿತೆಗಳನ್ನು ಬರೆಯುತ್ತಾರೆಂದು ತಿಳಿಸಿ ಚಿತ್ರದಲ್ಲಿ ಹಾಡು ಬರುವ ಸನ್ನಿವೇಶ ವಿವರಿಸಿದರು ಸಾವಧಾನದಿಂದ ಆಲಿಸಿ ಯಾವ ಕಸಿವಿಸಿ ಇಲ್ಲದೆ ಗೌಡರು ಸ್ವಲ್ಪ ಸಮಯ ಯೋಚಿಸಿ ಅವರು ನನ್ನ ಹತ್ತಿರ ಬಂದು ಮೆದುಮಾತಿನಲ್ಲಿ ಪಲ್ಲವಿಯನ್ನು ಹೇಳಿ ಮತ್ತೆ ಬರೆದು ಕೊಟ್ಟಪಲ್ಲವಿ""ಬಂದಿದೆ ಬದುಕಿನ ಬಂಗಾರದ ದಿನ, ಮದುವೆಯೇ ಮನುಜನ ಮೊದಲ ಬಂಧನ" ಪದಗಳ ಸೊಗದಲ್ಲಿ ಅರ್ಥ ಬೆರತು ಕವಿತೆ ಉದಯವಾಗಿತ್ತು ಈ ಪಲ್ಲವಿ ಎಲ್ಲರಿಗೂ ಮೆಚ್ಚಿಗೆಯಾಯಿತು. ಆಗ ಅವರ ಕಳೆ ಮುಖದಲ್ಲಿ ನೆಮ್ಮದಿ ಕಂಡಿತು ತುಟಿಯಲ್ಲಿ ತುಳುಕುವ ನಸುನಗೆ ಮೂಡಿ ಬಂತು.

ಇವರಿಗೆ ಚಿತ್ರದ ಸನ್ನಿವೇಶವನ್ನು ಕೇಳಿದ ಕೂಡಲೆ ಗ್ರಹಿಸುವ ಶಕ್ತಿ ಉದಾತ್ತ ಕಲ್ಪನೆ, ಹೇಳುವಲ್ಲಿ ಹೃದಯಂಗಮ ಮತ್ತೆ ಸಹಜ ಸ್ಫೂರ್ತಿ, ಸ್ವಾಯನುಭೂತಿಗೆ ಸಲ್ಲುವ ಶಬ್ಧ ಶಕ್ತಿ ಮತ್ತು ನೇರ ಹಾಗೂ ಸರಳ ಬರವಣಿಗೆಯಲ್ಲಿ ಗಮನ ಸೆಳೆಯುವ ಪ್ರಧಾನ ಅಂಶ ಹೊಂದಿರುವರೆಂದು ಗ್ರಹಿಸಿದೆ.

ಯಾವುದೇ ಸೃಜನ ಶೀಲ ವ್ಯಕ್ತಿಗೆ ಅವಕಾಶಗಳು ಸಿಗಬೇಕು. ಆಗ ಆತನ ಪ್ರತಿಭೆ ಹೆಚ್ಚು ಪ್ರಕಾಶಿಸಲು ಅನುವಾಗುತ್ತದೆ. ಸಿಕ್ಕ ಅವಕಾಶಗಳು ವ್ಯಕ್ತಿತ್ವವನ್ನು ಪ್ರತಿಭೆಯನ್ನು ಒರೆಹಚ್ಚಿನೋಡಲು ಸವಾಲಾಗುವಂತಿರಬೇಕು ಆಗ ಅಂಥ ಸೃಜನ ಸಂಪನ್ನನ ಒಳಗಿನೊಳಗಿನ ಕಲೆ ನಿಚ್ಚಳವಾಗಿ ಪ್ರಕಟವಾಗಿ ಜನಮನಕ್ಕೆ ಕಲಾತ್ಮಕ ಕೊಡುಗೆಯ ರಸದೌತಣ ಸಿಕ್ಕೀತು ಇಬ್ಬರೂ ಸೇರಿ ಎಷ್ಟೋ ಚಿತ್ರಗಳಿಗೆ ರಚಿಸಿ ಹಾಡುಗಳು ಉನ್ನತ ಮಟ್ಟದಲ್ಲಿದ್ದರೂ ಬಹಳಷ್ಟು ಜನಪ್ರಿಯತೆಯನ್ನು ಗಳಿಸಿದೆ. ಇವರ ಕವಿತೆಗಳಲ್ಲಿ ಅಶ್ಲೀಲ (Double meaning), ದ್ವಂದ್ವಾರ್ಥಶಬ್ದಗಳ ಮೋಹಕ್ಕೆ ಕಟ್ಟು ಬಿದ್ದವರಲ್ಲ. ನನ್ನೊಂದಿಗೆ ಮಾತ್ರವಲ್ಲ ಎಷ್ಟೋ ಸಂಗೀತ ನಿರ್ದೇಶಕರೊಂದಿಗೆ ರಚಿಸಿರುವ ಗೀತೆಗಳನ್ನು ಕೇಳಿ ಮೆಚ್ಚಿ ಆನಂದಿಸಿದ್ದೇವೆ. ಇವರ ಚಿತ್ರಗೀತೆಗಳು ಜನನುಡಿಗೆ ಜೀವಕೊಟ್ಟು ಚಿತ್ರ ಕವಿತೆಗೆ ಒಂದು ದೊಡ್ಡ ಸ್ಥಾನವನ್ನುಗಳಿಸಿ ಕೊಟ್ಟಿದ್ದೆ.

ಕೇವಲ ಚಿತ್ರಗಳಿಗಷ್ಟೇ ಅಲ್ಲ, ಚಿತ್ರ ಜಗತ್ತಿನಾಚೆಯೂ ಇವರ ಕವನಗಳನ್ನು ಆಕಾಶವಾಣಿಯ ಸುಗಮ ಸಂಗೀತಗಳಲ್ಲಿಯೂ ಅಳವಡಿಸಿಕೊಂಡಿದ್ದೇನೆ ಹಾಗೆಯೇ

"ಕರ್ನಾಟಕ ಯೂತ್ ಕಾಯರ್' ಸುಸಂಗೀತ ಮೇಳಕ್ಕೂ ಎಷ್ಟೋ ದೇಶಾಭಿಮಾನದ ಬಗ್ಗೆ ಬರೆದ ಕವನಗಳು ಜನರನ್ನು ರಂಜಿಸಿದೆ.

ಶ್ರೀಮತಿ ಪದ್ಮಿನಿ ರಾಮಚಂದ್ರನ್‌ರವರು ಪ್ರಖ್ಯಾತ ಹಿರಿಯ ಪ್ರೌಢ ಪರಿಣಿತ ನೃತ್ಯ ಕಲಾವಿದೆ ಅವರ "ನಾದಪ್ರೀಯ" ಸಂಸ್ಥೆ ದೂರದರ್ಶನಕ್ಕಾಗಿ "ಹಿಮಶ್ವೇತಾ" ಎಂಬ ಮಕ್ಕಳ ನೃತ್ಯ ನಾಟಕ ರೂಪಕವನ್ನು ೧೩ ಘಟನಾವಳಿಗಳಲ್ಲಿ ಪ್ರಸಾರಕ್ಕೆ ಅಣಿಗೊಳಿಸಲು ಸಂಗೀತಕ್ಕಾಗಿ ನನ್ನನ್ನು ಸಂಪರ್ಕಿಸಿದರು. ಇಂಥ ರೂಪಕಗಳಲ್ಲಿ ಸಂಗೀತದ ಪಾತ್ರಹಿರಿಯದಾದರೂ ಸಾಹಿತ್ಯ ಕೂಡ ಸಹಕಾರಿಯಾಗಿರಬೇಕೆಂಬುದು ಬೇರೆ ಹೇಳಬೇಕಾಗಿಲ್ಲ. ಇದಕ್ಕೆ ಸಾಹಿತ್ಯ ರಚನೆಯನ್ನು ಒದಗಿಸಿದವರು ಶ್ರೀ ದೊಡ್ಡರಂಗೇಗೌಡರು.

ಈ ನೃತ್ಯ ನಾಟಕ ರೂಪದಲ್ಲಿ ಸುಮಾರು ೩೪ ಹಾಡುಗಳಿದ್ದವು. ಮಧ್ಯೆ ಮಧ್ಯೆ "ಶೂಲ್ಕಟ್ಟು" ಗಳು ಮತ್ತು "ಸ್ವರಕಟ್ಟು" ಗಳು ಇದ್ದವು. ಈ ರೂಪಕದಲ್ಲಿ ಸಂಗೀತಲಯದಿಂದಲೇ ದೃಶ್ಯದಿಂದ ದೃಶ್ಯಕ್ಕೆ ಸಂಬಂಧವನ್ನು ಸೃಷ್ಟಿಸ ಬೇಕಾಗುತ್ತದೆ ಭರತನಾಟ್ಯ ಕೂಚಿಪುಡಿ, ಒಡಿಸ್ಸಿ, ಕಥಕ್, ಮತ್ತು ಕಥಕಲಿ ನೃತ್ಯ ರೀತಿಯನ್ನು ಉಪಯೋಗಿಸುವುದರಿಂದ ಈ ಎಲ್ಲಾ ನೃತ್ಯ ಕಲೆಗಳಿಗೂ ಒತ್ತುಕೊಟ್ಟು ರೂಪಿತವಾಗಬೇಕಾಗಿತ್ತು. ಒಂದೊಂದು ನಾಟ್ಯ ರೀತಿಯನ್ನು ವಸ್ತುವನ್ನಾಗಿ ಮಾಡಿಕೊಂಡು ಪ್ರತಿಯೊಂದು ಹಾಡನ್ನು ವೈವಿಧ್ಯ ಪೂರ್ಣವಾಗಿ ಮಿಗಿಲಾದ ಕಲ್ಪನಾ ಶಕ್ತಿಯಿಂದ ಸಾಹಿತ್ಯವನ್ನು ರಚಿಸಿ ಪೂರ್ಣವಾಗಿ ಮಿಗಿಲಾದ ಕಲ್ಪನಾ ಶಕ್ತಿಯಿಂದ ಸಾಹಿತ್ಯವನ್ನು ರಚಿಸಿ ಕೊಟ್ಟರು.

ಅವರ ಸಾಹಿತ್ಯದಿಂದಲೇ ನನಗೆ ಸಹಜ ಸ್ಫೂರ್ತಿ ದೊರಕಿತು. ನಾಟ್ಯ ರೂಪಕವಾದುದರಿಂದ ಸಂಗೀತದ ತಾಳಲಯಕ್ಕೆ ಬರಬೇಕು ಕೆಲವು ಸಾಹಿತ್ಯದ ಸಾಲುಗಳು ಸರಿಹೋಗದಾಗ ಸ್ವಲ್ಪವೂ ಬೇಜಾರು ಪಡದೆ ಹಸನ್ಮುಖದಿಂದ ಸಾಹಿತ್ಯವನ್ನು ತಿದ್ದಿ ತೀಡಿ ಕೂಡಲೇ ಬದಲಾಯಿಸಿ ಕೊಡುತ್ತಿದ್ದರು. ಈ ರೂಪಕ ಜನಪ್ರಿಯ ಮತ್ತು ಜನರಂಜಕವಾಗಿ ಎಲ್ಲರ ಮೆಚ್ಚುಗೆಯನ್ನು ಪಡೆಯಿತು. ನಮ್ಮಿಬ್ಬರ ಸಮ್ಮಿಳನದ ಪ್ರಯೋಗ ಕುತೂಹಲವನ್ನು ಉಳಿಸಿಕೊಂಡಿತು.

ಶ್ರೀಮಾನ್ ದೊಡ್ಡರಂಗೇಗೌಡರು ಬಹುಕಾಲದಿಂದ ಮಾಡುತ್ತಿರುವ ಉದಾರವಾದ ಕನ್ನಡ ಭಾಷೆ ಸೇವೆಗೆ ಅಂದರೆ ಅವರ ಸಾಹಿತ್ಯ ಕಾಣಿಕೆ, ಸುಗಮ ಸಂಗೀತದ ಸಾಧನೆ ಚಿತ್ರರಂಗಕ್ಕೆ ಅವರ ಕೊಡುಗೆ ಮಹತ್ತರವಾದುದು. ಕನ್ನಡ ಭಾಷಾಭಿಮಾನಿಗಳು ಅವರನ್ನು ಗೌರವಿಸಿ ಅವರಿಗೆ ಉಚಿತವಾದ ಸಂಭಾವನೆ ಕೊಡಬೇಕೆಂಬ ಉದ್ದೇಶಮಾಡಿರುವುದು ಸ್ತೋತ್ರಾರ್ಹವಾಗಿದೆ.

* * *

ಕೂಡಿ ಕಳೆಯುವುದೆಲ್ಲ ಬರಿ ಲೆಕ್ಕವೇನಲ್ಲ
ಕೂಡಿ ಕಳೆವ ಗಣಿತ ಮೀರಿಹುದು ಬದುಕೆಲ್ಲಾ;
ದೂಡಿದವರಿಗೆ ಗೊತ್ತು ಜೀವನದ ಉದ್ದಗಲ
ಜಾಡು ಸಿಕ್ಕಿದ ಗಣಿತ ಬಾಳೆಲ್ಲ - ಮಣ್ಣಿನ ಮಗ

# ನನ್ನ ಸಹಪಾಠಿ

✍ ಅಂದನೂರು ಶೋಭಾ

ನಲವತ್ತರ ಗಡಿಯಲ್ಲಿ ಕುಳಿತು ಇಪ್ಪತರ ಹರೆಯದ ನೆನಪನ್ನು ಮೆಲುಕು ಹಾಕಿದಾಗ, ಸೆಂಟ್ರಲ್ ಕಾಲೇಜಿನಲ್ಲಿ ೧೯೬೭-೬೨ರವರೆಗೂ ಕಳೆದು ಆ ಸುಂದರ ದಿನಗಳು ಮತ್ತೆ ಜೀವನದಲ್ಲಿ ಬರುವುದು ಅಸಾಧ್ಯವಾದರೂ, ನೆನಪು ನಂದಾದೀಪವಲ್ಲವೆ! ನೆನಪಿನಂಗಳದ ಸವಿ ನೆನಪು ಸದಾ ಹಚ್ಚ ಹಸಿರು.

೧೯೬೫ರಲ್ಲಿ ಮೊಟ್ಟ ಮೊದಲಿಗೆ ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್ ಪ್ರಾರಂಭಿಸಿದಾಗ ಇಡೀ ಬೆಂಗಳೂರಿನಲ್ಲಿ ಕಾಲೇಜುಗಳ ವಿದ್ಯಾರ್ಥಿಗಳಿಗೆ ಸೆಂಟ್ರಲ್ ಕಾಲೇಜು ಆಕರ್ಷಣೀಯ ಕೇಂದ್ರವಾಗಿತ್ತು. ನಮ್ಮದು ಮೂರನೆಯ ಬ್ಯಾಚು. ಅದುವರೆವಿಗೂ ಕಾಲೇಜಿನಲ್ಲಿ ಓದುತ್ತಿದ್ದವರಿಗೆ 'ಕನ್ನಡದಲ್ಲೂ ಆನರ್ಸ್ ಇದೆ ಎಂಬ ಸಂಗತಿಯೇ ತಿಳಿದಿರಲಿಲ್ಲವಂತೆ ನಾವುಗಳು ಸೇರಿದಾಗಲೇ ಕನ್ನಡ ವಿಭಾಗದ ಖ್ಯಾತಿ ಹೆಚ್ಚಿದ್ದು.

ನಮ್ಮ ಸಹಪಾಟಿಗಳಲ್ಲಿ ಪ್ರತಿಭಾವಂತರಿದ್ದರು, ಸೃಜನಶೀಲ ಬರಹಗಾರರಿದ್ದರು, ಒಳ್ಳೆಯ ಹಾಡುಗಾರರಿದ್ದರು ಇವರುಗಳ ನಡುವೆ ಇಬ್ಬರು ಕವಿವರ್ಯರಿದ್ದರು. ಅವರುಗಳೇ ದೊಡ್ಡರಂಗೇಗೌಡ ಹಾಗೂ ಸೂ. ರುದ್ರಮೂರ್ತಿಶಾಸ್ತ್ರಿ ದೊಡ್ಡರಂಗೇಗೌಡ ಅವರ ಮೊದಲ ಕವನ ಸಂಕಲನ "ಜಗಲಿ ಹತ್ತಿ ಇಳಿದು" ಬಿಡುಗಡೆಯಾಗಿದ್ದು ಸಹ ಬಿ.ಎ ಆನರ್ಸ್ ಓದುತ್ತಿದ್ದಾಗಲೇ. ನಮ್ಮ ಸಹಪಾಟಿಗಳಿಗೆಲ್ಲಾ ಗೌಡರನ್ನು ಕಂಡರೆ ತುಂಬಾ ಆದರೂ, ಅಭಿಮಾನ. ಎಲ್ಲರೂ ಸಂತೋಷ-ಸಂಭ್ರಮಗಳಿಂದಲೇ ಪುಸ್ತಕವನ್ನು ಕೊಂಡು ಓದಿದೆವು. ಶಿಕ್ಷಕರಿಗೂ ಪ್ರೀತಿ ಮಿತ್ರರಾದ ಶಿಷ್ಯರಾಗಿದ್ದೆವು.

ನಮ್ಮ ಸಹಪಾಟಿಗಳಲ್ಲಿ ದ್ವೇಷ ಅಸೂಯೆಗೆ ಅವಕಾಶವೇ ಇರಲಿಲ್ಲ. ಹಣ ಉಳ್ಳವರೂ ಇಲ್ಲದವರಿಗೆ ಖರ್ಚು ಮಾಡುತ್ತಿದ್ದರು.

ನಾವು ಪ್ರತಿವಾರವೂ ನಡಸುತ್ತಿದ್ದ ಸೆಮಿನಾರುಗಳಲ್ಲಿ ಪ್ರಬಂಧ ಮಂಡನೆ ನಂತರ ಚರ್ಚೆಯಲ್ಲಿ ಪ್ರತಿಯೊಬ್ಬರೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದೆವು. ಪ್ರಬಂದಗಳನ್ನೆಲ್ಲಾ ಒಟ್ಟಾಗಿ ಸೇರಿಸಿ ಕಟ್ಟುಕಟ್ಟಿಸಿ ಗ್ರಂಥಾಲಯದಲ್ಲಿಡಲು ಅವಕಾಶ ಮಾಡಿಕೊಟ್ಟೆವು. ಈ ರೀತಿಯ ಕಾರ್ಯಕ್ಕೆ ಪ್ರೇರಕರಾದವರು ದೊಡ್ಡರಂಗೇಗೌಡರು. ಹಾಗಯೇ ನಾವು ಕೆಲವು ಸಹಪಾಠಿಗಳು ಮಾತ್ರ ಕ್ಯಾಂಟೀನಿಗೆ ಭೇಟಿಕೊಡುವುದನ್ನು ತಪ್ಪಿಸುತ್ತಿರಲಿಲ್ಲ. ಹಾಗೆಯೇ ಸೆಂಟ್ರಲ್ ಕಾಲೇಜಿನ ಗ್ರಂಥಾಲಯದ ಬಳಿಯಲ್ಲಿ ಒಂದು ಕಟ್ಟೆಯೂ ಇತ್ತು (ಅಶ್ವತ್ಥ ಕಟ್ಟೆಯಲ್ಲಿ), ಆ ಕಟ್ಟೆಗಾಗಿ ಅನೇಕರು ಪೈಪೋಟಿ ನಡೆಸುತ್ತಿದ್ದೆವು. ಅಷ್ಟೇ ಅಲ್ಲ ಗ್ರಂಥಾಲಯದಲ್ಲಿ ಕುರ್ಚಿಗಳು ಸಾಕಾಗದೆ ಕಾದಿರಿಸುವ ಪರಿಪಾಠವನ್ನು ಅನೇಕರಿಗೆ ಕಲಿಸಿಕೊಟ್ಟೆವೆಂದರೆ ತಪ್ಪಾಗಲಾರದು.

ಹಾಗೆಯೇ ವಿಜ್ಞಾನದ ವಿಧ್ಯಾರ್ಥಿಗಳಿಗೆ ಮಾತ್ರ ಶೈಕ್ಷಣಿಕ ಪ್ರವಾಸದ ಅನುಕೂಲವಿತ್ತು. ಆ ಸಂದರ್ಭದಲ್ಲಿ ನಾವುಗಳ ಯೋಚಿಸಿ, ದೊಡ್ಡರಂಗೇಗೌಡ-ಸತ್ಯನಾರಾಯಣ ಇನ್ನು ಕೆಲವರು ಸೇರಿಕೊಂಡು ಉಪಕುಲಪತಿ ಅವರನ್ನು ಭೇಟಿಮಾಡಿ ಕಲಾವಿಭಾಗದವರು ಸಹ ಶೈಕ್ಷಣಿಕ ಪ್ರವಾಸ ಕೈಗೊಳ್ಳಬಹುದೆಂಬ ಆಜ್ಞೆ ಹೊರಡಿಸಲು ಕಾರಣರಾದೆವು.

ಮೊಟ್ಟ ಮೊದಲಿಗೆ ನಾವೆಲ್ಲರೂ ಸೇರಿ ಶೈಕ್ಷಣಿಕ ಪ್ರವಾಸ ಹೊರಟಿದ್ದು ಐಹೊಳೆ, ಪಟ್ಟದಕಲ್ಲು, ಬಾದಾಮಿ, ಗದಗ, ಚಿತ್ರದುರ್ಗ ಇತ್ಯಾದಿ ಐತಿಹಾಸಿಕ ಸ್ಥಳಗಳಿಗೆ. ಪಯಣದ ಹಾದಿಯುದ್ದಕ್ಕೂ ಬಸ್ಸಿನಲ್ಲಿ ಎರಡು ಪಂಗಡ ಮಾಡಿಕೊಂಡು ಪೈಪೋಟಿಯಂತೆ ಸ್ವರಚಿತ ಕವಿತೆಗಳನ್ನು ಹಾಡಲು ಗೌಡರು ಉತ್ತೇಜಿಸುತ್ತಿದ್ದರು. ಹೀಗಾಗಿ ಅನೇಕರಿಗೆ ಆ ಕ್ಷಣವೇ ಹಾಡು ಕಟ್ಟಲು ಅವಕಾಶ ಒದಗಿತ್ತು; ತಮಾಷೆ ಕೀಟಲೆಯ ಹಾಡುಗಳೊಂದಿಗೆ ಕೆಲವರು ಒಳ್ಳೆಯ ಭಾವಗೀತೆಗಳನ್ನು ಹಾಡಿದರು. ತಮ್ಮೊಂದಿಗೆ ಬಂದಿದ್ದ ಗುರುಗಳೆಂದರೆ ಡಾ.ಜಿ.ಎಸ್.ಶಿವರುದ್ರಪ್ಪ ಅವರು ಹಾಗೂ ಶ್ರೀ ಕೆ. ಮರಳಸಿದ್ದಪ್ಪ ಅವರು. ಡಾ.ಜಿ.ಎಸ್.ಎಸ್. ಅಂತೂ ವಿಧ್ಯಾರ್ಥಿಗಳ ಕಷ್ಟ ಸುಖಗಳನ್ನು ಅರಿತು ಎಲ್ಲಾ ರೀತಿಯ ನೆರವನ್ನು ನೀಡುತ್ತಿದ್ದರು. ಕುಟುಂಬದ ಹಿರಿಯರಂತಿದ್ದರು

ನಾವು ಎಂ.ಎ. ಓದುತ್ತಿದ್ದಾಗ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಐಚ್ಛಿಕ ವಿಷಯವಾಗಿ ಜಾನಪದ ಅಧ್ಯಯನವಿರಲಿಲ್ಲ. ಆಗ ಗೋಕಾಕ್ ಅವರು ಕುಲಪತಿಯಾಗಿದ್ದರು. ಕನ್ನಡ ವಿಭಾಗದ ಮುಖ್ಯಸ್ಥರ ಪ್ರೋತ್ಸಾಹದಿಂದ ದೊಡ್ಡರಂಗೇಗೌಡ, ಎಸ್.ಜಿ.ಸಿದ್ದರಾಮಯ್ಯ ಅವರ ನೇತೃತ್ವದಲ್ಲಿ ಕುಲಪತಿ ಅವರನ್ನು ಭೇಟಿಮಾಡಿದೆವು. ಆ ಶೈಕ್ಷಣಿಕ ವರ್ಷದಿಂದಲೇ 'ಜಾನಪದ ಅಧ್ಯಯನ' ಐಚ್ಛಿಕ ವಿಷಯವಾಗಿ ಜಾರಿಗೆ ಬಂದಿತು ಡಾ. ಚಂದ್ರಶೇಖರ ಕಂಬಾರ, ಡಾ|| ಕೆ ಮರಳಸಿದ್ಧಪ್ಪ, ಡಾ|| ತೆಂಗರಾಜು ಸುಬ್ಬರಾಜು ಮುಂತಾದವರು ಭೋದಿಸುತ್ತಿದ್ದರು.

ಒಟ್ಟು ೮ ಜನರು ಮಾತ್ರ 'ಜಾನಪದ'ವನ್ನು ಐಚ್ಛಿಕ ವಿಷಯವಾಗಿ ತೆಗೆದು ಕೊಂಡಿದ್ದೆವು. ಕೇವಲ ಪುಸ್ತಕಗಳನ್ನು ಓದಿ ಮಾತ್ರ ತಿಳಿಯಲಿಲ್ಲ. ಜನಪದ ಸಂಗ್ರಹಕಾರ ಅರಿಯಬೇಕಾಗಿದ್ದ ಕ್ಷೇತ್ರ ವಿಧಾನವನ್ನು ಸ್ವತಃ ಮಾಡಿಯೇ ಕಲಿತೆವು

ಬಿಜಾಪುರದಲ್ಲಿ ದೊಡ್ಡಾಟ, ಸಣ್ಣಾಟಗಳು ೧೦ ದಿನಗಳ ಕಾಲ ನಡೆಯಿತು. ಆಗ ನಾವುಗಳು ಅಂದರೆ ದೊಡ್ಡರಂಗೇಗೌಡರು, ಸಿದ್ದರಾಮಯ್ಯ, ಎನ್. ಜಿ. ಶ್ರೀನಿವಾಸ, ಚನ್ನಮ್ಮಾಜಿ, ಬಷೀರ್, ಭಾರತಿ, ತಿಲೋತ್ತಮೆ, ಉಮಾ, ಡಾ|| ಚಂದ್ರಶೇಕರ ಕಂಬಾರ, ಡಾ.ಕೆ. ಮರಳಸಿದ್ಧಪ್ಪ ಎಲ್ಲರೂ ಸೇರಿ ಹೋಗಿದ್ದವು. ರಾತ್ರಿಯೆಲ್ಲ ನಾಟಕಗಳನ್ನು ತಪ್ಪದೇ ನೋಡುತ್ತಿದ್ದೆವು. ಯಕ್ಷಗಾನಕ್ಕೆ ಇವುಗಳಿಗಿರುವ ವ್ಯತ್ಯಾಸಗಳನ್ನು ಕುರಿತು ಚರ್ಚಿಸುತ್ತಿದ್ದೆವು. ಬಿ.ವಿ. ಕಾರಂತರು ಸಹ ನಮ್ಮೊಂದಿಗಿದ್ದರು.

ಅಂಕಾರ ಆಲ ಮರ ಬೆಂಕಂದ ಗೋಣಿ ಮರ
ಕಂಕಲಲ್ಲಿರುವ ಕರಿಬೇರ ಮರದಡಿಯ
ಕಂಪಿನ ಸೋಮ ಕುಣಿದಾವು-

ಸೋಮನ ಕುಣಿತ, ಕೋಲಾಟ, ಇತ್ಯಾದಿಯ ಅಧ್ಯಯನಕ್ಕೆಂದು ಹುಲಿಯೂರಿಗೆ ಹೋಗಿದ್ದೆವು. ಗೆಳೆಯೂ ಸಿದ್ದರಾಮಯ್ಯ ಎಲ್ಲಾ ಏರ್ಪಾಡು ಮಾಡಿದ್ದರು. ಆ ಸಂದರ್ಭದಲ್ಲಿ ಸಿದ್ದರಾಮಯ್ಯನ ತೋಟಕ್ಕೆ ಎತ್ತಿನ ಬಂಡಿಯಲ್ಲಿ

ಹೋಗುತ್ತಿದ್ದಾಗ ಬಂಡಿಯನ್ನು ಓಡಿಸುತ್ತಿದ್ದ ಗೌಡರು ಮಣ್ಣಿನ ಮಗನಂತೆ ಜಾನಪದ ಗೀತೆಗಳನ್ನು ಹಾಡುತ್ತಾ ಎತ್ತುಗಳನ್ನು ಜೋರಾಗಿ ಓಡುವಂತೆ ಪ್ರಚೋದಿಸುತ್ತಿದ್ದರು ಹಾಗೆಯೇ ಅಲ್ಲಿಂದ ಹಿಂದಿರುಗುತ್ತಿದ್ದಾಗ ಗೆಳತಿ ತಿಲೋತ್ತಮೆ ಬಂಡಿಯನ್ನು ಹೊಡೆಯಲು ಕುಳಿತಾಗ ಮುನ್ನೆಚ್ಚರಿಕೆಯಂತೆ ದೊಡ್ಡರಂಗೇಗೌಡ ಚನ್ನಪ್ಪಾಜಿ ಅವರೆಲ್ಲರೂ ನಡೆದು ಬರುತ್ತೇವೆಂದು ಹಿಂದೆ ಉಳಿದದ್ದು, ಬಂಡಿಯಲ್ಲಿದ್ದ ನಾವು ಹಳ್ಳಕ್ಕೆ ಬಿದ್ದದ್ದು, (ಸದ್ಯ ಯಾರಿಗೂ ಅಂತಹ ಪೆಟ್ಟಾಗಲಿಲ್ಲ) ಅಂತೂ ಗೌಡರು ಮುಂಜಾಗ್ರತೆ ವಹಿಸಿ ಉಳಿದವರನ್ನು ಬಚಾವ್ ಮಾಡಿದರು.

ಹೀಗೆ ನಾವು ಅನೇಕ ಕಡೆ ಹೋಗಿ ಬರಲು, ಜನಪದಗೀತೆಗಳನ್ನು ಸಂಗ್ರಹಿಸಲು ಅನುಕೂಲವಿದ್ದಿತು. ಈ ರೀತಿಯ ಕಲಿಕೆಯಿದ್ದುದರಿಂದಲೇ ನಮ್ಮಲ್ಲಿ ಕೆಲವರಿಗೆ ಜನಪದ ಸಂಗ್ರಹಣೆಗಳನ್ನು ಪ್ರಕಟಿಸಲು ಸಾದ್ಯವಾಗಿದ್ದು.

ಹಾಗೆಯೇ ಪ್ರತಿ ವರ್ಷವೂ ಪರೀಕ್ಷೆಗೆ ಮುಂಚೆ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದೆವು. ಆಶುಭಾಷಣ ವಿಷಯಗಳ ಆಯ್ಕೆ ಗೌಡರು ಮಾಡುತ್ತಿದ್ದರು. ಸ್ಥಳದಲ್ಲೇ ಕವಿತಾ ರಚನೆಯಲ್ಲಿ ಗೌಡರಿಗೆ ಮೊದಲ ಬಹುಮಾನ ಬಂದಿತ್ತು. ಆಟಗಳಲ್ಲಿ ನನಗೆ ಬಂದಿತ್ತು.

ಹೀಗೆ ನಾವು ಬಿ.ಎ./ಎಂ.ಎ ಓದುವಾಗ ಒಟ್ಟಾಗಿ ೫ ವರ್ಷಗಳ ಕಾಲ ನಕ್ಕುನಲಿದಾಡಿದ್ದೇವೆ ಬಿಡದೆ ಕೂಡಿ ಕುಣಿದಾಡಿದ್ದೇವೆ. ಸುಖ ಸಂತೋಷದ ಕಷ್ಟದ ಕ್ಷಣಗಳನ್ನು ಜೊತೆಯಾಗಿ ಅನುಭವಿಸಿದ್ದೇವೆ ಹಂಚಿ ಕೊಂಡಿದ್ದೇವೆ, ಒಬ್ಬರಿಗೊಬ್ಬರು ನೆರವಾಗಿದ್ದೇವೆ. ಈಗ ನಾವೆಲ್ಲರೂ ಬೇರೆ ಬೇರೆ ಹುದ್ದೆಗಳಲ್ಲಿದ್ದರೂ, ಯಾರಿಗೂ ಕುರ್ಚಿಯ ವ್ಯಾಮೋಹವಿಲ್ಲ . ಅದೇ ಸ್ನೇಹ ವಿಶ್ವಾಸ.

ಸ್ನೇಹ ಸಾಮ್ರಾಜ್ಯದಲ್ಲಿ ಅಂತಸ್ತು ಅಧಿಕಾರಗಳು ಕುಲಗೋತ್ರಗಳು ಊರು ಕೇರಿಗಳು ಎಂದು ದರ್ಪದಿಂದ ತಲೆಯೆತ್ತಿ ನಿಲ್ಲಲು ಸಾಧ್ಯವಿಲ್ಲ. ಗೆಳೆತನ ಮುಂಜಾನೆಯ ಮಂಜಿನಂತೆ ಪಾರದರ್ಶಕ ಅದೊಂದು ತಿಳಿಗನ್ನಡಿ. ಉತ್ತಮ ಮೈತ್ರಿ ಉತ್ತಮ ಸಂಗೀತ ವಿದ್ವತೆ ಅಪಸ್ವರಕ್ಕೆ ಅಲ್ಲಿ ಎಡೆಯಿಲ್ಲ. ಪರಸ್ಪರ ತಿಳುವಳಿಕೆ, ಅವರ ಅರಿವು ಗೆಳೆತನವನ್ನು ಬಲಪಡಿಸುವ. ಅಮೃತ ಸಂಜೀವಿನಿ. ಇದೀಗ ದೊಡ್ಡರಂಗೇಗೌಡರು ಕನ್ನಡ ಸಿನಿಮಾ ಜಗತ್ತಿನಲ್ಲಿ ಹೊಸ ಅಲೆಯ ಹಾಡುಗಳಿಗೆ ಕಾರಣರಾಗಿದ್ದಾರೆ. ಕಳೆದ ೨೫ ವರ್ಷಗಳಿಂದಲೂ ಎಲೆಮರೆಯ ಕಾಯಂತೆ ಕನ್ನಡ ನುಡಿ ತಾಯಿಗೆ ಕವಿಯಾಗಿ ಜಾನಪದಗಾರರಾಗಿ, ವಿಮರ್ಶಕರಾಗಿ, ಚಿತ್ರಗೀತೆ ರಚನೆಕಾರರಾಗಿ, ಕತೆಗಾರರಾಗಿ ವಿವಿಧ ಕ್ಷೇತ್ರಗಳಲ್ಲಿ ತನ್ನನ್ನು ತಾವೇ ತೊಡಗಿಸಿಕೊಂಡಿದ್ದಾರೆ. ಅನೇಕ ಪ್ರಶಸ್ತಿ ಪುರಸ್ಕಾರಗಳು ಇವರನ್ನು ಹುಡುಕಿಕೊಂಡು ಬಂದಿವೆ ಕರ್ನಾಟಕದ ವಿವಿಧ ಸಂಘ ಸಂಸ್ಥೆಯವರ 'ಸೃಜನ ಸಂಪನ್ನ', 'ಕಾವ್ಯ ಕೇಸರಿ', 'ಸಾಹಿತ್ಯ ರತ್ನ' ಎಂಬ ಬಿರುದುಗಳನ್ನು ನೀಡಿ ಗೌರವಿಸಿರುವುದೇ ಗೌಡರ ಜನಪ್ರಿಯತೆಗೆ ಸಾಕ್ಷಿ.

ಪ್ರಗತಿಪರ ಮನೋಭಾವನೆವುಳ್ಳವರಾಗಿದ್ದುದರಿಂದಲೇ ವಿದ್ಯಾರ್ಥಿಯಾಗಿದ್ದಾಗ ರಾಜೇಶ್ವರಿಯನ್ನು ಪ್ರೀತಿಸಿ ಸರಳ ಮದುವೆ ಮಾಡಿಕೊಂಡರು. ಇಂತಹ ವ್ಯಕ್ತಿ ತನ್ನ ಸಹಪಾಟಿಯಾಗಿದ್ದರೆಂದು ಹೇಳಿಕೊಳ್ಳಲು ಹೆಮ್ಮೆಯಾಗುವುದಿಲ್ಲವೆ.

# ಬಡವರಿಗಾಗಿ ಮಿಡಿವ ಕವಿ

✍ ಗೀತಪ್ರಿಯ
ಚಲನಚಿತ್ರ ನಿರ್ದೇಶಕರು

'ದುಗುಡ ಹಾಡಾಗಿ ಕವಿ ಹೃದಯದೊಳಗೆ
ಬೆಂಕಿ ಬುಗಿಲಾಗಿ ಹರಿಯುತ್ತದೆ'

ಎಂದು ತಮ್ಮ ಮೌನ ಸ್ಪಂದನದಲ್ಲಿ ಸ್ಪಂದಿಸಿದ ಕವಿ, ದೊಡ್ಡರಂಗೇಗೌಡರನ್ನು ನಾನು ಹತ್ತಿರದಿಂದ ಬಲ್ಲವನು ಅವರ ಕವನಗಳನ್ನು ಮೆಚ್ಚಿದವನೂ, ಅವರ ಆತ್ಮೀಯ ಗೆಳೆಯರಲ್ಲೊಬ್ಬನು. ಆದ್ದರಿಂದ ಅವರ ಬಗ್ಗೆ ಒಂದೆರಡು ಮಾತುಗಳನ್ನು ಬರೆಯಲು ಹೆಮ್ಮೆ ಪಡುತ್ತೇನೆ.

ಕನ್ನಡ ಚಿತ್ರರಂಗದ ಪ್ರಖ್ಯಾತ ಸಂಗೀತ ನಿರ್ದೇಶಕರೂ ನನ್ನ ಆತ್ಮೀಯ ಗೆಳೆಯರೂ ಚಿತ್ರರಂಗಕ್ಕೆ ನನ್ನನ್ನು ತರಲು ಕಾರಣರಾದವರೂ ಆದ ವಿಜಯಬಾಸ್ಕರ್ ರವರಿಂದ ಸುಮಾರು ಎರಡು ದಶಕಗಳ ಹಿಂದೆಯೇ ದೊಡ್ಡರಂಗೇಗೌಡರ ಪರಿಚಯ ನನಗಾಯಿತು. ಅವರು ಆಗತಾನೇ ಚಿತ್ರರಂಗಕ್ಕೆ ಗೀತರಚನಕಾರರಾಗಿ ಪರಿಚಿತರಾಗಿದ್ದರು, ಅಂದು ಅವರು ತೋರಿದ ಸೌಮ್ಯತೆ, ವಿನಯಶೀಲತೆ ಸ್ನೇಹಶೀಲತೆಯನ್ನು ಇಂದೂ ಕಾಣುತ್ತಿದ್ದೇನೆ.

ನಂತರವೇ ನನಗೆ ಅವರ ಕಾವ್ಯಶಕ್ತಿಯ ಪರಿಚಯವಾದದ್ದು, ಅವರು ನೋಡಲು ಸೌಮ್ಯ ವ್ಯಕ್ತಿಯಾದರೂ ಅವರ ಲೇಖನಿಯು ಹರಿತ ಎನ್ನುವುದು ಅರಿವಾದುದೂ ಆಗಲೇ. ವೃತ್ತಿಯಲ್ಲಿ ಅವರು ಅಧ್ಯಾಪಕರಾದರೂ ಪ್ರವೃತ್ತಿಯಲ್ಲಿ ಅಂತರಾಳದ ತುಡಿತ, ಮಿಡಿತ, ಸೋಗಿನಲ್ಲಿ ಮುಚ್ಚಿಟ್ಟದನ್ನು ಬಿಚ್ಚಿಡುವ ಕೆಚ್ಚು ಅವರ ಲೇಖನಿಯ ಮೂಲಕ ಹೀಗೆ ಹೊರ ಹೊಮ್ಮಿದೆ :-

"ಕಾಡುತ್ತಿವೆ ಅಪಶೃತಿಯ ಹಾಡುಗಳು
ನಡುಗುತ್ತಿವೆ ಲೋಲುಪ್ತತೆ ಬೀಡುಗಳು
ದುಡುಕುತ್ತಿವೆ ರಾಜಕೀಯ ನುಡಿ ಕಲಿತ ಗೂಳಿಗಳು
ಕೊರಗುತ್ತಿವೆ ನರಸತ್ತ ಅಗಣಿತ ಸಾಮಾನ್ಯ ಸಹೃದಯಗಳು"

ಹೃದಯಗಳ ಬಗ್ಗೆ ಅದರಲ್ಲು ಸಾಮಾನ್ಯ ಸಹೃದಯಿಗಳ ಬಗ್ಗೆ ಇವರಿಗೆಷ್ಟು ಕಾಳಜಿ ಎಂಬುದನ್ನು ಇದರಿಂದಲೇ ತಿಳಿಯಬಹುದಲ್ಲವೇ?

ದೊಡ್ಡರಂಗೇಗೌಡರು ತಮಗೆ ಹದಿನೈದು ತುಂಬಿದಾಗಿನಿಂದ ಇಂದಿನವರೆಗೂ ಪದ್ಯ ಬರೆಯಬೇಕು ಅನ್ನಿಸಿದಾಗಲೆಲ್ಲಾ ಬರೆಯುತ್ತಲೇ ಬಂದಿದ್ದಾರೆ. ತಮ್ಮ ಬದುಕಿನಲ್ಲಿ ಕಂಡ ಅಳಲು, ಹತಾಶೆ ಆದರ್ಶ, ಕನಸು ಕಠೋರವಾಸ್ತವ ಎಲ್ಲವನ್ನು 'ಕವಿಯ ಪಾಡೇ ಅದು' ಎಂದು ಹಲುಬಿದ್ದಾರೆ. ಇನ್ನೂ ದಾಖಲಿಸಲಾಗಿಲ್ಲ, ಚಿತ್ರಗೀತೆಗಳನ್ನು ಬರೆಯುವಾಗಲೂ ಚಿತ್ರರಂಗದ ಕೆಲವು ಕಟ್ಟುನಿಟ್ಟುಗಳಿಂದ ತಮ್ಮ

ಭಾವನೆಗಳನ್ನು ಇನ್ನು ಚೆನ್ನಾಗಿ ಪ್ರಕಟಿಸಲು ಸಾಧ್ಯವಾಗಲಿಲ್ಲವಲ್ಲ ಎಂದು ಕೊರಗಿದ್ದಾರೆ. ತಮ್ಮನ್ನು ತಾವೇ ವಿಮರ್ಶಿಸಿಕೊಳ್ಳುತ್ತ ಅನ್ನಿಸಿದ್ದೆಲ್ಲಾ ಬರೆಯು ಹೊರಟಾಗ ನನಗೆ ಅರಿವಿಲ್ಲದೇ ಎಷ್ಟೋ ಸಂಗತಿಗಳು, ಸೂಕ್ಷ್ಮ ಭಾವನೆಗಳು ನನ್ನ ಲೇಖನಿಯಿಂದ ನುಣುಚಿ ಹೋಗಿವೆ, ಅದೇ ಬರೆಯುವವನ ದುರಂತ ಎಂದಿದ್ದಾರೆ.

“ಶಿಸ್ತು ಕವಿಗೆ ಒಳ್ಳೆಯದು, ನಿಸರ್ಗದಲ್ಲಿ ಇರುವ ಶಿಸ್ತು ನಮ್ಮ ಬರವಣಿಗೆಯಯಲ್ಲಿ ಮೂಡಿದರೆ ಕವಿತೆಗೆ ಲಯ ತಾನೇ ತಾನಾಗಿ ಪ್ರಾಪ್ತವಾಗುತ್ತದೆ.” ಎನ್ನುವ ಮಾತು ಇವರ ಕಾವ್ಯಕ್ಕಷ್ಟೇ ಅಲ್ಲ, ಪ್ರತಿಯೊಬ್ಬರಿಗೂ ಅನ್ವಯಿಸುತ್ತದೆ.

ಇತರ ವ್ಯಕ್ತಿಗಳಿಗಿಂತ ಕವಿಯು ಸ್ವಲ್ಪ ಭಿನ್ನವಾಗಿರುತ್ತಾನೆ, ಸಂವೇದನಾ ಶೀಲನಾಗುತ್ತಾನೆ. ಪ್ರಪಂಚವನ್ನು ಆತ ನೋಡುವ ದೃಷ್ಟಿಯೇ ಬೇರೆ. ಅದಕ್ಕೆ ಅವರ ರಚನೆಗಳು ಸಮಾಜಕ್ಕೆ ಹಿಡಿದ ಕನ್ನಡಿಯಾಗುತ್ತದೆ. ಕವಿಯ ಕೂಗು ಸಮಾಜದ ಕೂಗು. ಸಾಮಾಜಿಕ ವಿಕೃತಿ ಕಂಡು ತೃಪ್ತ ಭಾವನೆ ಮೂಡುತ್ತದೆ-ಕವಿಮನದಲ್ಲಿ, ಆಗ ತನ್ನ ಕಾವ್ಯದ ಮೂಲಕ ಕ್ರಾಂತಿ ಕಹಳೆ ಊದುತ್ತಾನೆ. ಸಾಮಾಜಿಕ ಜೀವನದ ವೈಪರೀತ್ಯಗಳಿಂದ ಸಿಡಿದೆದ್ದ ಕವಿ “ಪೆನ್ನು ಕೊಡಲಿಯಾಗದೇ ?” ಎನ್ನುತ್ತಾನೆ.

ಕವಿ ದೊಡ್ಡರಂಗೇಗೌಡರ ಮುಖದಲ್ಲಿ ಸೌಮ್ಯತೆ ಮುಗ್ಧತೆ ಕಂಡರೂ ಅವರ ಕಾವ್ಯಗಳಲ್ಲಿ ಭಾವನೆಗಳ ತೀವ್ರತೆಯನ್ನು ಕಾಣುತ್ತೇವೆ.

ಅವರೇ ಹೇಳಿರುವಂತೆ ತಮ್ಮ ಸುತ್ತಣ ಪ್ರಕೃತಿಯನ್ನು ಕುತೂಹಲದಿಂದ ಗಮನಿಸುವ ಹವ್ಯಾಸ ಅಂಟಿ ಬಂದಿದ್ದರಿಂದ ಆ ವೈಭವದ ಕೋಲ್ಮಿಂಚುಗಳನ್ನು ತಮ್ಮದೇ ರೀತಿಯಲ್ಲಿ ಹಿಡಿದು ನುಡಿಯಲ್ಲಿ ಬಂಧಿಸಿ -ಒಂದು ರೂಪ ಕೊಡಲು ಅವರು ಸದಾ ಪ್ರಯತ್ನಿಸುತ್ತಾರೆ. ಹೊರಗಿನ ಪ್ರಕೃತಿಯನ್ನು ಕಾಣುವ ಹುಚ್ಚು ಮುಗ್ಧ ವ್ಯಾಮೋಹದಲ್ಲಿ ಮಾನವನೊಳಗಿನ ಪ್ರಕೃತಿಗಳನ್ನು ಗುರುತಿಸುವಲ್ಲಿ ಅವರು ಉದಾಸೀನ ತಳೆದಿಲ್ಲ

ನಿಸರ್ಗದ ರಮಣೀಯ, ರುದ್ರ ಮನೋಹರ ತಾಣಗಳ ಆಳವನ್ನು ಹೊಕ್ಕು ನೋಡುವಂತೆ ದಿನನಿತ್ಯವೂ ನಗರದ ಜಾತ್ರೆಗಳಲ್ಲಿ ಕಾಣುವ ಎಲ್ಲಾ ಮಟ್ಟದ ಜನರ ಅಂತರಾಳವನ್ನು ಹೊಕ್ಕು ನೋಡುತ್ತವೆ ಇವರ ಕಣ್ಣು ಎನ್ನುವುದಕ್ಕೆ “ಸೃಜನೆ“ ಶೀರ್ಷಿಕೆಯ ಈ ಕಾವ್ಯದ ಸಾಲುಗಳೇ ಸಾಕ್ಷಿ

‘ಕುರುಡಿಲ್ಲ ಬರಿಕಣ್ಣಿಗೆ - ಭಾವುಕ ಕವಿಮನದೊಳಗೆ
ಪ್ರತಿನೋಟಕ್ಕೂ ವಿಚಾರ ಕುಡಿಯೊಡೆದು
ತನ್ನೆದುರಿನ ಚಿರ ನಿಸರ್ಗದ ಪರಿಪರಿಯ ಅರ್ಥ ಬಿಂದು
ಅರಿಯದ ಅಪೂರ್ವಧ್ವನಿ ಒಂದು

ಆಕಾರ ಮಾಡುತ್ತೆ ಅಗಣಿತ ಕಲ್ಪನಾ ಪುಂಜಗಳಿಗೆ, ಇವರ ಕಾವ್ಯಗಳಲ್ಲಿ ಸಮಾಜಿಕ ಕಳಕಳಿಯೂ ಎದ್ದು ಕಾಣುತ್ತದೆ.

“ತಮ್ಮ ಸುತ್ತ ತಳುಕು ಹಾಕಿಕೊಂಡ ಕತ್ತಲ ಕತ್ತು ಹಿಸುಕಿ
ತಮ್ಮ ನುಡಿದೀಪ ಹೊತ್ತಿಸುವಾಸೆ” ಇವರಿಗೆ.
ಆಡಂಬರ ಅವರ ಜೀವನದಲ್ಲೂ ಇಲ್ಲ;
ತಮ್ಮ ಕಾವ್ಯಗಳಲ್ಲೂ ಆಡಂಬರ ತೋರುವುದಿಲ್ಲ;
ನಿರಾಡಂಬರ ಶೈಲಿಯಾದರೂ ಒಂದೊಂದು ಮಾತು ಬಾಣದಂತೆ.

ಭಾರತೀಯ ತರುಣರ ಬಗ್ಗೆ ಬರೆಯುತ್ತಾ

ದಾರಿದ್ರ್ಯ ಬೀಡಿನಿಂದ, ಅಜ್ಞಾನದ ಜಾಡಿನಿಂದ
ವಿಕ್ಷಿಪ್ತತೆ ಮಾಡಿನಿಂದ, ವಿಪರ್ಯಾಸ ಹಾಡಿನಿಂದ
ಅತೃಪ್ತಿಯ ಆಳಲಿನಿಂದ, ತಳಮಳದ ಭುಗಿಲಿನಿಂದ
ಆಕ್ರಂದನದ ಹೊಲಬಿನಿಂದ, ನಿರುದ್ಯೋಗ ಕಂಡು ನೊಂದ
ಭಾರತೀಯ ತರುಣರು
ಬಂದರೋ-ಬಂದರು

ಎಂದಿದ್ದಾರೆ.

ಓ !ಕನ್ನಡ ಬಂಧು ಮಲೆತು ನಿಂತಿತೇ ನಿನ್ನಭಿಮಾನದ ಸಿಂಧು
ನಿನ್ನ ನೆಲದಲ್ಲೇ ನಿನ್ನಿರವು ಅನಾಥ!ಚಿಂತಿಸಲಾರೆಯಾ ನೀನಿಂದು

-ಎಂದು ಚುಚ್ಚು ನುಡಿಯಾಡಿದ್ದಾರೆ

ಧೀಮಾಕು ಪೊಗರಿನಲ್ಲಿ ಬೀಗುವ ದುಬಾರಿ ಭವನಗಳ ಜನರಿಂದ ಒದ್ದಾಡುವ ಜೋಪಡಿ ಜೀವಗಳ ಬಗ್ಗೆ

"ತಮ್ಮ ಬೆವರಿಳಿಸುತ್ತಾರೆ ಆಳವಾಗಿ....
ಕಣ್ಣಿದ್ದ ಜನ ಕಿವಿಯಿದ್ದ ಜನ
ಎತ್ತಬೇಕು ದನಿ ಚಿವುಟಬೇಕು ದೈತ್ಯಶಕ್ತಿ ಚಿಗುರು
ಎದುರಿಸಬೇಕು ಹೊಸಯುಗದ ವಿಹ್ವಲ ಸವಾಲು

ಎಂದು ಬಂಡಾಯದ ಧ್ವನಿ ಎತ್ತಿದ್ದಾರೆ.

ಶಕ್ತಿಶೀಲರೆಲ್ಲ ದುರ್ಬಲ ರಕ್ತವನ್ನೆಲ್ಲಾ
ಹೀರುತ್ತಾರೆ ನೆಕ್ಕುತ್ತಾರೆ ಹಂತ ಹಂತವಾಗಿ

ಎನ್ನುವಾಗ ಇವರ ಕವಿ ಹೃದಯ ದರ್ಬಲರಿಗಾಗಿ ಎಷ್ಟು ಎಷ್ಟು ಮಿಡಕಿದೆ ಎಂದು ತಿಳಯಬಹುದು.

ಇಂತಹ ಕಾವ್ಯ ರಚನೆಯನ್ನು ಚಿತ್ರಗಳಲ್ಲೂ ಅವರು ಮಾಡಿದ್ದಾರೆ ಎನ್ನುವುದಕ್ಕೆ "ಆಲೆಮನೆ" ಚಿತ್ರದ

"ಎಲ್ಲಾ ಮೇಲು ಕೀಳು, ಸುಳ್ಳು ಭೇದ ಭಾವ-
ಬಗೆದ ಮನುಜ ಕಾಣೋ'

ಎಂಬ ಗೀತೆಯನ್ನು ಉದಾಹರಿಸಬಹುದು. ಈ ಗೀತೆಗೆ ಅವರಿಗೆ ಶ್ರೇಷ್ಠಗೀತ ರಚನೆ ಪ್ರಶಸ್ತಿಯೂ ಸಿಕ್ಕಿದೆ.

ಒಂದು ಸಮಾರಂಭದ ಸಂದರ್ಭದಲ್ಲಿ ದೊಡ್ಡರಂಗೇಗೌಡರೇ ಭಾವಪೂರ್ಣವಾಗಿ ಹಾಡಿದ್ದನ್ನು ಕೇಳಿದಾಗಲೇ 'ಇವರಿಗೆ ಹಾಡಲು ಬರುತ್ತದೆ' ಎಂದು ನನಗೆ ತಿಳಿದದ್ದು.

ದೊಡ್ಡರಂಗೇಗೌಡರು ತಮ್ಮ ಕಾವ್ಯಗಳಲ್ಲಿ ಉಪದೇಶ ಮಾಡಲು ಪ್ರಯತ್ನಿಸುವುದಿಲ್ಲ, ವಾಸ್ತವಿಕತೆಯನ್ನು ಚಿತ್ರಿಸಿ ಚಿಂತನೆಗೆ ಹಚ್ಚುತ್ತಾರೆ. ಸಮಾಜದ ಸಮಸ್ಯೆಗಳನ್ನು ನಮ್ಮ ಮುಂದಿಡುತ್ತಾರೆ ಭವ್ಯ ಸೌಧಗಳನ್ನು ನೋಡಿ ಅದರ

ವೈಭವವನ್ನು ವರ್ಣಿಸುವುದಿಲ್ಲ, ಅದಕ್ಕಾಗಿ ಬೆವರು ಸುರಿಸಿ ದುಡಿದ ಅನಾಮಧೇಯರ ಬಗ್ಗೆ ಮಿಡಿಯುತ್ತಾರೆ ತುಡಿಯುತ್ತಾರೆ.

ಅವರ ಒಂದೊಂದು ಸಾಲಿನಲ್ಲೂ ಕನ್ನಡ ಸಾಹಿತ್ಯದ ಸಾಮಾನ್ಯ ಬಳಕೆಯ ಪದಗಳ ಸೊಗಡನ್ನು ಕಾಣುತ್ತೇವೆ. ಕೆಲವೊಮ್ಮೆ ಒಂದೊಂದು ನೀಳ್ಗತೆಗಳಾಗುವಂತಹುದನ್ನು ಕೆಲವೇ ಸಾಲುಗಳಲ್ಲಿ ಆಕರ್ಷಕವಾಗಿ ಪರಿಣಾಮಕಾರಿಯಾಗಿ ನೀಡುವಲ್ಲಿ ಸಫಲವಾಗಿದ್ದಾರೆ.

ಚಿತ್ರ ಸಾಹಿತಿಯಾಗಿಯೂ ತಮ್ಮ ತನವನ್ನು ಉಳಿಸಿಕೊಂಡಿದ್ದಾರೆ ಎನ್ನ ಬಹುದು, ಇಲ್ಲಿ ಬೇರೆಯವರು ಕಲ್ಪಿಸುವ ಸನ್ನಿವೇಶಗಳಿಗೆ, ಪಾತ್ರಗಳಿಗೆ ಆಯಾ ಸನ್ನಿವೇಶಕ್ಕೆ, ಪಾತ್ರಗಳಿಗೆ ತಕ್ಕ ಹಾಗೆ ಭಾಷೆಯನ್ನು ಬಳಸಿ ಗೀತರಚನೆ ಮಾಡಿದ್ದಾರೆ. ಮೊದಲೇ ಸಂಯೋಜಿಸಿದ ರಾಗಕ್ಕೆ ತಕ್ಕಂತೆ ಗೀತರಚನೆ ಮಾಡುವುದು ಇಂದು ಚಿತ್ರರಂಗದಲ್ಲಿ ಪದ್ಧತಿಯಾಗಿರುವಾಗಲೂ ತಮ್ಮ ಕಾವ್ಯಾತ್ಮಕವಾದ ಅಂಶಗಳನ್ನು ಅದರಲ್ಲಿ ತುಂಬಲು ನಿಷ್ಠೆಯಿಂದ ಪ್ರಯತ್ನಿಸಿದ್ದಾರೆ. ಅದಕ್ಕೆ ಅವರು ಬರೆದ ಕೆಲವು ಚಿತ್ರಗೀತೆಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಆಲೆಮನೆ ಚಿತ್ರದ "ನಮ್ಮೂರ ಮಂದಾರ ಹೂವೆ"ಯಲ್ಲಿ ಕೋಮಲತೆ ತುಂಬಿದ್ದಾರೆ ಅದೇ ಚಿತ್ರದ

"ಎಲ್ಲಾ ಮೇಲು ಕೀಳು ಸುಳ್ಳು ಬೇದ ಭಾವ ಬಗೆದ
ಮನುಜಾ ಕಾಣೋ'

ಎಂಬ ಪ್ರಬೋದಕರ ವಿಚಾರವನ್ನು ಇನ್ನೊಂದು ಹಾಡಿನಲ್ಲಿ ಮಂಡಿಸಿದ್ದಾರೆ.

"ತೇರನೇರಿ ಅಂಬರದಾಗೆ ನೇಸರ ನಗುತಾನೆ"

ಪರಸಂಗದ ಗೆಂಡೆತಿಮ್ಮ ಚಿತ್ರಗೀತೆಯನ್ನು ಮೆಚ್ಚದವರು ಯಾರು? ಅದನ್ನು ಮೆಲುಕು ಹಾಕದವರಾರು?

ಆ ಗೀತೆಯಲ್ಲಿ ಪ್ರಕೃತಿಯನ್ನು ಅವರು ವರ್ಣಿಸಿರುವ ರೀತಿ ಅವರು ನಿಸರ್ಗವನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸಬಹುದು ಅದರ ಅಂದ ಚಂದವನ್ನು ಅನುಭವಿಸಬಹುದು ಎಂಬುದನ್ನು ತಿಳಿಸಿದ್ದಾರೆ. ಅದೇ ಚಿತ್ರದ ಇನ್ನೊಂದು ಗೀತೆ ಈಗೀತೆಗಿಂತ ಭಿನ್ನ

"ನೋಟದಾಗೆ ನಗೆಯ ಮೀಟಿ
ಮೋಜಿನಾಗೆ ಎಲ್ಲೆಯ ದಾಟಿ
ಮೋಹವ ತೋರಿದೋಳ ಪರಸಂಗ ಐತೆ"

ಹಾಗೆಯೇ ಅವರಿಗೆ ರಾಜ್ಯ ಪ್ರಶಸ್ತಿಯನ್ನು ಗಳಿಸಿಕೊಟ್ಟ ಇನ್ನೊಂದು ಗೀತೆ "ಅನುರಾಗತೋಟದಲ್ಲಿ...."

ಅದರಲ್ಲಿ ಅನುರಾಗ ಗೀತ ಲಹರಿಯನ್ನೇ ಹರಿಸಿದ್ದಾರೆ.

ಹೀಗೆ ವಿವಿಧ ರೀತಿಯ ಸನ್ನಿವೇಶ ಪಾತ್ರಗಳಿಗೆ ನೂರಾರು ಹಾಡುಗಳನ್ನು ರಚಿಸಿ ಜನಮನವನ್ನು ರಂಜಿಸಿರುವ ಈ ಕವಿಯ ಕವನ ಸಂಕಲನಗಳು ಪ್ರಕಟವಾಗಿರುವುದು ಇವರ ಕಾವ್ಯ ಶಕ್ತಿಗೆ ಸಾಕ್ಷಿ. ಹೀಗೆ ಇನ್ನು ಮುಂದೆಯೂ ಇವರ ವಿಚಾರ ಧಾರೆಗಳ ಕಾವ್ಯವಾಹಿನಿ ಸತತ ಪ್ರವಹಿಸುತ್ತಾ ಅದರ ನಿನಾದ ಎಲ್ಲರ ಮನಮುಟ್ಟುತ್ತಿರಲಿ ಎಂದು ಆಶಿಸುತ್ತೇನೆ.

# ಸಹೃದಯ ಸಹೋದ್ಯೋಗಿ
# ಶ್ರೀ ದೊಡ್ಡರಂಗೇಗೌಡರು

✍ ಪ್ರೊ॥ ವನಮಾಲಾ ಆಚಾರ್

ಲಕ್ಷ್ಮೀಶ ಕವಿಯ ಬಿರುದು 'ಕವಿಚೂತವನ ಚೈತ್ರ' ಪ್ರತಿಯೊಬ್ಬ ಕವಿಗೂ ಅನ್ವಯಿಸುತ್ತದೆ. ಕವಿಗಳನ್ನು ಮಾವಿನ ತೋಪಿಗೆ ಹೋಲಿಸುವುದುಂಟು. ಈ ಹೋಲಿಕೆಯ ಬಗೆಗೆ ಬರೆಯುತ್ತಾ ಶ್ರೀ ರಾಜರತ್ನಂ, "ಕವಿ ಮಾವಿನ ಮರ, ಅವನ ಆಯಾ ವಯಸ್ಸಿನ ಕೃತಿಗಳು ಆ ಮರದಲ್ಲಿ ಬಿಡುವ ಚಿಗುರು, ಮೊಗರು, ಹೂ, ಮಿಡಿ, ಕಾಯಿ, ಹಣ್ಣು. ಒಂದೊಂದು ಕಾಲಕ್ಕೆ ಒಂದೊಂದು ಫಲವೇ. ಒಂದರ ನೋಟ ಸೊಗಸು, ಒಂದರ ವಾಸನೆ ಸೊಗಸು, ಒಂದರ ರುಚಿ ಸೊಗಸು, ರಸಿಕರಿಗೆ ಯಾವುದೂ ಬೇಡವೆನ್ನಿಸುವುದಿಲ್ಲ" ಎಂದು ಹೇಳಿದ್ದಾರೆ.

ಈ ನುಡಿಯ ಸೊಬಗನ್ನು ಶ್ರೀ ದೊಡ್ಡರಂಗೇಗೌಡರ ಸಂಕಲನಗಳನ್ನು ಓದಿದಾಗ ಕಂಡುಕೊಳ್ಳಬಹುದೇನೋ. ಅವರ ಗೀತಗಾರುಡಿ, ಪ್ರೀತಿಪ್ರಗಾಥ, ಮೌನಸ್ಪಂದನ, ಪ್ರೇಮಾಂಜಲಿ, ಹೋಳಿಹುಣ್ಣಿಮೆ, ಕಾವ್ಯಕಲ್ಯಾಣಿ, ಮಣ್ಣಿನ ಮಾತುಗಳು, ಚದುರಂಗದ ಕುದುರೆಗಳು ಹಾಗೂ ಇತರ ಕೃತಿಗಳಲ್ಲಿ ಈ ಮಾತಿನ ಸಾರ್ಥಕತೆಯನ್ನು ಕಾಣುತ್ತೇವೆ. ಒಂದೊಂದು ಸಂಕಲನಕ್ಕೂ ಕಾವ್ಯ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನ ಸಿಕ್ಕಿದೆ. ಐವತ್ತರ ಗಡಿಯನ್ನು ತಲುಪುವ ಮೊದಲೇ ಕಾವ್ಯಲೋಕದಲ್ಲೂ, ರಂಗುರಂಗಿನ ಸಿನಿಮಾಲೋಕದಲ್ಲೂ ಒಂದು ಅದ್ವಿತೀಯವಾದ ಸ್ಥಾನವನ್ನು ದೊರಂಗೌ ಗಳಿಸಿಕೊಂಡಿದ್ದಾರೆ.

ಶ್ರೀ ದೊಡ್ಡರಂಗೇಗೌಡರ ಬಗೆಗೆ ಒಂದು ಲೇಖನವನ್ನು ಬರೆಯಬೇಕೆಂದು ಆತ್ಮೀಯ ವಿದ್ಯಾರ್ಥಿ ವಾಸು ಕೇಳಿಕೊಂಡಾಗ ಒಪ್ಪಿಕೊಂಡೆ. ಆದರೆ ಅವರ ಕಾವ್ಯಶ್ರೀಯನ್ನು ತೂಗಿ ವಿಮರ್ಶಾತ್ಮಕವಾದ ಪ್ರಬುದ್ಧ ಲೇಖನ ಬರೆಯಲು ನನ್ನಿಂದ ಆಗದು. ಅದಕ್ಕೆ ಕಾರಣ ನಾನೆಂದೂ ಕವಿತೆ ಬರೆಯಲು ಪ್ರಯತ್ನಿಸಲೇ ಇಲ್ಲ. ವಿಮರ್ಶೆಯಂತೂ ಇನ್ನೂ ಕಷ್ಟದ್ದು. ಪ್ರಯತ್ನಿಸಿ ಬರೆಯಬಹುದಿತ್ತು. ಒಂದೆಡೆ ಶ್ರೀ ಗೌಡರೇ 'ನನ್ನದಲ್ಲದ ಬದುಕನ್ನು ನನ್ನದೆಂದು ಹೇಳಿಕೊಳ್ಳುವ ಭ್ರಮೆ ನನಗಿಲ್ಲ.' ಎಂದು ಹೇಳಿದಂತೆ ನನ್ನದಲ್ಲದ ಕ್ಷೇತ್ರಕ್ಕೆ ಕಾಲಿಡುವುದೇ ಬೇಡವೆಂದುಕೊಂಡೆ.

ಅವರ ವ್ಯಕ್ತಿತ್ವವನ್ನ, ಕಾರ್ಯತತ್ಪರತೆಯನ್ನ ಕಾವ್ಯದ ಸೊಬಗನ್ನ ಮೆಚ್ಚಿದ ಆತ್ಮೀಯ ಸ್ನೇಹಿತೆಯಾಗಿ ನಾಲ್ಕು ಮಾತುಗಳನ್ನು ನಾನು ಮೆಚ್ಚಿದ ಕವನಗಳ ಬಗೆಗೆ ನಾನು ನಿರಾಳವಾಗಿ ಹೇಳಬಹುದೇನೋ.

ಶ್ರೀ ದೊಡ್ಡರಂಗೇಗೌಡರನ್ನು ನಾನು 1981ರಲ್ಲಿ ಎಸ್.ಎಲ್.ಎನ್. ಕಾಲೇಜಿಗೆ ವರ್ಗವಾಗಿ ಬಂದು ಇಂಗ್ಲೀಷ್ ಭಾಷೆಯ ಅಧ್ಯಾಪಕಿಯಾಗಿ ಸೇರಿಕೊಂಡಾಗಿನಿಂದ ಹದಿನಾಲ್ಕು ವರುಷಗಳ ಕಾಲದಿಂದ ನೋಡುತ್ತಿದ್ದೇನೆ. ಅವರಲ್ಲಿರುವ ಹಲವಾರು

ಒಳ್ಳೆಯ ಗುಣಗಳನ್ನು ಅಪಾರವಾಗಿ ಮೆಚ್ಚಿಕೊಂಡಿದ್ದೇನೆ. ನನಗೂ ಅವರಿಗೂ ಹಲವಾರು ಸಾಮ್ಯಗಳಿವೆ. ಬಡತನದ ಒರೆಗಲ್ಲಿಗೆ ಸಿಕ್ಕೂ ಸ್ವಂತಿಕೆ ಉಳಿಸಿಕೊಂಡವರು ನಾವು. ಅಂಥವರಿಗೇ ಬಾಳಿನ ಬೆಲೆ ಗೊತ್ತಾಗುವುದು.

'ಬಾಳು ಬಾಳುವದಕ್ಕಾಗಿದೆ. ಬರಿದೆ ಬಳಲುವುದಕ್ಕಲ್ಲ. ಬಾಳಿನ ಯುಕ್ತವಾದ ಆಶೆ ಆಕಾಂಕ್ಷೆಗಳು ರೂಪುಗೊಳ್ಳುವುದಕ್ಕಾಗಿ ಇವೆ. ಬರಿದೆ ಕಲ್ಪನೆಯ ಕನಸು ಕಾಣುವುದಕ್ಕಲ್ಲ. ನಮ್ಮ ಜೀವನದ ಸಾಫಲ್ಯವು ದಿನದ ಪ್ರತಿಯೊಂದು ಕ್ಷಣದಲ್ಲಿ ನಾವು ಬದುಕುವ ರೀತಿಯನ್ನವಲಂಬಿಸಿದೆ' ಎನ್ನುವ ಸರಳ ಸುಂದರ ಸೂತ್ರ ಹೊಳೆಯುವುದು.

ಹದಿನಾಲ್ಕು ವರುಷ ಅವರ ಸಹೋದ್ಯೋಗಿಯಾಗಿ ಕೆಲಸ ಮಾಡಿದ ಸೌಭಾಗ್ಯ ನನ್ನದು. ಸಾಹಿತ್ಯಕ-ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಒಟ್ಟಿಗೇ ಕೆಲಸ ಮಾಡಿದ್ದೇವೆ. ಶ್ರೀ ದೊಡ್ಡರಂಗೇಗೌಡರು ವೇದಿಕೆಯ ಮೇಲೆ ನಿಂತು ಮಾತನಾಡುವ ವೈಖರಿ ಅನುಕರಣೀಯವಾದದ್ದು. ನಿರರ್ಗಳವಾಗಿ ಎನ್ನುವುದಕ್ಕಿಂತ, ಸುಂದರ ಸುಲಲಿತವಾಗಿ ಮಾತನಾಡುವ ಕಲೆಯನ್ನು ಅವರು ಎಷ್ಟು ಚೆನ್ನಾಗಿ ಮೈಗೂಡಿಸಿಕೊಂಡಿದ್ದಾರೆಂದರೆ ಅವರ ಮಾತು ಪ್ರಶಾಂತವಾದ ಜಲಧಾರೆಯಂತೆ. ಅವರದು ಪರಿಣಾಮಕ್ಕಾಗಿ ಮಾತನಾಡುವ ಶೈಲಿಯಲ್ಲ. ಕಾಲೇಜಿನಲ್ಲಿ ವಾಕ್ಪಟುಗಳಾಗಿ ಮುಂದೆ ಬರಬೇಕಾದ ವಿದ್ಯಾರ್ಥಿಗಳಿಗೆ ನಾನು "ಮಾತನಾಡುವುದೂ ಒಂದು ಕಲೆ. ಅದು ಕರಗತವಾಗಿರಬೇಕು, ಮೋಡಿಮಾಡುವಂತಿರಬೇಕು. ದೊಡ್ಡರಂಗೇಗೌಡರು ಮಾತನಾಡುವುದನ್ನ ಚೆನ್ನಾಗಿ ಗಮನವಿಟ್ಟು ಕೇಳಿ, ಅವರು ವಿಷಯವನ್ನು ಪ್ರಸ್ತಾಪಿಸುವ ವಿಧಾನವನ್ನು ಕಲಿಯಿರಿ" ಎಂದು ಮುಕ್ತಕಂಠದಿಂದ ಹೇಳಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದ್ದೇನೆ.

ಹಾಗೆಯೇ, ಕವಿತೆ ಕಲಿಸುವಾಗ 'ಕವಿತೆ ಬರೆಯುವುದು ಕಷ್ಟ. ಓದಿ ಅರ್ಥಮಾಡಿಕೊಳ್ಳುವುದೂ ಕಷ್ಟ. ಕತೆ ಕಾದಂಬರಿಗಳ ವೈಭವದ ಅಲಂಕೃತ ಹಂದರ ನಮ್ಮ ಕಣ್ಣಮುಂದೆಯೇ ಇರುತ್ತದೆ. ಅಲ್ಲಿ ಸಾಹಿತ್ಯದ ರಸಾಸ್ವಾದನೆ ಇದ್ದರೆ ಸಾಕು, ಆದರೆ ಇಲ್ಲಿ, ಕವಿತೆ ಓದುವಾಗ ಓದುಗನ ಕಲ್ಪನೆಗೇ ಕವಿ ಸವಾಲನ್ನೊಡ್ಡಿರುತ್ತಾನೆ. ಒಂದು ಪದದಲ್ಲಿ ನೂರು ಅರ್ಥಗಳನ್ನು ತುಂಬಿರುತ್ತಾನೆ. ಆತ ಕಲ್ಪಿಸಿದ ಅರ್ಥ ನಿಮಗೆ ಹೊಳೆಯಬೇಕಾದರೆ ನಿಮ್ಮ ಕಲ್ಪನಾ ಶಕ್ತಿಯೂ ಅಷ್ಟೇ ಶಕ್ತಿಯುತವಾಗಿ ಹಾರಗುದರಿಯ ಬೆನ್ನ ಏರಿ ಎತ್ತರದಿಂದಲೇ ವೀಕ್ಷಿಸುವ ಶಕ್ತಿ ಇರಬೇಕು" ಎಂದು ಹೇಳುತ್ತಿದ್ದೆ. ನಾನು ಕೊಡುವ ಪ್ರಿಯವಾದ ಉದಾಹರಣೆ "ನಮ್ಮೂರ ಮಂದಾರ ಹೂವೇ" ಎಂಬ ಸಾಲು. ಕಲಿಸುವುದು ಇಂಗ್ಲೀಷಿನ ಪದ್ಯವಾದರೂ ಕಲಿಸುವಾಗ ಗೌಡರ ಪದ್ಯದ ಉದಾಹರಣೆ ಕೊಟ್ಟು ಇಲ್ಲಿಯ ಆತ್ಮೀಯತೆ ನೋಡಿ. ನಮ್ಮೂರ ಹುಡುಗಿ ಆಕೆ ಹೂವಿನಂತೆ ಸುಕೋಮಲೆ. ಸೊಭಗಸುಂದರಿ, ಅವಳು ಅಂತಿಂಥ ಹೂವಿನಂತಲ್ಲ ಮಂದಾರ ಹೂವಿನ ಹಾಗೆ. ಮಂದಾರ ಹೂವೇ ಎನ್ನುವ ಒಂದೇ ಒಂದು ಶಬ್ದದಲ್ಲಿ ಎಷ್ಟೊಂದು ಸೌಂದರ್ಯ ತುಂಬಿದ್ದಾರೆ ನೋಡಿ. ಅದು ಅರ್ಥವಾಗಬೇಕಾದರೆ ಓದುಗ ಕವಿಯ ಭಾವನಾ ಪ್ರಪಂಚದಲ್ಲಿ ಅವನ ಜತೆಗಾರನಾಗಿ ಹೋದಾಗ ಅದು ಸ್ವರ್ಗದ ಪಾರಿಜಾತ ಎಂದೂ, ಸ್ವರ್ಗ ಎಂದಾಗ ರಂಭೆ, ಊರ್ವಶಿ, ತಿಲೋತ್ತಮೆಯರ ಸ್ವರ್ಗ ಕಣ್ಣಿಗೆ ಕಟ್ಟುತ್ತದೆ. ಅಲ್ಲಿಯ ಪುಷ್ಪದಂತೆ ಶ್ರೇಷ್ಠ ನನ್ನ ಹುಡುಗಿ ಎನ್ನುವ ಕಲ್ಪನೆಯ ರಸಾಸ್ವಾದ ನಿಮಗೆ ಸಿಗುತ್ತದೆ. ಹೀಗೆ ನಾನು ಹೇಳಿದಾಗ ವಿದ್ಯಾರ್ಥಿಗಳು ಅದನ್ನ ಬಹಳವಾಗಿ ಇಷ್ಟಪಟ್ಟಿದ್ದಾರೆ. ಈ ಸಾಲನ್ನು ಹೇಳಿದ ನಂತರವೇ ನಾನು ಬರ್ನ್ಸ್ ಕವಿಯ My Love is Like a red.

red rose ಎನ್ನುವ ಸಾಲನ್ನ ಉದಹರಿಸುತ್ತಿದ್ದೆ. ಕವಿತೆ ಎಂದರೆ ಈ ತರಹದ ರೋಮಾಂಚಕತೆ ಕೊಡಬೇಕು. ಅದು ಗೌಡರ ಕಾವ್ಯದಲ್ಲಿದೆ.

ಬರಿಯ ಭಾವನಾತ್ಮಕ ರಮ್ಯ ಪ್ರೇಮಗೀತೆಗಳೇ ಗೌಡರ ಹೆಚ್ಚಳವಲ್ಲ, ಮಣ್ಣಿನ ಮಾತುಗಳಲ್ಲಿ ಹಲವಾರು ತಾತ್ತ್ವಿಕ ವಿವೇಚನೆಗಳಿವೆ.

ಇರವೆಂಬುದು ಎಂದಿಗೂ ಜೀವಂತ ಅಗ್ನಿಕುಂಡ
ಇರಬೇಕು ಕಿಚ್ಚು ಹಾಯುವ ಛಲದ ಕಾರ್ಯ-ದಂಡ
ಬರಬೇಕು ನಿನ್ನೊಳಗೆ ಎಲ್ಲ ನೀಸುವ ಛಾತಿ ರೂಢ
ಬರಸಿಡಿಲ ಗೆಲ್ಲೋ ಬಲ ನಿನ್ನಲ್ಲಿದೆ - ಮಣ್ಣಿನ ಮಗ

ಇನ್ನೊಂದು -

ಪ್ರೇಮವೆಂದರದೊಂದು ಹೃದಯರೇಖಾಲೇಖ
ಅಲ್ಲಿ ನಡೆವುದು ನಿತ್ಯ ಆರ್ತಿ ನುಡಿ ಅಭಿಷೇಕ
ಜೀವ ಜೀವವ ಅರಿತು, ಪಡೆದು ಪ್ರೀತಿಯ ಪಾಕ
ಬೆಸೆವುದೊಳಗೆ ಒಲುಮೆಯ ಎರಕ - ಮಣ್ಣಿನ ಮಗ

ಈ ಸಾಲುಗಳಲ್ಲಿ ಕವಿಯ ಜೀವನದೃಷ್ಟಿಯಿದೆ, ನಂಬಿಕೆಯಿದೆ, ಇದು ನಾನು ಗೌಡರಲ್ಲಿ ಮೆಚ್ಚಿರುವ ಇನ್ನೊಂದು ಗುಣ. ಹೆಣ್ಣುಮಕ್ಕಳ ಬಗೆಗೆ ಅವರು ಎಂದೂ ಹಗುರವಾಗಿ ಮಾತನಾಡಿದ್ದನ್ನು ಕೇಳಲಿಲ್ಲ, ಕಾವ್ಯಕ್ಕಾಗಿ, ಬರುವ ಹೆಸರಿಗಾಗಿ ಸಜ್ಜನಿಕೆಯನ್ನು ಬರೆಹದಲ್ಲಿ ತೊಡಗಿಸುವದಲ್ಲ. ಆ ಸಂಸ್ಕಾರ, ನಂಬಿಕೆಗಳು, ಅವರ ನಡೆನುಡಿಯಲ್ಲಿ ಹಾಸುಹೊಕ್ಕಾಗಿವೆ.

ವಿದ್ಯಾರ್ಥಿಗಳ ವಿಷಯದಲ್ಲೂ ಅಷ್ಟೇ, ಎಲ್ಲರೊಡನೆ ಆತ್ಮೀಯವಾಗಿ ಮಾತನಾಡುತ್ತಾರೆ. ಶಿಕ್ಷಕರ ಯೋಗ್ಯತೆಯ ಬಗೆಗೆ, ಎತ್ತರದ ಬಗೆಗೆ ಮಾತನಾಡದೆಯೆ ಮನದಟ್ಟುಮಾಡಿಕೊಡುತ್ತಾರೆ. ವಿದ್ಯಾರ್ಥಿಗಳಿಗೂ ಅವರ ಬಗೆಗೆ ಆತ್ಮೀಯತೆಯಿದೆ, ಆರಾಧನಾಭಾವವೂ ಇದೆ, ಅಷ್ಟೇ ಹೆದರಿಕೆಯೂ ಇದೆ.

ಇನ್ನೊಂದು ಇವರಲ್ಲಿ ನಾವು ಕಲಿಯಬೇಕಾದ ಒಂದು ಸೂತ್ರ ಕಾರ್ಯತತ್ಪರತೆ. ಯಶಸ್ಸು ಬರೀ ಹಗಲುಗನಸಿನದಾಗಬಾರದು. ಅದು ಬೆವರಿನ ಪವಿತ್ರ ಫಲ. ಬಿಡುವಿದ್ದಾಗ ಗೌಡರು ಒಂದು ಗಳಿಗೆಯನ್ನು ಕೂಡ ಹಾಳುಮಾಡದೆ ಮನಸ್ಸಿನಲ್ಲಿದ್ದುದನ್ನು ಕಾವ್ಯ ರೂಪಕ್ಕಿಳಿಸಿ ಬರೆಯುತ್ತಲೇ ಇರುತ್ತಾರೆ. ಅವರ ಈ ಗುಣ ಇರುವ ಪ್ರತಿಭೆಯನ್ನು ಪಟ್ಟಾಗಿ ಕೆಲಸಮಾಡದೆ ಅವಕಾಶಗಳನ್ನು ಹಾಳುಮಾಡಿಕೊಂಡಂಥ ನನ್ನಂತಹವರಿಗೂ, ವಿದ್ಯಾರ್ಥಿಗಳಿಗೂ ಉಜ್ವಲ ಆದರ್ಶವಾಗಿದೆ. ಅವರ ಸ್ಥಿತಪ್ರಜ್ಞತೆ ನಮಗೆಲ್ಲ ಮಾರ್ಗದರ್ಶನವಾಗಬೇಕು.

ಅದನ್ನೇ ರಾಜರತ್ನಂ ಮಾತಿನಲ್ಲಿ ಹೇಳುವುದಾದರೆ "ಕಾಲವನ್ನ 'ಅನಂತವಾಹಿನೀ' ಎನ್ನುತ್ತಾರೆ. ಕಾಲ ನಿಲ್ಲತಕ್ಕದ್ದಲ್ಲ. ಹೊಳೆಯಂತೆ ಹರಿದುಹೋಗುತ್ತಿರುತ್ತದೆ. ಹೋದ ಹೊಳೆಯನ್ನು ಯಾರೂ ಹಿಂದಿರುಗಿಸಲಾರರು. ತನ್ನ ಕಣ್ಣಿಗೆ ಕಂಡಷ್ಟನ್ನು, ತನ್ನ ಕೈಗಳಿಗೆ ಸಿಕ್ಕಿದಷ್ಟನ್ನು ಯಾವನು ಸಾರ್ಥಕ ಪಡಿಸಿಕೊಳ್ಳುತ್ತಾನೋ ಅವನು ಜಾಣ. ಕಾಲವನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಪಾಡಿಕೊಳ್ಳಬೇಕು. ಆದ್ದರಿಂದ ಕಾಲಹರಣ ಕೂಡದು, ಅದು ಆತ್ಮದ್ರೋಹ".

ಇಂತಹ ಸತ್ಯವನ್ನು ಅರ್ಥಮಾಡಿಕೊಂಡು ಸದಾ ಕಾರ್ಯನಿರತರಾಗಿರುವ ದೊಡ್ಡರಂಗೇಗೌಡರ ಯಶಸ್ಸು ನಮ್ಮ ವಿದ್ಯಾರ್ಥಿಗಳಿಗೆ ಹೆಮ್ಮೆಯ ನಿದರ್ಶನವಾಗಬಲ್ಲುದು.

ಶ್ರೀ ದೊಡ್ಡರಂಗೇಗೌಡರು 'ಪ್ರೀತಿ-ಪ್ರಗಾಥ' ದಲ್ಲಿ ತಮ್ಮ ವೈಯಕ್ತಿಕ ಜೀವನವನ್ನೇ ಕಾವ್ಯದ ಮೂಲವನ್ನು ಮಾಡಿಕೊಂಡು ಪ್ರಾಂಜಲಮನಸ್ಸಿನಿಂದ ಹೇಳಬೇಕಾದುದನ್ನು ಹೇಳಿಕೊಂಡಿದ್ದಾರೆ. ಇಲ್ಲಿ ಕೂಡ ನನಗೂ ಅವರಿಗೂ ಸಾಮ್ಯತೆ ಇದೆ. ಅಂತರ್ಜಾತೀಯ ವಿವಾಹದ ಅಳಲನ್ನು, ಸುಖವನ್ನು ಕಂಡವರು ನಾವು. ಸಹೃದಯ ವ್ಯಕ್ತಿಯ ಕೈ ಹಿಡಿದು ಬಾಳಿನ ಸೌಭಾಗ್ಯವನ್ನು ಕಂಡವಳು ನಾನು.

"ಮನಸಿತ್ತು ಕನಸಿತ್ತು ಕಡಲಿನೋಪಾದಿಯಲಿ
ಕೆಚ್ಚಿತ್ತು ನೆಚ್ಚಿತ್ತು ಮೇರುಗಿರಿ ನಿಲುವಿನಲಿ!

ಎಂದು ಅವರು ಹಾಡಿಕೊಂಡಾಗ ಅವರೂ, ಶ್ರೀಮತಿ ರಾಜೇಶ್ವರಿ ಅವರೂ ಅನ್ಯೋನ್ಯವಾಗಿ ಬಾಳುವುದನ್ನು ನೋಡಿದಾಗ ಖುಷಿಯಿಂದ ಇವರೀರ್ವರಿಗೂ ಪ್ರೀತಿ ವಾತ್ಸಲ್ಯಗಳು ನಿರಂತರವಾಗಿರಲಿ ಎಂದು ಹಾರೈಸುತ್ತೇನೆ.

ಬಹುವಿದ್ಯೆ ಬಹುತರ್ಕ ಬಹುನೇಮ ಬೇಕಿಲ್ಲ
ವಹಿಸೆ ಜೀವನವದು ಹಗುರವೆನಿಸವೊಲ
ಸಹಜ ಸಮರಸಭಾವ ಅಂತಃಪರೀಕ್ಷೆಗಳು
ವಿಹಿತವಾತ್ಮರ ಹಿತಕೆ - ಮಂಕುತಿಮ್ಮ

ಎಂದು ತೀರ್ಮಾನಿಸಿ ಡಿ.ವಿ.ಜಿ. ಹೇಳುತ್ತಾರೆ.

ಇಂಥ ಎಲ್ಲಾ ಆದರ್ಶಗಳನ್ನೂ ಶ್ರೀ ದೊಡ್ಡರಂಗೇಗೌಡರು ಸಫಲತೆಯಿಂದ ಪರಿಪಾಲಿಸಿಕೊಂಡು ಬಂದಿದ್ದಾರೆ. ಬೇರೆಯವರ ಪ್ರತಿಭೆಯನ್ನು ಮೆಚ್ಚಿ ಮುಕ್ತಕಂಠದಿಂದ ಹೊಗಳುವ ಸಂಸ್ಕಾರವಂತ ಮನಸ್ಸು ಇವರದು. ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ನಾವಿಬ್ಬರೂ ಕೆಲಸಮಾಡಿದಾಗ ಅವರ ಈ ಹೃದಯವಂತಿಕೆಯನ್ನ ಗುರುತಿಸಿದ್ದೇನೆ. ಇಂತಹ ಸಹೃದಯ ವ್ಯಕ್ತಿ ಶ್ರೀ ದೊಡ್ಡರಂಗೇಗೌಡರು ಕಾವ್ಯಲೋಕದಲ್ಲಿ ಇನ್ನೂ ಎತ್ತರಕ್ಕೆ ಬೆಳೆಯಲಿ ಎಂದು ತುಂಬುಮನಸ್ಸಿನಿಂದ ಹಾರೈಸುತ್ತೇನೆ. ದೇವರು ಅವರಿಗೆ ಆಯುರಾರೋಗ್ಯವನ್ನೂ, ತಾಕತ್ತನ್ನೂ, ಅವಕಾಶಗಳನ್ನೂ ದಯಪಾಲಿಸಲಿ ಎಂದು ಹಾರೈಸೋಣ.

* * *

ಈ ಜಗವೊಂದು ಹುಚ್ಚರ ಸಂತೆ
ಇಲ್ಲಿ ಒಬ್ಬೊಬ್ಬನಿಗೂ ಹುಚ್ಚಿನ ಒರತೆ
ಒಬ್ಬನಿಗೆ ಪ್ರೀತಿ, ಮತ್ತೊಬ್ಬನಿಗೆ ಕೀರ್ತಿ ಚಿಂತೆ
ಧನ, ಕನಕ - ಎಲ್ಲ ಹುಚ್ಚೇ - ಮಣ್ಣಿನ ಮಗ

* * *

# ಚಿತ್ರ ಜಗತ್ತಿನಲ್ಲಿ ಗೌಡರ ಪ್ರತಿಭೆ

✍ ರಾಜನ್ - ನಾಗೇಂದ್ರ
*ಸಂಗೀತ ನಿರ್ದೇಶಕರು*

ನಾವು ೧೯೭೪ರನೇ ವರ್ಷದಲ್ಲಿ ಮೊಟ್ಟ ಮೊದಲಿಗೆ off beat ಶೈಲಿಯ ಚಿತ್ರಕ್ಕೆ ಸಂಗೀತ ಸಂಯೋಜಿಸುವ ಅವಕಾಶ ಬಂತು. ಆ ಚಿತ್ರದ ನಿರ್ದೇಶಕರು ಶ್ರೀ ಮಾರುತಿ ಶಿವರಾಮ್. ನಿರ್ದೇಶಕರ ಕಥೆಯ ಸ್ಕ್ರೀನ್ ಪ್ಲೇ ಪ್ರಕಾರ ಕೇವಲ ಹಿನ್ನೆಲೆ ಸಂಗೀತವನ್ನು ಮಾತ್ರ ಒದಗಿಸುವ ಕೆಲಸ. ಆದರೆ ಚಿತ್ರ ತಂಡದ ನಿರ್ಮಾಪಕರು ಮತ್ತು ಇತರರು ಶ್ರೀಯುತ ರಾಜನ್-ನಾಗೇಂದ್ರ ಅವರುಗಳನ್ನು ಸಂಗೀತ ನಿರ್ದೇಶಕರಾಗಿ ಗೊತ್ತು ಮಾಡಿಕೊಂಡು ಹಾಡುಗಳಿಲ್ಲದೆ ಚಿತ್ರ ಮಾಡುವುದಕ್ಕಿಂತ ಜಾನಪದಶೈಲಿಯ ಹಾಡುಗಳನ್ನು ಸಂಯೋಜನೆ ಮಾಡಿಸಿ ಚಿತ್ರವನ್ನು ಮಾಡುವುದರಿಂದ ಚಿತ್ರ ಯಶಸ್ವಿಯಾಗಬಲ್ಲುದೆಂದು ಅಭಿಪ್ರಾಯಪಟ್ಟರು. ಜಾನಪದ ಶೈಲಿಯ ಸಾಹಿತ್ಯ ಬರೆಯುವ ಒಬ್ಬರು ಕವಿಯನ್ನು ಮದ್ರಾಸಿಗೆ ಕರೆತರಲಾಯ್ತು. ಆ ಕವಿಯೇ ನಮ್ಮ ದೊಡ್ಡರಂಗೇಗೌಡರು.

ಅವರು ಮೊದಲು ನಿರ್ದೇಶಕರೊಡನೆ ಸಮಾಲೋಚನೆ ನಡೆಸಿ ಅನೇಕ ಬಗೆಯ ಸಾಹಿತ್ಯವನ್ನು ಬರೆದು ಅನಂತರ ನಮ್ಮೊಡನೆ ಕುಳಿತು ಚಿತ್ರದ ಕತೆಯ ಸಂದರ್ಭಕ್ಕೆ ಅನುಗುಣವಾಗಿ ಹಾಡುಗಳನ್ನು ಬರೆಯಲಾರಂಭಿಸಿದರು ಆ ಹಾಡುಗಳನ್ನು ಜಾನಪದ ಶೈಲಿಯಲ್ಲಿ ಅರ್ಥವತ್ತಾಗಿ ಸುಲಭವಾಗಿ ಹಾಡಬಲ್ಲ ಕನ್ನಡ ಪದಗಳನ್ನು ಬಳಸಿ ಬರೆದಿದ್ದುದರಿಂದ ಆ ಹಾಡುಗಳು ಪ್ರಸಿದ್ಧವಾದವು.

"ತೇರನೇರಿ ಅಂಬರದಾಗೆ ನೇಸರು ನಗುತಾನೆ ಮರಗಿಡ ತೂಗ್ಯಾವೆ ಹಕ್ಕಿ ಹಾಡ್ಯಾವೇ" "ನೋಟದಾಗೆ ನಗೆಯ ಮೀಟಿ ಮೋಜಿನಾಗೆ ಎಲ್ಲೆಯ ದಾಟಿ ಮೋಡಿಯ ಮಾಡಿದೋಳ ಪರಸಂಗ ಐತೇ" "ನಿನ್ನ ರೂಪ ಎದೆಯ ಕಲಕಿ ಕಣ್ಣು ಮಿಂದಾಗ" ಈ ಹಾಡುಗಳೇ ಪರಸಂಗದ ಗೆಂಡೆ ತಿಮ್ಮ ಚಿತ್ರದ ಯಶಸ್ಸಿಗೆ ಕಾರಣವಾಯಿತು.

ಆ ಚಿತ್ರವು ಅನೇಕ ಊರುಗಳಲ್ಲಿ ೧೦೦ ದಿನಗಳನ್ನು ಆಚರಿಸಿದವು. ಅದರಲ್ಲೂ ಆ ಚಿತ್ರವು ಕೇವಲ ಹಿಂದಿ ಚಿತ್ರಗಳಲ್ಲಿ ನಡೆಯುತ್ತಿದ್ದ ಬೆಂಗಳೂರಿನ ಅಲಂಕಾರ್ ಥಿಯೇಟರ್ ನಲ್ಲಿ ೧೦೦ ದಿನಗಳು ಕನ್ನಡ ಜಾನಪದ ಚಿತ್ರಗಳ ಚರಿತ್ರೆಯಲ್ಲೇ ದಾಖಲೆಯನ್ನು ಸಾಧಿಸಿತು.

ಆ ಚಿತ್ರಕ್ಕಾಗಿ ೧೯೭೪ರಲ್ಲಿ ಕರ್ನಾಟಕ ಸರ್ಕಾರದಿಂದ ನಮಗೆ ಪ್ರಶಸ್ತಿ ಕೂಡಾ ದೊರೆಯಿತು ಮತ್ತು ಮದ್ರಾಸಿನ ಕರ್ನಾಟಕದ ಅನೇಕ ಸಂಘ, ಸಂಸ್ಥೆಗಳಿಂದಲೂ ಪ್ರಶಸ್ತಿಗಳು ಬಂದವು. ಅದೇ ಪ್ರಕಾರ ದೊಡ್ಡರಂಗೇಗೌಡರಿಗೂ ಸನ್ಮಾನಗಳು ಮತ್ತು ಪ್ರಶಸ್ತಿಗಳು ಬಂದವು. ಆ ಚಿತ್ರದ ನಂತರ ಅನೇಕ ಚಿತ್ರಗಳಿಗೆ ದೊಡ್ಡರಂಗೇಗೌಡರು ಮತ್ತು ನಾವು ಸೇರಿ ಸಂಯೋಜಿಸಿದ ಹಾಡುಗಳು ಪ್ರಸಿದ್ಧವಾದವು.

೧೯೯೪ರಲ್ಲಿ "ಗಣೇಶನ ಮದುವೆ" ಚಿತ್ರದ "ಅನುರಾಗ ತೋಟದಲ್ಲಿ ಹೂವಂತೆ" ಹಾಡಿನ ಸಾಹಿತ್ಯ ರಚನೆಗಾಗಿ ಕರ್ನಾಟಕ ಸರ್ಕಾರದ ಅತ್ಯುತ್ತಮ "ಗೀತರಚನೆಕಾರ" ಪ್ರಶಸ್ತಿ ದೊಡ್ಡರಂಗೇಗೌಡರಿಗೆ ದೊರೆತುದು ಹೆಮ್ಮೆಯನ್ನುಂಟು ಮಾಡಿದೆ.

ಚಲನ ಚಿತ್ರದ ಸಂದರ್ಭಗಳಿಗೆ ಸಾಹಿತ್ಯ ರಚನೆ ಮಾಡುವುದು ಅಷ್ಟು ಸುಲಭ ಸಾಧ್ಯವಾದ ವಿಷಯವಲ್ಲ. ಇದಕ್ಕೆ ಚಲನ ಚಿತ್ರದ ಸಂದರ್ಭಕ್ಕೆ ಅನುಗುಣವಾಗಿ ಮತ್ತು ಹಾಡಿನ ಮಟ್ಟಿನ ತಾಳಕ್ಕೆ ಸರಿಯಾಗಿ ಕೇಳಿದೊಡನೆ ಸುಲಭವಾಗಿ ಅರ್ಥವಾಗುವಂತೆ ಸಾಹಿತ್ಯ ಬರೆಯುವ ಪ್ರೌಢಿಮೆ ಬೇಕಾಗಿರುವುದು.

ಇಂಥ ಪ್ರೌಢಿಮೆ ಪಡೆದಿರುವ, ಚಲನಚಿತ್ರ ಪ್ರಪಂಚದಲ್ಲೂ, ಮತ್ತು ಕನ್ನಡ ಸಾಹಿತ್ಯ ಪ್ರಪಂಚದಲ್ಲೂ ಮತ್ತು ವಿದ್ಯಾ ಸಂಸ್ಥೆಯಲ್ಲೂ ದುಡಿದು ತಮ್ಮ ಪ್ರತಿಭೆಯನ್ನು ಬೆಳೆಸಿಕೊಂಡು ಬಂದಿರುವ ದೊಡ್ಡರಂಗೇಗೌಡರು ಇನ್ನೂ ಅನೇಕ ವರ್ಷಗಳ ಕಾಲ ಕನ್ನಡ ನಾಡಿನಲ್ಲಿ ತಮ್ಮ ಸೇವೆಯನ್ನು ಮಾಡುತ್ತಾ ಕೀರ್ತಿವಂತರಾಗಿ ಬಾಳಲೆಂದು ನಾವು ಹೃತ್ಪೂರ್ವಕವಾಗಿ ದೇವರನ್ನು ಪ್ರಾರ್ಥಿಸುತ್ತೇವೆ.

## ಧೀಮಂತ ಕವಿ

✍ ಸಮೇತನಹಳ್ಳಿ ರಾಮರಾಯ

ದ್ರಾಕ್ಷಿಯ ಹಣ್ಣನ್ನು ಒಂದೊಂದಾಗಿಯೇ ಬಾಯಿಗೆ ಹಾಕಿಕೊಂಡು ಸವಿಯುವ ಸಮ್ಮೋದ ದೊ.ರಂ.ಗೌರ "ಮಣ್ಣಿನ ಮಾತುಗಳು" ಕೃತಿಯಲ್ಲಿ ಸಿಕ್ಕುತ್ತವೆ.

ಲೇಖಕರಲ್ಲಿಯಾದರೂ ಕೂಡ ಈ ನಿತ್ಯ ಪ್ರತಿಭೆಯನ್ನು ಅಪರೂಪಕ್ಕೊಮ್ಮೆ ಕಾಣುತ್ತೇವೆ. ದೊ.ರಂ.ಗೌಡ ಅಂತಹ ಧೀಮಂತ ಕವಿಗಳ ಪಂಕ್ತಿಯಲ್ಲಿದ್ದಾರೆ. ಅವರ ಮುಕ್ತಕಗಳ ಸಂಗ್ರಹ ದಿವ್ಯವಾಗಿದೆ.

ದೊಡ್ಡರಂಗೇಗೌಡರು ಕರ್ನಾಟಕದ ಮೂರ್ಧನ್ಯ ಕವಿಗಳಲ್ಲೊಬ್ಬರು. ಗದ್ಯ ಪದ್ಯಗಳೆರಡರಲ್ಲೂ ಪರಿಣಿತರು. ಸಾಹಿತ್ಯದ ಸರ್ವಪ್ರಕಾರಗಳಲ್ಲಿಯೂ ಅಭಿಜ್ಞತೆಯನ್ನು ಗಳಿಸಿದವರು. ಮೇಲಾಗಿ ಸುಭಾಷಿತರು, ಸಂಭಾವಿತರು.

# ಸ್ನೇಹ ಸಂಪನ್ನ ದೊರಂಗೌ

ಡಾ|| ಪಿ. ವಿ. ಕುಲಕರ್ಣಿ

ನನ್ನ ಗೌಡರ ಗೆಳೆತನ ಉಂಟಾದದ್ದು ಕ್ಲಾಸ್ ರೂಂನಲ್ಲಿ ಪಾಠ ನಡೆಯುತ್ತಿರುವಾಗ ನಾವು ಮಾಡುತ್ತಿದ್ದ ಚೇಷ್ಟೆಯ ಪ್ರಸಂಗದಿಂದ ಸಾಹಿತ್ಯಭ್ಯಾಸಿಗಳಾದ ನಮಗೆ ಆಸಕ್ತಿ ಹಾಗೂ ಪ್ರೇರಣೆ ಚಿಮ್ಮುತ್ತಿದ್ದ ಜಾಗ ತರಗತಿಯೇ ಆಗಿತ್ತು. ನಮ್ಮ ಗುಂಪಿನ ಮಿತ್ರರಿಗೆ ಕಾವ್ಯದ ಕೃಷಿಗೆ ನೆರವಾಗುತ್ತಿದ್ದೆವು, ಹುಮ್ಮಸ್ಸು ತುಂಬಿ, ಲಘುಹಾಸ್ಯದಿಂದ ಮೊದಲಾಗಿ ಲೇವಡಿಯವರೆಗಿನ ಕಾವ್ಯದ ಓಟಕ್ಕೆ ಸ್ಫೂರ್ತಿ ಕೇಂದ್ರವೂ ಪೋಷಕರೂ ಆಗಿದ್ದವರು ಗೌಡರು.

ಒಮ್ಮೊಮ್ಮೆ ಐದಾರು ಮಂದಿ ಸೇರಿ ಇಡೀ ಪೀರಿಯಡ್ಡಿನಲ್ಲಿ ಕಾವ್ಯವನ್ನು ಹುಟ್ಟುಹಾಕಿದ್ದೂ ಉಂಟು. ನಾನು -ಗೌಡರಿಬ್ಬರೇ ಬರೆದಾಗ ಗೌಡ ಕುಲಕರ್ಣಿ ಎಂಬ ಹೆಸರಿನಿಂದ ಬರೆದು, ಖುಷಿ ಪಟ್ಟದ್ದು ಉಂಟು. ನನ್ನ ಮತ್ತು ಮೊದಲ ಕವನ ಪೂತನಿಯ ಕಂಡಾಗ ...ವಿಡಂಬನಾತ್ಮಕವಾಗಿ ಹೆಣ್ಣಿನ ಸೆಳೆತವನ್ನು ಸೂಚಿಸುವ ನವಿರಾದ ಹಾಸ್ಯ ವ್ಯಕ್ತಪಡಿಸುತ್ತಿತ್ತು. ಅದನ್ನು ಕಂಡ ಗೌಡರು ಎಲ್ಲರಿಗೂ ಕಾವ್ಯಕ್ಕೆ ನೆಲೆಯಾಗಿ ರಂಭೆ ಊರ್ವಶಿ ಮೇನಕೆ, ತಿಲೋತ್ತಮೆಯರು ಧಾಳಿ ಇಟ್ಟರೆ ನಮ್ಮ ಕುಲಕರ್ಣಿಗೆ ಪೂತನಿಯೇ ತೆಕ್ಕೆ ಬಿದ್ದಿದ್ದಾಳೆ" ಎಂದು ತಿಳಿಯಾಗಿಯೇ ಹಾಸ್ಯ ಚಟಾಕಿ ಹಾರಿಸುತ್ತಿದ್ದರು.

ಗೌಡರ ಎಲ್ಲರೊಂದಿಗಿನ ಸ್ನೇಹ ಎಷ್ಟರ ಮಟ್ಟಿಗೆ ಇತ್ತೆಂದರೆ ಅದು ಸ್ನೇಹವೇ ಆಗಿತ್ತು. ಅದಕ್ಕೆ ಯಾವ ವಿಧವಾದ ಅಂಟು-ನಂಟುಗಳೂ ಅಂಟಿಕೊಳ್ಳದ ನಿಷ್ಕಳಂಕ, ನಿಷ್ಕಲ್ಮಶ ಸ್ನೇಹ ಸಿಂಚನವೇ ಆಗಿತ್ತು. ಇದು ನಮ್ಮ ಮೂರು ವರ್ಷದ ಗೆಳೆತನದಲ್ಲಿ ನಾನು ಕಂಡು ಕೊಂಡ ಗೌಡರ ವ್ಯಕ್ತಿತ್ವ.

ನಾನೀಗ ಹೊಟ್ಟೆ ಪಾಡಿಗಾಗಿ ಹೊರ ರಾಜ್ಯವನ್ನು (ಮಧುರೈ) ಸೇರಿ ಇಪ್ಪತ್ತೂಮ್ರು ವರ್ಷಗಳೇ ಆಗಿದೆ; ಇಂದಿಗೂ ಗೌಡರಲ್ಲಿ ಅದೇ ಸ್ನೇಹದ ಸೊಗಡು ನೆಲೆನಿಂತಿದೆ. ಕಳೆದೆರಡು ದಶಕಗಳಿಂದ ನಮ್ಮ ಅವರ ಭೇಟಿ ಪತ್ರಮುಖೇನ ಆಗುತ್ತಿದ್ದರೂ ಅವರಲ್ಲಿ ಅದೇ ಅಂತಃಕರಣ ನಿರ್ಮಲ ಸ್ನೇಹದ ಛಾಯೆಯೇ ಕಂಡಿದೆ. ನಾನು ಮಧುರೆ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕನಾಗಿ. ವೃತ್ತಿ ನಿರತನಾದ ನಂತರ ೧೯೮೬ರಲ್ಲಿ ಇಲ್ಲಿನ ಕರ್ನಾಟಕ ಸಂಘ ತನ್ನ ಬೆಳ್ಳಿಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸಿತು. ನಮ್ಮ ಆಮಂತ್ರಣಕ್ಕೆ ಬೆಲೆ ಕೊಟ್ಟೋ ಸ್ನೇಹದ ಸೆಳೆತದಿಂದಲೋ ಗೌಡರು ಬೆಳ್ಳಿ ಹಬ್ಬದಲ್ಲಿ ಪಾಲ್ಗೊಂಡು ತಮ್ಮ ಕವನದ ಕಂಪನ್ನು ಸ್ನೇಹದ ಸವಿಯನ್ನು ಹಂಚುವುದರ ಮೂಲಕ ಎಲ್ಲರ ಮನ್ನಣೆಗೂ ಪಾತ್ರರಾದರು. ಇದು ನಿಜಕ್ಕೂ ನನಗೆ ಹೆಮ್ಮೆ ತಂದ ವಿಷಯವಾಯಿತು.

ಅಧ್ಯಾಪಕರಾಗಿಯೂ ಗೌಡರು ವಿದ್ಯಾರ್ಥಿಮಿತ್ರರೊಂದಿಗೆ ಕಲೆತು ಕವಿಪ್ರತಿಭೆಯಿಂದಲೂ, ಸ್ನೇಹದ ಒಡನಾಟದಿಂದಲೂ ಎಲ್ಲರ ಮನಸ್ಸನ್ನು ಗೆದಿದ್ದಾರೆ.

ಆದರ ಕುರುಹಾಗಿ ಗೌಡರನ್ನು ಕುರಿತ "ಸೃಜನ-ಸಂಪನ್ನ" ಎಂಬ ಗೌರವ ಗ್ರಂಥವನ್ನು ಹೊರತರಿಸಲು ಕಾರ್ಯಕರ್ತರಾಗಿರುವುದು ಗಮನಾರ್ಹವಾದ ವಿಚಾರವೇ ಸರಿ.

ದೊಡ್ಡರಂಗೇಗೌಡರು ಮೊದಲಿನಿಂದಲೂ ಸದ್ದಿಲ್ಲದೆ ತಮ್ಮ ಕಾವ್ಯ ಕೃಷಿಯಲ್ಲಿ ತೊಡಗಿ ನಿರಪೇಕ್ಷೆಯಿಂದ ದುಡಿದು ನೇರದಾರಿಯಿಂದ ಹೆಸರು ಮಾಡಿಕೊಂಡವರು. ಕವಿಯಾಗಿ ಗೌಡರ ಆರೋಗ್ಯಕರವಾದ ರೀತಿಯಲ್ಲಿ ಬೆಳವಣಿಗೆ ಕಂಡುಕೊಂಡವರು. ಚಲನಚಿತ್ರಕ್ಕೆ ಗೀತೆರಚನೆ ಮಾಡುವುದರ ಮೂಲಕ ಹೆಚ್ಚಿನ ಪ್ರಚಾರವನ್ನು ಜನಪ್ರೀಯತೆಯನ್ನು ಗಳಿಸಿದರೆಂಬುದು ಕರ್ನಾಟಕ ಸಾಹಿತ್ಯವಲಯದಲ್ಲಿಯಲ್ಲದೆ ಚಿತ್ರರಸಿಕರಿಗೂ ತಿಳಿದ ಸಂಗತಿಯೇ ಆಗಿದೆ.

ಜಾನಪದ ಸೊಗಡಿನ ಅವರ ಕವನಗಳು ನಿಜಕ್ಕೂ ಸ್ತುತ್ಯರ್ಹವೇ ನಮ್ಮೂರ ಮಂದಾರ ಹೂವೇ.. ತೇರ ನೇರಿ ಅಂಬರದಾಗೆ ನೇಸರು ನಗುತಾನೆ .. ಮುಂತಾದ ಕವನಗಳಲ್ಲಿನ ಲಯ ವೈವಿಧ್ಯ, ಪ್ರಕೃತಿ ಸಹಜತೆ ಇಂದಿಗೂ ಆಲಿಸಿದ ಕಿವಿಗಳಲ್ಲಿ ದನಿಗೈಯುತ್ತಲೇ ಇವೆ. ಗೌಡರು ಸಿನಿಮಾಕ್ಕೆ ಸಾಹಿತ್ಯ ಕೊಟ್ಟಿದ್ದರಲ್ಲಿಯೂ ಒಂದು ವೈಶಿಷ್ಟ್ಯವಿದೆ. ಅವುಗಳಲ್ಲಿ ಅವರ ಸಾಹಿತ್ಯದ ಪ್ರಕೃತಿಯ ಬಗೆಗಿನ ಆಂತರಿಕ ತುಡಿತ ಕಳಕಳಿ ನೈಜ ಪ್ರೇಮ ಕಂಡುಬಂದಿದೆ.

ಒಟ್ಟಿನಲ್ಲಿ ನಮ್ಮ ಬಳಗದಲ್ಲಿಯೇ ಸಿನಿಮಾ ಗೀತೆಗಳಿಗೆ ವಾಸ್ತವಿಕ ಸತ್ಯದ ಅರಿವನ್ನು ನೀಡುವುದಲ್ಲದೆ ಜನಸಾಮಾನ್ಯರೆಲ್ಲರ ನಾಲಿಗೆಯ ಮೇಲೆ ನಲಿದಾಡುತ್ತಿರುವ ವ್ಯಕ್ತಿ ಬೇರಾರೂ ಅಲ್ಲದೆ ನಮ್ಮ ಗೌಡರೇ ಎಂಬ ಸಂಗತಿಯಿಂದ ಅಭಿಮಾನವೂ ಸಂತೋಷವೂ ಆಗಿದೆ.

## ಶ್ರೇಷ್ಠ ಸಾಹಿತಿ

✍ ಉಮೇಶ್ ಹುಲಿಕುಂಟೆ

ಶ್ರೇಷ್ಠ ಸಾಹಿತ್ಯಕ್ಕೆ ಪಂಡಿತೋತ್ತಮರ ಪ್ರಶಂಸೆಗೆ ಪಾತ್ರರಾದ ಸ್ನೇಹಪರರು ಅವರು, ಸೃಜನ ಶೀಲರು, ಸಂಭಾವಿತರು, ಶಿಷ್ಟ ಸಾಹಿತ್ಯ ಪ್ರತೀಕರು. ನಾಡಿನಾದ್ಯಂತ ಅಸಂಖ್ಯ ಅಭಿಮಾನಿಗಳನ್ನು ಹೊಂದಿದವರು.

ತಮ್ಮದೇ ಅದ ಛಾಪ ಮೂಡಿಸುವ ಛಾತಿವಂತ ಮೂರ್ತಿಗಳು. ಎಲ್ಲಕ್ಕೂ ಮಿಗಲಾಗಿ ಸರಸ್ವತಿಯ ನಿಷ್ಠಾವಂತ ಸೇವಕರು.

# ಸಹೃದಯು, ಸರಳಜೀವಿ, ಕವಿ, ಶ್ರೀ ದೊಡ್ಡರಂಗೇಗೌಡರು

✍ ಗೋವಿಂದಹಳ್ಳಿ ದೇವೇಗೌಡ

ಕನ್ನಡದ ಖ್ಯಾತ ಕವಿ ಶ್ರೀ ದೊಡ್ಡ ರಂಗೇಗೌಡರನ್ನು ವಿದ್ಯಾರ್ಥಿಗಳು ಹಾಗೂ ಅವರ ಅಭಿಮಾನಿಗಳು ಸಂಭಾವನಾ ಗ್ರಂಥವನ್ನು ಅರ್ಪಿಸುವುದರ ಮೂಲಕ ಸನ್ಮಾನಿಸುತ್ತಿರುವುದು ಬಹಳ ಸಂತಸದ ವಿಷಯ. ಇಂತಹ ಸುಸಂದರ್ಭದಲ್ಲಿ ಶ್ರೀ ಗೌಡರ ಗೀತೆಗಳ ಅಭಿರುಚಿ, ಸಂಸ್ಕೃತಿ ಹಾಗೂ ಅವರ ಕನ್ನಡತನದ ಬಗ್ಗೆ ನನ್ನ ಅನಿಸಿಕೆಯನ್ನು ಈ ಲೇಖನಿಯ ಮೂಲಕ ತೋಡಿಕೊಳ್ಳಲು ಅವಕಾಶ ದೊರೆಯುತ್ತಿರುವುದು ನನ್ನ ಭಾಗ್ಯವೇ ಸರಿ. ಅದಕ್ಕೆ ಮುನ್ನ ಶ್ರೀ ಗೌಡರ ಬಗ್ಗೆ ಹಾಗೂ ಅವರ ಗೀತೆಗಳ ಬಗ್ಗೆ ದಿನಾಂಕ 1.9.1986ರಂದು ಗೌಡರ "ಹೋಳಿ ಹುಣ್ಣಿಮೆ" ಧ್ವನಿ ಸುರುಳಿಯನ್ನು ಬಿಡುಗಡೆ ಮಾಡಿದ ಸಂದರ್ಭದಲ್ಲಿ ಹಿರಿಯರು ಆಶೀರ್ವದಿಸಿದ ಕೆಲವು ಮಾತುಗಳನ್ನು ಇಲ್ಲಿ ಉಲ್ಲೇಖಿಸಲು ಇಚ್ಛಿಸುತ್ತೇನೆ.

**ಸಾಹಿತ್ಯ - ಸಂಗೀತದ ಸಂಯೋಗ; ಒಂದು ಸುಯೋಗ**
**ಕನ್ನಡ ಕಣ್ಮಣಿ ಡಾ. ರಾಜಕುಮಾರ್**

ಸಮಾಜದಲ್ಲಿ ಸಂಸ್ಕೃತಿ, ಸದ್ಭಾವನೆ, ಶಾಂತಿ, ಸುಖ ನೆಲೆಸಬೇಕಾದರೆ ಸಾಹಿತ್ಯ ಒಂದು ಮುಖ್ಯವಾದ ಅಂಗ. ತಮ್ಮ ಸಾಹಿತ್ಯದ ಮೂಲಕ ಜೀವನದ ಅಂತರಾಳವನ್ನು ಶ್ರೀ ದೊಡ್ಡರಂಗೇಗೌಡರು ತೋಡಿಕೊಂಡಿದ್ದಾರೆ. ಶ್ರೀ ಗೌಡರೂ ಹಳ್ಳಿಯಿಂದ ಬಂದ ಒಬ್ಬ ಸಾಹಿತಿ, ನಾನೂ ಸಹ ಹಳ್ಳಿಯಿಂದಲೇ ಬಂದ ಒಬ್ಬ ಕಲಾವಿದ. ಹಳ್ಳಿಯ ಜೀವನ ಎಷ್ಟು ಸತ್ಯ ಎಂಬುದನ್ನು ಅನುಭವಿಸಿದವರಿಗೆ ಅದರ ಸುಖದ ಸವಿ ಸಿಗುತ್ತದೆ. ಅದರ ಬಗ್ಗೆಯೇ ಸಹ ಸ್ವಾಭಿಮಾನ, ಅಭಿಮಾನವನ್ನು ಮೈಗೂಡಿಸಿಕೊಂಡಿದ್ದಾರೆ. ಅವರು ರಚಿಸುವ ದೇಶಭಕ್ತಿ, ಕನ್ನಡದ ಭಾವಗೀತೆಗಳನ್ನು ಹಾಡುವ ಸುಸಂದರ್ಭವನ್ನು ತಾಯಿ ಭುವನೇಶ್ವರಿ ಆದಷ್ಟು ಬೇಗ ಕರುಣಿಸಲಿ ಎಂದು ಹೇಳುತ್ತಾ ಒಳ್ಳೆಯ ಚಲನಚಿತ್ರ ನೋಡುವುದರ ಜೊತೆಗೆ ಕನ್ನಡ ಸ್ಫೂರ್ತಿ, ದೇಶಭಕ್ತಿ ಗೀತೆಗಳ ಮೂಲಕ ಕ್ರಾಂತಿ ಕನ್ನಡಪರ ಮೊಳಗಲಿ ಎಂದು ಸಮಾರಂಭವನ್ನು ಉದ್ಘಾಟಿಸುತ್ತಾ ಹಾರೈಸಿದರು.

**ದೇಶಭಕ್ತಿಗೆ ಸ್ಫೂರ್ತಿ ನೀಡುವಂತಹ ಭಾವಗೀತೆಗಳು ಮೂಡಿಬರಲಿ**
**ಡಾ. ಹೆಚ್. ನರಸಿಂಹಯ್ಯ**

ಸ್ವಾತಂತ್ರ್ಯಕ್ಕೆ ಮುನ್ನ ಇದ್ದ ದೇಶಪ್ರೇಮ ಸ್ವಾತಂತ್ರ್ಯದ ನಂತರ ಜನತೆಯಲ್ಲಿ ದಿನೇ ದಿನೇ ನಶಿಸುತ್ತದೆ. ಇಂದಿನ ಮಾನವ ಪ್ರಜ್ಞೆ ಬೆಳೆಯಲು ಸಿನಿಮಾ

ಸಂಗೀತವೂ ಸಹ ಒಂದು ಮುಖ್ಯ ಸಾಧನವಾಗಿದೆ. ಇದರ ಮೂಲಕ ಭಾವಗೀತೆಗಳ ಜೊತೆಗೆ ದೇಶಭಕ್ತಿ ಗೀತೆಗಳು ಹೆಚ್ಚು ಹೆಚ್ಚಾಗಿ ಮೂಡಿಬರಲಿ. ಅಂತಹ ಗೀತೆಗಳನ್ನು ರಚಿಸುವುದರಲ್ಲಿ ಶ್ರೀ ದೊಡ್ಡರಂಗೇಗೌಡರು ಸಮರ್ಥರಾಗಿದ್ದಾರೆ. ಅವರ ಶ್ರದ್ಧೆ, ದೇಶಭಕ್ತಿ ಕನ್ನಡದ ಶಕ್ತಿಗೆ ಹೆಚ್ಚು ಪ್ರೋತ್ಸಾಹ, ಪುರಸ್ಕಾರ ಸಿಗಲಿ ಎಂದು ಡಾ|| ಹೆಚ್. ನರಸಿಂಹಯ್ಯನವರು ಅಧ್ಯಕ್ಷತೆ ಸ್ಥಾನದಿಂದ ಆಶೀರ್ವದಿಸಿದರು.

**ಶ್ರೀ ದೊಡ್ಡರಂಗೇಗೌಡರು ಒಬ್ಬ ನಿಷ್ಠಾವಂತ, ದೇಶಭಕ್ತ ಸಾಹಿತಿ**
**ಡಾ. ಸಿದ್ಧಯ್ಯ ಪುರಾಣಿಕ**

ಹಳ್ಳಿಯ ಸತ್ವ ಜೀವನವನ್ನು ಮೈಗೂಡಿಸಿಕೊಂಡು ಭಾವಗೀತೆಗಳ ಜೊತೆಗೆ ಚಲನಚಿತ್ರ ಲೋಕದಲ್ಲಿಯೂ ಖ್ಯಾತ ಸಾಹಿತಿಗಳಾಗಿ ಕನ್ನಡದ ಬಗ್ಗೆ ಕಳಕಳಿಯನ್ನಿಟ್ಟುಕೊಂಡಿರುವ ಶ್ರೀ ದೊಡ್ಡರಂಗೇಗೌಡರು ನಿಜವಾಗಿಯೂ ಒಬ್ಬ ನಿಷ್ಠಾವಂತ, ನಾಡಭಕ್ತ ಸಾಹಿತಿ, ಎಂಬುದನ್ನು ಅವರ ಸಾಹಿತ್ಯ ಎತ್ತಿ ತೋರಿಸುತ್ತದೆ. ಕೆಲವೇ ಕೆಲವು ಶ್ರೇಷ್ಠ ಸಾಹಿತಿಗಳ ಸಾಲಿನಲ್ಲಿ ಶ್ರೀ ಗೌಡರೂ ಒಬ್ಬರು ಎಂದು ಧ್ವನಿಸುರುಳಿಯನ್ನು ಬಿಡುಗಡೆ ಮಾಡುತ್ತಾ ಗೌಡರ ಬಗ್ಗೆ ಮಾತನಾಡಿದರು.

ಹೀಗೆ ಶ್ರೀ ದೊಡ್ಡರಂಗೇಗೌಡರ ಸಾಹಿತ್ಯದ ಮೂಲಕ ಅವರ ಅಂತರಂಗದ ವ್ಯಕ್ತಿತ್ವ, ಕನ್ನಡದ ಅಭಿಮಾನ, ತಾಯ್ನಾಡ ಸ್ವಾಭಿಮಾನವನ್ನು ಹಿರಿಯರು ಗುರುತಿಸಿ ಆಶೀರ್ವದಿಸಿದ್ದಾರೆ.

ಸಾಮಾನ್ಯವಾಗಿ ಒಬ್ಬ ಕವಿಯು ಬರೆದ ಕಾವ್ಯಗಳನ್ನು ಮತ್ತೊಬ್ಬರು ವಿಮರ್ಶೆ ಮಾಡಬೇಕಾದರೆ ಕಾವ್ಯ ಮೀಮಾಂಸೆಯಲ್ಲಿ ಬಹಳ ಪರಿಶ್ರಮ ಹೊಂದಿರಬೇಕು. ಯಾವುದೇ ಕವಿಯು ತನ್ನ ಅಂತರಂಗದ ಭಾವನೆಯನ್ನು ಯಾವ ದೃಷ್ಟಿಯಿಂದ ಬರೆದಿದ್ದಾನೆ ಎಂಬುದನ್ನು ಅರಿಯಲು ಕಷ್ಟದ ಕೆಲಸ. ಆದರೆ ಒಬ್ಬರ ಕಾವ್ಯ ವಿಮರ್ಶೆ ಮಾಡಬೇಕಾದರೆ ಅಥವಾ ಕವಿಯ ಅಂತರಂಗದ ಭಾವನೆಯನ್ನು ತಿಳಿದುಕೊಳ್ಳಬೇಕಾದರೆ ಆ ಕವಿಯನ್ನು ಬಹಳ ಹತ್ತಿರದಿಂದ ನೋಡಿರಬೇಕು. ಅವರ ಒಡನಾಡಿಯಾಗಿ ಓಡಾಡಿರಬೇಕು. ಅವರ ಕೃತಿಗಳನ್ನು ಓದಿ ಜೀರ್ಣಿಸಿಕೊಂಡಿರಬೇಕು. ಆಗ ಮಾತ್ರ ಅಂತಹ ಕವಿಯ ಕೃತಿಗಳ ಬಗ್ಗೆ ಸ್ವಲ್ಪಮಟ್ಟಿಗೆ ಅರ್ಥವಾಗುವಂತೆ ಬರೆಯಬಹುದು.

ಶ್ರೀ ದೊಡ್ಡರಂಗೇಗೌಡರನ್ನು ಹತ್ತಿರದಿಂದ ತಿಳಿದುಕೊಂಡಿರುವ ನಾನು ಅವರ ಕವಿತೆಗಳನ್ನು, ಹಾಡುಗಳನ್ನು ಓದುತ್ತಾ, ಕೇಳುತ್ತಾ ಆಗಾಗ ಮೆಲುಕು ಹಾಕುತ್ತಿರುವ ನನಗೆ ಅವರ ಗುರಿಯೂ, ನನ್ನ ಗುರಿಯೂ ಸ್ವಲ್ಪ ಮಟ್ಟಿಗೆ ಹತ್ತಿರದಲ್ಲಿರುವಂತೆ ಭಾಸವಾಗುತ್ತದೆ. ಆದಕಾರಣ ಅವರ ಕವಿತೆಗಳ ಬಗ್ಗೆ ನನಗೆ ತಿಳಿದ ಮಟ್ಟಿಗೆ ಬರೆಯಲು ಪ್ರಯತ್ನಿಸಿದ್ದೇನೆ. ಅವರ ಕವಿತೆಗಳನ್ನೆಲ್ಲಾ ಅರ್ಥೈಸುತ್ತಾ ಹೋದರೆ ನೂರಾರು ಪುಟಗಳ ಗ್ರಂಥವನ್ನೇ ರಚಿಸಬಹುದು. ಆದರೆ ಸ್ಥಳಾವಕಾಶವಿಲ್ಲದ್ದರಿಂದ ಒಟ್ಟಾರೆ ಅರ್ಥವನ್ನು ಒಂದೆರಡು ಪುಟಗಳಿಗೆ ಸೀಮಿತಗೊಳಿಸಿ ಬರೆಯಲು ಪ್ರಯತ್ನಿಸುತ್ತೇನೆ.

ಶ್ರೀ ಗೌಡರ ಕವಿತೆಗಳು 'ಜಗಲಿ ಹತ್ತಿ ಇಳಿದು' ಎಂಬ ಕವನ ಸಂಗ್ರಹದಿಂದ ಪ್ರಾರಂಭವಾಗಿ 'ಪ್ರೀತಿ ಪ್ರಗಾಥ'ದ ವರೆಗೂ ಸುಮಾರು ಇಪ್ಪತ್ತಕ್ಕೂ ಹೆಚ್ಚಿನ ಕವನ

ಸಂಗ್ರಹಗಳು ಪ್ರಕಟವಾಗಿವೆ. ಇವುಗಳ ಪೈಕಿ ನನಗೆ ಅತ್ಯಂತ ಪ್ರಿಯವಾಗಿ ಆಗಾಗ ಮೆಲುಕು ಹಾಕಲು ಮನಸ್ಸನ್ನು ಸೂರೆಗೊಂಡ ಕವನ ಸಂಗ್ರಹಗಳೆಂದರೆ 'ಮಣ್ಣಿನ ಮಾತುಗಳು' ಹಾಗೂ 'ಪ್ರೀತಿ ಪ್ರಗಾಥ'. ಈ ಎರಡು ಕೃತಿಗಳು ಓದುಗನನ್ನು ಸೆರೆಹಿಡಿಯುವುದರ ಜೊತೆಗೆ ಕವಿಯ ಶ್ರೇಷ್ಠತೆಯನ್ನು, ಗಟ್ಟಿತನವನ್ನು ತೋರುತ್ತವೆ.

ಚಲನಚಿತ್ರಗಳ ಹಾಡುಗಳೂ ಸಹ ಅಷ್ಟೇ ಆಕರ್ಷಣೀಯವಾಗಿವೆ. 'ಅರುಣರಾಗ' ಚಿತ್ರದ "ನಾನೊಂದು ತೀರ, ನೀನೊಂದು ತೀರ" ಎಂಬ ಹಾಡು ಕೇವಲ ಚಲನಚಿತ್ರ ಸಂದರ್ಭಕ್ಕೆ ಮಾತ್ರ ಸೀಮಿತವಾಗದೆ, ಇಡೀ ಬಾಳಿನ ಕಡಲಿನ ತೀರಕ್ಕೂ ಸಹ ಅನ್ವಯಿಸತಕ್ಕಂಥ ಒಂದು ಶ್ರೇಷ್ಠವಾದ ನೀತಿ ಬೋಧನೆಯ ಹಾಡಾಗಿದೆ. ಇಂತಹ ಅನೇಕ ನೀತಿ, ಬೋಧನೆಯ ಹಾಡುಗಳನ್ನು ಶ್ರೀ ಗೌಡರ ಸಾಹಿತ್ಯದಲ್ಲಿ ನಾವು ಕಾಣಬಹುದು.

ಶ್ರೀ ದೊಡ್ಡರಂಗೇಗೌಡರ ಕವನಗಳು ಯಾವುದೇ ನಾಯಕನ, ನಾಡ ಒಡೆಯನ, ತಾನೊಬ್ಬ ಬುದ್ಧಿಜೀವಿ, ಕವಿ, ಸಾಹಿತಿಯೆಂಬ ಗರ್ವದ ಹೃದಯದಿಂದ ಉಕ್ಕಿಬಂದ ಕವನಗಳಲ್ಲ. ಓರ್ವ ಸಾಮಾನ್ಯ ಮಾನವನ, ಮಾನವೀಯತೆ ಹೊಂದಿರುವ ಚಿಂತಕನೊಬ್ಬನ ಹೃದಯದಿಂದ ಮಿಡಿದು ಬಂದ ವಿಚಾರಗಳ ಸಾರ. ಜೀವನದಲ್ಲಿ ಬಡತನ ಸಿರಿತನಗಳನ್ನು ಹಗಲು ರಾತ್ರಿಗಳಂತೆ ಕಾಣುತ್ತಾ ತಮ್ಮ ಜೀವನದಲ್ಲಿ ಸ್ವತಃ ಅನುಭವಿಸಿದ ನೋವು, ನಲಿವುಗಳನ್ನು ತೋಡಿಕೊಳ್ಳುವಾಗ ಅವು ಮತ್ತೊಬ್ಬರ ಜೀವನದಲ್ಲಿಯೂ ಹಾಸು ಹೊಕ್ಕಿ ಅವರ ಹೃದಯವನ್ನೂ ಸಹ ಮಿಡಿಯುವಂತೆ ಮಾಡುವ ಭಾವಗಳನ್ನು ತುಂಬಿರುವ ಕವನಗಳಾಗಿವೆ. ಕಣ್ಣಿಗೆ ಕಾಣದ ಕನಸಿನ ಲೋಕದಲ್ಲಿ ವಿಹರಿಸಿ ಬರೆಯುವ ಭಾವನೆಗಳಿಗಿಂತ ನಿತ್ಯಜೀವನದಲ್ಲಿ ಕಂಡು ಕೇಳಿದ ಅನುಭವಿಸಿದ ಭಾವನೆಗಳೇ ಹೆಚ್ಚಾಗಿ ಮೂಡಿಬಂದಿದೆ. ಕವನಗಳನ್ನು ಓದಿದಾಗ ಅವುಗಳ ಅರ್ಥವನ್ನು ಮತ್ತೊಬ್ಬರಲ್ಲಿ ಕೇಳಿ ತಿಳಿದುಕೊಳ್ಳುವ ಆವಶ್ಯಕತೆ ಇಲ್ಲದೆ, ನೇರವಾಗಿ ಸರಳವಾಗಿ ಸಾಮಾನ್ಯನ ಹೃದಯವನ್ನು ಸ್ಪಂದಿಸುವಂತೆ ತಿಳಿಯಾದ ಅಚ್ಚ ಕನ್ನಡ ಬಾಷೆಯಲ್ಲಿ ಸ್ವಚ್ಛವಾಗಿ ಬರೆದಿದ್ದಾರೆ.

ಸಾಹಿತ್ಯವೆಂದರೆ ಅದು ಕೇವಲ ಕೆಲವೇ ಕೆಲವರ ಮಾತಿನ ಮಲ್ಲರ ದೇಗುಲವೆಂದು ಬೀದಿಯ ಮನುಷ್ಯರಿಗೆ ತೊರುತ್ತಿತ್ತೇ ವಿನಹಾ ಸಾಹಿತ್ಯವೂ ಸಹ ಸಾಮಾನ್ಯನ ಬದುಕಿಗೂ ಅವಶ್ಯಕವಾದ ವಸ್ತು. ಜೀವನವನ್ನು ಉನ್ನತಿಗೇರಿಸುವುದಕ್ಕೆ ಅವಶ್ಯಕವಾದ ಸಾಧನ. ಹಾಗೂ ಎಲ್ಲಾ ಜಾತಿ, ಮತ ಧರ್ಮದ ಎಲ್ಲಾ ಕಸುಬುಗಳ ಜನರಲ್ಲಿಯೂ ಜ್ಞಾನ, ವಿವೇಕ, ಪ್ರತಿಭೆಗಳನ್ನು ಬೆಳೆಸಿ ಅವರ ಧ್ಯೇಯಗಳನ್ನು ಉನ್ನತಗೊಳಿಸಿ ಅವರ ಲೌಕಿಕ ಯೋಗ್ಯತೆಯನ್ನು ಅಭಿವೃದ್ಧಪಡಿಸುವುದು ಸಾಹಿತ್ಯದ ಆದ್ಯಕರ್ತವ್ಯ ಎಂಬುದನ್ನು ಶ್ರೀ ಗೌಡರ ಸಾಹಿತ್ಯ ಕೃತಿ ನಿರೂಪಿಸಿದೆ.

ಸಾಹಿತ್ಯವೆಂದರೆ ಜೀವನದ ಕೊಳೆ ಕಲ್ಮಷಗಳನ್ನು ತೊಳೆಯಬಲ್ಲ ಪವಿತ್ರ ತೀರ್ಥ. ಮಾನವ ಪ್ರೀತಿ ವಿಶ್ವಾಸ ಗಳಿಸಬೇಕು ಎಂಬ ಹಿತನುಡಿಗಳನ್ನು ಹೊಂದಿರುವ ನೀತಿ ಭೋಧಕಗಳಿಂದ ಕೂಡಿರುವ ಗೌಡರ ಸಾಹಿತ್ಯ ಯಾವುದೇ ಸಂತ ಸಾಹಿತ್ಯಕ್ಕೂ ಕಮ್ಮಿ ಇಲ್ಲ.

ಸಾಹಿತ್ಯ ಕ್ಷೇತ್ರದಲ್ಲಿ ಸಾಹಿತಿಗಳು ಅಂತರಂಗ, ಬಹಿರಂಗವೆಂಬ ಎರಡು ದೃಷ್ಟಿಯಲ್ಲಿ ಬರೆಯುತ್ತಾರೆ. ಇಲ್ಲಿ ಶ್ರೀ ಗೌಡರ ಕವಿತೆಗಳು

ಅಂತರಂಗವನ್ನೊಳಗೊಂಡು ಅವುಗಳ ಸಾಚಾತನ, ಹಾಗೂ ತಾಜಾತನವನ್ನು ಹೊಂದಿದೆ.

"ಮಣ್ಣಿನ ಮಗನಾದ ಶ್ರೀ ಗೌಡರು ಮಣ್ಣಲ್ಲಿ ಚಿನ್ನವನ್ನು ತೆಗೆಯುವಂತೆ ಮಣ್ಣಿನ ಮಾತುಗಳಲ್ಲೇ ತಮ್ಮ ಕವಿತೆಯನ್ನು ಸಾಮಾನ್ಯನಿಗೂ ಸುಲಭದಲ್ಲಿ ನೇರವಾಗಿ ಅರ್ಥವಾಗುವ ರೀತಿಯಲ್ಲಿ ಸಾಹಿತ್ಯ ಕೃಷಿಯನ್ನು ಮಾಡಿರುವುದು ಒಂದು ವಿಶೇಷ. ದಯೆ ಇಲ್ಲದ ಧರ್ಮ ಯಾವುದಯ್ಯಾ ಎಂಬ ಬಸವಣ್ಣನವರ ನುಡಿಯಂತೆ 'ಪ್ರೀತಿ ಇಲ್ಲದ ಬದುಕು ಯಾವುದಯ್ಯಾ' ಎಂಬ ಅರ್ಥವನ್ನು ತಿಳಿಸುವ ಪ್ರೀತಿ ಪ್ರಗಾಥ ಇಂದಿನ ಪೀಳಿಗೆಗೊಂದು ಹಿರಿಯ ಕೊಡುಗೆಯಾಗಿದೆ.

ಭೂಮಿ ಅಂದರೆ ಕೇವಲ ಬೆಟ್ಟ ಗುಡ್ಡಗಳಿಂದ ಕೂಡಿದ ಮಣ್ಣುಗುಡ್ಡೆಯಲ್ಲ, ಭೂಮಿ ಅಂದರೆ ಭೂತಾಯಿ, ಜೀವಂತ ದೇವತೆ, ಭೂತಾಯಿ ಗರ್ಭದಲ್ಲಿರುವ ಒಂದೊಂದು ಜಡವಸ್ತುಗಳೂ ಸಹ ಜೀವಂತ ವಸ್ತುಗಳು ಎಂಬ ಭಾವನೆಯಿಂದ ತಮ್ಮ ಗೀತೆ, ಕಾವ್ಯ ಕವನಗಳ ರಚನೆಗಳ ಮೂಲಕ ಪ್ರಕೃತಿ ಮಾತೆಯನ್ನು ಆರಾಧಿಸಿದ್ದಾರೆ. ಭಾವಗೀತೆಯಾಗಲೀ, ಚಿತ್ರಗೀತೆಯಾಗಲೀ ಭಕ್ತಿಗೀತೆಯಾಗಲೀ, ಜನಪದ ಗೀತೆಯಾಗಲೀ ಪ್ರತಿಯೊಂದರಲ್ಲಿಯೂ ಪ್ರಕೃತಿಯ ಸೊಬಗನ್ನು ಆರಾಧಿಸುವುದರಲ್ಲಿ ಮಗ್ನರಾಗಿದ್ದಾರೆ ನಿಸರ್ಗ ದೇವಿಯ ಸೊಬಗನ್ನು ಸೌಂದರ್ಯವನ್ನು ಸುಂದರವಾಗಿ ವರ್ಣಿಸುತ್ತಾ ಪ್ರಕೃತಿ ಮಾತೆಯನ್ನು ಆರಾಧಿಸು ವುದರಲ್ಲಿಯೇ ಅವರ ಸಾಹಿತ್ಯ ಕೃಷಿ ಸಾಗಿದೆ. ಯಾವುದೇ ಕಂದಾಚಾರ, ಆಡಂಭರಕ್ಕೆ ಒಳಗಾಗದೆ ತೆರೆದ ಹೃದಯದಿಂದ ಸಮಾಜದ ನೈಜತೆಯನ್ನು ತಮ್ಮ ಕಾವ್ಯದಲ್ಲಿ ಎತ್ತಿಹಿಡಿದಿದ್ದಾರೆ.

ಶ್ರೀ ದೊಡ್ಡರಂಗೇಗೌಡರು ಕೇವಲ ಪ್ರಾಧ್ಯಾಪಕರಾಗಿ, ಚಿತ್ರಸಾಹಿತಿಯಾಗಿ ಮಡಿವಂತಿಕೆಯ ಕವಿಗಳ ಗುಂಪಿಗೆ ಅಂಟಿಕೊಳ್ಳದೆ, ಕನ್ನಡಿಗರಲ್ಲಿ ಕನ್ನಡಿಗರಾಗಿ ಸಾಮಾನ್ಯರಲ್ಲಿ ಸಾಮಾನ್ಯರಾಗಿ, ಕನ್ನಡ ಸಂಘ ಸಂಸ್ಥೆಗಳ ಸಭೆ, ಸಮಾರಂಭಗಳಲ್ಲಿ ಭಾಗವಹಿಸಿ ನಾಡು, ನುಡಿಯ ಬಗ್ಗೆ ಜಾಗೃತಿ ಮೂಡಿಸುವುದರಲ್ಲಿ ಸಕ್ರಿಯ ಪಾತ್ರವನ್ನು ವಹಿಸಿದ್ದಾರೆ. ಕನ್ನಡತನವನ್ನು ಮೈಗೂಡಿಸಿಕೊಂಡಿರುವ ಶ್ರೀ ಗೌಡರು ಕನ್ನಡವೆಂದರೆ ತಮ್ಮ ಉಸಿರೆಂದೇ ಭಾವಿಸಿದ್ದಾರೆ. ಜನಪದ ಸಾಹಿತ್ಯವನ್ನೇ ತಮ್ಮ ಸಾಹಿತ್ಯ ಕೃತಿಗೆ ತಳಪಾಯವನ್ನಾಗಿ ಮಾಡಿಕೊಂಡಿರುವ ಶ್ರೀ ಗೌಡರು ಹಳ್ಳಿಯ ಭಾಷೆಯಲ್ಲಿ ತಮ್ಮ ಗೀತೆ, ಕವನಗಳನ್ನು ರಚಿಸುವುದರ ಮೂಲಕ ಗ್ರಾಮೀಣ ಭಾಷೆಗೆ ಹೆಚ್ಚಿನ ಸ್ಥಾನಮಾನವನ್ನು ನೀಡಿದ್ದಾರೆ. ಗ್ರಾಮೀಣ ಭಾಷೆಯೇ ನಶಿಸಿ ಹೋಗುತ್ತಿರುವ ಇಂದಿನ ಸಂದಿಗ್ಧ ಪರಿಸ್ಥಿತಿಯಲ್ಲಿ ಅಚ್ಚ ಕನ್ನಡಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡುತ್ತಿದ್ದಾರೆ.

ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲಿ ಬೆಳೆದು ಹಳ್ಳಿಯ ಭಾಷೆಯನ್ನೇ ಉಸಿರಾಗಿಸಿಕೊಂಡು ಬಾಳಿ ಬದುಕಿದ ವಿದ್ಯಾವಂತರೂ ನಾಗರೀಕರಾದೆವೆಂಬ ಸೋಗಿನಲ್ಲಿ ನಗರವಾಸಿಗಳಾದ ಮೇಲೆ ತಮ್ಮ ಮಾತೃಭಾಷೆಯಾದ ಅಚ್ಚ ಕನ್ನಡವನ್ನೇ ಮರೆತಿರುವವರಿಗೆ ಶ್ರೀ ಗೌಡರ ಸಾಹಿತ್ಯ ನೆನಪು ಮಾಡಿಕೊಳ್ಳುತ್ತದೆ. ಇಂತಹ ಕನ್ನಡತನವನ್ನು ಮೈಗೂಡಿಸಿಕೊಂಡಿರುವ ಶ್ರೀ ಗೌಡರ ಕನ್ನಡದ ಅಭಿಮಾನ, ತಾಯ್ನಾಡ ಸ್ವಾಭಿಮಾನ, ದೇಶಭಕ್ತಿ ಇಡೀ ಕನ್ನಡ ಕುಲಕೋಟಿಗೆ ಆದರ್ಶವಾಗಿದೆ.

ನಾ ಕಂಡ ಕವಿಯ ಸರಳ ಜೀವನ, ಸವಿಯಾದ ಮಾತು, ಸಹೃದಯ ಸಂಪನ್ನರಾಗಿರುವ ಶ್ರೀ ಗೌಡರು ಸಾಮಾನ್ಯರಲ್ಲಿ ಸಾಮಾನ್ಯರಾಗಿ ಬೆರೆತು ಅವರ

ಹೆಸರೇ ಹೇಳುವಂತೆ ದೊಡ್ಡರಂಗೇಗೌಡರು ದೊಡ್ಡವರಾಗಿಯೇ ತಮ್ಮ ದೊಡ್ಡಸ್ತಿಕೆಯನ್ನು ಬೆಳೆಸಿಕೊಂಡಿದ್ದಾರೆ. ಇಂತಹ ಒಬ್ಬ ಶ್ರೇಷ್ಠ ಕವಿಯ ಬಗ್ಗೆ ಅವರ ಅಭಿಮಾನಿಗಳು ಹಾಗೂ ವಿದ್ಯಾರ್ಥಿಗಳು ಸೇರಿ ಅವರಿಗೆ ಸನ್ಮಾನ ಸಮಾರಂಭವೇರ್ಪಡಿಸಿರುವ ಸಂದರ್ಭದಲ್ಲಿ "ಸೃಜನ ಸಂಪನ್ನ" ಎಂಬ ಕೃತಿ ಪ್ರಕಟವಾಗುತ್ತಿರುವುದು ತುಂಬಾ ಸಂತೋಷದ ವಿಷಯ.

ಇಂತಹ ಸುಸಂದರ್ಭದಲ್ಲಿ ಶ್ರೀಮಾನ್ ದೊಡ್ಡರಂಗೇಗೌಡರ ಬಗ್ಗೆ ಈ ಒಂದು ಸಣ್ಣ ಲೇಖನವನ್ನು ಬರೆಯಲು ಅವಕಾಶ ಸಿಕ್ಕಿದ್ದು ನನ್ನ ಪುಣ್ಯವೇ ಸರಿ. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಹೇಗೆ ಅಗ್ರಸ್ಥಾನ ಸಿಗಲಿಲ್ಲವೋ, ಅದರಂತೆ ನಿಜವಾಗಿ ಕನ್ನಡದ ಬಗ್ಗೆ ಕನ್ನಡ ನಾಡಿನ ಕಳಕಳಿ ಹೊಂದಿರುವ ಕನ್ನಡದ ಮಣ್ಣಿನ ಮಗನಾಗಿರುವ ಶ್ರೀ ಗೌಡರಿಗೆ ಸೂಕ್ತ ಸ್ಥಾನ, ಪ್ರಶಸ್ತಿಗಳನ್ನು ನೀಡಿ ಕರ್ನಾಟಕ ಸರ್ಕಾರ ತಮ್ಮ ಘನತೆ ಗೌರವಗಳನ್ನು ಕಾಪಾಡಿಕೊಳ್ಳಲಿ. ಕನ್ನಡ ಸೇವೆಯನ್ನು ಸಾಹಿತ್ಯ ಕೃಷಿಯ ಮೂಲಕ ಮಾಡಲು ಪ್ರೋತ್ಸಾಹ, ಪುರಸ್ಕಾರ ಸಿಗಲಿ ಎಂದು ತಾಯಿ ಭುವನೇಶ್ವರಿಯಲ್ಲಿ ನನ್ನ ಕಳಕಳಿಯ ಪ್ರಾರ್ಥನೆ.

* * *

ಬದುಕು ಬರೀ ತಿನ್ನಲಿಕ್ಕಲ್ಲ, ದೇಹ ಕೇವಲ ಸುಖಿಸಲಿಕ್ಕಲ್ಲ
ಉಂಡುಟ್ಟು ನಲಿಯದೇ ಬಾಳುವೆಯ ಗುರಿಯಲ್ಲ-
ಮುಡಿಪಾಗಲಿ ನಿನ್ನ ಜೀವನ ಸರ್ವರ ಸೇವೆಗೆ
ಜೀವಿತ ಚಂದನವಾದರೆ ಸಾರ್ಥಕ - ಮಣ್ಣಿನ ಮಗ

* * *

ಗುರಿ ಇರದ ಹ್ರಾಸ ಜೀವ ಕುರಿಗೆ ಸಮಾನ
ಸಿರಿಗಳಿಗೆ ಪರಮ ಗುರಿ ಮರೆವ ದುಮ್ಮಾನ
ಪರಿ ಏನೇ ಆಗಿರಲಿ ನೀಯತ್ತೇ ಸನ್ಮಾನ
ಹಿರಿಯ ಗುರಿ ಮುಟ್ಟೆ ಸಾರ್ಥಕವೋ - ಮಣ್ಣಿನ ಮಗ

* * *

# ಇಪ್ಪತ್ತೈದು, ಐವತ್ತು, ನೂರು..

✍ ಶ್ಯಾಮಸುಂದರಕುಲಕರ್ಣಿ
ಪತ್ರಕರ್ತರು

ಮನುಷ್ಯನಿಗೆ ಈ ಲೋಕದಲ್ಲಿ ಕೆಲವೇ ನಿಮಿಷಗಳು. ಆಯುಷ್ಯ ಹೀಗಿರುವಾಗ ಹೇಗೆ ಈ ಆಯುಷ್ಯವನ್ನು ಕಳೆಯ ಬೇಕೆಂಬುದೇ ಅನೇಕರಿಗೆ ಸಮಸ್ಯೆ. ತಪಸ್ಸು ಮಾಡುತ್ತಾ ಗಂಗಾ ತೀರದಲ್ಲಿ ವಾಸಿಸೋಣವೇ? ಗುಣಗಳಿಂದ ಕೂಡಿದ ಪತ್ನಿಯರನ್ನು ಆಶ್ರಯಿಸೋಣವೆ? ನಾನಾ ಬಗೆಯ ಕಾವ್ಯ ರಸವನ್ನು ಕುಡಿಯೋಣವೆ? ಶಾಸ್ತ್ರ ಸಮೂಹಗಳನ್ನು ಅಧ್ಯಯನ ಮಾಡೋಣವೇ? - ಎಂಬ ಗೊಂದಲದಲ್ಲೇ ಅನೇಕರು ಆಯುಷ್ಯವನ್ನು ಸವೆಸುತ್ತಾರೆಂದು ಸಂಸ್ಕೃತದಲ್ಲೊಂದು ಸುಭಾಷಿತವಿದೆ.

ದೊಡ್ಡರಂಗೇಗೌಡರು ಇದಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳದೆ ಕಾವ್ಯ ರಸಾ ಸ್ವಾದನೆಯನ್ನೇ ತಮ್ಮ ಬದುಕಿನ ಧ್ಯೇಯವಾಗಿಟ್ಟುಕೊಂಡವರು. ಅವರ ವೃತ್ತಿ ಪ್ರವೃತ್ತಿ ಎರಡೂ ಕಾವ್ಯ. ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಅವರು ಕಾವ್ಯವನ್ನು ಬೋಧಿಸುತ್ತಾರೆ, ಕಾಲೇಜಿನ ಆವರಣದಿಂದ ದೂರ ಬಂದ ನಂತರ ಕಾವ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

ಎಲ್ಲರೂ ದೊಡ್ಡವರಾಗಬೇಕೆಂದು ಹಂಬಲಿಸುತ್ತಾರೆ. ಕೆಲವರು ಮಾತ್ರ ಆ ನಿಟ್ಟಿನಲ್ಲಿ ಪ್ರಯತ್ನವನ್ನು ನಡೆಸುತ್ತಾರೆ. ಆದರೂ ಅದೃಷ್ಟವುಳ್ಳವರು ಮಾತ್ರ ಸಫಲರಾಗುತ್ತಾರೆ. ಕೇವಲ ಪ್ರಯತ್ನವೊಂದೇ ಏಳಿಗೆಗೆ ಕಾರಣವಲ್ಲ ಎಂದು ಹೇಳುವವರೂ ಉಂಟು. ಗೌಡರು ಅದೃಷ್ಟವಂತರು, ದೊಡ್ಡರಂಗೇಗೌಡ ಎಂಬ ಅವರ ಹೆಸರು ಕೇಳಿದಾಗಲೇ ಅವರು ದೊಡ್ಡವರು ಎಂದು ಭಾಸವಾಗುತ್ತದೆ. ಆದರೆ 'ನಾಮಬಲವೊಂದರಿಂದಲೇ ತೃಪ್ತರಾಗದೆ, ಹೆಸರಿನಿಂದ ಮಾತ್ರ ದೊಡ್ಡವರೆನಿಸಲು ಇಷ್ಟ ಪಡದೆ ಪ್ರಯತ್ನ ಶೀಲರಾಗಿ, ಕಷ್ಟ ಪಟ್ಟು ದೊಡ್ಡವರಾದವರು ಅವರು.

ಈಗ ಗೌಡರಿಗೆ ಐವತ್ತು ತುಂಬಿದ್ದರ ಸವಿ ನೆನಪಿಗಾಗಿ ಚಿನ್ನದ ಹಬ್ಬವು ಸಂಭ್ರಮದಿಂದ ನಡೆಯುತ್ತಿದೆಯಲ್ಲ, ಅವರ ಜೀವನದ ಬೆಳ್ಳಿ ಹಬ್ಬದ ದಿನಗಳತ್ತ ಒಮ್ಮೆ ಹೊರಳಿ ನೋಡಿ, ಇಪ್ಪತ್ತೈದರ ಯುವಕನೊಬ್ಬನು, ಬೆಂಗಳೂರಂಥ ಮಹಾನಗರದಲ್ಲಿ ಬದುಕಿಗಾಗಿ ಇನ್ನೂ ಹೋರಾಡುತ್ತಿದ್ದ ದಿನಗಳವು.

ರಾತ್ರಿ ರೈಲ್ವೆ ನಿಲ್ದಾಣದ ಅಂಚೆ ವಿಭಾಗದಲ್ಲಿ ಕಾಯಕ. ಬೆಳಿಗ್ಗೆ ವ್ಯಾಸಂಗ. ಇದರ ನಡುವೆ ಸತ್ಸಂಗ. ಹಿರಿಯ ಕವಿಗಳು ಒಡನಾಟದಿಂದ ತಾನೂ ಕವಿಯಾಗಬೇಕು ಎಂಬ ಕನಸ್ಸನ್ನು ಕಣ್ತುಂಬ ತುಂಬಿಕೊಂಡು, ಕೈಗೆ ಸಿಕ್ಕ ಹಾಳೆಯಲ್ಲೆಲ್ಲ ಕವನಗಳನ್ನು ಹೆಣೆಯುತ್ತಾ - ಬದುಕಿನ ಬವಣೆಯನ್ನು ಮರೆಯುತ್ತಾ

ಕಾಲ ನೂಕುತ್ತಿದ್ದ ಕ್ಷಣಗಳವು. ನನ್ನ ಹಾಗೂ ದೊಡ್ಡರಂಗೇಗೌಡರ ಮೊದಲ ಭೇಟಿಯಾದದ್ದೂ ಅದೇ ದಿನಗಳಲ್ಲಿ - ಇಪ್ಪತ್ತೈದು ವರ್ಷ ಹಿಂದೆ.

ನಾನಾಗ 'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆಯ ಭಾನುವಾರದ ಪುರವಣಿಯನ್ನು ನೋಡಿಕೊಳ್ಳುತ್ತಿದೆ. ಇಂದಿನ ಅನೇಕ ಲೇಖಕ ಲೇಖಕಿಯರು ಮೊದಲ ಬರಹಗಳ ಹಸ್ತಪ್ರತಿಯನ್ನು ಹೊತ್ತುಕೊಂಡು ನಮ್ಮ ಕಛೇರಿಗೆ ಬಂದದ್ದುಂಟು. ಅವರ ಮೊದಲ ಕೃತಿಗಳು 'ಸಂಯುಕ್ತ ಕರ್ನಾಟಕ' ದಲ್ಲಿ ಪ್ರಕಟವಾದದ್ದೂ ಉಂಟು.

ಒಂದು ದಿನ ಮಿತ್ರ ಜಯಸುದರ್ಶನ ಅವರು ಒಬ್ಬ ಅಪರಿಚಿತ ವ್ಯಕ್ತಿಯನ್ನು ನನ್ನ ಬಳಿ ಕರೆದುಕೊಂಡು ಬಂದು ಪರಿಚಯಿಸಿದರು.

"ಇವರು ನನ್ನ ಗೆಳೆಯ ದೊಡ್ಡರಂಗೇಗೌಡರು, ಒಂದೆರಡು ಕವನಗಳನ್ನು ಪ್ರಕಟಣೆಗಾಗಿ ತಂದಿದ್ದಾರೆ" ಎಂದು ಅವರು ಹೇಳಿದರು.

"ಓದಿ ನೋಡಿ, ಚೆನ್ನಾಗಿದ್ದರೆ ಪ್ರಕಟಿಸಿ" ಎಂದು ಗೌಡರು ಹೇಳಿದರು.

ಮುದ್ದಾದ ಅಕ್ಷರ, ಸೊಗಸಾದ ಕವನಗಳು.

ಎರಡೂ ಕವನಗಳು ಅಚ್ಚಾದವು. ಅನಂತರ ಜಯಸುದರ್ಶನ ಹಾಗೂ ದೊಡ್ಡರಂಗೇಗೌಡ ಇಬ್ಬರೂ ಜಂಟಿಯಾಗಿ ಸೇರಿ ತಮ್ಮ ಪ್ರಥಮ ಕವನ ಸಂಕಲನವನ್ನು ಹೊರ ತಂದಾಗ ವಿಮರ್ಶೆಗೆ ಪ್ರತಿಗಳನ್ನು ಕೊಡಲು ಬಂದಿದ್ದರು.

ಅನಂತರ ಈ ಇಪ್ಪತ್ತೈದು ವರ್ಷಗಳಲ್ಲಿ ನಾವು ಅನೇಕ ಸಲ ಸೇರಿದ್ದೇವೆ. ಮದ್ರಾಸಿನ ಸ್ವಾಗತ್ ಹೋಟೆಲ್‌ನಲ್ಲಿ ಕುಳಿತು ಅನೇಕ ಚಿತ್ರಗಳಿಗೆ ಗೀತೆಗಳನ್ನು ರಚಿಸಿದ್ದೇವೆ. ಅಲ್ಲಿಯ ಪುಸ್ತಕದ ಅಂಗಡಿಗಳಿಗೆ ಸ್ವಾಗತ ಹೋಟೆಲ್‌ನ ಕೊನೆಯ ಅಂತಸ್ತಿನ ಖಾಲಿ ಜಾಗದಲ್ಲಿ, ಬೆಳದಿಂಗಳ ರಾತ್ರಿಯಲ್ಲಿ ಹಾಗೇ ಹಾಯಾಗಿ ನೆಲದ ಮೇಲೆಯೇ ಮಲಗಿ ನಾಳೆಗಳ ಬಗ್ಗೆ ತಮಾಷೆಯಾಗಿ ಮಾತನಾಡಿಕೊಂಡಿದ್ದೇವೆ. ಮದ್ರಾಸಿನ ಕಡಲ ತೀರದಲ್ಲಿ ಚಪ್ಪಲಿಯನ್ನು ಕೈಲಿ ಹಿಡಿದುಕೊಂಡು, ಪ್ಯಾಂಟನ್ನು ಒದ್ದೆ ಮಾಡಿಕೊಂಡು ನೀರಿನಲ್ಲಿ ಗಂಟೆಗಟ್ಟಲೇ ಓಡಾಡಿದ್ದೇವೆ. ಅಲೆಗಳೊಂದಿಗೆ ಕುಣಿದಾಡಿದ್ದೇವೆ.

ಕಡಲಿನ ನಿಲ್ಲದ ಅಲೆಗಳಂತೆ ಗೌಡರೂ ಲೇಖನಿಯನ್ನು ನಿಲ್ಲಿಸದೆ ಬರೆಯುತ್ತಲೇ ಬಂದವರು. ಅವರು ಪತ್ರಿಕೆ, ರೇಡಿಯೋ, ಟಿ.ವಿ. ಸಿನಿಮಾ, ಕ್ಯಾಸೆಟ್ಟು ಹೀಗೆ ಎಲ್ಲಾ ಮಾಧ್ಯಮಗಳನ್ನೂ ತಮ್ಮ ಕಾವ್ಯಾಭಿವ್ಯಕ್ತಿಗೆ ಬಳಸಿಕೊಂಡಿದ್ದಾರೆ.

ಗೌಡರಿಗೆ ಕಾವ್ಯ ರಚನೆಯೆಂದರೆ ಎಲ್ಲಿಲ್ಲದ ಹುರುಪು. ಅದಕ್ಕಾಗಿ ಯಾವ ಅವಕಾಶವನ್ನು ಅವರು ಕಳೆದುತೊಂಡವರಲ್ಲ ಭಕ್ತಿಗೀತೆ, ಭಾವಗೀತೆ, ಹನಿಗವನ, ಮಿನಿಕವನ, ಕಥನಕವನ ಹೀಗೆ ಯಾವುದನ್ನೂ ಅವರು ಬಿಟ್ಟಿಲ್ಲ ಗೌಡರಿಗಿಂತ ಹೆಚ್ಚು ಕವನಗಳನ್ನು ಬರೆದವರು ಬಹಳ ಜನ. ಆದರೆ ಗೌಡರಂತೆ ಎಲ್ಲ ಬಗೆಯ ಕವನಗಳನ್ನೂ ಬರೆದವರು ವಿರಳ. ಇಷ್ಟು ವೈವಿಧ್ಯಪೂರ್ಣ ಕಾವ್ಯಶ್ರೀಯನ್ನು ನೀಡಿರುವುದರಿಂದ ತಮ್ಮ ಮನೆಗೆ ಅವರು 'ಕಾವ್ಯಶ್ರೀ' ಎಂದು ಹೆಸರಿಟ್ಟಿರುವುದರಿಂದ ಅರ್ಥಪೂರ್ಣ.

ಗೌಡರು ಹೇಗೆ ನಡೆಯಬೇಕು. ಯಾವ ದಾರಿಯಲ್ಲಿ ನಡೆಯಬೇಕು ಎಂದು ಎಂದೂ ತಲೆ ಕೆಡಿಸಿಕೊಂಡವರಲ್ಲ. ಅವರಿಗೆ ಮುಂದೆ ಸಾಗುವುದು ಮುಖ್ಯ. ಗುರಿ ತಲುಪುವುದು ಮುಖ್ಯ.

ಮುನ್ನಡೆದು ಹೋಗುವ ಇರುವೆ ಮೆಲ್ಲಮೆಲ್ಲನೆ ಸಾವಿರ ಯೋಜನಗಳನ್ನಾದರೂ ನಡೆಯುತ್ತದೆ. ಗೌಡರು ನಾನು ಕೂಡ ಇರುವೆ ಎಂದು ಸಾಬೀತು ಮಾಡಲು ನಿರಂತರವಾಗಿ ಬರೆಯುತ್ತಲೇ ಬಂದವರು. ಅಂತೇ ಇಂದು ಅವರು ಬಹಳ ಜನ ನಿಬ್ಬೆರಗಾಗುವಷ್ಟು ದೂರ ಕ್ರಮಿಸಿದ್ದಾರೆ. ತಮ್ಮ ಸ್ವಂತಿಕೆಯ ಮಿಂಚನ್ನು ಚೆಲ್ಲುತ್ತಾ ದಾರಿಯುದ್ದಕ್ಕೂ ತಮ್ಮ ಹೆಜ್ಜೆಯ ಗುರುತುಗಳನ್ನು ಮೂಡಿಸಿದ್ದಾರೆ. ಎಲ್ಲ ಪ್ರಕಾರಗಳಲ್ಲೂ ಕೈಯಾಡಿಸಿ ಕೊನೆಗೆ ಕಾವ್ಯ ಪ್ರಕಾರವೊಂದನ್ನೇ ಉಳಿಸಿಕೊಂಡು ತಮ್ಮ ಅಭಿವ್ಯಕ್ತಿ ಕಾವ್ಯ ಎಂದು ಅಚಲವಾಗಿ ನಂಬಿದವರು ಅವರು.

ತಮ್ಮ ಗುರು ಡಾ|| ಚಂದ್ರಶೇಖರಕಂಬಾರ್ ಅವರಂತೆ ಗೌಡರೂ ಅಪ್ಪಟ ಗ್ರಾಮೀಣ ಸೊಗಡಿನ, ಜಾನಪದ ಶೈಲಿಯ, ದೇಸೀ ಕವನಗಳಿಂದ ಹೆಸರಾದವರು. ಕಾವ್ಯ ಕ್ಷೇತ್ರದಲ್ಲೂ ಚಲನಚಿತ್ರ ಕ್ಷೇತ್ರದಲ್ಲೂ ಚಲನಚಿತ್ರ ಕ್ಷೇತ್ರದಲ್ಲೂ ಏಕ ಪ್ರಕಾರವಾಗಿ ತಮ್ಮ ಜನಪ್ರಿಯತೆಯನ್ನು ಉಳಿಸಿಕೊಂಡವರು.

'ಮಾಗಿಯ ಕನಸು' ಚಿತ್ರದ 'ಬಂದಿದೆ ಬದುಕಿನ ಬಂಗಾರದ ದಿನ' ಎಂಬ ಹಾಡಿನೊಂದಿಗೆ (೧೯೭೬)ಬೆಳ್ಳಿ ತೆರೆಯ ತಮ್ಮ ಬಂಗಾರದ ಬದುಕನ್ನು ಗೌಡರು ಆರಂಭಿಸಿದರು. ಶಿಷ್ಟ ಕಾವ್ಯದ ಉತ್ತಮಿಕೆಗಳನ್ನು ಜಾನಪದ ಶೈಲಿಗೆ ಕಸಿ ಮಾಡುತ್ತ ನೋಡುವದು, ಪ್ರತಿಮಾತ್ಮಕ ಮಾಡಲು ಹವಣಿಸುವುದು ಅವರ ಕಾವ್ಯ ಕೃಷಿಯ ವೈಶಿಷ್ಟ್ಯ.

ಸಿನಿಮಾ ಹಾಡು ಬರೆಯಲು ಆರಂಭಿಸಿದ ಮಾರನೆಯ ವರ್ಷವೇ (೧೯೭೮) ಅವರಿಗೆ ಬಹುದೊಡ್ಡ ಹೆಸರು ತಂದು ಕೊಟ್ಟ 'ಪರಸಂಗದ ಗೆಂಡೆತಿಮ್ಮ' ಚಿತ್ರದ ಈ ಸಾಲುಗಳನ್ನು ಇಲ್ಲಿ ಉದಾಹರಿಸಬಹುದು.

ಮನಸಿನಾ ಚಿಲುಮೆಯಾಗೆ
ಮುಗಿಯದಾಸೆಚಿಮ್ಮೈತೆ

ಹಾಗೂ

ತೇರ ಏರಿ ಅಂಬರದಾಗೆ
ನೇಸರ ನಗುತಾನೆ

ಇಂಥದೆ ಇನ್ನೊಂದು ಗೀತೆ

ನೀಲಿಯ ಬಾನಿಂದ
ತಾರೆಯ ಊರಿಂದ
ತೇಲುತ ಬಂದವ್ನೆ ಚಂದಮಾಮ

'ಪರಸಂಗದ ಗೆಂಡೆತಿಮ್ಮ' ಚಿತ್ರದ ಅವರ ಅರ್ಥ ಪೂರ್ಣ ಗೀತೆಗಳನ್ನು ನಿರ್ದೇಶಕರೂ ಅಷ್ಟೇ ಅರ್ಥವತ್ತಾಗಿ ತೆರೆಗೆ ಅಳವಡಿಸಿದ್ದು, ರಾಜನ್-ನಾಗೇಂದ್ರ ಅವರ ಸಾಹಿತ್ಯಕ್ಕೆ, ಚಿತ್ರದ ಪರಿಸರಕ್ಕೆ ತಕ್ಕಂತೆ ರಾಗ ಸಂಯೋಜನೆ ಮಾಡಿದ್ದು ಅದು ಚಿತ್ರ ಚರಿತ್ರೆಯಲ್ಲೇ ಒಂದು ಮೈಲುಗಲ್ಲಾಗಿ ಉಳಿಯಲು ಕಾರಣವಾಯಿತು.

'ಅಲೆ ಮನೆ' ಚಿತ್ರದ 'ನಮ್ಮೂರ ಮಂದಾರ ಹೂವೇ' ಹಾಗೂ 'ಎಲ್ಲಾ ಮೇಲು ಕೀಳು ಸುಳ್ಳು ಭೇದ ಭಾವ ಬಗೆದಾ ಮನುಜ ಕಣೋ' 'ಅರುಣರಾಗ'ದ 'ನಾನೊಂದು ತೀರ ನೀನೊಂದು ತೀರ ಮನಸು ಮನಸು ದೂರ ಪ್ರೀತಿ ಹೃದಯ ಭಾರ' ಗೀತೆಗಳೂ ಸಿನಿಮಾಗಾಗಿ, ಸಿದ್ದಟ್ಯೂನ್‌ಗಾಗಿ ಬರೆದ ಗೀತೆಗಳೆಂದು ಭಾಸವಾಗದಷ್ಟು ಕಾವ್ಯಾತ್ಮಕ ಮೌಲ್ಯಗಳನ್ನು ಉಳಿಸಿಕೊಂಡು ಬಂದಿದೆ.

ಅವರು ಬರೆದಿರುವ ಸುಮಾರು ಐದು ನೂರು ಚಿತ್ರ ಗೀತೆಗಳಲ್ಲಿ ಟೊಳ್ಳು ಕಾಳುಗಳನ್ನೆಲ್ಲಾ ಹಕ್ಕಿ ತೂಳಿದಾಗ ಇಂಥ ಅನೇಕ ಗಟ್ಟಿ ಕಾಳುಗಳು ಉಳಿಯುತ್ತವೆ.

'ಎಲ್ಲರಂತೆ ನಾವು ಕೂಡ ಬದುಕ ಬೇಡವೇ' (ಏನೇ ಬರಲಿ ಪ್ರೀತಿಯಿರಲಿ) ಮಧ್ಯಮ ವರ್ಗದವರ ಆಶೋತ್ತರಗಳಿಗೆ ಕನ್ನಡಿ ಹಿಡಿದಂತಿರುವ ಗೀತೆಗಳನ್ನೂ ಅವರು ಬರೆದಿದಾರೆ. 'ಮುಂಜಾನೆ ಮೂಡಿದ ಹಾಗೆ' (ಮುದುಡಿದ ತಾವರೆ ಅರಳಿತು) 'ಒಲುಮೆ ಸಿರಿಯಾ ಕಂಡು' (ಬಂಗಾರದ ಜಿಂಕೆ) 'ಕಂಡದ್ದು ಕಂಡ ಹಾಗೆ ಹೇಳಿದರೆ ನೀವೆಲ್ಲ ಕೆಂಡದಂಥ ಕೋಪ ಮಾಡಬೇಡಿ', ಎಂಬ ಅವರ ಹಲವು ಗೀತೆಗಳು ಶ್ರೀಸಾಮಾನ್ಯನ ಭಾವನೆಗಳನ್ನು ಬಿಂಬಿಸಿವೆ.

'ಹದ್ದಿನ ಕಣ್ಣು' ಚಿತ್ರದಲ್ಲಿ ಕಳೆದು ಹೋದ ಬೀಗದ ಕೈ ಹುಡುಕುವ ಒಂದು ಸಾಮಾನ್ಯ ಸಂದರ್ಭಕ್ಕಾಗಿ ಅವರು ಬರೆದ ಬೀಗದ ಕೈ ಕುರಿತು ಹಾಡು ಕೂಡ ಬದುಕಿನ ಸೂತ್ರವನ್ನು ಹೇಳುವ ಅರ್ಥ ಪೂರ್ಣ ಕಾವ್ಯಕ್ಕಾಗಿ ರೂಪುಗೊಂಡಿದೆ.

ಆ ಸಾಲನ್ನು ನೋಡಿ

ಜೀವನ ಎಂಬ ರಹಸ್ಯ ಬೀಗಕೆ
ನಗೆಯೇ ಬೀಗದ ಕೈ

ವೀರಾವೇಶದ ಆಕ್ರೋಶದ ಹಾಡುಗಳನ್ನು ಅವರು ಬರೆದಿದ್ದಾರೆ

ರೋಷ ದ್ವೇಷದ ಜ್ವಾಲೆ
ನ್ನನ್ನೇ ನುಂಗಿ ನಗುತಿದೆ (ಕೂಡಿ ಬಾಳಿದರೆ ಸ್ವರ್ಗ ಸುಖ)

ಬೇಟೆ ಆಡೋ ಬಯಕೆ
ಹಸಿದಿರೋ ಹುಲಿಗೆ
ಗೋಣು ಮುರಿಯೋ ತವಕ
ಕೋಪದಾ ಹುಲಿಗೆ (ಕೆರಳಿದ ಕೇಸರಿ)

ಕೋಟೆ ಕಟ್ಟಿ ಮೆರದಾ ಈ ಕೆಟ್ಟ ಮಂದಿ ಬಗ್ಗು ಬಡಿವೆ
ದ್ರೋಹ ಮಾಡಿ ಬೆಳೆದ ಈ ದುಷ್ಟ ಕೂಡ ಮೆಟ್ಟಿ ನಡೆವೆ
(ಶರವೇಗದ ಸರದಾರ)

ಯುಗಳ ಗೀತೆ, ವಿರಹ ಗೀತೆಗಳಂತೂ ಸರಿಯೇ

ತಮಾಷೆ ಗೀತೆಗಳನ್ನು ಬರೆದಿದ್ದಾರೆ, ಇತ್ತೀಚೆಗೆ ನಾನೆಂದೂ ನಿಮ್ಮವನೆ ಚಿತ್ರಕ್ಕಾಗಿ ಜೋಕುಗಳನ್ನೇ ಸೇರಿಸಿ ಪ್ರೇಮಗೀತೆ ಬರೆಯುವ ವಿಶಿಷ್ಟ ಪ್ರಯೋಗವೊಂದನ್ನೂ ಗೌಡರು ಮಾಡಿದ್ದಾರೆ

ಸಿದ್ಧ ರಾಗಗಳಿಗೆ ಪದ ಜೋಡಿಸುತ್ತ ಪಾತ್ರಕ್ಕೆ ತಕ್ಕ ಹಾಗೆ ಜೋಡಣೆಗಳನ್ನು ಹೊಮ್ಮಿಸುವಲ್ಲಿ, ಗೀತ ರಚನಕಾರನಿಗೆ ಹಲವಾರು ಮಿತಿಗಳಿವೆ. ಕವಿ ಬರೆದುದು

ಸಂಗೀತ ನಿರ್ದೇಶಕರಿಗೂ, ನಿರ್ದೇಶಕರಿಗೂ ಒಪ್ಪಿಗೆಯಾಗದಿದ್ದರೆ ಅದು ಮೆಚ್ಚುವವರಿಗೆ ಮತ್ತೆ ಮತ್ತೆ ಬರೆಯುತ್ತಲೇ ಇರಬೇಕು.

ಹಾಗೆ ಬರೆದ ನೂರಾರು ಸಾಲುಗಳನ್ನು ಅಲ್ಲಿಯ ಒಂದು ಸಾಲು, ಇಲ್ಲಿಯ ಎಂದು ಸಾಲು ನಿರ್ದೇಶಕರಿಗೆ ಮೆಚ್ಚಿಗೆಯಾದರೆ ಅದಕ್ಕೆ ತಕ್ಕಂತೆ ಉಳಿದ ಸಾಲುಗಳನ್ನು ಹೆಣೆಯುವುದು, ಕಷ್ಟದ ಕಾಯಕ. ಈ ರೀತಿಯಲ್ಲಿ ರೂಪುಗೊಳ್ಳುವ ಚಿತ್ರಗೀತೆಗಳಲ್ಲೊಂದು ಕಾವ್ಯಾತ್ಮಕ ಗುಣಗಳನ್ನು ಉಳಿಸಿಕೊಳ್ಳುವುದು ಸುಲಭದ ಕೆಲಸವಲ್ಲ.

ತಮಗೆ ಹೆಚ್ಚು ಸ್ವಾತಂತ್ರ್ಯ ಸಿಕ್ಕಾಗಲೆಲ್ಲ ಗೌಡರು ಉತ್ತಮ ಚಿತ್ರಗೀತೆಗಳನ್ನು ಬೆರೆದಿದ್ದಾರೆ. ಈ ಗೀತೆಗಳಲ್ಲಿ ಕಾಲ ಚಕ್ರ ಉರುಳಿದ ನಂತರವೂ ಉಳಿಯುವ ಗೀತೆಗಳೆಷ್ಟು? ಕ್ರಮೇಣ ಮಸುಕಾಗುತ್ತ ಅಳಿಯುವ ಗೀತೆಗಳೆಷ್ಟು?

ಅಮೆರಿಕದ ಸೆನೆಟ್ ಹಾಲ್‌ನಲ್ಲಿ ದೇಶದ ಪ್ರಮುಖ ವ್ಯಕ್ತಿಯ ಭಾವ ಚಿತ್ರವನ್ನು ಹಾಕಬೇಕಾದರೆ ಅವನು ಸತ್ತು ಐವತ್ತು ವರ್ಷಗಳಾಗಬೇಕು. ಐವತ್ತು ವರ್ಷಗಳ ನಂತರವೂ ಜನ ಮನದಲ್ಲಿ ಅಚ್ಚಳಿಯದೇ ಉಳಿದಿರುವಂತೆ ಮಹಾ ಮಹಿಮರ ಭಾವಚಿತ್ರವನ್ನು ಮಾತ್ರ ಅಲ್ಲಿ ಹಾಕಲಾಗುತ್ತದೆ. ಈಗ ಗೌಡವರಿಗೆ ಐವತ್ತು ತುಂಬಿದೆಯಲ್ಲ ಇನ್ನು ಐವತ್ತು ವರ್ಷಗಳ ನಂತರ ಅವರು ಬರೆದ ಅದೆಷ್ಟು ಚಿತ್ರಗೀತೆಗಳು ಜನಮನದಲ್ಲಿ ಉಳಿಯುತ್ತವೆ?

ಸಿನಿಮಾ ಸಂಗೀತ ಕ್ಷೇತ್ರದಲ್ಲಿ ಹತ್ತು ವರ್ಷಗಳಿಗೊಮ್ಮೆ ಅಭಿರುಚಿ ಬದಲಾಗುತ್ತ ಬಂದಿದೆ. ಸಂಗೀತದ ಜೊತೆಗೆ ಸಾಹಿತ್ಯ ಕೂಡ ಬದಲಾಗುತ್ತಲೇ ಬಂದಿದೆ. ಇನ್ನು ಐವತ್ತು ವರ್ಷಗಳಲ್ಲಿ ಅದೆಷ್ಟು ಸ್ಥಿತ್ಯಂತರಗಳಾಗಿರುತ್ತವೆಯೋ? ಉಪಗ್ರಹ ಟಿ.ವಿ. ಚಾನಲ್‌ಗಳ ಮೇಲುಗೈಯಿಂದಾಗಿ ಪಾಶ್ಚಾತ್ಯ ಸಂಗೀತದ ಪ್ರಭಾವವು ದಿನೇ ದಿನೇ ಹೆಚ್ಚಾಗುತ್ತಿರುವುದರಿಂದ ಸಿನೀಮಾ ಸಂಗೀತವೂ, ಸಿನಿಮಾ ಸಾಹಿತ್ಯವೂ ಐವತ್ತು ವರ್ಷಗಳಲ್ಲಿ ಹಲವಾರು ಮಜಲುಗಳನ್ನು ದಾಟಿರುತ್ತದೆ.

ಆದರೆ ಸಾರ್ವಕಾಲಿಕ ಸತ್ಯವನ್ನು ಪ್ರತಿಪಾದಿಸುವ ಸಾಹಿತ್ಯಕ್ಕೆ ಸಾವಿಲ್ಲ. ಐವತ್ತು ವರ್ಷಗಳಾದ ನಂತರವೂ ನಾನು ಈಗಾಗಲೇ ಉದಾಹರಿಸಿದ ಗೌಡರ ಕೆಲವು ಚಿತ್ರಗೀತೆಗಳಾದರೂ ಖಂಡಿತ ಉಳಿಯುತ್ತವೆ. ಜನರ ಮನಸ್ಸನ್ನು ತಟ್ಟುತ್ತವೆ ಎಂಬ ವಿಶ್ವಾಸ ನನಗೆ. ಆ ದಿನಗಳನ್ನು ನೋಡಿ ಗೌಡರೂ ಖುಷಿ ಪಡಲಿ. ನೂರು ವರ್ಷವಾದರೂ ಅವರು ಬಾಳಲಿ - ಕೊನೆಯುಸಿರಿರುವ ತನಕ ಕವನಗಳನ್ನು ಹೆಣೆಯುತ್ತ ಜನಮನವನ್ನು ತಣಿಸುತ್ತಲೇ ಇರಲಿ ಎಂದು ಹಾರೈಸುತ್ತೇನೆ.

# ಸರಳ ಸಜ್ಜನಿಕೆಯ ಮಿತ್ರ ದೊಡ್ಡರಂಗೇಗೌಡ

✍ ಡಾ|| ಸಿ. ವಿ. ವತ್ಸಲಾದೇವಿ

ಜಗತ್ತಿನಲ್ಲಿ ಹಲವಾರು ತೆರನಾದ ವ್ಯಕ್ತಿಗಳು ಕಾಣಸಿಗುತ್ತಾರೆ. ಕೆಲವರು ಯಾವ ಕೆಲಸವನ್ನೂ ಮಾಡದೆ, ಕೆಲಸ ಮಾಡಲು ಮನಸ್ಸು ಇಲ್ಲದೆ ಅನಾರೋಗ್ಯಕರವಾದ ಮನಸ್ಸುಳ್ಳವರು; ಇಂತಹವರ ಮನಸ್ಸು ಸದಾಕಾಲ ಕೆಲಸಕ್ಕೆ ಬಾರದ ವಿಚಾರಗಳತ್ತ ಧಾವಿಸುತ್ತಿರುತ್ತದೆ. "A vacant mind is a devil's workshop" ಎಂಬಂತೆ ಅನಾರೋಗ್ಯಕರವಾದ ವಿಚಾರಗಳ ಸಂತೆಯಾಗಿರುತ್ತದೆ ಇಂತಹವರ ಮನಸ್ಸು.

ಇನ್ನು ಕೆಲವರು ತಾವಾಯಿತು, ತಮ್ಮ ಕೆಲಸವಾಯಿತು ಎಂಬಂತೆ ಸುತ್ತಮುತ್ತಲಿನ ಪರಿಸರಕ್ಕೆ ಯಾವ ರೀತಿಯಲ್ಲೂ ಸ್ಪಂದಿಸದೆ ಸುಮ್ಮನಿದ್ದು ಬಿಡುತ್ತಾರೆ. ಮತ್ತೆ ಕೆಲವರು ಸದಾಕಾಲವೂ ಕ್ರಿಯಾಶೀಲರಾಗಿ, ಏನಾದರೊಂದು ಉಪಯುಕ್ತ ಕೆಲಸಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ತಮ್ಮ ಬದುಕನ್ನು ಸಾರ್ಥಕಗೊಳಿಸಿಕೊಳ್ಳುತ್ತಾರೆ. ಸಾಹಿತ್ಯದ ಬರವಣಿಗೆಯ ದೃಷ್ಟಿಯಿಂದ ಕವಿ ದೊಡ್ಡರಂಗೇಗೌಡರು ಈ ಗುಂಪಿಗೆ ಸೇರಿದ ವ್ಯಕ್ತಿ ಎಂದರೆ ತಪ್ಪಾಗಲಾರದು. ಬಹುಶಃ ದಿನದ ಇಪ್ಪತ್ನಾಲ್ಕು ಘಂಟೆಯೂ ಬರವಣಿಗೆಗೆ ಮೀಸಲಾದರೆ ಅದೂ ಸಾಲದಾದೀತು ಈ ಸಾಹಿತಿಗೆ. ಅವರ ಲೆಖನಿಯಿಂದ ಸದಾ ಕಾಲ ಗಂಗೆ ಹರಿಯುತ್ತಲೇ ಇರುತ್ತದೆ.

ಸಹೋದ್ಯೋಗಿಯಾಗಿ ಅವರ ಪರಿಚಯ ನನಗೆ ಸುಮಾರು ಇಪ್ಪತ್ತೆರಡು ವರ್ಷಗಳದ್ದು. ಅವರಲ್ಲಿ ಎದ್ದು ಕಾಣುವ ವ್ಯಕ್ತಿತ್ವದ ಪ್ರಮುಖಗುಣ, ಸರಳತೆ ಮತ್ತು ಸಜ್ಜನಿಕೆ. ಇದುವರೆಗೂ ಅವರು ಒಮ್ಮೆಯೂ ಯಾರೊಂದಿಗೂ ಕಟುವಾಗಿ ವರ್ತಿಸಿರುವುವನ್ನು, ಕಠಿಣವಾಗಿ ಮಾತನಾಡಿರುವುದನ್ನು, ತಮ್ಮ ಬೇಸರವನ್ನು ನೇರವಾಗಿ ತೋರಿಸಿಕೊಂಡಿರುವುದನ್ನು ನಾನು ಕಂಡೇ ಇಲ್ಲ.

ಪ್ರವೃತ್ತಿಯಲ್ಲಿ ಅಧ್ಯಾಪಕರಾಗಿರುವ ಇವರು ಉತ್ತಮ ವಾಗ್ಮಿಗಳು. ಪಾಠ, ಉಪನ್ಯಾಸಗಳನ್ನು ಬಿಟ್ಟರೆ - ಮಿಕ್ಕ ವೇಳೆಯಲ್ಲೆಲ್ಲ ಇವರ ಕೆಲಸವೆಂದರೆ ಕೈಯಲ್ಲಿ ಲೇಖನಿ ಹಿಡಿದು ತಮ್ಮ ಡೈರಿಯಲ್ಲಿ ಪದ್ಯಗಳನ್ನು ಬರೆಯುತ್ತಾ ಕೂಡುವುದು. ನಿಂತಿರಲಿ, ಕೂತಿರಲಿ, ಬಸ್ಸಿನಲ್ಲಾಗಲೀ, ಬಸ್ ನಿಲ್ದಾಣದಲ್ಲಾಗಲೀ - ಎಲ್ಲಿಯೇ ಇರಲಿ - ಕವಿಯ ಮನಸ್ಸು ಕವನ ರಚನೆಯತ್ತ ಚಿತ್ರಗೀತೆಗಳ ರಾಗಗಳಿಗೆ ಪದಗಳನ್ನು ಕೂಡಿಸುವತ್ತ ಚಿಂತಿಸ ತೊಡಗುತ್ತದೆ.

ತಮ್ಮೆದುರಿನ ಘಟನೆಗಳಿಗೆ, ತಾವುಂಡನೋವು ನಲಿವುಗಳಿಗೆ ಸುದೀರ್ಘ ಕವನವಾಗಬಹುದು; ಇಲ್ಲವೆ ನಾಲ್ಕು ಸಾಲಿನ ಚುಟಕವಾದರೂ ಸರಿ; ಕವನ ರಚನೆ ಆಗಿಯೇ ಬಿಡುತ್ತದೆ. ಹೀಗಾಗಿ-ಅವರ ಕವನಗಳು ಜನಪ್ರಿಯ. ಎಲ್ಲ ಪತ್ರಿಕೆಗಳಲ್ಲಿ

ಮಾನಸಿಕಗಳಲ್ಲಿ ಕಣ್ಣಾಡಿಸಿದ ಕಡೆಯಲ್ಲೆಲ್ಲಾ ಕಾಣಸಿಗುತ್ತವೆ. ಚಿತ್ರಗೀತೆ ಗಳಂತೂ ಅತ್ಯಂತ ಜನಪ್ಪಿಯವಾಗಿವೆ. "ತೇರ ಏರಿ ಅಂಬರದಾಗೆ", "ನಮ್ಮೂರ ಮಂದಾರ ಹೂವೆ" - ಇಂತಹ ಹಾಡು ಯಾರ ಮನಸ್ಸನ್ನು ತಾನೇ ಸೂರೆಗೊಂಡಿಲ್ಲ. ಇವರ ಹಾಡುಗಳನ್ನು ಕೇಳಿದ, ಪತ್ರಿಕೆಗಳಲ್ಲಿ ಕವನಗಳನ್ನು ಓದಿದ ಈ ಕವಿಯನ್ನು ಕಾಣುವ, ಅವರನ್ನು ಸಮಾರಂಭಗಳಿಗೆ ಅಹ್ವಾನಿಸುವ ಅಭಿಮಾನಿಗಳ ಪೂರವೇ ಸದಾಕಾಲ ಅವರು ಕೆಲಸ ಮಾಡುವ ಜಾಗಕ್ಕೆ ಲಗ್ಗೆ ಹಾಕುತ್ತಾರೆ. ಇವರಾದರೂ ಎಷ್ಟು ಕಡೆ ಹೋಗಲು ಸಾದ್ಯ.ಆದರೆ ಯಾರ ಮನಸ್ಸನ್ನು ನೋಯಿಸಲಾಗದ ಗೌಡರು - ಹಲವಾರು ಅಭಿಮಾನಿಗಳಿಗೆ- "ಈ ವರ್ಷ ಇಲ್ಲ ಮುಂದಿನ ವರ್ಷ ಖಂಡಿತ ಬರ್‍ತೀನಿ" ಎಂಬ ಉತ್ತರವನ್ನು ಸೌಜನ್ಯದಿಂದ ನಗುಮುಖದಿಂದ ಹೇಳಿ, ಬಂದವರಿಗೆ ಬೇಸರವಾಗದಂತೆ ಕಳಿಸಿ ಕೊಡುತ್ತಾರೆ. ಅವರ ಸಜ್ಜನಿಕೆಗೆ ತಲೆದೂಗುವ ಈ ಅಭಿಮಾನಿಗಳು ಮುಂದಿನ ವರ್ಷ ತಪ್ಪದೆ ಹಾಜರಾಗುವುಗದನ್ನು ಮಾತ್ರ ಮರೆಯುವುದಿಲ್ಲ! ಹೀಗೆ ದೊಡ್ಡರಂಗೇಗೌಡರು ಅಭಿಮಾನಿಗಳ ಪ್ರೀತಿ ವಾತ್ಸಲ್ಯಗಳ ಒತ್ತಾಸೆಯನ್ನ ಹೇಗೋ ನಿಭಾಯಿಸುವುದು ಅನಿವಾರ್ಯವಾಗುತ್ತದೆ.

ಕವಿಯಾಗಿ ಜನಪ್ರಿಯತೆಯನ್ನು ಪಡೆದಿರುವ ದೊಡ್ಡರಂಗೇಗೌಡರು ಅಧ್ಯಾಪಕರಾಗಿಯೂ ಜನಪ್ರಿಯರೇ. ವಿಧ್ಯಾರ್ಥಿಗಳಿಗೆ ಯಾವುದೇ ತೊಂದರೆಯಾಗದಂತೆ ಆ ಕೆಲಸಕ್ಕೂ ವೇಳೆಯನ್ನು ಹೊಂದಿಸಿಕೊಂಡು ಸಹೋದ್ಯೋಗಿಗಳೊಡನೆ ಯಾವ ಘರ್ಷಣೆಗೂ ಅವಕಾಶ ಕೊಡದೆ ಕೆಲಸ ನಿರ್ವಹಿಸುತ್ತಿರುವ ವ್ಯಕ್ತಿ ದೊಡ್ಡರಂಗೇಗೌಡರು.

ಹೆಸರು ದೊಡ್ಡರಂಗೇಗೌಡ; ವ್ಯಕ್ತಿಯ ಆಕಾರ ಚಿಕ್ಕದೇ ಆದರೂ ಮೃದು ಮನಸ್ಸಿನ, ಸರಳ ಸಜ್ಜನಿಕೆಯ ಸಾಕಾರ ಮೂರ್ತಿಯಾದ ಇವರ ಮನಸ್ಸಿನಿಂದ ದೊಡ್ಡವರೇ. ಹಲವಾರು ಕವನಸಂಗ್ರಹಗಳನ್ನು ಈಗಾಗಲೇ ಪ್ರಕಟಿಸಿರುವ, ಹಲವು ಹತ್ತು ಪ್ರಶಸ್ತಿಯನ್ನು ಗಳಿಸಿರುವ, ಚಿತ್ರಗೀತೆಗಳಿಂದ ಜನಮನವನ್ನು ಗೆದ್ದಿರುವ ಕವಿ ದೊಡ್ಡರಂಗೇಗೌಡರ ಬರವಣಿಗೆ ಮತ್ತು ವ್ಯಕ್ತಿತ್ವದಲ್ಲಿ ಇನ್ನೂ 'ಹಿರಿಮೆ'ಯನ್ನು ಗಳಿಸಿಕೊಂಡು ಬೆಳೆಯಲಿ ಎಂದು ಹಾರೈಸುತ್ತೇನೆ.

* * *

**ಗೆಳೆತನ**

ಒಳ್ಳೆಯ ಗೆಳೆತನ ಎಂಬುದು ಎಳನೀರು ಕುಡಿದಂತೆ
ಒಳ್ಳೆಯ ಗೆಳೆಯನ ಪಡೆಯುವುದು ಬರಗಾಲದಿ ಬುತ್ತಿಸಿಕ್ಕಂತೆ-
ಒಳ್ಳೆಯ ಗೆಳೆಯನ ಜೊತೆ ಬದುಕುವುದು ದೈವ ಬಳಿ ಇದ್ದಂತೆ
ಗೆಳೆಯನಿಲ್ಲದಿರುವುದು ಸ್ಮಶಾನದಲ್ಲಿದ್ದಂತೆ - ಮಣ್ಣಿನ ಮಗ

* * *

# ಭಾವ ಭೃಂಗ ದೊರಂಗೌ

✍ ಸಿ. ಅಶ್ವಥ್
*ಸಂಗೀತ ನಿರ್ದೇಶಕರು*

ನನ್ನ ದೊಡ್ಡರಂಗೇಗೌಡರ ಪರಿಚಯ ಇಲ್ಲಿಗೆ ಹದಿನೈದು ವರ್ಷಗಳ ಹಿಂದಿನದು. ನಿರ್ದೇಶಕ ಸಿದ್ಧಲಿಂಗಯ್ಯನವರು ಮತ್ತು ವರದಪ್ಪನವರು 'ಸ್ಪಂದನ' ಚಿತ್ರದ ನನ್ನ "ಎಂಥ ಮರುಳಯ್ಯ ಇದು ಎಂಥಾ ಮರುಳೊ..." ಹಾಡುಕೇಳಿ ಬಹಳ ಮೆಚ್ಚಿಕೊಂಡು, ಅವರ ಮುಂದಿನ ಚಿತ್ರಕ್ಕೆ ನನ್ನ ಕೈಲಿ ಸಂಗೀತ ನಿರ್ದೇಶನ ಮಾಡಿಸಬೇಕು ಅಂತ ನಿರ್ಧಾರ ಮಾಡಿದ್ದರು. ಅವರು ಸ್ಪಂದನ ಚಿತ್ರದ ಸಹ ನಿರ್ಮಾಪಕ ನನ್ನ ಸ್ನೇಹಿತ ವಿ. ಕೃಷ್ಣರಾಜು ಅವರ ಆಫೀಸಿಗೆ ಬರೋಕೆ ಹೇಳಿದರು ಸರಿ ಹೋದೆ. ಮಾತಾಡ್ತಿದ್ದೀನಿ. ನನಗಿಂತ ಮುಂಚೆ ಬಂದಿದ್ದ ಪಕ್ಕದಲ್ಲಿದ್ದ ವ್ಯಕ್ತಿಯನ್ನು ನಾನು ಗಮನಿಸಲೇ ಇಲ್ಲ. ಸ್ವಲ್ಪ ಸಮಯದ ನಂತರ ಕೃಷ್ಣರಾಜು "ನೋಡಪ್ಪ ಅಶ್ವಥ್ ಇಲ್ಲಿ ಕೂತಿದ್ದಾರಲ್ಲ ಇವರೇ ದೊಡ್ಡರಂಗೇಗೌಡರು ಅಂತ, ಈಗಾಗಲೇ ಹಲವಾರು ಚಿತ್ರಗಳಿಗೆ ಗೀತೆಗಳನ್ನು ಬರೆದಿದ್ದಾರೆ. ಸಿದ್ಧಲಿಂಗಯ್ಯನವರ ಮುಂದಿನ ಚಿತ್ರಕ್ಕೂ ಇವರೇ ಬರೆಯೋದು" ಅಂದ್ರು ಚಿಕ್ಕ ಹುಡುಗನ ಹಾಗೆ ಕುಳಿತಿದ್ರು ಗೌಡ್ರು. ಇವರೇನು ಸಾಹಿತ್ಯ ಬರಿತಾರಪ್ಪ? ನೊಡೋಕೆ ಚಿಕ್ಕ ಹುಡುಗ ಇದ್ದಾಗಿದ್ದಾರೆ! ಅಂತ ಒಂದು ನಿಮಿಷ ಯೋಚ್ನೆಮಾಡ್ದೆ. ಆ ಮೇಲೆ ದೊಡ್ಡರಂಗೇಗೌಡರು ನನ್ನ 'ಕಾಕನಕೋಟೆ' ಹಾಡುಗಳು, 'ಸ್ಪಂದನ' ಚಿತ್ರದ ಹಾಡುಗಳ ಬಗ್ಗೆ ಬಹಳ ಒಳ್ಳೆ ಮಾತಾಡಿದ್ರು. ಒಳ್ಳೆ ಮಾತುಗಾರರು, ಹೀಗೆ ಆಯ್ತು ನಮ್ಮ ಅವರ ಮೊದಲನೆ ಭೇಟಿ.

ಮೊದಲನೆ ಭೇಟೀಲೇ ಗೌಡರು ನನಗೆ ತುಂಬಾ ಹತ್ತಿರವಾದರು ಆತ್ಮೀಯರಾದರು ಅವರ ಸರಳ ವ್ಯಕ್ತಿತ್ವ ಹಾಗೂ ನಗು ನಗುತ್ತ ಸ್ಪಷ್ಟವಾಗಿ ಕನ್ನಡದಲ್ಲಿ ಮಾತಾಡೋ ವೈಖರಿ ನನಗೆ ತುಂಬಾ ಇಷ್ಟ ಆಯ್ತು. ನಾವಿಬ್ರು ಅಲ್ಲಿಂದ ವೀರಸ್ವಾಮಿ ಆಫೀಸಿಗೆ ಹೋದ್ವಿ. ಅಲ್ಲಿ ನಿರ್ದೇಶಕ ಸಿದ್ದಲಿಂಗಯ್ಯ ಅವರು ತಮ್ಮ ಮುಂದಿನ ಚಿತ್ರದ ಇಡೀ ಕಥೆ ಹೇಳಿ ಅಲ್ಲಿ ಬರೋ ಮೂರು ಹಾಡುಗಳ ಸಂದರ್ಭ ವಿವರಿಸಿ ಹೇಳಿದರು. ನಾವು ಅಲ್ಲಿಂದ ಹೊರಟಾಗ ಸಿದ್ದಲಿಂಗಯ್ಯನವರು ನನಗೆ 'ನೋಡಿ ಸ್ವಾಮಿ ಇಲ್ಲಿನ ಒಂದೊಂದು ಸಂದರ್ಭಕ್ಕೂ ನೀವು ಮೂರು ಟ್ಯೂನ್ ಕೊಡಬೇಕು' ಅಂದರು. ನನಗಂತೂ ಶಾಕ್ ಅನ್ನಿಸಿತ್ತು. ಏನೋ ಒಂದು ಥರಾ ಭಯ ಆಯ್ತಿತ್ತು. ನಾನು ಗೌಡರಿಗೆ ಹೇಳೇ ಬಿಟ್ಟೆ, ಸ್ವಾಮಿ ಯಾಕೋ ಆಗೋದಿಲ್ಲ ನಾನು ಹಿಂದೆ ಮಾಡಿರೋ ಮೂರು ಚಿತ್ರಗಳಿಗೂ ಮೊದಲು ಹಾಡು ಬರೆದು ಆಮೇಲೆ ಸಂಗೀತ ಸಂಯೋಜನೆ ಮಾಡಿದ್ದೆ. ಆದ್ರೆ ಈ ಟ್ಯೂನ್ ಮಾಡೋ ಅಭ್ಯಾಸ ನಂಗಿಲ್ಲ, ಏನ್ ಮಾಡೋದು ಈ ಕೆಲ್ಸ ಕೈ ಬಿಟ್ಟುಬಿಡೋಣ ಅಂದೆ. ಅದಕ್ಕೆ ಗೌಡ್ರು 'ಚಲನಚಿತ್ರದಲ್ಲಿ ವಾಡಿಕೇನೆ ಹಾಗೆ, ಪದ್ಧತಿ ಹಾಗಿದೆ.

ನಿಮಗೆ ಹೊಸದಷ್ಟೆ. ನಿಮಗೆ ಶಕ್ತಿ ಇದೆ. ಇಂಥಾ ಅವಕಾಶ ಕಳೆದುಕೊಳ್ಳುವುದು ಬೇಡ. ಅದೂ ಅಲ್ದೆ ನಿಮಗೆ ಇದು ಮೊದಲನೆ ವ್ಯಾಪಾರಿ ಚಿತ್ರ.

ಸಿದ್ದಲಿಂಗಯ್ಯನವರು ಒಳ್ಳೆ ನಿರ್ದೇಶಕರು ಕೂಡ. ಇದೊಂದು ಸದಾವಕಾಶ ಅನ್ನುತ್ತೆನಂಗೆ ಅಂದ್ರು. ಸರಿ ಸ್ವಾಮಿ ಧೈರ್ಯ ಮಾಡಿ ಬರ್ತೀನಿ ನಡಿರಿ ಹೋಗೋಣ' ಅಂತ ಹೇಳಿ ಹೊರಟ್ವಿ. ಇಬ್ಬರೂ ಹೋಗಿ ಹೋಟ್ಲಲ್ಲಿ ಕೂತು ಮೂರು ಹಾಡುಗಳ ಟ್ಯೂನ್ ಮಾಡೋಕೆ ಪ್ರಾರಂಭಿಸಿದೆವು. ಮೂರು ಸಂದರ್ಭಕ್ಕೂ ಮೂರು ಟ್ಯೂನ್ ಬಂದವು. ಏನೇ ಮಾಡಿದ್ರೂ ಯಾವುದೊಂದು ಸಂದರ್ಭಕ್ಕೂ ಎರಡನೆ ಟ್ಯೂನ್ ಬರಲೇ ಇಲ್ಲ. ಆ ಮೂರು ಟ್ಯೂನಗೂ ಗೌಡ್ರು ಸಾಹಿತ್ಯ ಬರೆದರು..ಸರಿ ನಂಗೇನು ಬೇರೆ ಟ್ಯೂನ್ ಹೇಳಲೇ ಇಲ್ಲ ಇನ್ನೇನು ಮಾಡೋದು ಅಂತ ಇಬ್ಬರೂ ಹೋದ್ವಿ. ಅಲ್ಲಿ ವೀರಸ್ವಾಮಿ ವರದಪ್ಪನವರು, ಸಿದ್ದಲಿಂಗಯ್ಯನವರು ಎಲ್ಲರೂ ಕುಳಿತು ಕೇಳೋಕೆ ಶುರು ಮಾಡಿದರು ಮೂರು ಹಾಡಿಗೂ ಒಂದೊಂದು ಟ್ಯೂನ್ ಹಾಡಿದ್ವಿ, ಅವರು ಕೇಳಿದ ಮೇಲೆ ಮೂರು ಹಾಡನ್ನೂ ಮೆಚ್ಚಿಕೊಂಡರು! ಬೇರೆ ಟ್ಯೂನ್ ಕೇಳೊ ಮನಸ್ಮಾಡ್ಲಿಲ್ಲ. ಆಗ ನನಗೆ ಗೌಡರಿಗೆ ಆದ ಸಂತೋಷ ಅಷ್ಟಿಷ್ಟಲ್ಲ ... ಇದು ನನ್ನ ದೊಡ್ಡರಂಗೇಗೌಡರ ಮೊದಲ ಚಿತ್ರ "ಭೂಲೋಕದಲ್ಲಿ ಯಮರಾಜ".

ನಂತರ ನಾನು ಗೌಡರ ಜೊತೆ ಹಲವಾರು ಚಿತ್ರಗಳಲ್ಲಿ ಕೆಲಸ ಮಾಡಿದ್ದೀನಿ. ಅವರ ಜೊತೆ ಕೆಲಸ ಮಾಡೋದೆ ಒಂದು ಥರಾ ಖುಷಿ. ಅವರು ವಿಶೇಷವಾಗಿ ಟ್ಯೂನ್ ಮಾಡಬೇಕಾದ್ರೆ ತುಂಬಾ ಧೈರ್ಯ ಕೊಡ್ತಾರೆ, ಟ್ಯೂನ್ ಮಾಡ್ತಾಮಾಡ್ತಾನೆ ಎರಡೆರಡು ಸಾಲು ಬರೆದು ಕೊಟ್ಟು ಸ್ಫೂರ್ತಿ ಕೊಡ್ತಾರೆ. ಹೀಗೆ ಹಲವಾರು ಅನುಭವಗಳಿವೆ. ಒಂದು ಅನುಭವ ಅಂತೂ...ತುಂಬಾ ಸ್ವಾರಸ್ಯದ್ದು.

"ದೊಡ್ಡಮನೆ ಎಸ್ಟೇಟ್" ಚಿತ್ರ.... ಅದರ ಒಂದು ಹಾಡಿಗೆ ಟ್ಯೂನ್ ಮಾಡಿದೆ. ಅದಕ್ಕೆ ಗೌಡರು ಹಾಡು ಬರೆದದ್ದೂ ಆಯ್ತು. ಆ ಚಿತ್ರದ ನಿರ್ದೇಶಕ ನಿರ್ಮಾಪಕರು ತುಂಬಾ ಮೆಚ್ಚಿಕೊಂಡರು ಸರಿ ಅವತ್ತು ನಾನು ಗೌಡರು ಮದರಾಸಿಗೆ ಬಸ್ಸಲ್ಲಿ ಹೊರಟ್ವಿ. ಬಸ್ಸು ಬೆಂಗಳೂರ್ ಬಿಟ್ಟ ತಕ್ಷಣ ಟ್ಯೂನ್ ಬಗ್ಗೆ ಯೋಚನೆ ಮಾಡಿದೆ, ಗೌಡ್ರೆ ಈಗ ಮಾಡಿರೋ ಟ್ಯೂನ್‌ಗಿಂತ ಇನ್ನೂ ಚೆನ್ನಾಗಿ ಟ್ಯೂನ್ ಮಾಡಬಹುದಲ್ಲ ಅಂದೆ. ಅದಕ್ಕೆ ಅವರು ಅದೇನು ಹೇಳಿ ನೋಡೋಣ ಅಂದರು. ಆ ಹೊಸ ಟ್ಯೂನ್ ಹೇಳ್ದೆ ಮೆಚ್ಚಿಕೊಂಡರು ಬಸ್ಸು ಮದ್ರಾಸಿಗೆ ತಲುಪೋ ಹೊತ್ತಿಗೆ ಆ ಟ್ಯೂನಗೆ ಆಗಲೇ ಹಾಡು ಸಿದ್ಧವಾಗಿತ್ತು.

ನಾವು ಹೋಗಿ ನಮ್ಮ ಹೊಸ ಟ್ಯೂನ್ ಮತ್ತು ಹೊಸ ಸಾಹಿತ್ಯ ಹೇಳಿದಾಗ ನಿರ್ಮಾಪಕರು ಮೊದಲಿಗಿಂತ ಚೆನ್ನಾಗಿದೆ ಅಂತ ಮೆಚ್ಚಿಕೊಂಡರು. ಧ್ವನಿ ಮುದ್ರಣ ಆಯ್ತು. ಹೀಗೆ, ಇದು ನನ್ನ ಸ್ವಭಾವ ಕೂಡ. ನಾನು ಯಾವುದೇ ಒಂದು ಹಾಡಿಗೆ ಟ್ಯೂನ್ ಮಾಡಿದ್ರೆ ಅದು ಧ್ವನಿ ಮುದ್ರಣ ಆಗೋವರೆಗೂ ಒಂದು ಸರಿಯಾದ ರೂಪಕ್ಕೆ ಬರೋವರ್ಗೂ ಅದರ ಬಗ್ಗೆ ಯೋಚ್ನೆ ಮಾಡ್ತಾ ಮಾಡ್ತಾ ಇನ್ನೂ ಎಷ್ಟು ಚೆನ್ನಾಗಿ ಮಾಡಬಹುದು ಅನ್ನೊ ಪ್ರಯತ್ನ ಪಡೋದು ನನ್ನ ಸ್ವಭಾವ. ನನ್ನ ಸ್ವಭಾವಕ್ಕೆ ಹೊಂದಿಕೊಳ್ಳುತ್ತದೆ ದೊಡ್ಡರಂಗೇಗೌಡರ ಸ್ವಭಾವ. ಯಾವುದೇ ಒಂದು ಗೀತೆನ ಎಲ್ಲರೂ ಮೆಚ್ಚಿಕೊಂಡರು ಧ್ವನಿಮುದ್ರಣ ಆಗೋವರೆಗೂ ಅದರ ಬಗ್ಗೆ ಯೋಚಿಸಿ ಸಾಹಿತ್ಯ ಬದಲಾಯಿಸುತ್ತಾ ಒಂದು ಅರ್ಥ ಪೂರ್ಣ ಗೀತೆ ಮಾಡೋಕೆ ಪ್ರಯತ್ನ ಪಡ್ತಾರೆ. ಇದು ಅವರಿಗೆ ಇರೋ ಕಾಳಜಿ, ಚಿತ್ರದಲ್ಲಿ ಹಾಡು ಒಳ್ಳೆದಾಗಿರಬೇಕು ಅನ್ನೋ ಭಾವನೆ.

ಇನ್ನೊಂದು ಸಂದರ್ಭ ನನಗೆ ತುಂಬಾ ಖುಷಿ ಕೊಡೋದು ಅಂದ್ರೆ, ಮದ್ರಾಸಿಗೆ ನಾನು ಯಾವುದೋ ಒಂದು ಚಿತ್ರದ ರೆಕಾರ್ಡಿಂಗ್‌ಗೆ ಹೋಗಿದ್ದೆ ಸ್ವಾಗತ್ ಹೋಟ್ಲಲ್ಲಿ ನಾನು ತಂಗಿದ್ದೆ. ಸಾಯಂಕಾಲ ದೊಡ್ಡರಂಗೇಗೌಡರು ಮತ್ತು 'ಆಲೆಮನೆ' ನಿರ್ದೇಶಕರು ಅಲ್ಲಿಗೆ ಬಂದರು. ನಿರ್ದೇಶಕರು ಸಾರ್ ನಿಮ್ಮಿಂದ ಒಂದು ಸಹಾಯ ಆಗ್ಬೇಕಾಗಿತ್ತು. ನಾಳೆನೆ ನನಗೆ ರೆಕಾರ್ಡಿಂಗ್ ಸ್ಟುಡಿಯೋ ಸಿಕ್ಕಿದೆ ಚಿತ್ರ ಕಡಿಮೆ ಬಂಡವಾಳದ್ದು ಒಟ್ಟು ಮೂರು ಹಾಡನ್ನು ತಾವು ಸಿದ್ಧ ಮಾಡಿಕೊಡಬೇಕು ...ಅಂದ್ರು ನನಗೆ ಸಿಕ್ಕಾಪಟ್ಟೆ ಕೋಪ ಬಂದು, ನಾಳೆ ಒಳಗೆ ನಾನೇನ್ ಟ್ಯೂನ್ ಮಾಡ್ಲಿ. ಇದೆಲ್ಲ ಆಗೋ ಕೆಲಸ ಅಲ್ಲಾರೀ ಅಂದೆ. ಆದ್ರೆ ಗೌಡರಿಗೆ ಗೊತ್ತಿತ್ತು ಅವರು ಬರೆದ ಸಾಹಿತ್ಯಕ್ಕೆ ನಾನು ಮಾಡಬಲ್ಲೆ ಅಂತ. ಆಗ ಗೌಡ್ರು ಹೇಳಿದ್ರು ನೀವೇನು ಯೋಚ್ನೆ ಮಾಡ್ಬೇಡಿ ನಾನು ಮೂರು ಸಂದರ್ಭಕ್ಕೂ ಆಗ್ಲೆ ಹಾಡು ಬರೆದು ಬಿಟ್ಟಿದ್ದೇನೆ ಅಂದ್ರು. ಸರಿ ಸಾಹಿತ್ಯ ನೋಡ್ದೆ ನಂತರ ಎರಡೆ ಗಂಟೆ ಒಳಗೆ ಮೂರು ಹಾಡುಗಳ ಸಂಯೋಜನೆ ಆಯ್ತು. ಇವತ್ತಿಗೂ "ನಮ್ಮೂರ ಮಂದಾರ ಹೂವೆ.." ಗೀತೆ ಚಿತ್ರಗೀತೆಗಳಲ್ಲೇ ಅತ್ಯಂತ ಕೀರ್ತಿಕೊಟ್ಟ ಗೀತೆ. "ಎಲ್ಲಾ ಮೇಲು ಕೀಳು ..." ಹಾಡೂ ಕೂಡ ಜನಪ್ರಿಯತೆ ಹೊಂದಿದೆ. ಗೌಡರಿಗೆ ಇದೊಂದು ಶಕ್ತಿ ಕೂಡ. ಅವರಿಗೆ ಯಾವುದೇ ಒಂದು ಚಿತ್ರದ ಸಂದರ್ಭ ಕೊಟ್ಟರೆ ಆ ಸಂದರ್ಭಾನ ಚೆನ್ನಾಗಿ ಅರ್ಥ ಮಾಡಿಕೊಂಡು ಆ ಸಂದರ್ಭಕ್ಕೆ ಉಚಿತವಾಗುವಂತೆ, ಲಯ ಹೊಂದುವಂತೆ ಉತ್ತಮವಾದ ಸಾಹಿತ್ಯ ಸೃಷ್ಟಿಸುವ ಶಕ್ತಿ ಅವರಿಗಿದೆ. ಈ ಶಕ್ತಿನಾ ನಮ್ಮ ಚಿತ್ರರಂಗದಲ್ಲಿ ಯಾಕೆ ಸರಿಯಾಗಿ ಬಳಸಿಕೊಳ್ಳಲಿಲ್ಲ ಅಂತ ಆಪಾದನೆಯೂ ಇದೆ. ನಿಜವಾಗಿಯೂ ಬಹಳ ದೊಡ್ಡ ಸಾಹಿತಿ ದೊಡ್ಡರಂಗೇಗೌಡರು. ಗೌಡರು ಬರೆದಿರೋ ಹಾಡುಗಳೆಲ್ಲವೂ ಜನಪ್ರಿಯವಾಗಿವೆ. ಉದಾಹರಣೆಗೆ ಹೇಳೋದಾದ್ರೆ 'ಪರಸಂಗದ ಗೆಂಡೆತಿಮ್ಮ'ದ "ತೇರ ಏರಿ ಅಂಬರದಾಗೆ ನೇಸರ ನಗುತಾನೆ" ಪಡುವಾರಳ್ಳಿ ಪಾಂಡವರು ಚಿತ್ರದ "ಜನ್ಮ ನೀಡಿದ ಭೂಮಿ ತಾಯಿಯ ನಾ ಹೇಗೆ ತಾನೆ ಮರೆಯಲಿ..." 'ಮಾಗಿಯ ಕನಸು' ಚಿತ್ರದ "ಬಂದಿದೆ ಬದುಕಿನ ಬಂಗಾರದದಿನ.... ಸ್ನೇಹ ಜೀವನ ಇಂದು ಮುಂದು ಚೆಂದ......" ಮುಂತಾದವುಗಳು.

ಗೌಡರ ಇನ್ನೊಂದು ದೊಡ್ಡ ವಿಚಾರ ಅಂದ್ರೆ ಹೊಸ ರೀತಿಯ ಟ್ಯೂನ್ಗೆ ಸಾಹಿತ್ಯ ಬರಿಬೇಕು ಅನ್ನೊ ಹಂಬಲ, ಹಟ. ಅನುರಕ್ತೆ ಚಿತ್ರದ ಕಡೇ ಗೀತೆಯಲ್ಲಿ ಜಾನಪದ ಮತ್ತು ವೆಸ್ಟರ್ನ್ ಸೇರಿಸಿ ಬರೆದಿರೋ ಗೀತೆ ಬಹಳ ಚೆನ್ನಾಗಿದೆ, ಅದು ಹೊಸ ಶೈಲಿಯ ಸಂಯೋಜನೆ 'ಏನೇ ಬರಲಿ ಪ್ರೀತಿ ಇರಲಿ' ಚಿತ್ರದ "ಎಲ್ಲರಂತೆ ನಾವೂ ಕೂಡ ಬದುಕಬೇಡವೇ..." ಭೂಲೋಕದಲ್ಲಿ ಯಮರಾಜ. ಚಿತ್ರದ "ಯವ್ವನಾ ಮೋಜಿನಾ..." ದೊಡ್ಡಮನೆ ಎಸ್ಟೇಟ್ ಚಿತ್ರದ "ಮನಸ್ಸಿನಾಸೆ ಕೂಗಿದೆ...", ಅನುಪಮ ಚಿತ್ರದ "ಬರ್‍ತಾಳೆ ಕನಸಿನ ರಾಣಿ..." ಹೀಗೆ ಹಲವಾರು ಹೊಸ ಹೊಸ ರೀತಿಯ ಸಂಯೋಜನೆಗೆ ಗೌಡರು ಅರ್ಥಪೂರ್ಣ ಸಾಹಿತ್ಯ ಕೊಟ್ಟಿದ್ದಾರೆ. ಈವತ್ತಿಗೂ ಆ ಗೀತೆಗಳು ಜನ ಮನ್ನಣೆಗೆ ಪಾತ್ರವಾಗಿವೆ. ಹೀಗೆ ಚಿತ್ರಗೀತೆ, ಚಿತ್ರ ಸಂಗೀತ ಸಂಯೋಜನೆಗೆ ಒಡ್ಡಿದಾಗ ಗೌಡರ ಜೊತೆ ಬಹಳ ಒಳ್ಳೆ ದಿನಗಳನ್ನು ಕಳೆದಿದ್ದೇನೆ.

ಇನ್ನೊಂದು ಮಹತ್ವದ ವಿಚಾರ ಗೌಡರ ಬಗ್ಗೆ ಹೇಳಬೇಕು ಅಂದ್ರೆ ಭಾವಗೀತೆಗಳು. ೧೯೮೦ರಲ್ಲಿ ಮಹೇಶ್ ಅವರು ಎಸ್. ಪಿ. ಬಾಲಸುಬ್ರಮಣ್ಯಂ ಧ್ವನಿಲಿ ಒಂದು ಕ್ಯಾಸೆಟ್ ಮಾಡ್ಬೇಕು ಅಂದ್ರು. ಆ ವೇಳೆಗಾಗಲೇ ೨-೩ ಕ್ಯಾಸೆಟ್

ಮಾಡಿದ್ವಿ, ಆಗ ನನಗೆ ಅನ್ನಿಸ್ತು ಇದು ಒಳ್ಳೆ ಅವಕಾಶ ಅಂತ. ಎಸ್.ಪಿ. ಶೈಲಿ ಹಾಡಿಸೋದಾದ್ರೆ ಹೊಸ ಶೈಲಿಲಿ ಮಾಡಬೇಕು ಅನ್ನಿಸಿತು. ಜಾನಪದ ಶೈಲಿಲಿ ಬಾಲು ಹೆಚ್ಚಾಗಿ ಹಾಡಿರಲಿಲ್ಲ. ಇದಕ್ಕೆ ತಕ್ಷಣ ಭಾವಗೀತೆ ಬರೆಯೊರು ಅಂದ್ರೆ ದೊಡ್ಡರಂಗೇಗೌಡರು ಅನ್ನಿಸಿತು. ಸರಿ ಗೌಡ್ರನ್ನು ಭೇಟಿ ಆದೆ ತುಂಬಾ ಸಂತೋಷಪಟ್ಟರು. ಕೆಲವೆ ದಿನದಲ್ಲಿ ಹತ್ತು ಹಾಡಲ್ಲಿ ೩-೪ ಹಾಡು ಬರೆದು ತಂದೆಬಿಟ್ರು. ನನ್ನ ಆತ್ಮೀಯ ಸ್ನೇಹಿತರಾದ ಚಿಂತಾಮಣಿ ಅವರ ಜೊತೆ ಕೂತು ಆ ಹಾಡಿಗೆ ಟ್ಯೂನ್ ಮಾಡಿದೆ, ಚೆನ್ನಾಗಿ ಬಂತು, ನಂತರ ಜೊತೆ ಅದೇ ಥರ ಮತ್ತೆ ೪-೫ ಹಾಡಿಗೆ ಟ್ಯೂನ್ ಮಾಡಿದೆ, ಚೆನ್ನಾಗಿ ಬಂತು ಮಾಡಿಕೊಟ್ಟೆ ಅದಕ್ಕೂ ಬಹಳ ಅದ್ಭುತವಾಗಿ ದೊಡ್ಡರಂಗೇಗೌಡರು ಸಾಹಿತ್ಯ ಬರೆದು ಕೊಟ್ಟರು...ಅದರಲ್ಲೂ "ಮುಂಜಾನೆ ಮಂಜೆಲ್ಲಾ ಚೆಂದಾಗೈತೆ" ಉತ್ತಮ ಸಾಹಿತ್ಯ. ಸಾಹಿತ್ಯದ ದೃಷ್ಟಿಯಿಂದಲೂ ಟ್ಯೂನ್ ದೃಷ್ಟಿಯಿಂದಲೂ ಹೊಸದಾಗಿತ್ತು. ಬಾಲಸುಬ್ರಹ್ಮಣ್ಯಂ ಕೂಡ ಚೆನ್ನಾಗಿ ಹಾಡಿದ್ದಾರೆ. ಹೀಗಾಗಿ ಬಹಳ ಉತ್ತಮ ಮಟ್ಟದ ಅತ್ಯಂತ ಜನಪ್ರಿಯ ಧ್ವನಿ ಸುರುಳಿಯಾಗಿ ಈವತ್ತಿಗೂ ಅದೂ ಹೆಸರು ಪಡೆದಿದೆ. ಇಂಥ ಒಳ್ಳೆವ್ಯಕ್ತಿ ನೂರು ವರ್ಷ ಬಾಳಲಿ. ಇನ್ನೂ ಹೆಚ್ಚಿಗೆ ಇವರ ಸಾಹಿತ್ಯಕ್ಕೆ ಜನ ಮನ್ನಣೆ ಸಿಗಲಿ ಎಂದು ಈ ಸಂದರ್ಭದಲ್ಲಿ ಹೃದಯಪೂರ್ವಕವಾಗಿ ಹಾರೈಸುತ್ತೇನೆ.

## ಕವಿಯ ಅಂತರ್ಮುಖತೆ

✍ ಪ್ರೊ. ಜಿ. ಎಸ್ ಆಮೂರ

ದೊಡ್ಡರಂಗೇಗೌಡರ ಕಾವ್ಯದಲ್ಲಿ ಮೊದಲಿನಿಂದಲೂ ಅಂತರ್ಮುಖತೆ ಮತ್ತು ಬಹಿರ್ಮುಖತೆಗಳಲ್ಲಿ ಸಮತೋಲನವನ್ನು ಕಾಯ್ದುಕೊಳ್ಳುವ ಅಂತರ್ಮುಖತೆ ಅವರನ್ನು ಆತ್ಮ ನಿವೇದನೆ ಮತ್ತು ಆತ್ಮ ವಿಮರ್ಶೆಗೆ ಪ್ರೇರೇಪಿಸಿದರೆ ಬಹಿರ್ಮುಖತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾಳಜಿಗಳು ಹುಟ್ಟಿಕೊಳ್ಳುದಕ್ಕೆ ಕಾರಣವಾಯಿತು.

ಅಂತರ್ಮುಖತೆಯ ಕವಿತೆಗಳಲ್ಲಿ ದೊಡ್ಡರಂಗೇಗೌಡರು ಹೆಚ್ಚಿನ ಯಶಸ್ಸನ್ನು ಸಾಧಿಸಿದ್ದಾರೆ.

ಅವರ ಕವಿತೆಗಳಲ್ಲಿ ಪ್ರಾಮಾಣಿಕತೆ ಸ್ವಾನುಭವದ ಗಟ್ಟಿತನ, ಸೋಲು-ಗೆಲುವುಗಳಿಂದ ವಿಚಲಿತವಾಗದ ಸಂಯಮ ಕಂಡುಬರುತ್ತದೆ.

# ನನ್ನ ಗೆಳೆಯ ದೊಡ್ಡರಂಗೇಗೌಡ

✍ ಡಾ॥ ಚೆನ್ನಣ ವಾಲೀಕಾರ

ನನ್ನ ಗೆಳೆಯ ದೊಡ್ಡರಂಗೇಗೌಡರ ಕಾವ್ಯ ಶ್ರೇಷ್ಠವಾಗುವುದು ಅವರ ವ್ಯಕ್ತಿತ್ವದಿಂದಲೇ. ಅವರ ನಯ - ವಿನಯ, ಶೀಲ-ಸಜ್ಜನಿಕೆ, ಮಾತುಗಾರಿಕೆ, ಸದಾ ಸುರಿಯುವ ಸ್ನೇಹಕಾರಂಜಿ- ಅಂತಹ ಮಹಾ ವ್ಯಕ್ತಿತ್ವದಿಂದಲೇ ಮಹಾಕಾವ್ಯ ಹುಟ್ಟುವುದು. ಕುವೆಂಪು ಅವರು ಆದದ್ದು ಹಾಗೆ, ಬರೆದದ್ದು ಹಾಗೆ.

೧೯೬೯ರ ಜುಲೈಯಲ್ಲಿ ಶ್ಯಾಮಸುಂದರ ಬಿದರಕುಂದಿಯವರು ತಮ್ಮ ಬೆಂಗಳೂರಿನ ಗೆಳೆಯರಾದ ದೊಡ್ಡರಂಗೇಗೌಡ ಮತ್ತು ಜಯಸುದರ್ಶನ ಅವರ ಪರಿಚಯ ಮಾಡಿದರು. ಅವರ ಕಾವ್ಯದ ಮೂಲಕ, ಪತ್ರಿಕೆಗಳಲ್ಲಿ ಬಂದ ಅವರ ಕವಿತೆಗಳನ್ನೋದಿ, ನಾನು ಅವರಿಗೆ ಕಾಗದ ಬರೆದೆ. ಜಯಸುದರ್ಶನ ಸ್ವಲ್ಪ ಏಕಾಂತದ ವ್ಯಕ್ತಿ ಆದರೆ ನನಗೆ ಏಕಾಂತಕ್ಕಿಂಥ ಲೋಕಾಂತದ ವ್ಯಕ್ತಿ ತುಂಬಾ ಇಷ್ಟ. ದೊಡ್ಡರಂಗೇಗೌಡರು ಆ ಬಗೆಯ ವ್ಯಕ್ತಿ. ಅವರನ್ನು ಕಂಡಾಗ ನನ್ನ ಸ್ವಭಾವ, ಅವರ ಸ್ವಭಾವ ಒಂದೇ ಇದ್ದುದಕ್ಕೆ ಬೇಗ ಗೆಳೆಯರಾದೆವು. ಪತ್ರ ವ್ಯವಹಾರ ಮಾಡುವ ಸಂಧರ್ಭ ಬಂದಾಗ ನನ್ನ ಮತ್ತು ದೊಡ್ಡರಂಗೇಗೌಡರ ಸಂಬಂಧ ಬೆಳೆಯುತ್ತಾ ಹೋಯಿತು, ಅಪಾರ ಗೌರವ ಮೂಡಿತು.

ಮೊದಲು ನನಗೆ ದೊಡ್ಡರಂಗೇಗೌಡರ ಕಾವ್ಯದ ಬಗ್ಗೆ ಗೊತ್ತಿತ್ತು. ಅವರು ತುಂಬಾ ಸೂಕ್ಷ್ಮವಾಗಿ ಭಾವನೆಗಳನ್ನು ಕೆತ್ತಿ ಬರೆಯುವ ಕವಿ ಎಂದು. ಅವರ ಕವನಗಳಿಗೆ ಕುಲುಮೆಯಾಗಿದ್ದ ಅವರ ಬದುಕೆ ತಿಳಿದಾಗ ಅವರ ಬಗ್ಗೆ ಅತಿಯಾದ ಗೌರವ ತನ್ನಲ್ಲಿ ಉಂಟಾಯಿತು. ರಾತ್ರಿ ಹೊತ್ತು ಆರ್.ಎಂ.ಎಸ್.ನಲ್ಲಿ ಕೆಲಸ ಮಾಡಿ, ಹಗಲು ಹೊತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ.ಓದಿದ ಸಂಗತಿ ಕೇಳಿ ಮೈರುಝುಮ್ಮೆಂದಿತು.ದೊರಂಗೌ ನಿಜಕ್ಕೂ ಕಷ್ಟದ ಜೀವಿ. ಆ ಕಷ್ಟದ ಫಲವಾಗಿ ಅದನ್ನು ಪರಿಹರಿಸಲು ಸಿಕ್ಕವರು ನನ್ನ ತಂಗಿ ರಾಜೇಶ್ವರಿ ಅವರ ಶ್ರೀಮತಿಯವರು. ಬಿಸಿಲಲ್ಲಿ ಬಾಡಿದ ಭೂಮಿಗೆ ಶ್ರಾವಣದ ಹನಿಯಾಗಿ.

೧೯೭೩ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ನಡೆದಾಗ ಒಂದು ಸಂಜೆ ದೊಡ್ಡರಂಗೇಗೌಡರು ತಮ್ಮ ಮನೆಗೆ ಕರೆದುಕೊಂಡು ಹೋದರು. ಮೂರು ದಿವಸ ಇದ್ದೆ ಬೆಂಗಳೂರಿನಲ್ಲಿ, ನನಗೆ ವಿಶಾಲವಾದ ಜಾಗದಲ್ಲಿ ಇದ್ದದ್ದು ರೂಢಿ, ಹಿತ. ಸುಖ, ಶಾಂತಿ, ಸಮಾಧಾನ ಅವರ ಮನೆಯಲ್ಲಿ ಇದ್ದದ್ದು ಅರ್ಧತಾಸು. ಆ ಅರ್ಧತಾಸಿನಲ್ಲಿ ತಂಗಿ ರಾಜೇಶ್ವರಿ ಮತ್ತು ದೊ.ರಂ.ಗೌಡರು ಎಲ್ಲಾ ಜಗತ್ತನ್ನು ಕುರಿತು ಮಾತನಾಡಿದರು. ನನಗೆ ಆಗ ಬೆಂಗಳೂರು ತುಂಬಾ ಹೊಸದು. ನಾನೆಲ್ಲಿ ದಾರಿ ತಪ್ಪಿಸಿಕೊಳ್ಳುವೆನೋ ಎಂದು ಗೌಡರು ಕ.ಸಾ.ಪಕ್ಕೆ ಬಂದು ಬಿಟ್ಟು ಹೋದರು.

ಗೌಡರದು ಮಗುವಿನಂತಹ ಮನಸ್ಸು. ಅವರಂತೆ ಅವರ ಕಾವ್ಯ; ಅವರ ಬರಹಗಳು. ದೊರಂಗೌಡರ "ಕಣ್ಣು ನಾಲಿಗೆ ಕಡಲು" ಕೃತಿಗೆ ೧೯೭೨ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿತು. ಪ್ರಶಸ್ತಿ ನೋಡಿ ನನ್ನ ಸಂಕಲನ ಕಳುಹಿಸಿದೆ ಪ್ರಶಸ್ತಿ ಸ್ಪರ್ಧೆಗೆ. ೧೯೯೫ರ ಫೆಬ್ರವರಿಯಲ್ಲಿ ನನಗೂ ಬರಬೇಕೆ? ಗೆಳೆಯ ಮಾಡುವ ಸಹಾಯ ಇದಕ್ಕಿಂತ ದೊಡ್ಡದು ಇನ್ನಾವುದು ಹೇಳಿ? ಕಾವ್ಯದಷ್ಟೇ ಸಹಜ ಸರಳ ಸುಂದರವಾಗಿರುವ - ಅವರ ನಡವಳಿಕೆ ಕಂಡು ಮೌನಿಯಾದೆ.

ಒಬ್ಬ ಅಧ್ಯಾಪಕನ ಸಂಪತ್ತು ಅವನ ವಿದ್ಯಾರ್ಥಿಗಳ ಪ್ರೀತಿ. ಒಳೆಯ ಹೆಂಡತಿ, ಒಳ್ಳೆಯ ಗೆಳೆಯರನ್ನು ಪಡೆಯುವುದರ ಜೊತೆಗೆ ದೊಡ್ಡರಂಗೇಗೌಡರು ಒಳ್ಳೆಯ ವಿದ್ಯಾರ್ಥಿಗಳನ್ನು ಪಡೆದವರು. ಅವರೊಬ್ಬ ಒಳ್ಳೆಯ ಸಂಘಟಕರೆಂಬ ಸಂಗತಿ ನನಗೆ ಗೊತ್ತಿರಲಿಲ್ಲ. ಒಬ್ಬ ವ್ಯಕ್ತಿಯ ಸಂಪೂರ್ಣ ಪರಿಚಯ ಒಮ್ಮೆಲೇ ಆಗುವುದಿಲ್ಲ. ಜೀವನದುದ್ದಕ್ಕೂ ಇದ್ದು ತಿಳಿದಾಗ ಮಾತ್ರ ಪೂರ್ಣತ್ವದ ಪರಿಚಯವಾಗುವುದು. ೧೯೮೮ರ ಜನವರಿ ಅಂತ್ಯದಲ್ಲಿ ಸಾಹಿತ್ಯ ಅಕಾಡಮಿಯವರು ರಾಯಚೂರಿನಲ್ಲಿ ಕಾವ್ಯ ಕಮ್ಮಟ ಮಾಡಿದರು ಅದರ ನಿರ್ದೇಶಕರು ನನಗೆ ಅತ್ಯಂತ ಪ್ರಿಯರಾದ ಡಾ||ಬುದ್ಧಣ್ಣ ಹಿಂಗಮಿರೆ ಮತ್ತು ದೊರಂಗೌ ಅವರು.

ಕಾವ್ಯ ಕಮ್ಮಟದ ಆ ಅವಧಿಯಲ್ಲಿ ನನಗೆ ದೊರಂಗೌಡರ ಸಂಘಟನಾ ಚತುರತೆ ಸುವ್ಯವಸ್ಥಾ ಶಕ್ತಿ ಗೊತ್ತಾಯಿತು ಕಮ್ಮಟದ ಕೊನೆಯದಿನ ಸಂಜೆ ನಡೆದ ಕವಿ ಸಮ್ಮೇಳನ ಮತ್ತು ಸಮಾರೋಪದಲ್ಲಿ ದೊರಂಗೌ ಅವರು ರಾಯಚೂರಿನ ಜನಗಳ ಮಧ್ಯೆ ಮಿಂಚಿಬಿಟ್ಟರು. ಅವರ ಸಿನಿಮಾ ಹಾಡುಗಳಿಗಿಂತ ಅವರ ಕವಿತೆ ಮತ್ತು ವೈಚಾರಿಕ ಮಾತುಗಳು ಸಭಿಕರ ಜೊತೆ ನನ್ನನ್ನು ಬೆರಗುಗೊಳಿಸಿದವು. ಗೌಡರ ಜೊತೆ ಆ ಮೂರು ದಿವಸ ಕಳೆದದ್ದೇ ಗೊತ್ತಾಗಲಿಲ್ಲ. ಎಂ.ಎ ಓದುವಾಗ ಬೆಳೆದ ಗೆಳೆತನ ಈಗ ಹೂ ಆಗಿ, ಕಾಯಾಗಿ, ಫಲ ನೀಡಿದೆ ಈ ಮೂರು ದಿವಸಗಳ ಅವಧಿಯಲ್ಲಿ 'ಜಗಲಿ ಹತ್ತಿ ಇಳಿದುದರ ಬಳಿಕ ಅವರು ಬರೆದ ಅವರ ಕವಿತೆಗಳನ್ನೆಲ್ಲಾ ಓದಿದೆ. ಸಿನಿಮಾ ಜಗತ್ತಿಗೆ ಹೋದರು ಅವರೇನೆಂದೂ ತಮ್ಮ ಕಾವ್ಯದ ಸತ್ವ ಸೊಬಗು, ಸೊಗಸು, ಶಕ್ತಿ ಕಳೆದುಕೊಳ್ಳಲಾರದ್ದು ಅನುಭವಕ್ಕೆ ಬಂದಿತು. ಹರ್ಷಿಸಿದೆ.

ನನ್ನ ಪ್ರೀತಿಯ ಮಿತ್ರ ದೊಡ್ಡರಂಗೇಗೌಡ ತಂಗಿ ರಾಜೇಶ್ವರಿಯವರ ಕಕ್ಕುಲಾತಿ ನನ್ನನುಳಿಸಿದೆ ಬೆಳೆಸಿದೆ, ಹಾಳಾಗದಂತೆ. ನೋಡಿಕೊಂಡಿದೆ. ಆಗಾಗ ಸಿಕ್ಕಿದರೂ ಅವರು ಪ್ರೀತಿ ಕರುಳಾಗಿ ಮಿಡಿದಿದೆ. ದೊರಂಗೌಡರಿಗೆ ವಯಸ್ಸೆ ಆಗಿಲ್ಲವೆನ್ನಿಸುವುದು. ಇನ್ನು ಡಿಗ್ರಿ ಓದುವ ವಿದ್ಯಾರ್ಥಿಯಂತೆ ಕಾಣುವರು. ಅವರ ಆರೋಗ್ಯದ ಗುಟ್ಟೇನು? ಸರಳ ಸಹಜ ಪ್ರಾಮಾಣಿಕ ಜೀವನ ಬಂದುದರಲ್ಲಿ ಸಂತಸ ಕಾಣುವ ಮನೋಭಾವ ಅವರ ಕಾವ್ಯದ ತಾಯಿ ಬೇರು.

"ಬೆಚ್ಚನೆ ಮನೆಯಾಗಿ/ವೆಚ್ಚಕ್ಕೆ ಹೊನ್ನಾಗಿ
ಇಚ್ಚೆಯನರಿವ ಸತಿಯು ಇದ್ದೊಡೆ /ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ - ಸರ್ವಜ್ಞ

ದೊರಂಗೌ ಬದುಕು ಸರ್ವಜ್ಞ ಕವಿಯು ಹೇಳುವ ಹಾಗೆ ಪರಿಪೂರ್ಣವಿದೆ. ಟಾಟಾ, ಬಿರ್ಲಾಗಳಿಗೂ ಈ ಸುಖವಿಲ್ಲವೇನೋ? ಇಂಥ ಭಾಗ್ಯದ ಬದುಕು ಬಾಳುತ್ತಿರುವ ನನ್ನ ಗೆಳೆಯ ದೊರಂಗೌ ನಿಜಕ್ಕೂ ಭಾಗ್ಯಶಾಲಿ.

# ದೊಡ್ಡರಂಗೇಗೌಡರ ಭಕ್ತಿ ಗೀತೆಗಳು

✍ ಕಾವೇರಿ ಶ್ರೀಧರ್
*ಸಂಗೀತ ನಿರ್ದೇಶಕಿ*

ಕರ್ನಾಟಕ ಸಾಹಿತ್ಯ, ಕ್ಷೇತ್ರದಲ್ಲಿ ಚಲನಚಿತ್ರ ಜಗತ್ತಿನಲ್ಲಿ ಚಿರಪರಿಚಿತ ಹೆಸರು ದೊಡ್ಡರಂಗೇಗೌಡರದು. ಇವರ ಹೊಸಗನ್ನಡ ಕವಿತೆಗಳು, ಪ್ರೇಮಗೀತೆಗಳು, ಜಾನಪದ ಸೊಗಡಿನೊಂದಿಗೆ, ಭಾವ-ನಾದಗಳ ಸಾಮರಸ್ಯದ ರಮ್ಯ ಪ್ರಕಾರದ ಭಾವಗೀತೆಯಾಗಿ ಜನಪ್ರಿಯವಾಗಿದೆ.

ಇವರ ಹೆಸರನ್ನು ೧೯೭೧-೭೨ರಿಂದ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಆನರ್ಸ್ ಮಾಡುತ್ತಿದ್ದ ನನ್ನ ತಂಗಿ ಮತ್ತು ತಮ್ಮನ ಮೂಲಕ ಬಹಳ ಕೇಳುತ್ತಿದ್ದೆ. ಅಂದಿನ ದಿನಗಳಲ್ಲಿಯೇ ಇವರು ತಮ್ಮ ಸಾಹಿತ್ಯ ಚಟುವಟಿಕೆಗೂ ಸೃಜನ - ಸಂಪನ್ನತೆಗೂ ಹೆಸರಾಗಿದ್ದರು.

ನಾನು ಮೊಟ್ಟ ಮೊದಲು ಇವರ ಕವಿತೆಗೆ ರಾಗಸಂಯೋಜನೆ ಮಾಡಿ ಹಾಡಿದ್ದು ೧೯೮೮ನೇ ಆಗಸ್ಟು ೧೫ರಂದು. ರವೀಂದ್ರ ಕಲಾಕ್ಷೇತ್ರದಲ್ಲಿ ಅಂದು ನಾನು ರಾಗ ಸಂಯೋಜಿಸಿ ಹಾಡಿದ ಗೀತೆ "ಆಕರ್ಷಣೆ" (ಹೊಳೆವ ನೀನು, ಸುಳಿವೆ ನಾನು). ಅಂದಿನ ನನ್ನ ಕಾರ್ಯಕ್ರಮಕ್ಕೆ ದೊಡ್ಡರಂಗೇಗೌಡರು ಉಪಸ್ಥಿತರಿದ್ದುದು ನನಗೆ ವಿಶೇಷ ಸಂತೋಷ. ಅನಂತರ ಇವರ ಅನೇಕ ಭಾವಗೀತೆಗಳಿಗೆ ರಾಗ ಸಂಯೋಜಿಸಿ, ರೇಡಿಯೋ ಟಿ.ವಿ.ಯಲ್ಲಿ ಹಾಡಿದೆ ಮತ್ತು ಹಾಡಿಸಿದೆ. ನನ್ನ ಭಾವಗೀತ ಕ್ಯಾಸೆಟ್ಟಿನಲ್ಲಿ ಇವರ "ಒಲುವೆಯ ಎಲೆಗಳು", "ಹೊಸ ಹೊಸ ಹೆಸಿರಿನ ಬಸಿರಲಿ", "ಹೊಳೆವೆ ನೀನು ಸುಳಿವೆ ನಾನು" ಗೀತೆಗಳನ್ನು ಪ್ರಸಿದ್ಧ ಗಾಯಕ - ಗಾಯಕಿಯರಿಂದ ನಾನು ರಾಗ ಸಂಯೋಜನೆ ಮಾಡಿ ಹಾಡಿಸಿದೆ. ಇವರೇ ಹೇಳುವಂತೆ, "ಭಾವುಕ ಅಂತರಂಗದ ಮನೋಧರ್ಮದಲ್ಲಿ ಅಚಲವಾಗಿ ನೆಲೆಸಿರುವ ನಿಸರ್ಗದ ಆರಾಧನೆ ಹಾಗೂ ಪ್ರೇಮಕಾರಂಜಿ, ಪ್ರಕೃತಿ ಮತ್ತು ಪ್ರೀತಿಯ ರೂಪದಲ್ಲಿ ಮತ್ತೆ ಮತ್ತೆ ಕಾಣಿಸಿ ಕೊಂಡು, ಕೋಮಲ ಗೀತೆಗಳನ್ನು ಪಲ್ಲವಿಸುವಲ್ಲಿ ಬತ್ತದ ಚಿಲುಮೆಯಾಗಿ ನಿರಂತರ ವಾಹಿನಿಯಾಗಿ ಹರಿದಿದೆ" ಇವರ ಗೀತೆಯಲ್ಲಿ. ಇವರ ಗೀತೆಗಳಿಗೆ ರಾಗ ಸಂಯೋಜನೆ ಮಾಡುವುದೆಂದರೆ ನನಗೆ ವಿಶೇಷ ಒಲವು. ಇವರ ಭಾವಗೀತೆಯಲ್ಲಿರುವ ಮಾಧುರ್ಯಕ್ಕೆ ಅದರ ಗೇಯ ಗುಣವೇ ದಾರಿ ತೋರಿಸುತ್ತದೆ ರಾಗಸಂಯೋಜನೆಗೆ ಹಾಡುಗಾರನಿಗೆ.

ಗಾಂಧೀಜಿಯನ್ನು ಕುರಿತು ಬರೆದ "ದಾಸ್ಯ ತುಂಬಿದಾ ದೇಶದೊಳಗೆ ಚಿಂತನೆ, ಚೈತನ್ಯ ತಂದೆ ಬಾಪು," ಎನ್ನುವ ಗೀತೆಗೆ ರಾಗಸಂಯೋಜಿಸಿ, ನನ್ನ ಬೆಂಗಳೂರು ಯೂತ್ ಕ್ವಾಯ್ರನ ಮೂಲಕ ಅನೇಕ ಕಡೆ ಹಾಡಿಸಿದ್ದೇನೆ. ನಿನ್ನ ಹಾದಿ ಮರೆತ ನಾವು ತೊಳಲಿ, ಬಳಲಿ ಬೆಂದು, ಬವಣೆ ಪಥದ ಬೆಂಕಿಯಲ್ಲಿ ನಡೆದಿಹೆವು

ಇಂದು, ಎಂದು ಭಾರತ, ಪ್ರಗತಿಪಥದಲ್ಲಿದ್ದರೂ ಭಾರತೀಯ ಒಟ್ಟಾರೆ ಹತಾಶೆಯಲ್ಲಿದ್ದಾನೆ, ಎಂಬುದನ್ನು ತನ್ನದೇ ಆದ ಪರಿಧಿಯಲ್ಲಿ ಗುರುತಿಸಿ, ಭಾವನಾತ್ಮಕ ಹಿನ್ನಲೆಯಲ್ಲೂ ಅವರ ವಿಶೇಷ ಒತ್ತು ಮಾನವೀಯ ಮೌಲ್ಯಗಳ ಕಡೆಗೆ ನಿಚ್ಚಳವಾಗಿದೆ ಎಂದು ಪ್ರಾಮಾಣಿಕವಾಗಿ ಹೇಳಬಯಸುತ್ತಾರೆ.

ಪ್ರಕೃತಿಯ ಚಿತ್ರವಿಚಿತ್ರಗಳಾದ ದೃಶ್ಯ ವಿಶೇಷಗಳನ್ನು ನೋಡಿ, ಅನುಭವಿಸುವ ಜನಜೀವನವನ್ನು ಉಪಾಸಿಸುವ ಈ ಕವಿ ಥಟ್ಟನೆ ದೇವಿಯ ಆರಾಧಕನಾಗಿ ಭಕ್ತನಂತೆ ಭಕ್ತಿಗೀತೆಗಳನ್ನು ಬರೆದು ಮುಂದಿಟ್ಟಾಗ ನನಗೆ ಸ್ವಲ್ಪ ಕಸಿವಿಸಿಯೇ ಆಯಿತು. ಯೋಗಾಯೋಗದಿಂದ ಅವರ ಭಕ್ತಿಗೀತೆಗಳ ಗುಚ್ಛ ನನ್ನ ಕೈ ತಲುಪಿದಾಗ,ಅವರ ಕೈಬರಹ ಮತ್ತು ಪ್ರತಿಗೀತೆಯ ಕೊನೆಯಲ್ಲಿದ್ದ ಅವರ ರುಜುವನ್ನು ಪದೇ ಪದೇ ನೋಡಿಯೇ ನಾನು ಖಾತ್ರಿ ಮಾಡಿಕೊಂಡೆ ಇದು ಅವರದೇ ಎಂದು.

ದೇವಿಯ ಏಳು ರೂಪವನ್ನು ಕುರಿತು ಬರೆದುದು ಏಳು ರೂಪ ಏಳು ಹೆಸರು ಆದರೂ ದೇವಿ ಒಂದೇ - "ದೇವನೊಬ್ಬ ನಾಮ ಹಲವು" ಎನ್ನುವಂತೆ

೧) ಅಣ್ಣಮ್ಮ ತಾಯಿ (ಮಾಯಾಮಾಳವ ಗೌಳ)

೨) ಶಾರದೆ ಮಾತೆ (ನಠಭೈರವಿ)

೩) ಎಲ್ಲಮ್ಮ ತಾಯಿ (ಚಾರುಕೇಶಿ)

೪) ಮಹೇಶ್ವರಿ (ಕಲ್ಯಾಣಿ)

೫) ಬ್ರಹ್ಮಾಣೀ (ಕೀರವಾಣಿ)

೬) ಕೆಂಪಮ್ಮ (ಚಾರುಕೇಶಿ)

೭) ಚಾಮುಂಡೇಶ್ವರಿ (ಹೇಮಾವತಿ)

ಎಂದು ದೇವಿಯ ಏಳು ರೂಪವನ್ನು ಭವ್ಯವಾಗಿ ಕೊಂಡಾಡಿದ್ದಲ್ಲಗೆ ಸೂಕ್ತ ರಾಗಗಳನ್ನು ಅವುಗಳಿಗೆ ಅವರೇ ಸೂಚಿಸಿದ್ದು ಮತ್ತೊಂದು ವಿಶೇಷ. ಅವರ ಮನಸ್ಸಿನಲ್ಲಿ ಮೂಡಿದ ರಾಗಭಾವದ ಚಿತ್ರವನ್ನು ಊಹಿಸಿಕೊಂಡು ಅದಕ್ಕೆ ಧಕ್ಕೆ ಬರದಂತೆ ಅಯಾ ರಾಗಗಳನ್ನೇ ರಾಗಸಂಯೋಜನೆ ಉಪಯೋಗಿಸಿಕೊಂಡೆ. ಚಾರುಕೇಶಿ ರಾಗವನ್ನು ಎರಡು ಬಾರಿ ಅವರು ತೋರಿಸಿದ್ದರಿಂದ (ಎಲ್ಲಮ್ಮ ಮತ್ತು ಕೆಂಪಮ್ಮ), ಒಂದು ಹಾಡಿಗೆ ರಾಗ ಬದಲಾಯಿಸುವ ಸ್ವಾತಂತ್ರ್ಯವನ್ನು ನಾನು ತೆಗೆದುಕೊಂಡೆ.

ಅದ್ದೂರಿಯ, ವಿಜ್ರಂಭಣೆಯ ದೇವಿಯ ವರ್ಣನೆ ಪ್ರತಿ ಹಾಡಿನಲ್ಲೂ ಕಂಡೆ. ಮದ್ರಾಸಿಗೆ ನಾನು ರೆಕಾರ್ಡಿಂಗ್ ಮಾಡಲು ಹೋದಾಗ, ಈ ಹಾಡುಗಳನ್ನು ಹಾಡಿದ ವಾಣಿಜಯರಾಂ ಮತ್ತು ಮನು ಸಂತೋಷವನ್ನು ವ್ಯಕ್ತ ಪಡಿಸಿದರು. ಅಣ್ಣಮ್ಮ ತಾಯಿಯನ್ನು ಕುರಿತಾದ "ಅಮ್ಮಾ ಅಮ್ಮಾ ನೀ ಕಾಪಾಡಮ್ಮ" ಎಂಬ ಹಾಡನ್ನು ಹಾಡಿ ಹೊರಗೆ ಬಂದ ವಾಣಿಜಯರಾಂ- "ಕಾವೇರಿ, ನನ್ನ ಕೈ ನೋಡು, ಹೇಗೆ ರೋಮಾಂಚನವಾಗಿದೆ, ಈ ಹಾಡನ್ನು ಹಾಡಿ ಮೈಯೆಲ್ಲಾ ಜುಂ ಎಂದಿತು" ಎಂದರು. ಎಲ್ಲಮ್ಮ ತಾಯಿಯನ್ನು ಭಕ್ತಿಯಿಂದ ಭಜಿಸುವ ಗೀತೆ "ಏನೆಂದು ಭಜಿಸಲಿ - ಏನೆಂದು ಹಾಡಲಿ" ಎಂಬ ಹಾಡನ್ನು ಹಾಡಿದ ಖ್ಯಾತ ಗಾಯಕ ಮನು ಈ ಹಾಡುಗಳನ್ನು ಬಾಯಿಯಿಂದ ತೇಲಿಸಿ ಹಾಡುವಂತಹುವಲ್ಲ ಹೃದಯದಿಂದ ಹಾಡುವಂತಹ ಹಾಡುಗಳು" ಎಂದಾಗ ನಾನು ಸಂತೋಷಪಟ್ಟೆ.

"ನಿನ್ನೆದುರು ನಾನೊಂದು ಬಿಂದು ತಾಯೆ" ಎಂದು ದೊಡ್ಡರಂಗೇಗೌಡರು ದೇವಿಯನ್ನು ಕುರಿತು ಹೇಳಿದುದನ್ನು ನಾನು ಬಹಳ ಸಲ ಪುನರುಚ್ಚರಿಸಿಕೊಂಡು ರೆಕಾರ್ಡಿಂಗ್ ಮುಗಿಸಿಬಂದ ಕೆಲವು ದಿನಗಳಲ್ಲೇ "ಸಪ್ತ ಮಾತಾ ಗೀತಾಂಜಲಿ" ಎಂಬ ಹೆಸರಿನಿಂದ ಸಪ್ತಸ್ವರ ರೆಕಾರ್ಡಿಗ್ ಕಂಪನಿಯ ಮೂಲಕ ನನ್ನ ಈ ಕ್ಯಾಸೆಟ್ ಹೊರ ಬಂದಿತು. "ನಿನ್ನ ಮಹಿಮೆ ಜಗದಲ್ಲೆಲ್ಲಾ ವರ್ಣನಾತೀತ, ನಿನ್ನ ಶಕ್ತಿ ಪದತಲದಲ್ಲಿ ಭಾವದ ಸರಿತ" ಎಂದು ಅಣ್ಣಮ್ಮನನ್ನು ಕೊಂಡಾಡಿದರೆ, "ಯಜ್ಞಶ್ರೀ ಯೋಗೇಶ್ವರಿ; ಜಯಜಯತು ಶ್ರೀ ಜ್ಞಾನೇಶ್ವರಿ ಎಂದು ಶಾರದಾ ಮಾತೆಯನ್ನು ವರ್ಣಿಸುತ್ತಾರೆ. "ಏನೆಂದು ಭಜಿಸಲಿ? ಏನೆಂದು ಹಾಡಲಿ? ಅಧ್ಯಂತ ರಹಿತೆಯೇ ಆದಿಶಕ್ತಿಯೇಃ ಯಾವ ಹೂವಲಿ ತರಲಿ? ಯಾವ ಹಣ್ಣ ನೀಡಲಿ? ಎಂದು ಅನನ್ಯ ಭಕ್ತಿಯಿಂದ ಎಲ್ಲಮ್ಮನನ್ನು ಭಜಿಸಿದರೆ, "ಮಂಗಳ ಮಯಮಾತೆ, ಮಮತಾ ಮಹೇಶ್ವರಿ ಎಂದು ಮಹೇಶ್ವರಿಯಲ್ಲಿ ಧೈನತೆಯನ್ನು ಪ್ರದರ್ಶಿಸುತ್ತಾರೆ.

"ಹೇ ನಂದಿನಿ, ಕಾತ್ಯಾಯನೀ - ಚೈತನ್ಯದಾಯಿನೀ, ಜಯವರ್ಧಿನಿ, ಭಯಹಾರಿಣಿ, ಅಂಬಾಭವಾನಿ ನೀ, ಹರಸು ಹರಸು ನನ್ನನು ಹೇ ಹಂಸವಾಹಿನೀ," ಎಂದು ಬ್ರಹ್ಮಾಣಿಯನ್ನು ಹರನೆಂದು ಅಂಗಲಾಚಿದರೆ, ಪಾರ್ವತಿ ಎಂದರೂ ನೀನೇ ತಾಯಿ ಈಶ್ವರಿ ಎಂದರೂ ನೀನೇ ತಾಯಿ ಅಣ್ಣಮ್ಮನೆಂದರೂ ನೀನೇ ತಾಯಿ, ಮಾರಮ್ಮನೆಂದರೂ ನೀನೇ ತಾಯಿ ಎಂದು ಕೆಂಪಮ್ಮ ನನ್ನು ಕಾಪಾಡೆಂದು ಅನನ್ಯ ಭಕ್ತಿಯಿಂದ ಕೇಳಿಕೊಳ್ಳುತ್ತಾರೆ.

"ಶಾಶ್ವತಿ ನೀನು, ಕ್ಷಣಿಕವೂ ನಾನು" ಎಂದು ಚಾಮುಂಡೇಶ್ವರಿಯ ರೂಪವನ್ನು ಕುರಿತು "ಅಕ್ಕರೆ ತೋರಿ ಅನುಗ್ರಹಿಸಮ್ಮ ತಾಯೀ ರಾಜೇಶ್ವರಿ," ಎಂದು ಸ್ತುತಿಸಿ ಏಳು ರೂಪದಲ್ಲಿ ಕಾಣಿಸಿಕೊಳ್ಳುವ ಪರಮೇಶ್ವರಿಯನ್ನು ಅನನ್ಯ ಭಕ್ತಿಯಿಂದ ಕೊಂಡಾಡಿ ಸ್ತುತಿಸುವ ದೊಡ್ಡರಂಗೇಗೌಡರ ಈ ಹಾಡುಗಳನ್ನೂ ಕೇಳಿದಾಗ, ಇವರ ಬೇರೆ. ಪ್ರಕೃತಿ-ಪ್ರೀತಿಯ ಗೀತೆಗಳು ನೆನಪಾಗದು. ಭಕ್ತಿಗೀತೆಗಳನ್ನು ಇವರು ಇಷ್ಟು ಚೆನ್ನಾಗಿ ಬರೆಯಬಲ್ಲರು ಎಂಬ ವಿಷಯ ಹೊರಬಂದದ್ದು ಇತ್ತೀಚೆಗೆ! ಮೈ ಜುಂ ಎನ್ನಿಸುವ ಇಂಥ ಭಕ್ತಿಗೀತೆಗಳ ಧ್ವನಿ ಸುರುಳಿಯು ಇನ್ನೂ ಹಲವಾರು ಹೊರಬರಲಿ. ನಾನು ಮತ್ತು ನನ್ನಂಥ ಹಲವಾರು ಇವರ ಭಾವಗೀತೆ, ಭಕ್ತಿಗೀತೆಗಳಿಗೆ ರಾಗಸಂಯೋಜನೆ ಮಾಡಿ ಹಾಡುವಂತಾಗಲೀ ಹಾಡಿಸುವಂತಾಗಲೀ, ಎಂಬುದೇ ನನ್ನ ಆಶಯ.

ಗೀತೆ - ಸಂಗೀತಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಒಂದಕ್ಕೊಂದು ಪೂರಕ. ಕವಿಗಳೂ ಇದುವರೆಗೆ ಕವನವನ್ನು ಹಾಡುವ ಕಲಾವಿದರೂ ಇರುತ್ತಾರೆ. ರಚಿಸಿದ ಕವನಕ್ಕೆ ಸಂಗೀತದ ಉಡುಗೆ ಉಡಿಸಿದಾಗ ಕವನವೂ ಧನ್ಯ; ರಸಿಕರೂ ಧನ್ಯ.

ತನ್ನ ಆಕರ್ಷಕ ಲಯದಿಂದ, ಗೇಯತೆಯಿಂದ ಸರಳ, ಲಲಿತ ಪದಗಳಿಂದ ರಾರಾಜಿಸುವ ಗೌಡರ ಕವನಗಳಿಗೆ ರಾಗಸಂಯೋಜಿಸುವುದು ಒಂದು ಸಂತೋಷದ ಅನುಭವ. ವಿಶೇಷವಾಗಿ ಇವರ ಭಕ್ತಿಗೀತೆಗಳನ್ನು ಸಂಗೀತಕ್ಕೆ ಅಳವಡಿಸುವಾಗ ನನ್ನನ್ನೇ ನಾನು ಮರೆತಿದ್ದೆ. ಅದೊಂದು ಅವಿಸ್ಮರಣೀಯ ಕೈಂಕರ್ಯ ಭಾವನೆ ನನ್ನನ್ನು ಆವರಿಸಿತ್ತು. ನಾನು ನೋಡಿದಾಗಿನಿಂದಲೂ ಒಂದೇ ರೀತಿಯ ಮೆಲು ಮಾತಿನ, ಮೆಲು ನಗೆಯ ಸಜ್ಜನ ಸಾಕಾರಮೂರ್ತಿಯಾದ ಈ ಸಮರ್ಥ ಕವಿ ನೂರ್ಕಾಲ ಬಾಳಲೆಂದು ಆ ದೇವಿಯಲ್ಲಿ ಪ್ರಾರ್ಥಿಸುತ್ತೇನೆ.

# ಶೂದ್ರ ಸಮುದಾಯದ ನಕ್ಷತ್ರ

ತಾ. ನಂ. ಕುಮಾರಸ್ವಾಮಿ
ಪತ್ರಕರ್ತರು

ದೊಡ್ಡರಂಗೇಗೌಡರ ಬಗ್ಗೆ ಬರೆಯಬೇಕೆಂದರೆ, ನಾನು ಭಾವುಕನಾಗುತ್ತೇನೆ; ಒಳ್ಳೆಯದನ್ನೇ ಬರೆಯುತ್ತೇನೆ; ಒಳ್ಳೆಯದನ್ನೇ ಕಾಣುತ್ತೇನೆ. ಒಳ್ಳೆಯದನ್ನೇ ಬಯಸುತ್ತೇನೆ. ದೊರಂಗೌ ನನಗಿಂತ ಎರಡು ವರ್ಷಚಿಕ್ಕವರು; ಅವರು ನನ್ನನ್ನು ಹುಡುಕಿಕೊಂಡು ಬಂದುದು ಅಪರೂಪ; ಅವರನ್ನು ನಾನೇ ಎಡತಾಕುತ್ತಿದ್ದೆ, ಪದೇ ಪದೇ ಕೆಲವೊಮ್ಮೆ ಕಾರಣಗಳಿದ್ದು, ಹಲವೊಮ್ಮೆ ಕಾರಣಗಳಿಲ್ಲದೆ.

ಗೌಡರದು ಸೂಜಿಗಲ್ಲಿನಂತಹ ಗೆಳೆತನ; ನನಗೆ ೧೯೬೩ರ ನಾಲ್ಕು ಮಂದಿ ಗೆಳೆಯರ ಗುಂಪು ನೆನಪಾಗುತ್ತದೆ ನಾವೆಲ್ಲ ತುಮಕೂರು ಪ್ರಥಮ ದರ್ಜೆ ಕಾಲೇಜಿನಲ್ಲಿ ಪದವಿ ತರಗತಿಯಲ್ಲಿದ್ದೆವು. ನಾನು, ಟಿ. ಎಸ್. ಲೋಹಿತಾಶ್ವ, ಸ್ವಾಮಿ ವಿವೇಕಾನಂದ ಹಾಗೂ ದೊರಂಗೌ. ಎಲ್ಲಾ ೧೯೬೦ರ ಕಾಲಕ್ಕೆ ಹದಿಹರೆಯದವರು. ನಮ್ಮ ಒಡನಾಟ ಕೇವಲ ಗೆಳೆತನವಾಗಲಿಲ್ಲ. ಅದೊಂದು ಮಾನವೀಯ ಬೆಸುಗೆ. ಕಾವ್ಯ, ನಾಟಕ, ಸಾಮಾಜಿಕಹೋರಾಟ, ಸಾಹಿತ್ಯ ವಿಮರ್ಶೆ, ಸಾರ್ವಜನಿಕ ಭಾಷಣ, ಚರ್ಚಾಸ್ಪರ್ಧೆ ಹೀಗೆ ಎಲ್ಲಿಂದೆಲ್ಲಿಗೋ ಸಂಬಂಧವಿತ್ತು.

ನಾವು ಪದವಿತರಗಳಲ್ಲಿದ್ದಾಗ ಕಾಲೇಜು ವಿದ್ಯಾರ್ಥಿಗಳು ಬಹುದೊಡ್ಡ ಚಳುವಳಿಯಲ್ಲಿ ತೊಡಗಬೇಕಾಯಿತು. ಲೋಹಿತಾಶ್ವ ಚನ್ನಂಜಪ್ಪ ಹಾಸ್ಟೆಲಿನಲ್ಲಿದ್ದ ನಾನು ಬಾಡಿಗೆ ಕೊಠಡಿಯಲ್ಲಿದ್ದೆ. ಸ್ವಾಮಿ ವಿವೇಕಾನಂದರು ಜಯದೇವ ಹಾಸ್ಟೆಲಿನಲ್ಲಿದ್ದರು. ದೊರಂಗೌ ಇದ್ದದ್ದು ಜಿ.ಎಂ. ಸಿದ್ದರಾಮಣ್ಣ ಹಾಸ್ಟೆಲಿನಲ್ಲಿ ನಾವೆಲ್ಲ ಮತ್ತಷ್ಟು ಆತ್ಮೀಯರಾದದ್ದು ತುಮಕೂರಿನಲ್ಲಿ ಮೊದಲ ಬಾರಿಗೆ ರಾಜ್ಯಮಟ್ಟದ ವಾರಪತ್ರಿಕೆಗಳಿಗೆ ಸರಿಸಾಟಿಯಾಗಿ ನಿಲ್ಲಬಲ್ಲ "ಬೃಂದಾವನ" ಎಂಬ ಪತ್ರಿಕೆ ಪ್ರಕಟನದ ಕಾರ್ಯದಲ್ಲಿ. ನಾವೆಲ್ಲ ಓದುತ್ತಿದ್ದುದು ವಿಜ್ಞಾನದ ವಿಷಯವಾದರೂ ನಮ್ಮ ಆಸಕ್ತಿ ಸಾಹಿತ್ಯ ಲಲಿತ ಕಲೆಗಳನ್ನು ಕುರಿತೇ ಆಗಿತ್ತು.

ನಮ್ಮ ನಾಲಗೆಗೆ ಸಿಕ್ಕದ ವಸ್ತುಗಳಿಲ್ಲ. ವಿಚಾರವಿಲ್ಲ. ಮೂರುಹೊತ್ತು ಮಾತಿನ ಮಂಟಪ, ಕುತೂಹಲ, ನಾಡು ನುಡಿಯ ಮೇಲೆ ಎಲ್ಲಿಲ್ಲದ ಅಭಿಮಾನ ಬೆಳೆದಿತ್ತು.

ಪದವಿ ತರಗತಿಗಳು ಮುಗಿಯುವುದರೊಳಗೆ ನಾವೆಲ್ಲ ಕುದಿಯುವ ಅಗ್ನಿಕುಂಡವಾಗಿದ್ದೆವು. ಅನಂತರ ಬದುಕು ನಡೆಸಲು ಬೇರೆ ಬೇರೆ ಕಡೆ ಹೋದೆವು. ಗೆಳೆಯ ವಿವೇಕಾನಂದರ ಆದೇಶದಂತೆ ನಾನು ಆನೇಕಲ್ಲಿಗೆ ಹೋಗಿ ನೆಲೆಸಿದೆ. "ಗ್ರಾಮ ಸುದ್ಧಿ" ವಾರಪತ್ರಿಕೆ ಪ್ರಕಟ ಪಡಿಸಲು ಸ್ವಂತ ಮುದ್ರಣಾಲಯ ಆರಂಭಿಸಿದೆ.

ದೊಡ್ಡರಂಗೇಗೌಡರು ನನ್ನದು ಪುಟ್ಟಪತ್ರಿಕೆಯೆಂದು ಎಂದೂ ಕಡೆಗಣಿಸಲಿಲ್ಲ ಪ್ರತಿ ವಾರ ತಪ್ಪದೆ ಪದ್ಯಗಳನ್ನು ಕಳುಹಿಸುತ್ತಿದ್ದರು, ನನಗಂತೂ ಪರಮಾನಂದ ಅವರ ಪದ್ಯಗಳಿಂದ ನನ್ನ ಪತ್ರಿಕೆಯ ಮೌಲ್ಯ ಹೆಚ್ಚಿತೆಂದೇ ಭಾವಿಸಿದೆ. ಆನೇಕಲ್ಲಿನಲ್ಲಿ ವಿದ್ಯಾಸಂಸ್ಥೆಯನ್ನು ಕಟ್ಟಲು ತೀರ್ಮಾನಿಸಿದೆ. ಎಂ.ಎ ವಿದ್ಯಾರ್ಥಿ ಆಗಿದ್ದಾಗಲೇ ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾದೆ. ಆಗ ದೊಡ್ಡರಂಗೇಗೌಡರು ಅವೆನ್ಯೂ ರಸ್ತೆಯಲ್ಲಿ ಸಂಸಾರ ಹೂಡಿದರು ಅವರ ಧರ್ಮಪತ್ನಿ ಶ್ರೀಮತಿ ಕೆ. ರಾಜೇಶ್ವರಿ ಎರಡು ವರ್ಷಗಳ ಕಾಲ ಸಹಪಾಠಿಗಳಾಗಿದ್ದರು. ಆಗಾಗ್ಗೆ ಅವರ ಮನೆಯಲ್ಲಿ ಆತಿಥ್ಯ ನಮಗೆ ಸಿಗುತ್ತಿತ್ತು ಅವರು ಬಡತನದಲ್ಲಿ ಸಂಸಾರ ಮಾಡುತ್ತಿದ್ದದನ್ನು ಕಂಡು ನೋವುಂಡಿದ್ದೇನೆ.

ನಾವು ನಾಲ್ವರು ಗೆಳೆಯರ ಗುಂಪಿನಿಂದ ಆರಂಭಿಸಿದ ಪತ್ರಿಕೆಯ ಬಗ್ಗೆ ನಾವು ನಾಲ್ಕು ಮಾತು ಹೇಳಲೇ ಬೇಕು ಅದೊಂದು ವಿಫಲ ಪ್ರಯೋಗ "ಬೃಂದಾವನ" ವಾರಪತ್ರಿಕೆಯ ಪ್ರಕಟಣೆಯ ಸಾಹಸ. ಸಂಪೂರ್ಣ ಶುದ್ಧ ಅಭಿರುಚಿಯ ವಾರಪತ್ರಿಕೆ. ಸಂಪಾದಕರು ಮತ್ತು ಬಂಡವಾಳ ಹೂಡಿದವರು ಸ್ವಾಮಿ ವಿವೇಕಾನಂದ. ನಾವು ಒಬ್ಬಬ್ಬರೂ ಒಂದೊಂದು ವಿಭಾಗ ನೋಡಿಕೊಳ್ಳುತ್ತಿದ್ದೆವು. ದೊಡ್ಡರಂಗೇಗೌಡರು "ಕಾವ್ಯಲೋಕ" ಮತ್ತು "ಕಿನ್ನರ ಲೋಕ"ವನ್ನು ತುಂಬುತ್ತಿದ್ದರು. ಬಹುಶಃ ಇಲ್ಲಿಯೇ ದೊರಂಗೌ "ಮನುಜ"ನಾಗಿ ಮಿಂಚಿದ್ದು. ಪತ್ರಿಕೆಗೆ ಲೇಖನಗಳ ಕೊರತೆ ಇರುತ್ತಿತ್ತು. ದೊರಂಗೌ ಮೂರು ಬೇರೆ ಬೇರೆ ಹೆಸರುಗಳಲ್ಲಿ ಬೃಂದಾವನಕ್ಕೆ ಮೆರಗು ತಂದರು. ಅನೇಕ ಕಾರಣಗಳಿಂದ ಪತ್ರಿಕೆ ಮೂರು ನಾಲ್ಕು ತಿಂಗಳಲ್ಲಿ ನಿಂತು ಹೋಯಿತು. ನಮಗಾದ ದುಃಖಕ್ಕೆ ಎಣೆಯುಂಟೇ?

ಅಂತಿಮ ಪದವಿ ಮುಗಿದ ನಂತರ ನಾಲ್ಕು ಜನ ದಿಕ್ಕಾಪಾಲಾದೆವು. ಹೊಟ್ಟೆ ಪಾಡಿಗೆ ದೊರಂಗೌ. ಅಂಚೆ ಇಲಾಖೆ ಸೇರಿದರು. ಲೋಹಿತಾಶ್ವ ಸ್ನಾತಕೋತ್ತರ ಪದವಿಗೆಂದು ಮೈಸೂರಿಗೆ ಕಂಬಿ ಕಿತ್ತ. ನಾನು ಮದುವೆಯಾಗಿ ಬದುಕಲೆಂದು ಬೆಂಗಳೂರಿಗೆ ಬಂದು ತಾಯಿನಾಡು ಪತ್ರಿಕೆಯಲ್ಲಿ ಉಪಸಂಪಾದಕನಾದೆ. ನಾನು ಪುನಃ ದೊಡ್ಡರಂಗೇಗೌಡರನ್ನು ಕಂಡದ್ದು ೧೯೬೮ರಲ್ಲಿ ಬೆಂಗಳೂರಿನ "ತಾಯಿನಾಡು" ಸಂಪಾದಕೀಯ ವಿಭಾಗದಲ್ಲಿ ಆವೇಳೆಗೆ ಅವರ ಅನೇಕ ಪದ್ಯಗಳು "ಗೋಕುಲ"ದ ಕಾವ್ಯಧಾರೆಯಲ್ಲಿ ಅಚ್ಚುಕಂಡಿದ್ದವು. ಕೆಲವೊಮ್ಮೆ ನನ್ನ ಮತ್ತು ಅವರ ಕಥೆ ಮತ್ತು ಕವನಗಳು ಒಂದೇ ವಾರದಲ್ಲಿ ಪ್ರಕಟವಾಗುತ್ತಿದ್ದವು. ಒಂದುದಿನ ರಾತ್ರಿ ನಾನು "ತಾಯಿನಾಡು" ಪತ್ರಿಕೆಯಲ್ಲಿ ಕೆಲಸದ ಮೇಲಿದ್ದೆ ರಾತ್ರಿ ೧೦ ಗಂಟೆಯಾಗಿತ್ತು. 'ಹಲೋ ಕುಮಾರ ಸ್ವಾಮಿ ನೀವಿಲ್ಲಿ' ಎಂದು ಕೂಗಿದ ಧ್ವನಿಯ ಕಡೆ ನೋಡಿದೆ. ಅಲ್ಲಿ ದೊರಂಗೌ ಹಾಜರಿದ್ದರು. ಬಿ.ಎ. (ಆನರ್ಸ್) ಫಲಿತಾಂಶ ತಿಳಿಯಲು ಬಂದಿದ್ದರು. ಫಲಿತಾಂಶ ಪಟ್ಟಿ ಬಂದಿತ್ತು, ಅವರು ತೇರ್ಗಡೆಯಾಗಿದ್ದರು.

ಡಿಸೆಂಬರನಲ್ಲಿ ಪತ್ರಿಕಾಲಯ ಮುಚ್ಚಿತ್ತು, ನಾನು ಬೀದಿಗೆ ಬಿದ್ದೆ. ಆದರೆ ಅಧ್ಯಯನ ಮಾಡಬೇಕೆಂದು ಆಸೆಯಿಂದ ಮೂರುವರ್ಷ ಬಿ.ಎ.ಆನರ್ಸ್ ಸೇರಿದೆ. ನಾನು ವಾರನ್ನ ಮಾಡಿ ಬಂಡಿ ಶೇಷಮ್ಮ ಹಾಸ್ಟೆಲಿನಲ್ಲಿ ಓದಿತ್ತಿದ್ದೆ ದೊ.ರಂ.ಗೌ. ರಾತ್ರಿಯೆಲ್ಲಾ ನಿದ್ದೆಗೆಟ್ಟು ಅಂಚೆಇಲಾಖೆಯಲ್ಲಿ ಕೆಲಸಮಾಡಿ ಬೆಳಿಗ್ಗೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಎಂ.ಎ., ಮೊದಲ ವರ್ಷ ಓದುತ್ತಿದ್ದರು. ಬಹುಶಃ ಆಗಲೇ ಇರಬೇಕು "ಜಗಲಿ ಹತ್ತಿ ಇಳಿದು" "ಕಣ್ಣು - ನಾಲಿಗೆ ಕಡಲು" ಕವನ ಸಂಕಲನ ಹೊರಬಿದ್ದುದು. ಕನ್ನಡ ಅಧ್ಯಯನ ಕೇಂದ್ರದಲ್ಲಿ ಕೆಲವು ದಿನ ಆ ಕೃತಿ ಚರ್ಚೆಯ

ವಿಷಯವಾಗಿತ್ತು. 'ಸಂಕ್ರಮಣ'ವೆಂಬ ಸಾಹಿತ್ಯಾಸಕ್ತರ ಗಮನ ಸೆಳೆವ ತ್ರೈಮಾಸಿಕ ಹಾಗೂ ಅಡಿಗರ 'ಸಾಕ್ಷಿ'ಯ ವೈಚಾರಿಕ ಮತ್ತು ಮೌಲಿಕ ಲೇಖನಗಳ ಜೊತೆ ಜೊತೆಗೇನೇ ದೊ.ರಂ.ಗೌ. ಅವರ ಕವನಗಳು ಅಲ್ಲಿ ಅಚ್ಚಾದುದನ್ನು ಕಂಡೆ. ಕೆಲವೊಮ್ಮೆ ಕವಿಗೋಷ್ಠಿಯಲ್ಲಿ ಇಬ್ಬರೂ ಭಾಗವಹಿಸುತ್ತಿದ್ದವು. ಸಾಹಿತ್ಯ ಪ್ರಚಾರದ ಕಾಯಕದಲ್ಲಿ ಕರ್ನಾಟಕದ ಉದ್ದಗಲ ಸುತ್ತಿದಾಗ ದೊ.ರಂ.ಗೌ ದಂಪತಿಗಳು ನಾನು ಸಂಧಿಸಿದ್ದೇವೆ. ಕಾಕತಾಳೀಯವಾಗಿ ನನ್ನೊಡನೆ ವಾಸ್ತವ್ಯ ಹೂಡುತ್ತಿದ್ದದ್ದುಂಟು.

ನಾನು ದೊರಂಗೌ ಆರಾಧಕ; ನನ್ನ 'ಹೀರೋ' ದೊಡ್ಡರಂಗೇಗೌಡ. ಅವರನ್ನು ಬಿಟ್ಟರೆ ಯಾವ ಸಿನಿಮಾ ನಟನೂ ನನ್ನ ಬದುಕಿನ ಮೇಲೆ ಅಚ್ಚೊತ್ತಲು ಸಾಧ್ಯವಾಗಿಲ್ಲ. ಎಂತೆಂತಹ ಚಿಂತಕರೂ ಅವರಷ್ಟು ಪ್ರಭಾವ ಬೀರಿಲ್ಲ. ನಾನು ಸಾಹಿತಿಯಲ್ಲ, ಕಾದಂಬರಿಕಾರನಲ್ಲ, ಕವಿಯಲ್ಲ, ಲೇಖಕನಲ್ಲ, ಪತ್ರಕರ್ತನಲ್ಲ, ಶಿಲ್ಪಿಯಲ್ಲ ಎಂದು ಯಾರಾದರೂ ಕರೆಯಬಹುದು. ಆದರೆ ಅಂತಹ ಮಹನೀಯರನ್ನು ಹೊತ್ತ ಭುಜಗಳೆಂಬುದನ್ನು ಯಾರೂ ಅಲ್ಲಗಳೆಯಲಾರರು. ಗೌಡರದು ಶಿಸ್ತು ಮತ್ತು ಅಚ್ಚು ಕಟ್ಟಾದ ಬದುಕು. ಸರಳ ಜೀವನ ಬರವಣಿಗೆ ತುಂಬಾ ಸ್ಫುಟ. ಅಚ್ಚಾದ ಅಕ್ಷರಗಳಿಗಿಂತ ಮದ್ದು ಕೂದಲೆಳೆಯಷ್ಟು ವ್ಯತ್ಯಾಸ ಕಾಣದ ಕ್ರಮವಾದ ಸಾಲುಗಳು ತಾನೇ ಕೈಯಾರ ಕೆತ್ತಿದ ಒಪ್ಪ ಮಾಡಿದ ಶಿಲ್ಪದಂತೆ ನಯ-ನಾಜೂಕುಗಳಿಂದ ಕೂಡಿರುತ್ತದೆ. ನೋಡಲು ಸುಂದರ ಬದುಕೂ ಅಷ್ಟೆ. "ಶೂದ್ರ ಸಮುದಾಯದ ನಕ್ಷತ್ರ" ಆಕಾಶದಲ್ಲಿ ಸೂರ್ಯನಿದ್ದಾಗ ಕವನ ಕಾಯಗಳು ಸ್ಪಷ್ಟವಾಗಿ ಗೋಚರಿಸಲಾರವು. ಕೇಳುವ ಕಿವಿ, ನೋಡುವ ಕಣ್ಣು, ಅನುಭವಿಸುವ ಹೃದಯವಿದ್ದವರಿಗೆ ಗೌಡರು ಎಂದೂ ದೊಡ್ಡವರಾಗಿ ಗೋಚರಿಸಬಲ್ಲರು.

ಬರೆದಷ್ಟೂ ಗೌಡರು ಬಡವರಾದರು. ಸಾಲಕ್ಕೆ ಸಿಕ್ಕಿದರು. ಇಬ್ಬರ ದುಡಿಮೆಯೆಲ್ಲೂ ಜೋಳಿಗೆ ಖಾಲಿ. ಗೌಡರು ಬರೆದ ಸಾಹಿತ್ಯ ಬೆಟ್ಟದಷ್ಟಿದೆ.

ದೊಡ್ಡರಂಗೇಗೌಡರ ಕಾವ್ಯ ಮತ್ತು ಕಥಾ ವಸ್ತುಗಳಲ್ಲಿ ವೈವಿಧ್ಯ ಮತ್ತು ಸಂಪನ್ನ ಗುಣಗಳನ್ನು ಕಂಡಿದ್ದೇನೆ. ಅಶ್ಲೀಲವಲ್ಲದ ಕಾಮ, ಪ್ರೇಮ ಅಪ್ಪಟ ದೇಶಪ್ರೇಮ. ನವಿರಾದ ಪ್ರಕೃತಿ ವರ್ಣನೆ, ಪ್ರಾಸಬದ್ಧ ನವೋದಯ ಶೈಲಿಯ ಕಾವ್ಯ ನಿರ್ಮಾಣ ಕಾಲಕ್ಕೆ ತಕ್ಕಂತೆ ಸ್ಪಂದಿಸಿ ಸಾಂಗತ್ಯ ನಿರೂಪಣೆಯ 'ಮಣ್ಣಿನ ಮಗ'.

ಹೀಗೆ ಅವರು ಎಲ್ಲಾ ಪ್ರಕಾರಗಳಲ್ಲಿ ಕೈ ಆಡಿಸಿದ್ದಾರೆ 'ಮಣ್ಣಿನ ಮಾತುಗಳು' ಮಹತ್ತರ ಕೃತಿ. ಮನುಷ್ಯನೊಳಗಿನ ಗಾಢ ಸಂಬಂಧಗಳ ಹುಡುಕಾಟದಲ್ಲಿ ತೊಡಗಬಹುದಾದ ಬೃಹತ್ ಕೃತಿ ದೊರಂಗೌ ಅವರ ಮೂಲಕ ಇನ್ನೂ ಆಗಬೇಕಾಗಿದೆ . ಗ್ರಾಮ ಸುದ್ಧಿಯಿಂದ ಹಿಡಿದು ಯಾವುದೇ ಸಣ್ಣ ಪತ್ರಿಕೆಯಾಗಲಿ 'ವಿನೋದ' ಮಾಸಿಕ ಪತ್ರಿಕೆಯಾಗಲಿ ಯಾವುದೇ ಪುಟ್ಟ ಪತ್ರಿಕೆಯಾಗಲಿ ದೊ.ರಂಗೌ. ಅವರಿಗೆ ಎಲ್ಲ ಒಂದೆ. ದೊಡ್ಡ ಅಥವಾ ಚಿಕ್ಕ ಪತ್ರಿಕೆಯೆಂಬ ಭೇದ - ಭಾವ ಕಾಣದೆ ಪ್ರತಿಫಲಾಪೇಕ್ಷೆಯಿಲ್ಲದೆ ಲೇಖನ ಕಳುಹಿಸುತ್ತಾರೆ.

ದೊರಂಗೌ ಅವರ ೫೦ ನೇ ವರ್ಷಕ್ಕೆ ನಮ್ಮ ಗೆಳೆಯರು ಅವರಿಗೆ ಸನ್ಮಾನ ಮಾಡುತ್ತಿದ್ದಾರೆ. ಅದಕ್ಕಾಗಿ "ಅಭಿಮಾನಿ ಬಳಗ"ದವರನ್ನು ಅಭಿನಂದಿಸುತ್ತೇನೆ. ಆತ್ಮೀಯ ಗೆಳೆಯ ದೊಡ್ಡರಂಗೇಗೌಡ, ಸೋದರಿ ರಾಜೇಶ್ವರಿ ನೂರ್ಕಾಲ ಬಾಳಲೆಂದು ನಾಡು-ನುಡಿಯ ಕೀರ್ತಿ ಮೆರೆಯಲೆಂದು ಎದೆಯಾರ ಹಾರೈಸುತ್ತೇನೆ.

# ಕಲ್ಲು ಮುಳ್ಳು ಹಾದಿಯಲ್ಲಿ ದೊರಂಗೌ

✍ ತಾ. ಸಿ. ತಿಮ್ಮಯ್ಯ

೧೯೮೫ರಲ್ಲಿ ಶ್ರೀ ದೊಡ್ಡರಂಗೇಗೌಡರ ಮನೆಗೆ ಹತ್ತಾರು ಬಾರಿ ಭೇಟಿ ನೀಡಿದ ನಾನು ಅಪರೂಪಕ್ಕೊಂದು ಕವನ ಸಂಕಲನ ಪ್ರಕಟಿಸಲು ಮೊಂಡು ಧೈರ್ಯಮಾಡಿ ಹಸ್ತಪ್ರತಿಗಳನ್ನು ಶ್ರೀ ಗೌಡರ ಕೈಗೆ ಇಟ್ಟು ಮುನ್ನುಡಿ ಬರೆಯುವಂತೆ ತಿಳಿಸಿದೆ. ಅವರು ನೂರೆಂಟು ಸಾಹಿತ್ಯ ಕಾರ್ಯಕ್ರಮಗಳ ಒತ್ತಡದ ನಡುವೆಯೂ ಆಗಾಗ ಅವರ ಮನೆಯಲ್ಲಿ ಪ್ರತ್ಯಕ್ಷನಾಗಿ ಕೊನೆಗೂ ಬಿಡದೆ ಮುನ್ನುಡಿ ಬರೆಸಿಕೊಂಡೆ. ಸಾಹಿತ್ಯ ಸಮಾರಂಭಗಳಲ್ಲಿ ಸಿಕ್ಕಾಗ ಮಾತಾಡುತ್ತಿದ್ದರು. ಆಗೆಲ್ಲ ಅವರ ಹಿರಿತನದ ಮಾತುಗಳು ನನ್ನನ್ನು ಮೋಡಿ ಮಾಡಿವೆ. ಎಷ್ಟೋ ಸಾರಿ ನನ್ನಲ್ಲಿ ನಾನೇ ಅಂದುಕೊಂಡಿದ್ದೇನೆ "ದೊಡ್ಡವರು ಯಾವಾಗಲೂ ದೊಡ್ಡವರೇ" ಎಂದು.

ಉದ್ಯೋಗ ನಿಮಿತ್ತ ನಾನು ಆನೆಕಲ್ಲು ಬಿಟ್ಟು ಹೊಸಕೋಟೆಗೆ ಬಂದಾಗ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಯ್ತು. ಬಿಡುವು ಸಿಕ್ಕಾಗಲೆಲ್ಲಾ ಅವರೊಡನೆ ಕೂಡಿ ಮಾತಾಡುವ ಅವಕಾಶ ಸಿಕ್ಕಿತು.

ಶ್ರೀ ದೊಡ್ಡರಂಗೇಗೌಡರು ಕನ್ನಡ ನಾಡಿನ ಸಂಪತ್ತು. ಅವರ ನಾಡು ನುಡಿಯ ಸೇವೆ ಅಪಾರವಾದದ್ದು. ಗೌಡರ ಕಾವ್ಯ ಕೃತಿ ನಾಡಿನ ಎಲ್ಲ ವಿಮರ್ಶಕರಿಗೂ ತೆರೆದ ಬಾಗಿಲು. ದೊಡ್ಡರಂಗೇಗೌಡರು ಚಿತ್ರಗೀತೆಗಳನ್ನು ಬರೆದು ಸಂಪಾದಿಸಿದ್ದಾರೆ. ಇಬ್ಬರ ಸಂಬಳ ಸಾಕಷ್ಟು ಕೂಡಿರಬೇಕು. ಕಾರು ಬಂಗಲೆ ಹಣ ಮಾಡಿರಬೇಕೆಂದು ನಾಡಿನ ಯಾರಾದರೂ ಅವರ ಅಭಿಮಾನಿಗಳು ತಿಳಿದಿದ್ದರೆ, ಅವರ ನಿಜ ಸ್ಥಿತಿಯೇ ಬೇರೆ. ಸದಾ ಹಸನ್ಮುಖಿ, ಸಾಧಾರಣ ಎತ್ತರ ಕನ್ನಡಕ ತೊಟ್ಟು ತೂಗು ಚೀಲ ಹೆಗಲಿಗೇರಿಸಿ ಜನ ಜಂಗುಳಿ ನಡುವೆ ತೂರಿ ಬಸ್ಸು ಹತ್ತಿ ಬಾಗಿಲಲ್ಲಿ ಬಸ್ಸಿನ ಒಳಗಡೆ ತಳ್ಳಾಡಿಸಿ ಕೊಂಡು, ಎಟುಕಲಾರದ ಕಂಬಿ ಎಟಕಿಸಿ ಕೊಂಡು ದಿನ ನಿತ್ಯ ಪ್ರಯಾಣ ಮಾಡುತ್ತಾರೆಂದರೆ ಯಾರಿಗಾದರೂ ಆಶ್ಚರ್ಯ ಆದೀತು.

೧೯೯೨ರಲ್ಲಿ ದೊಡ್ಡರಂಗೇಗೌಡರ "ಮಣ್ಣಿನ ಮಾತುಗಳು" ಪ್ರಕಟವಾದಾಗ ಬಿಡುಗಡೆಯ ಸಣ್ಣ ಸಮಾರಂಭದಲ್ಲಿ ನಾನು ಇದ್ದೆ. ಮಣ್ಣಿನ ಮಾತುಗಳು ಅಪರೂಪದ ಮುಕ್ತಕಗಳ ಸಂಗ್ರಹ ಮಣ್ಣಿನ ಮಗನಾಗಿ ಗ್ರಾಮೀಣ ಜನ ಜೀವನದ ಎಲ್ಲಾ ಮಗ್ಗುಲನ್ನೂ ಅನುಭವಿಸಿ ಜನ್ಮ ತಾಳಿದ ಮುಕ್ತಕ.

ಈ ಸಮಾಜದ ಜಡತೆಯನ್ನು ತುಳಿದು ದಾರಿದ್ರ್ಯದ ಬೀಡಿನಿಂದ, ಅಜ್ಞಾನದ ಜಾಡಿನಿಂದ ವಿಕ್ಷಿಪ್ತತೆ ಮೂಡಿನಿಂದ, ಅತೃಪ್ತಿಯ ಅಳಲಿನಿಂದ, ತಳಮಳದ ಭುಗಿಲಿನಿಂದ ಮೇಲೆಳಲು ಭಾರತೀಯ ತರುಣರಿಗೆ ಕರೆ ಕೊಟ್ಟ ಮೌನಸ್ಪಂದನ ವರ್ತಮಾನವಾಗಿಯೇ ಉಳಿಯಿತು.

ದಾರಿದ್ರ್ಯ ಅನಾರೋಗ್ಯಗಳಲ್ಲಿ ಬಳಲಿ ಮೂಳೆ ಬಿಟ್ಟುಕೊಂಡ ದೇಹಗಳನ್ನು ಕವಿ ಹೃದಯ ಕಂಡಿದೆ. ಯಾವುದೇ ರಾಗ-ದ್ವೇಷ, ಸುಳಿವಿಲ್ಲದೆ ಲಾಭನಷ್ಟದ ಅರಿವಿಲ್ಲದೆ, ಈವರೆವಿಗೆ ತನ್ನೆಲ್ಲಾ ಕಾಲವನ್ನು ಪಾಠಹೇಳುವುದರಲ್ಲಿ ಕಾವ್ಯ ಬರೆಯುವುದರಲ್ಲಿ ಅಧ್ಯಯನ ನಡೆಸುವುದರಲ್ಲಿ ಸಂತಸ ಕಂಡಿದ್ದಾರೆ.

ನಾಲ್ಕು ಸದಸ್ಯರ ಅವರ ಕುಟುಂಬ ಕೇವಲ ಕುಟುಂಬವಲ್ಲ, ಅದೊಂದು ಪುಟ್ಟ ವಿಶ್ವ. ಹೆಸರಾಂತ ಮಹಿಳಾ ಲೇಖಕಿ ಶ್ರೀಮತಿ ಕೆ. ರಾಜೇಶ್ವರಿ ಅವರ ಧರ್ಮ ಪತ್ನಿ, ಮಗ ಶ್ರೀ ಭರತ್ ಎಂ.ಎ ಸಾಹಿತ್ಯ ವಿದ್ಯಾರ್ಥಿ, ಮಗಳು ಸ್ಮಿತಾ ಮುಂದಿನ ವರ್ಷ ಪಿ.ಯು.ಸಿ. ವಿದ್ಯಾರ್ಥಿನಿ. ಪ್ರೀತಿ ವಿಶ್ವಾಸಗಳಿಂದ ಕೂಡಿದ ಸಜ್ಜನರ ಮನೆಯಲ್ಲಿ ಚರ್ಚೆಯಾಗದ ಸಾಹಿತ್ಯ ಯಾವುದು? ಮಾತಿಗೆ ಸಿಕ್ಕದ ವಿಚಾರ ಯಾವುದು ಆದ್ದರಿಂದಲೇ ಇದೊಂದು ಕೇವಲ ಮನೆಯಲ್ಲ ಪುಟ್ಟ ವಿಶ್ವ. ಅದರಲ್ಲಿ ಗೌಡರ ಬದುಕು ಸದಾಕಾಲ ಆದರ್ಶವಾದದ್ದು. ಹೊರಗೆ ಸಿಗದ ತೃಪ್ತಿಯನ್ನು ಒಳಗೆ ಕಂಡುಂಡ ಜೀವನ ತಪಸ್ವಿ ಶ್ರೀ ದೊಡ್ಡರಂಗೇಗೌಡರು.

## ಗೌಡರ ಕಾವ್ಯ "ಶ್ರೀ ಸಾಮಾನ್ಯನ ಚರಿತ್ರೆ"

✍ ಡಾ|| ನರಹಳ್ಳಿ ಬಾಲಸುಬ್ರಮಣ್ಯ

ಕಾಲುಶತಮಾನದಿಂದ ಕಾವ್ಯ ಕಸುಬಿನಲ್ಲಿ ತೊಡಗಿರುವ ದೊಡ್ಡರಂಗೇಗೌಡರದು ಮೂಲತಃ ಇತ್ಯಾತ್ಮಕವಾದ ಮನೋಭಾವ. ವಾಸ್ತವದ ಕಠೋರ ಸತ್ಯಗಳನ್ನು ಗ್ರಹಿಸುತ್ತಲೇ, ವಿನಾಶಕಾರಕ ಪ್ರವೃತ್ತಿಗಳನ್ನು ವಿರೋಧಿಸುತ್ತಲೇ ಬದುಕಿನ ಅಚ್ಚುಕಟ್ಟನ್ನು ಕಲ್ಯಾಣಕಾರಕ ಗುಣಗಳನ್ನು ನಿರ್ಭಿಢೆಯಿಂದ ಹಾಡಬಲ್ಲಂಥವರು ಆಧುನಿಕ ಸಂದರ್ಭದಲ್ಲಿ ಇದು ಅಪರೂಪವಾದ ವಿಶಿಷ್ಟಗುಣವೆಂದೇ ಹೇಳಬೇಕು. ರೋಷ, ಪ್ರತಿಭಟನೆ ನಮಗೆ ಸಹಜವೆನಿಸುವಷ್ಟು ಸಂತೋಷಪಡುವ ಗುಣ ಇಂದು ನಿಜವಾಗುವುದಿಲ್ಲ ಗೌಡರ ಕಾವ್ಯ ಯಾವುದಕ್ಕೂ ಸುಲಭವಾಗಿ ಭಾಗದ ಸ್ವಾಭಿಮಾನಿ ದನಿಯನ್ನು ಪ್ರಕಟಿಸುತ್ತಲೇ ಅಂತರಂಗದ ಜೀವ ಸೆಲೆ ಬತ್ತದಂತೆ ಕಾಪಾಡುವ ಶಕ್ತಿಗಳನ್ನು ಗೌರವದಿಂದ ಕಾಣುತ್ತವೆ.

ದೊರಂಗೌ ಅವರು ಕನ್ನಡದ 'ಮಾರ್ಗ' ಪರಂಪರೆಯಿಂದ ಪುಷ್ಟಿ ಪಡೆದಿದ್ದರೂ ಅವರ ಒಡನಾಟಮಾತ್ರ ಸಂಪೂರ್ಣ ಗ್ರಾಮೀಣ ಜನಪದದೊಡನೆ ಬೆವರ ಬಸಿದು, ಹಿಟ್ಟಿಗಾಗಿ, ಬಟ್ಟೆಗಾಗಿ, ತಲೆಯ ಮೇಲೊಂದು ಚಾವಣಿಗಾಗಿ, ಹೋರಾಡುವ ಈ ನೆಲದ ಶ್ರಮಿಕ ಜೀವಿಯ ಬದುಕೇ ಅವರ ಕಾವ್ಯ ಪ್ರಪಂಚ. ಹೀಗಾಗಿ ಗೌಡರ ಕಾವ್ಯವನ್ನು 'ಸಾಮಾನ್ಯನ ಚರಿತ್ರೆ' ಎನ್ನಬಹುದಾಗಿದೆ.

# ಮಾತು ಮತ್ತು ಕೃತಿಯ ಸಾಂಗತ್ಯ : ದೊ.ರಂ.ಗೌಡ

✍ ಡಾ|| ಆರ್. ಶೇಷಶಾಸ್ತ್ರಿ

ಶ್ರೀ ದೊಡ್ಡರಂಗೇಗೌಡರು ಮತ್ತು ನನ್ನ ಗೆಳೆತನ ಸುಮಾರು ಇಪ್ಪತ್ತೈದು ವರ್ಷಗಳಿಂದಲೂ, ಸಂಜೆಯ ನೆರಳಿನಂತೆ ಬೆಳೆಯುತ್ತಲೇ ಇದೆ. ಶ್ರೀ ದೊಡ್ಡರಂಗೇ ಗೌಡರಿಂದ ಉಪಕೃತನಾದ ನಾನು ನನ್ನ ಮನದಾಳದಲ್ಲಿ ಅವರ ಬಗ್ಗೆ ಗೂಡು ಕಟ್ಟಿಕೊಂಡಿರುವ ಕೃತಜ್ಞತಾ ಭಾವವನ್ನು ಉನ್ಮೀಲನಗೊಳಿಸುವುದಷ್ಟೆ. ಶ್ರೀಗೌಡರು ಎಂದೂ ನನ್ನಿಂದ ಕೃತಜ್ಞತೆಯನ್ನಾಗಲೀ, ಹೊಗಳಿಕೆಯನ್ನಾಗಲೀ ನಿರೀಕ್ಷಿಸಿದವರಲ್ಲ. ನನ್ನಂತಹ ಕೆಲವರನ್ನು ಅವರು ರೂಪಿಸಿದ್ದರೂ ಅವರು ಎಂದೂ ಗುಂಪು ಕಟ್ಟಿದವರಲ್ಲ; ಹಿಂಬಾಲಕರನ್ನು ಬಾಲಬಡುಕರನ್ನು ಪ್ರೋತ್ಸಾಹಿಸಿದವರೂ ಅಲ್ಲ.

ಶ್ರೀ ದೊಡ್ಡರಂಗೇಗೌಡರು ಐದು ವರ್ಷಗಳ ಕಾಲ ನನ್ನ ಸಹಪಾಠಿ. ಅವರು ಬಿ.ಎ. ಆನರ್ಸ ಸೇರಿರುವ ವೇಳೆಗಾಗಲೇ ಬಿ.ಎಸ್.ಸಿ.ಗೆ ಮಣ್ಣು ಹೊತ್ತು ಆರ್.ಎಂ.ಎಸ್.ನಲ್ಲಿ ಉದ್ಯೋಗದಲ್ಲಿದ್ದರು. ಗೋಕುಲ ಮುಂತಾದ ಪತ್ರಿಕೆಗಳಲ್ಲಿ ಕವಿತೆಗಳನ್ನು ಬರೆದು 'ಕವಿ' ಎಂಬ ಪ್ರತಿಷ್ಠೆಯನ್ನು ಹೊಂದಿದ್ದರು ಆಧುನಿಕ ಕನ್ನಡ ಮತ್ತು ಇಂಗ್ಲೀಷ್ ಸಾಹಿತ್ಯಗಳಲ್ಲಿ ಅಭಿನಿವೇಶನ ಹೊಂದಿದ್ದರು. ಮೇಲಾಗಿ ಅವರು ಸಂಪಾದಿಸುತ್ತಿದ್ದರು. ಈ ಕಾರಣಗಳಿಂದ ಅವರು ನಮಗಿಂತಲೂ ಹಿರಿಯರು ಎಂಬ ಭಾವನೆ ಆಗ ನೆಲೆಯೂರಿತ್ತು. ಹೀಗಾಗಿ ಅವರನ್ನು ನಾವು ದೂರ ಇಟ್ಟಿದ್ದೆವು. ಆದರೆ ಕೆಲವೇ ದಿನಗಳಲ್ಲಿ ನಮ್ಮೆಲ್ಲರ ಭ್ರಮೆಗಳನ್ನು ಸರಿಸಿ ಆತ್ಮೀಯತೆಯಿಂದ ನಮ್ಮೊಡನೆ ಬೆರೆತು ಹೋದರು. ಅವರು ತಮ್ಮ ಸಹಪಾಠಿಗಳನ್ನೆಲ್ಲಾ ಇಂದಿಗೂ ಬಹುವಚನದಲ್ಲಿಯೇ ಮಾತಾನಾಡಿಸುವುದು. ಏಕವಚನದ ಪ್ರಯೋಗ ನನ್ನೊಬ್ಬನಿಗೆ ಮಾತ್ರ ಸೀಮಿತ.

ಬಿ. ಎ. ಆನರ್ಸ್‌ಗೆ ಸೇರಿದ ಹೊಸದರಲ್ಲಿ ನಮ್ಮ ಗುರುಗಳಿಗಿಂತಲೂ ನನ್ನ ಮೇಲೆ ಪ್ರಭಾವವನ್ನು ಬೀರಿದವರು ಶ್ರೀ ಗೌಡರು. ಓದುವ ಗೀತೆಗಳನ್ನು ನನಗೆ ಹಚ್ಚಿದವರು ಅವರೇ. ಪ್ರಕಾಶ ನಗರದಲ್ಲಿದ್ದ ತಮ್ಮ ಮನೆಗೆ ಒಮ್ಮೆ ಕರೆದೊಯ್ದರು. ಮಹಡಿಯ ಮೇಲೆ ಮನೆ, ತುಂಬಾ ಚಿಕ್ಕದು ಅದರಲ್ಲಿರುವ ಎರಡು ಬುಕ್ ಶೆಲ್ಫುಗಳು. ಅದರ ತುಂಬಾ ಪುಸ್ತಕಗಳು. ಪುಸ್ತಕಗಳನ್ನು ನೋಡುವಂತೆ ನನಗೆ ಹೇಳಿ ತಾವು ಮುಖ ತೊಳೆಯಲು ಹೋದರು. ನಾನು ಪುಸ್ತಕಗಳನ್ನು ನೋಡತೊಡಗಿದೆ. ಸ್ವಲ್ಪ ಹೊತ್ತಿನ ಮೇಲೆ "ಕೈಕಾಲು ತೊಳೆದುಕೋ ಊಟಮಾಡೋಣ" ಎಂದರು. ನಾನು "ಅಗತ್ಯವಿಲ್ಲ" ಎಂದೆ "ಏಕೆ ನೀನು ಊಟ ಮಾಡುದಿಲ್ಲವೆ?" ಪ್ರಶ್ನಿಸಿದರು. "ಅಲ್ಲ; ಕೈತೊಳೆಯುವ ಅಗತ್ಯವಿಲ್ಲ ಎಂದು ನಾನು ಹೇಳಿದ್ದು" ಎಂದು ನಾನು ಹೇಳಿದಾಗ ಮನಸಾರೆ ನಕ್ಕರು, ಊಟ ಮಾಡಿದಮೇಲೆ "ನಿನಗೆ ಯಾವ ಪುಸ್ತಕ

ಬೇಕು ತೆಗೆದುಕೊಂಡು ಹೋಗಿ ಓದು" ಎಂದರು. ಐದಾರು ಪುಸ್ತಕಗಳನ್ನು ಜಾಸ್ತಿ ಮಾಡಿಕೊಂಡು ಮನೆಗೆ ಬಂದೆ. ಮಾರನೆಯ ದಿನದಿಂದಲೇ ಆ ಪುಸ್ತಕಗಳ ಓದಿನ ಬಗ್ಗೆ ಆತ್ಮೀಯ ತನಿಖೆ ಆರಂಭವಾಯಿತು. ಅವರ ಕಾಟವನ್ನು ತಪ್ಪಿಸಿಕೊಳ್ಳಲು ಓದು ಆರಂಭಿಸಿದ ನಾನು ಕೈಗೆಸಿಕ್ಕಿದ್ದನ್ನೆಲ್ಲಾ ಓದುವ ಗೀಳು ಬೆಳೆಯಿಸಿಕೊಂಡೆ.

ಆ ಕಾಲದಲ್ಲಿ ಕಾಲೇಜುಗಳಲ್ಲಿ ಚರ್ಚಾಸ್ಪರ್ಧೆಗಳು ನಡೆಯುತ್ತಿದ್ದುವು. ಎರಡು ಮೂರು ಬಾರಿ ಚರ್ಚಾಸ್ಪರ್ಧೆಗೆ ನನ್ನನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋದರು. ಒಂದು ಸಲ ನನ್ನನ್ನು ಮುಂದೆ ತಳ್ಳಿ ತಾವು ಹಿಂದೆ ಸರಿದರು. ಅಷ್ಟೇ ಅಲ್ಲ, ನಾನೇನು ಮಾತಾಡಬೇಕು ಎಂಬುದನ್ನು ಬರೆದುಕೊಟ್ಟು ನನ್ನಿಂದ ಅಭ್ಯಾಸ ಕೂಡ ಮಾಡಿಸಿದರು. ಮೊದಲ ಬಾರಿ ವೇದಿಕೆ ಏರಿದ್ದು ಕಂಠಸ್ಥಮಾಡಿದ್ದನ್ನು ನೆನಪಿದ್ದಷ್ಟು ಒದರಿ ಬೆವರುಸುರಿಸಿಕೊಂಡು ವೇದಿಕೆಯಿಂದ ಇಳಿದೆ. ನನಗೆ ಬಹುಮಾನ ಬರಲಿಲ್ಲ, ಇರಲಿ ಬಿಡೋ ಎಂದು ಕಾಫಿ ಕೊಡಿಸಿ ತಾವು ಆಫೀಸಿಗೆ ಹೊರಟರು. ಇದೇ ರೀತಿ ಒಮ್ಮೆ ಸಾಹಿತ್ಯೋಪನ್ಯಾಸ ಸ್ಪರ್ಧೆಗೆ ಅಚಾರ್ಯ ಪಾಠಶಾಲಾ ಕಾಲೇಜಿಗೆ ಎಳೆದೊಯ್ದರು. ಬಹುಮಾನ ಬಾರದೆ ಹೋದರೂ ಕಾಫಿ ಗೆಲುಕ್ಕಾನುಇಲ್ಲ ಎಂಬ ಧೈರ್ಯದಿಂದ ಹೊರಟೆ. ಅಲ್ಲಿಗೆ ಬಂದವರೆ ಕೆಲವು ಮಂದಿ. ಅಂದು ಚೆನ್ನಾಗಿ ಮಾತಾಡಿದೆ ಎಂಬುದಕ್ಕಿಂತಲೂ ನನಗಿಂತಲೂ ಕೆಟ್ಟದಾಗಿಯೇ ಇತರರು ಮಾತಾಡಿದರು ಎಂಬ ಕಾರಣದಿಂದಾಗಿ ನನಗೆ ಬಹುಮಾನ ಬಂತು. ಆ ಸ್ಪರ್ಧೆಯಲ್ಲಿ ಮಾತಾಡುವುದೇ ಅಲ್ಲದೇ ಮಾತಾಡಿದ ವಿಷಯದ ಬಗ್ಗೆ ಬೇರೆಯ ಸ್ಪರ್ಧಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಡಬೇಕಾಗಿತ್ತು. ಕೆಲವು ಹುಡುಗಿಯರಿಗೆ ನನ್ನ ಮೇಲೆ ಏನು ಸಿಟ್ಟು ಇತ್ತು ಹತ್ತು ಹಲವಾರು ಪ್ರಶ್ನೆಗಳನ್ನು ಕೇಳಿದರು. ಹುರುಪಿನಿಂದ ಉತ್ತರಿಸಿದೆ. ಈ ಪ್ರಶ್ನೋತ್ತರ ಕಾರ್ಯಕ್ರಮ ಧಾರವಾಹಿಯಾಗಿ ಬಹುಮಾನ ಪ್ರಕಟಿಸಿದಮೇಲೂ ಮುಂದುವರಿಯಿತು. ನಮ್ಮೆಲ್ಲರನ್ನೂ ಶ್ರೀ ಗೌಡರು ಕರೆದು ಕೊಂಡು ಹೋಗಿ ಕಾಫಿ ಕುಡಿಸಿದರು. ಈ ಸಂದರ್ಭದಲ್ಲಿಯೇ ಶ್ರೀಮತಿ ರಾಜೇಶ್ವರಿ ಮತ್ತು ಗೌಡರ ಪ್ರೇಮಾಂಕುರವಾದದ್ದು ಎಂಬ ಗುಮಾನಿ ಇದೆ.

ಹುಟ್ಟು ತರಲೆಯಾದ ನನ್ನಂತಹವನನ್ನು ಜೀವನದ ಬಗ್ಗೆ ಮೊದಲಿಗೆ ಗಂಭೀರವಾಗಿ ಆಲೋಚಿಸುವಂತೆ ಮಾಡಿದ್ದು ಶ್ರೀ ದೊಡ್ಡರಂಗೇಗೌಡರು ನನಗೆ ಬರೆದ ಪತ್ರ. ಮೊದಲ ಬಿ.ಎ.ಆನರ್ಸ ಒದುತ್ತಿದ್ದಾಗ ಅವರಿಗೆ ಬೆಂಗಳೂರಿನಿಂದ ಬೀರೂರಿಗೆ ವರ್ಗವಾಯಿತು. ಅನಿವಾರ್ಯವಾಗಿ ಓದನ್ನು ಮುಂದುವರಿಸಲಾರದೇ ಹೋದರು ನೋವಿನಿಂದ ಅವರನ್ನು ಬೀಳ್ಕೊಟ್ಟೆ. ಬೀರೂರಿಗೆ ಹೋದನಂತರವೇ "ನಿನ್ನಂತಹವರೇ ತುಂಬಾ ಅದೃಷ್ಟ ಶಾಲಿಗಳು ದೊರೆತ ಅವಕಾಶವನ್ನೇ ಸದುಪಯೋಗ ಮಾಡಿಕೊಂಡು, ಗುರುಗಳ ಪಾಠಗಳನ್ನು ಶ್ರದ್ಧೆಯಿಂದ ಕೇಳಿ ಮುಂದೆ ಬಾ. ಓದುವ ಹವ್ಯಾಸವನ್ನು ಬೆಳೆಸಿಕೋ ನನ್ನ ಪರಿಸ್ಥಿತಿ ಹೀಗಾಯಿತು ನೀನಾದರೂ ಮೇಲೆ ಬಾ" ಎಂಬ ಭಾವವಿರುವ ಪತ್ರವನ್ನೇ ಬರೆದರು. ಆ ಪತ್ರವನ್ನು ಬಹಳ ದಿನಗಳ ಕಾಲ ಜೋಪಾನಮಾಡಿ ಕೊಂಡಿದ್ದೆ. ಅವರು ನನ್ನ ಅದೃಷ್ಟವನ್ನು ಕುರಿತು ಯೋಚಿಸಿದಂತೆ, ನಾನು ಅವರ ದುರದೃಷ್ಟವನ್ನು ಕುರಿತು ಚಿಂತಿಸಿದೆ ಅದೇನು ದೈವಲೀಲೆಯೋ ಒಂದೇ ತಿಂಗಳಿನಲ್ಲಿ ಶ್ರೀ ಗೌಡರಿಗೆ ಮತ್ತೆ ಬೆಂಗಳೂರಿಗೆ ವರ್ಗವಾಯಿತು. ಮತ್ತೆ ಅವರು ನಮ್ಮೊಡನೆ ಸೇರಿಕೊಂಡು ಎಲ್ಲರೂ ಅದೃಷ್ಟವಂತರೇ ಆದೆವು.

ಶ್ರೀ ಗೌಡರು ಒಮ್ಮೆ ನಮ್ಮ ಮನೆಗೆ ಬಂದರು ನಾನು ಬರೆದ ತಮಾಷೆಯಾಗಿ ಬರೆದ ಕವನಗಳ ಕಂತೆಯೊಂದನ್ನು ಅವರ ಮುಂದಿಟ್ಟೆ ಶ್ರದ್ಧೆಯಿಂದ ಓದಿದರು ಮೆಚ್ಚಿಕೊಂಡರು. ಅವು ಚೆನ್ನಾಗಿದ್ದವು ಎಂದಲ್ಲ; ಅವುಗಳನ್ನು ಬರೆದವನು ನಾನು ಎಂದು. ಅಣಕವಾಡಗಳನ್ನು ಬರೆಯುವುದಕ್ಕೆ ನನಗೆ ಸಾಮರ್ಥ್ಯವಿದೆ ಎಂದು ಹೇಳಿದರು. ಮಾರನೆಯ ದಿನ ರಾಶಿಯವರ 'ಕೆಣಕೋಣ ಬಾರ' ಎಂಬ ಅಣಕವಾಡಗಳ ಸಂಗ್ರಹವನ್ನು ತಂದು ಸೆಂಟ್ರಲ್ ಕಾಲೇಜ್ ಪಾರ್ಕಿನಲ್ಲಿ ಓದಿ ತೋರಿಸಿದರು.

ಶ್ರೀ ದೊಡ್ಡರಂಗೇಗೌಡರಿಗೆ ಲೌಕಿಕ ಜ್ಞಾನ ಕಡಿಮೆ ಮೇಲಾಗಿ ಅವರು ನನ್ನಂತೆ ಕಿಲಾಡಿಯೂ ಅಲ್ಲ- ಎಂದು ನನಗೆ ಕಚಿತವಾಗಿ ತಿಳಿದಿರುವುದರಿಂದ ಅವರ ಮಾತು ಎಂದರೆ ನನಗೆ ಇಂದಿಗೂ ಶಿರೋಧಾರ್ಯ. ಇನ್ನು ಆಗ ಕೇಳಬೇಕೆ ಅಣಕುವಾಡಗಳನ್ನು ಬರೆಯಲೆಂದು ಕವನ ಸಂಕಲನಗಳನ್ನು ಒದಿದ್ದೇನು? ಬರೆದಿದ್ದೇನು. ಇವು ಸಾಲದೆಂಬಂತೆ ಕೆಲವು ಆಸೆಗಳಿಗೂ ಅಣಕುವಾಡಗಳನ್ನು ಹೊಸೆದೆ. ಬರೆಯುವುದು ಎಂದರೆ ನೆನಪಿಗೆ ಬರುತ್ತದೆ. ನಮ್ಮ ತರಗತಿಯಲ್ಲಿ ಹೆಚ್ಚಿಗೆ ಬರೆಯುತ್ತಿದ್ದವರೆಂದರೆ ಶ್ರೀ ಗೌಡರು ಸ್ವಲ್ಪದೀರ್ಘವಾಗಿ ಹೆಚ್ಚಿಗೆ ಬರೆಯುತ್ತಿದ್ದರೆಂದರೆ ಶ್ರೀ ಸೂ. ರುದ್ರಮೂರ್ತಿಶಾಸ್ತ್ರಿ. ಸುದೀರ್ಘತೆ ಎಂದರೆ ಅದಕಿಲ್ಲ ನಿಜವಾದ ಅರ್ಥದಲ್ಲಿ ಬರೆಯುತ್ತಿದ್ದ ಗಂಡುಗಲಿ ಎಂದರೆ ನಮ್ಮ ಸಿಂಗೂಸಿ ಸಿದ್ದರಾಮಯ್ಯ; ಸಿಂಗೂಸಿ ಅಂದು ಬೆರೆದಿದ್ದ ಮಹಾ ಕಾವ್ಯ ಪರಮಾದ್ಭುತಲಾರ ಕಾವ್ಯ. ಅದರಲ್ಲಿನ ಕಲ್ಪನೆ, ಕಾವ್ಯದಲಯತ್ಮಕವಾದ ನಡಿಗೆ, ಕಿವಿಗಿಂಪಾದ ಪ್ರಸನ್ನಗುಣ. ಒಂದೇ ಎರಡೇ ಅದರಲ್ಲಿನ ಉತ್ತಮ ಕಾವ್ಯ ಗುಣಗಳು. ಈ ಹಾಳು ನವ್ಯ ಕವಿತೆಯ ದಬ್ಬಾಳಿಕೆ ಆ ಜಾನಪದ ಕವಿಯನ್ನು ತುಳಿದುಬಿಟ್ಟಿತು ವಿಷಯಾಂತರವಾಯಿತು ಕ್ಷಮಿಸಿ.

ಸೆಂಟ್ರಲ್ ಕಾಲೇಜು ಕನ್ನಡ ಸಂಘದ ವತಿಯಿಂದ ವಿದ್ಯಾರ್ಥಿಗಳ ಕವನ ಸಂಕಲನವನ್ನು ಪ್ರಕಟಿಸುವ ಏರ್ಪಾಟಾಗಿತ್ತು. ನನ್ನ ಅಣಕುವಾಡೊಂದನ್ನು ಕೊಡಲು ಗೌಡರು ಹುರಿದುಂಬಿಸಿದರು. ಕೆಲವು ಅಣುಕುವಾಡಗಳಲ್ಲಿ ಒಂದನ್ನು ಗೌಡರೇ ಆಯ್ಕೆ ಮಾಡಿ ಇದನ್ನು ಕೊಡು ಎಂದರು. ಕೊಟ್ಟೆ. ಆ ಅಣಕವಾಡವನ್ನು ತಿದ್ದಿ ನನ್ನ ಗುರುಗಳಾದ ಡಾ||ಜಿ.ಎಸ್. ಶಿವರುದ್ರಪ್ಪನವರು ಮತ್ತು ಡಾ|| ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರು ಚಿನ್ನದ ಗರಿಯಲ್ಲಿ ಪ್ರಕಟಿಸಿದರು. ಚಿನ್ನದಗರಿಯ ವಿಮರ್ಶೆ ಪ್ರಜಾವಾಣಿಯಲ್ಲಿ ಶ್ರೀ ಪಿ. ಲಂಕೇಶರು ಬರೆದರು. ವಿಮರ್ಶೆಯಲ್ಲಿ ನನ್ನ ಅಣಕವಾಡು ಪ್ರಸ್ತಾಪವಿತ್ತು. ಅದನ್ನು ನನಗೆ ತೋರಿಸುತ್ತಾ ಗೌಡರು ನೋಡಿದೆಯೇನೋ ಲೇ ಎಂದಾಗ ಸ್ವರ್ಗ ಕೇವಲ ಗೇಣಿನಷ್ಟೇ ಇತ್ತು ನನಗಲ್ಲ; ಅವರಿಗೆ.

ಶ್ರೀ ಗೌಡರ ಮೊದಲ ಸಂಕಲನ "ಜಗಲಿ ಹತ್ತಿ ಇಳಿದು" ಪ್ರಕಟವಾದಾಗ ಗೆಳೆಯರಲ್ಲಿ ಎಲ್ಲಿಲ್ಲದ ಸಂಭ್ರಮ. ನವ್ಯತೆಯ ಮೇಲುಗೈ ಕಾಲದಲ್ಲಿ ಬಂದ ಕೃತಿ ಇದು. ಶ್ರೀ ಗೌಡರು ಬರೆದಿರುವ ನವ್ಯಶೈಲಿಯ ಕವನಗಳಾವುವೂ ನನಗೆ ಅರ್ಥವಾಗಿಲ್ಲ, ನವ್ಯತೆಯ ಬಿರುಗಾಳಿಯಲ್ಲಿಯೂ ಬಲವಾಗಿ ನಿಂತು ನವೋದಯ ಶೈಲಿಯಲ್ಲಿ ಬರೆಯುತ್ತಿದ್ದ ರುದ್ರಮೂರ್ತಿಯ ಕವನಗಳೆಂದರೆ ನನಗೆ ಇಂದಿಗೂ ಪಂಚಪ್ರಾಣ. ಶ್ರೀಗೌಡರು ನವ್ಯ ಪಂಥದ ಮೋಜಿನಿಂದ ಬಿಡುಗಡೆಹೊಂದಿ ಸರಳವಾಗಿ, ಲಯಾತ್ಮಕವಾಗಿ ಅನಂತರ ಬರೆದ ಕವನಗಳಾಗಿರುವ ಸಿನಿಮಾ ಹಾಡುಗಳಾಗಲೀ ನನ್ನ ಹೃದಯವನ್ನು ಗೆಲ್ಲುವುದರಲ್ಲಿ ವಿಫಲವಾಗಲಿಲ್ಲ.

"ತೇರ ಏರಿ ಅಂಬರದಾಗೆ" ಎಂಬ ಶ್ರೀ ಗೌಡರ ಎಂಬ ಗೀತೆಯನ್ನು ಡಾ॥ ಬಿ.ಜಿ.ಎಲ್. ಸ್ವಾಮಿಯವರು ಪಿಟೀಲಿನಲ್ಲಿ ಬಾರಿಸಿದ್ದನ್ನು ಕೇಳಿ ಆನಂದಿಸಿದ್ದೇನೆ.

ಶ್ರೀ ಗೌಡರು ನನಗೆ ಎಂದೂ ಉಪದೇಶವನ್ನು ನೀಡಿದವರಲ್ಲ. ತಮ್ಮ ನಿಜ ಜೀವನದಲ್ಲಿ ನಡೆದು ತೋರಿಸಿದ್ದಾರೆ. ಅವರ ನಡವಳಿಕೆ ಪರಮಶ್ರೇಷ್ಠವೆಂದು ನಾನು ಸಾರುತ್ತಿಲ್ಲ. ಆದರೆ ಅವರ ಜೀವನದಲ್ಲಿ ಮಾತಿಗೂ ಮತ್ತು ಕೃತಿಗೂ ಸಾಂಗತ್ಯವಿದೆ. ಈ ಸಾಂಗತ್ಯವೂ ಉನ್ನತ ಮಟ್ಟದ್ದು ಆಗದೆ ಹೋಗಬಹುದು. ಆದರೆ ಮಾತು ಕೃತಿಗಳ ನಡುವೆ ಕೂದಲಿನಷ್ಟು ಬಿರುಕು ಇಲ್ಲ. ನನ್ನ ಬದುಕಿನ ಕಷ್ಟದ ದಿನಗಳಲ್ಲಿ ಅವರು ನನ್ನ ಬಗ್ಗೆ ಕನಿಕರ ತೋರಲಿಲ್ಲ. ಬದಲಾಗಿ ನನ್ನ ಬದುಕೇ ಸಾಹಸಮಯವಾದದ್ದೆಂದು ಹುರಿದುಂಬಿಸಿ ಬದುಕಿನ ಬಗ್ಗೆ ಪ್ರೀತಿಯನ್ನು ಬೆಳೆಸಿದರು. ಸ್ವಾಭಿಮಾನವನ್ನ ಹುಟ್ಟು ಹಾಕಿದರು "ಯಾರಿಗುಂಟು ಯಾರಿಗಿಲ್ಲ ಬಾಳೆಲ್ಲ ಬೇವು ಬೆಲ್ಲ" ಎಂಬ ಅವರ ಹಾಡಿಗೆ ನಾನೇ ಪ್ರೇರಣೆಯಿರಬಹುದೆ?

ಗೆಳೆತನವನ್ನು ಎಂದೂ ತಮ್ಮ ಸ್ವಂತಲಾಭಕ್ಕೆ ಬಳಸಿಕೊಳ್ಳದ, ಎಂತಹ ಪರಿಸ್ಥಿತಿಯಲ್ಲಿಯೂ ಗೆಳೆಯರನ್ನು ಮರೆಯದ ತಮ್ಮಂತೆಯೇ ತಮಗಿಂತಲೂ ತಮ್ಮ ಮಿತ್ರರ ಮೇಲೆ ಬರೆದಾಗ ಸಂತೋಷಿಸುವ ಔನ್ನತ್ಯ ಶ್ರೀ ದೊಡ್ಡರಂಗೇಗೌಡರ ಬಹುದೊಡ್ಡ ಗುಣ. ಬಿಂಕ ಬಿಗುಮಾನವಿಲ್ಲದೆ ನೇರವಾಗಿ, ತಿಳಿಯಾಗಿ ಅಪ್ಯಾಯತೆಯಿಂದ ಮಾತಾಡುವುದು ಅವರಲಕ್ಷಣ ನನ್ನಂತೆಯೇ ಈ ಸಹೃದಯ. ಸಂಪನ್ನನಿಂದ ಆನಂದ ಹೊಂದಿದವರು ಅನೇಕರಿದ್ದಾರೆ. ಅವರಿಗೂ ಗೌಡರಬಗ್ಗೆ ಹೇಳಲು ಅವಕಾಶ ಕೊಡದೆ ಎಲ್ಲವನ್ನೂ ನಾನೇ ಹೇಳಬೇಕೆಂದು ಪಣ ತೊಟ್ಟರೆ ಸ್ವಾರ್ಥವಾಗುವುದಿಲ್ಲವೆ?

ದೊಡ್ಡರಂಗೇಗೌಡರನ್ನು ನೆನೆಸಿಕೊಂಡಾಗಲೆಲ್ಲಾ ಜಗನ್ನಾಥ ಪಾಂಡಿತನ ಒಂದು ಶ್ಲೋಕ ಅರ್ಥ ನೆನಪಿಗೆ ಬರುತ್ತದೆ.

ದಾರಿದಾರಿಯಲ್ಲಿಯೂ ಅನೇಕ ಮರಗಳಿವೆ. ದಾರಿದಾರಿಗಳಲ್ಲಿಯೂ ಪಥಿಕರು ಆಮರಗಳ ನೆರಳನ್ನೆ ಅನುಭವಿಸುತ್ತಾರೆ. ಆದರೆ ದಾರಿ ಹೋಕನು ಮನೆಗೆ ಬಂದಮೇಲೂ ಯಾವ ಮರದ ನೆರಳನ್ನು ನೆನಪು ಮಾಡಿ ಕೊಳ್ಳುವನೋ ಅಂಥ ಮರವು ತುಂಬಾ ವಿರಳ.

ಇದುವರೆಗಿನ ನನ್ನ ಜೀವನದಲ್ಲಿ ಹಲವಾರು ಮಾರ್ಗಗಳಲ್ಲಿ ಸುತ್ತಾಡಿದ್ದೇನೆ. ಮಾರ್ಗಮಧ್ಯದಲ್ಲಿ ಹತ್ತು ಹಲವು ಮರಗಳ ನೆರಳನ್ನು ಅನುಭವಿಸಿದ್ದೇನೆ. ಬೇಸಗೆ - ಬಿರು ಬೇಸಗೆ ಎಂಬ ಎರಡೇ ಕಾಲಗಳಿರುವ ರಾಯಲ ಸೀಮೆಯಲ್ಲಿ ಬಾಳುತ್ತಿರುವ ನನಗೆ ಮರಗಳ ನೆರಳು ನೀಡುವ ಆನಂದದ, ಅಹ್ಲಾದದ ಅನುಭವ ಗಾಢವಾಗಿದೆ. ಗೌಡರ ಗೆಳೆತನ ಎಂಥದ್ದು ಎಂಬುದನ್ನೆ ಹೇಳುವುದಕ್ಕೆ ಜಗನ್ನಾಥ ಪಂಡಿತನು ಹೇಳಿದ ವಿರಳವಾದ ಆಮರಕ್ಕಿಂತಲೂ ಶ್ರೇಷ್ಠವಾದ ಉಪಮಾನ ಬೇರೊಂದು ದೊರೆಯದು. ಆ ಮರ ನೂರುಕಾಲ ಬಾಳಲಿ, ನನ್ನಂತಹ ನೂರಾರು ಪಥಿಕರಿಗೆ ಆಶ್ರಯನೀಡಲಿ.

# ಪರಿಸರ ಪ್ರೇಮಿ ದೊರಂಗಾ

✍ ಸುರೇಶ ಹೆಬ್ಳೀಕರ್
ಚಲನಚಿತ್ರ ನಿರ್ದೇಶಕರು

ದೊಡ್ಡರಂಗೇಗೌಡರು ಸಿನಿಮಾ ಸಾಹಿತ್ಯಕ್ಕೆ ಹೊಸ ತಿರುವು ಕೊಟ್ಟು ತಮ್ಮದೆ ಆದ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದ್ದಾರೆ. ಸಾಮಾನ್ಯವಾಗಿ ಸಿನಿಮಾ ಹಾಡುಗಳೆಂದರೆ ಕೆಳಮಟ್ಟದ ದರ್ಜೆಯ ಸಾಹಿತ್ಯವೆಂದು ಭಾವಿಸುವುದುಂಟು. ಆದರೆ ದೊಡ್ಡರಂಗೇಗೌಡರ ರಚನೆಗಳು ಮನರಂಜನೆಯ ಚೌಕಟ್ಟಿನಲ್ಲಿದ್ದರೂ ಅರ್ಥಗರ್ಭಿತವಾಗಿಯೂ ಹಾಗೂ ಕವಿತೆಗಳಾಗಿಯೂ ಸಿನಿಮಾ ಪ್ರಪಂಚವನ್ನು ಗೋಚರಿಸಿವೆಯೆಂದರೆ ತಪ್ಪಾಗಲಾರದು.

"ಆಲೆ ಮನೆ"ಗೆ ರಚಿಸಿದ ಅವರ 'ನಮ್ಮೂರ ಮಂದಾರ ಹೂವೆ' ನನ್ನನ್ನು ಇವತ್ತಿಗೂ ರೋಮಾಂಚನ ಮಾಡುತ್ತದೆ. 'ಆಲೆಮನೆ' ಯಶಸ್ವಿಯಾಗಲು ಅವರ ರಚನೆಯೂ ಕೂಡ ತುಂಬಾ ಪೂರಕವಾಗಿದೆ. ಅವರ ಇಂಥ ಅನೇಕ ರಚನೆಗಳು ಕರ್ನಾಟಕದ ಜನರ ಅಚ್ಚು ಮೆಚ್ಚಿನ ಸಂಗೀತಗಳಾಗಿ ಉಳಿದಿವೆ. ಸಹಸ್ರಾರು ಯುವಕರು ಅವರ ಪದಗಳನ್ನು ಗುಣಗುಣಿಸುತ್ತಾರೆ.

ದೊಡ್ಡರಂಗೇಗೌಡರು ಮತ್ತು ನಾನು ಕೆಲವು ಬಾರಿ ಒಂದೇ ವೇದಿಕೆಯ ಮೇಲೆ ಸೇರಿದ್ದೇವೆ. ಅವರು ಪ್ರಬುದ್ಧ ಭಾಷಣಕಾರರು ಹೌದು ಅವರ ಸಾಹಿತ್ಯ ಮತ್ತು ಸಮಯ ಬರೀ ಸಿನಿಮಾ ಕ್ರೇತ್ರಕ್ಕೆ ಸೀಮಿತವಾಗಿಲ್ಲ ಅವರು ಅನೇಕ ರೀತಿಯಲ್ಲಿ ಸಮಾಜವನ್ನು ಸ್ಪಂದಿಸುತ್ತಾರೆ. ನಮ್ಮ ಸಮಾಜದ ಸಮಸ್ಯೆಗಳನ್ನು ಗಾಢವಾಗಿ ಅಭ್ಯಸಿಸಿದ್ದಾರೆ. ಅವರ ಸಾಹಿತ್ಯದ ಒಲವು, ಅರಿವು ಆಳವಾಗಿದೆ. ಅವರ ಚಿಂತನೆ ಗಂಭೀರವಾಗದೆ, ಪರಿಸರದ ಬಗ್ಗೆ ಇರುವ ಚಿಂತನೆ ಗಂಭೀರವಾಗದೆ, ಪರಿಸರದ ಬಗ್ಗೆ ಇರುವ ಅವರ ಕಾಳಜಿ ಮೆಚ್ಚುವಂತಹದ್ದು ಎಲ್ಲಕ್ಕಿಂತ ಹೆಚ್ಚಿನದೇನೆಂದರೆ ಅವರ ಸಾಹಿತ್ಯದಲ್ಲಿ ಲವಲವಿಕೆ ಇದೆ.

ಅವರು ಬರೆದ ಹಾಡುಗಳನ್ನು ಹೇಳಲು ಸಂತೋಷವಾಗುತ್ತದೆ. ಖುಷಿ ಬರುತ್ತದೆ. ದೊಡ್ಡರಂಗೇಗೌಡರು ಅನೇಕ ಕೃತಿಗಳನ್ನು ರಚಿಸಿದ್ದಾರೆ.

ತಮ್ಮ ಬರವಣಿಗೆಯಿಂದ ಕನ್ನಡ ಸಿನಿಮಾ ಜಗತ್ತನ್ನು ಮತ್ತು ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇನ್ನು ಹೆಚ್ಚಿನ ರೀತಿಯಲ್ಲಿ ಅವರು ತಮ್ಮ ಕ್ರಿಯಾಶೀಲತೆಯ ಧಾರೆಯನ್ನು ಎರೆಯಲಿದ್ದಾರೆಂದು ನಾನು ದೃಢವಾಗಿ ನಂಬಿದ್ದೇನೆ.

# ನಿಗರ್ವಿ, ಸ್ನೇಹಶೀಲ

✍ ಈಶ್ವರಚಂದ್ರ

ಸುಮಾರು ಮೂವತ್ತು ವರ್ಷಗಳ ಹಿಂದಿನ ಮಾತು. ಆಗಿನ್ನೂ ನಾನು ಪದ್ಯ ಬರೆಯುತ್ತಿದ್ದೆ. ಬೆಂಗಳೂರಿನ ರಾಜಾಜಿನಗರದಲ್ಲಿ ಯುವ ಕವಿಗಳ ಒಂದು ಗೋಷ್ಠಿ ಏರ್ಪಾಡಾಗಿತ್ತು. ನಾನೂ ಒಂದು ಪದ್ಯ ಬರೆದುಕೊಂಡು ಅಲ್ಲಿಗೆ ಹೋಗಿದ್ದೆ. ಅಂದು ಪದ್ಯ ಓದಿದವರಲ್ಲಿ ಒಬ್ಬರು ತರುಣ ನನಗೆ ಇಷ್ಟವಾದರು. ಅವರು ಓದಿದ ಪದ್ಯದ ವಿವರಗಳು ಈಗ ನೆನಪಿನಲ್ಲಿಲ್ಲ. ಆದರೆ ಅದು ಚೆನ್ನಾಗಿತ್ತೆಂದು ಹೇಳಿ ಕಾವ್ಯಕ್ಷೇತ್ರದಲ್ಲಿ ಒಳ್ಳೆಯ ಕೃಷಿ ಮಾಡುವಂತೆ ಹಾರೈಸಿದ್ದು ನೆನಪಿದೆ. ಮುಂದೆ ನಾನು ಪದ್ಯ ಬರೆಯುವುದನ್ನು ಬಿಟ್ಟೆ. ಆದರೆ ಆ ತರುಣ ಕಾವ್ಯ ಕ್ಷೇತ್ರದಲ್ಲಿ ವ್ಯಾಪಕವಾದ ಕೃಷಿ ಮಾಡಿ ಇಂದು ಪ್ರಸಿದ್ಧ ಕವಿಯಾಗಿದ್ದಾರೆ. ಅವರೇ ನನ್ನ ಪ್ರೀತಿಯ ಗೆಳೆಯ ದೊಡ್ಡರಂಗೇಗೌಡ.

ನಮ್ಮ ಸ್ನೇಹ ಅಂದಿನಿಂದ ವರ್ಧಿಸಿಕೊಂಡೇ ಬಂದಿದೆ. ಗೌಡರು ಏರಿದ ಮೆಟ್ಟಿಲುಗಳನ್ನು ನಾನು ಕುತೂಹಲದಿಂದ ಕಣ್ಣುಗಳಿಂದ ನೋಡಿಕೊಂಡೇ ಬಂದಿದ್ದೇನೆ. ಅವರು ವಿದ್ಯಾಭ್ಯಾಸ ಮುಂದುವರಿಸಿ ಕನ್ನಡದಲ್ಲಿ ಎಂ. ಎ. ಮಾಡಿದ್ದು, ಅಂಚೆ ಇಲಾಖೆಯಿಂದ ಕಾಲೇಜಿನ ಅಧ್ಯಾಪಕರಾಗಿ ಬಂದದ್ದು, ಶಿಷ್ಯರ ಮೆಚ್ಚಿನ ಗುರುವಾದದ್ದು, ಉತ್ತಮ ಕವಿತೆಗಳನ್ನು ಬರೆದು ಕಾವ್ಯ ಕ್ಷೇತ್ರದಲ್ಲಿ ಭದ್ರವಾಗಿ ಕಾಲೂರಿದ್ದು, ಚಲನಚಿತ್ರ ಕ್ಷೇತ್ರದಲ್ಲಿ ಸದಭಿರುಚಿಯ ಜಾನಪದ ಸೊಗಡಿನ ಸುಂದರ ಗೀತೆಗಳಿಂದ ಅತ್ಯಂತ ಜನಪ್ರಿಯರಾದದ್ದು, ಮೆಚ್ಚಿನವರೊಡನೆ ಮದುವೆ, ಮಕ್ಕಳು, ಮನೆ - ಹೀಗೆ ಗೌಡರ ಪ್ರಗತಿಯನ್ನು ದೂರದಿಂದಲೇ ನೋಡುತ್ತಾ ಸಂತೋಷಪಟ್ಟಿದ್ದೇನೆ.

ಗೌಡರು ಹಳ್ಳಿಯಿಂದ ಬಂದವರು. ಪಟ್ಟಣದ ಕೃತಕತೆ, ಡೌಲು ಅವರನ್ನು ಎಂದೂ ತಟ್ಟಲಿಲ್ಲ. ಎಷ್ಟೆಲ್ಲಾ ಸಾಧಿಸಿದ್ದರೂ ಯಶಸ್ಸು, ಕೀರ್ತಿಗಳು ಅವರ ಸರಳತೆಯನ್ನು ಮಸುಳಿಸಲಿಲ್ಲ. ಭೇಟಿಯಾದಾಗ ಇಂದೂ ಅದೇ ಪ್ರೀತಿಯ ನಗು. ಹೃದಯ ತುಂಬಿದ ಮಾತು. ಅದೇ ವಿನಯ. ಅದೇ ಸೌಜನ್ಯ.

ಅವರ ಮುಗ್ಧತೆಯನ್ನು ಎಷ್ಟೋ ಸಲ ಜನರು ದುರುಪಯೋಗ ಪಡಿಸಿಕೊಂಡಿದ್ದೂ ಉಂಟು. ಚಲನಚಿತ್ರ ರಂಗದವರು ಎಲ್ಲರಿಗೂ ಮೋಸ ಮಾಡುವ ಹಾಗೆ ಅವರಿಗೂ ಮೋಸಮಾಡಿದ್ದಾರೆ. ಅವರು ಬರೆದ ಎಷ್ಟು ಹಾಡುಗಳಿಗೆ ಹಣಬಂದಿಲ್ಲವೋ ದೇವರಿಗೇ ಗೊತ್ತು.

ಅವರಿದ್ದ ಬಾಡಿಗೆ ಮನೆಗಳಿಗೆಲ್ಲಾ ಭೇಟಿಕೊಟ್ಟಿದ್ದ ನಾನು, ಅವರು ಪ್ರವರ್ಧಮಾನಕ್ಕೆ ಬರಲು ಆರಂಭಿಸಿದಾಗ ಸ್ವಂತ ಮನೆ ಮಾಡಿಕೊಳ್ಳಲು ಸೂಚನೆ ಕೊಟ್ಟೆ. ಅದನ್ನು ಕಾರ್ಯರೂಪಕ್ಕೆ ತಂದು ಬೆಂಗಳೂರಿನಿಂದ ಅನತಿ ದೂರದಲ್ಲಿ ಪ್ರಶಾಂತವಾದ ಹೊಸಕೋಟೆಯಲ್ಲಿ ಅವರು ಸ್ವಂತ ಮನೆ ಮಾಡಿದ್ದು ನನಗೆ

ಸಂತೋಷವಾಯಿತು. ಅದು ಅವರ ಮನೋಧರ್ಮಕ್ಕೆ ಅನುಗುಣವಾಗಿಯೇ ಇದೆ. ಗೌಜು ಗದ್ದಲಗಳನ್ನು ಇಷ್ಟಪಡದೆ, ತಮ್ಮ ಪಾಡಿಗೆ ತಾವು ನಂಬಿದ ಮೌಲ್ಯಗಳಲ್ಲಿ ಕೆಲಸಮಾಡಿಕೊಂಡು ಹೋಗುವ ಗೌಡರಂಥ ವ್ಯಕ್ತಿಗಳು ಈಗ ವಿರಳರಾಗುತ್ತಿದ್ದಾರೆ.

ಅವರ ಮೊದಲ ಕವನ ಸಂಕಲನ 'ಜಗಲಿ ಹತ್ತಿ ಇಳಿದು' ಪ್ರಕಟವಾದ ತರುವಾಯ ಒಂದು ಸಲ ಗೌಡರು ನಮ್ಮ ಮನೆಗೆ ಬಂದಿದ್ದರು. ನಾನು ಹಾಳೆಯ ಮೇಲೆ ಮಸಿ ಚೆಲ್ಲಿ ಕೊಳವೆಯಿಂದ ಗಾಳಿ ಊದಿ ವಿಚಿತ್ರ ಆಕಾರಗಳನ್ನು ಮಾಡಿ ಗೋಡೆಗೆ ನೇತುಹಾಕಿದ್ದೆ. ಅದು ಗೌಡರ ಕಣ್ಣು ಸೆಳೆಯಿತು. ತಮ್ಮ ಮುಂದಿನ ಕವನಸಂಕಲನಕ್ಕೆ ಅದನ್ನು ಮುಖಚಿತ್ರವಾಗಿ ಬಳಸಿಕೊಳ್ಳಲು ಬಯಸಿದರು. ಹೀಗೆ ಅವರ ಎರಡನೆಯ ಕವನ ಸಂಕಲನ 'ಕಣ್ಣು ನಾಲಗೆ ಕಡಲು' ವಿಗೆ ನನ್ನ ಚಿತ್ರದ ದೃಷ್ಟಿಬೊಟ್ಟು ದೊರೆಯಿತು. ಆ ಕಾವ್ಯ ಕೃತಿಗೇ 1972ರ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆತಾಗ, ಗೆಳೆಯನ ಸಾಧನೆಯ ಬಗೆಗೆ ನನಗೆ ಹೆಮ್ಮೆಯಾಯಿತು.

ಗೌಡರ ಸ್ನೇಹವಲಯ ದೊಡ್ಡದು. ಎಂಥ ಪ್ರತಿಕೂಲ ಪರಿಸ್ಥಿತಿಯಲ್ಲೂ ಒತ್ತಾಸೆಯಾಗಿ ನಿಲ್ಲಬಲ್ಲ ಸ್ನೇಹಿತರ ಗುಂಪು ಅವರ ಹಿಂದಿದೆ. ಅದಕ್ಕೆ ಗೌಡರ ಸ್ನೇಹಶೀಲತೆಯೇ ಕಾರಣ. ಸ್ನೇಹಕ್ಕೆ ಅವರು ಕೊಡುವ ಬೆಲೆ ದೊಡ್ಡದು. 'ಮಣ್ಣಿನ ಮಾತುಗಳು' ಕೃತಿಯಲ್ಲಿ ಅವರೇ ಹೇಳುವಂತೆ,

ಕೃಷ್ಣ ಕುಚೇಲರ ಸ್ನೇಹ ಅನನ್ಯ ಕಾಣಯ್ಯ
ಕರ್ಣ ಕೌರವರ ಸ್ನೇಹ ಅಪೂರ್ವ ಕಾಣಯ್ಯ
ಆತ್ಮೀಯ ಗೆಳೆಯ ಬದುಕಿನ ಅನಂತ ಅಮೃತವಯ್ಯ
ಗೆಳೆಯನಿರದ ಬಾಳು ಜೀವಚ್ಛವದಂತಯ್ಯ - ಮಣ್ಣಿನ ಮಗ

ಈಗ ಗೌಡರ ದೃಷ್ಟಿ ಮಾಗುತ್ತಿದೆ. ಬರವಣಿಗೆ ಚಿಂತನಶೀಲವಾಗುತ್ತಿದೆ. ಬದುಕಿನ ವೈವಿಧ್ಯವನ್ನು ಬಿಡುಗಣ್ಣಿನಿಂದ ಆಳವಾಗಿ ನೋಡಿ ಮನನ ಮಾಡಿದ ಅವರಿಂದ ಮಣ್ಣಿನ ಮಾತುಗಳಂಥ ಕೃತಿ ಮೂಡಿ ಬಂದಿದೆ. ಗಾದೆಯಂಥ ಸೂತ್ರರೂಪದ ಮಾತುಗಳಲ್ಲಿ ವಿಚಾರವನ್ನು ಹಿಡಿದಿಟ್ಟುಕೊಂಡಿರುವ ಅವರ ಮುಕ್ತಕಗಳು ನನಗೆ ಪ್ರಿಯವಾಗಿವೆ.

ದೊಡ್ಡರಂಗೇಗೌಡರು ಸಾಹಿತ್ಯದಲ್ಲಿ, ಸಮಾಜದಲ್ಲಿ, ಉನ್ನತ ಸಾಧನೆಗಳನ್ನು ಮಾಡಿ ಯಶೋವಂತರಾಗಲಿ ಎಂದು ಹಳೆಗಾಲದ ಗೆಳೆಯನಾಗಿ ಪ್ರೀತಿಯಿಂದ ಹಾರೈಸುತ್ತೇನೆ.

# ಗೌಡರು ಮತ್ತು ನಾನು : ಒಂದು ಮೆಲುಕು

✍ ಟಿ. ಎಸ್. ಲೋಹಿತಾಶ್ವ
ಚಲನಚಿತ್ರ ಕಲಾವಿದರು

ಮೂವ್ವತ್ತು ವರ್ಷಗಳಷ್ಟು ಹಿಂದಿನ ದಿನಗಳನ್ನು ನೆನಪಿಸಿಕೊಳ್ಳುವ ಸಂದರ್ಭ ಒದಗಿದೆ ಪದವಿ ಪೂರ್ವದ ಹದಿಹರೆಯದ ಆದರ್ಶಮಯ ಬದುಕು. ಕಾಸಿಲ್ಲದ' ಕೊರತೆಯೂ ಕಾಡಿದಷ್ಟು ದಟ್ಟವಾಗಿ ಸಾಹಿತ್ಯ ನಮ್ಮನ್ನು ಅವುಚಿಕೊಂಡ ದಿನಗಳವು ಒಂಥರಾ ಹುಚ್ಚು.

ಆಚ್ಚಾಗಿ ಬಂದ ಅಕ್ಷರಗಳೆಲ್ಲವನ್ನೂ ಮುಕ್ಕಿ ಸಾಲದ್ದಕ್ಕೆ ಕನ್ನಡ ಸಾರಸ್ವತ ಲೋಕಕ್ಕೆ ಇನ್ನಷ್ಟು ಕವನಗಳನ್ನು ತುರುಕುವ ಹುನ್ನಾರ. ಬರೆದದ್ದೇ ಬರೆದದ್ದು. ಓದಿದ್ದನ್ನು, ಬರೆದದ್ದನ್ನ ಕನ್ನಡದ ಉಪನ್ಯಾಸಕರುಗಳು ಹೇಳಿದ್ದನ್ನು ಇನ್ನಿಲ್ಲದಷ್ಟು ಬಗೆಯಲ್ಲಿ ಚರ್ಚಿಸುವ ಆತುರ. ಗುರಿಯೊಂದನ್ನು ಹುಡುಕಿಕೊಳ್ಳುವ ತವಕ. ನಿಚ್ಚಳವಾಗಿ ಕಾಣುತ್ತಿದ್ದುದು ವರ್ಷಗಳ ನಂತರ ಕಾವ್ಯ ಜಗತ್ತಿನಲ್ಲಿ ಅಚ್ಚಳಿಯದೆ ಉಳಿದು ಬಿಡುವ ಕನಸು ಮಾತ್ರ. ಅದಕ್ಕಾಗಿ ನಾವು ನಡೆಸಿದ ತಯಾರಿ. ಹೊಮ್ಮಿಸುತ್ತಿದ್ದ ಉತ್ಸಾಹ ಈಗ ನಗೆತರಿಸುವಂತಿದ್ದರೂ ನಮ್ಮನ್ನು ನಾವೇ ತಿದ್ದಿ ತೀಡಿಕೊಂಡ ಪ್ರಾಮಾಣಿಕತೆಯ ಬಗೆಗೆ ಎರಡು ಮಾತಿಲ್ಲ.

ತುಮಕೂರಿನ ಪುರಭವನದ ಮುಂದಿನ ಪಾರ್ಕಿನಲ್ಲಿ ಪಾಠ ಪ್ರವಚನಗಳ ನಂತರ ಕೂತಾಗ ಪ್ರಾರಂಭವಾಗುತ್ತಿದ್ದ ಮಾತು, ಸಂಜೆಯನ್ನು ರಾತ್ರಿಯನ್ನಾಗಿಸಿದಾಗ, ಸಿದ್ಧಗಂಗಾ ಬಡಾವಣೆಯಲ್ಲಿದ್ದ ನನ್ನನ್ನು ಮನೆತಲುಪಿಸಲೆಂದು ನನ್ನೊಡನೆ ಬರುವಾಗಲೂ ಮುಗಿಯದ್ದರಿಂದ; ಗೌಡರನ್ನು ಸಿದ್ಧಗಂಗಾ ಬಡಾವಣೆಯಿಂದ ಬಸ್ಟ್ಯಾಂಡ್ ಬಳಿಯ ಅಂದಿನ ಸಿದ್ಧರಾಮಣ್ಣ ಹಾಸ್ಟೆಲಿಗೆ ಮರುಕಳಿಸಲು ನನ್ನನ್ನು ಹುರಿದುಂಬಿಸುತಿತ್ತು. ಕತ್ತಲ ಭಯಕ್ಕಾಗಿ ಮಿಸಲು ತೀರಿಸಲು ಬಂದ ದಾಸಯ್ಯನನ್ನು ಊರು ತಲುಪಿಸಲು ಜೊತೆಗೂಡಿದ ಅಳುಮಗನನ್ನು ಅದೇ ಭಯದ ಕಾರಣಕ್ಕಾಗಿ ಅವನೂರಿಗೆ ಬಿಟ್ಟು ಬರುವ ರಗಳೆಯಲ್ಲೆ ಬೆಳಗಾಗಿಸಿಬಿಟ್ಟ ಕತೆಯಂತೆ ಅನೇಕ ರಾತ್ರಿಗಳು ನಮ್ಮ ಪಾಲಿನ ಹಗಲಾಗಿ ಬಿಟ್ಟುದುಂಟು. ಅಶ್ಚರ್ಯದ ಸಂಗತಿಯೆಂದರೆ ನಿಂತ ನಿಲುವಿನಲ್ಲೇ ಅಷ್ಟೊಂದು ದೀರ್ಘಕಾಲವನ್ನು ಕಳೆಯುತ್ತಿದ್ದುದು.

ಹಸಿವಿಗಾಗಿ ಕವನ, ವಿರಹಕ್ಕಾಗಿ ಕವನ ನಿನ್ನೆ ಬಾರದಿದ್ದುದಕ್ಕಾಗಿ ಒಂದು, ಇಂದು ಬಂದದಕ್ಕೊಂದು ಅಂದು ಇಂದು ಮುಂದನ್ನು ಕುರಿತು ಮತ್ತೊಂದು, ಕನಸಿಗಾಗಿ ಒಂದು, ವಸ್ತುಸ್ಥಿತಿಯ ವಿಡಂಬನೆಗೊಂದು, ಹೀಗೆ ನಮ್ಮ ಕಾವ್ಯಲಹರಿಯ ವ್ಯಾಪ್ತಿಗೆ ಎಲ್ಲೆಯೇ ಇರಲಿಲ್ಲ. ಹೆಣದದ್ದೇ ಹೆಣೆದದ್ದು. ಕೆಲವೊಂದು ರೋಮಾಂಚನ ಕ್ಷಣಗಳಲ್ಲಿ ಮಾತು ಸಾಗುತ್ತಿದ್ದುದೇ ಕಾವ್ಯಮಯವಾಗಿ.

ಅಂತೂ ಈ ಗೆಳೆಯ ಗೌಡ "ಮನುಜ"ನಾಗಿ, ದೊರಂಗೌ ಆಗಿ ಕರ್ನಾಟಕದ ಪ್ರತಿ ಮನೆಯ ರೇಡಿಯೋದಿಂದ ಪ್ರತಿದಿನ ಕೇಳಿಬರುವ ಹೆಸರಾಗಿ ಬಿಟ್ಟಿದ್ದರ ಒಳಗುಟ್ಟು ಇಲ್ಲಿದೆ. ಚಲನಚಿತ್ರ ಜಗತ್ತಿಗೆ ಅತ್ಯಾವಶ್ಯಕವಾಗಿ ತುಂಬಿದ ಹೆಮ್ಮೆ ಈ ನನ್ನ ಗೆಳೆಯನದು "ಮದುವೆಯೇ ಮನುಜನ ಮೊದಲನೆ ಬಂಧನ" ಎಂದು ಪ್ರಾರಂಭವಾಗುವ ಅವರ ಹೆಸರಾಂತ ಗೀತೆಯೊಂದನ್ನು ಗೌಡರ ಮೇಲೆಯೇ ಪ್ರಯೋಗ ಮಾಡಿ ಗೇಲಿಮಾಡಿದ್ದುಂಟು ನಾನು. ಸದ್ಯ ಅವರ ಶ್ರೀಮತಿ ರಾಜೇಶ್ವರಿ ಸಿಟ್ಟಿಗೇಳದಿದ್ದುದು ನನ್ನ ಪುಣ್ಯ.

ಹಠ ಬಿಡದ ತಿವಿಕ್ರಮ ಈತ. ಬರೆದೆಲ್ಲಾ ಅಕ್ಷರಗಳನ್ನು ಕಳೆಯದೇ ಜೋಪಾನ ಮಾಡಿಟ್ಟು ಜೋಡಿಸಿಟ್ಟ ಆ ದಿನಗಳಲ್ಲಿ ನನ್ನನ್ನು ಎದೆಗೆಡಿಸಿ ಬಿಡುವಷ್ಟು ಎತ್ತರದ ಕವನ ರಾಶಿಯನ್ನು ಓಲೈಸಿ, ಅಂದು ಆತ ಕಂಡ ಕನಸನ್ನು ನನಸು ಮಾಡಿಕೊಂಡದ್ದು ಈ ಹಠ ಮತ್ತು ಅಚ್ಚುಕಟ್ಟುತನದಿಂದ. ಅವರನ್ನು ಕವನಿಸುತ್ತಿದ್ದ ಆ ದಿನಗಳಿಂದ ಕಾವ್ಯ ಪರಿಣಿತಿಯ ಈ ದಿನಗಳವರೆಗೆ ಎಳೆತಂದಿದೆ. ಆದರೆ ನನ್ನ ಸೋಂಬೇರಿತನ ನನ್ನನಿನ್ನೂ ಕೇವಲ ಸಹೃದಯ ಓದುಗನನ್ನಾಗಿ ಮಾತ್ರ ಉಳಿಸಲು ಕಾರಣವಾಗಿದೆ.

ನಾನು ಬರೆದ ಪ್ರತಿ ಕವನವೂ ಸಾಪ್ತಾಹಿಕಗಳಲ್ಲಿ ಅಚ್ಚಾಗುತ್ತಿದ್ದ ಆ ದಿವಸಗಳಲ್ಲಿ ಅವುಗಳನ್ನೋದಿ ನಾನೇ ಅನೇಕ ಬಾರಿ ಮುಜುಗುರ ಪಟ್ಟುಕೊಂಡು, ಬಿಡುವಿಲ್ಲದೇ ಬರೆಯುವ, ಬರೆದುದೆಲ್ಲವನ್ನು ಅಚ್ಚುಗಾಣಿಸುವ ಹುಚ್ಚನ್ನು ಬಿಟ್ಟು ಬಿಟ್ಟೆ ಆಗೀಗ ಹುಟ್ಟುವ ಕವನಗಿವನಗಳು ಗೆಳೆಯರ ಗುಂಪಿನಲ್ಲಿ ಮೆಚ್ಚುಗೆ ಗಳಿಸುವಷ್ಟಕ್ಕೇ ಸೀಮಿತವಾಗಿರುವುದು ಕನ್ನಡ ಸಾಹಿತ್ಯಲೋಕದ ಪುಣ್ಯವೆಂದೇ ಹೇಳಬೇಕು. ತಡೆತಡೆದು ಮರುಕಳಿಸುವ ಸನ್ನಿಯಂತೆ ಇತ್ತೀಚೆಗೊಂದು ಶ್ರೇಷ್ಠಕೃತಿಯನ್ನು ಕಡೆದು ಅಮರನಾಗಿ ಬಿಡುವ ಹುರುಡು, ವೃದ್ಧಾಪ್ಯ ಸಮೀಪಿಸುತ್ತಿರುವುದರ ಸೂಚನೆಯಿರಬಹುದು.

ತಾಪತ್ರಯಗಳು ಗೌಡರನ್ನು ಕಾಡಿದಷ್ಟು ಬೇರಾರನ್ನು ಕಾಡಿಲ್ಲವೆಂದೇ ಹೇಳಬಹುದು. ಪದ್ಯ ಬೇಡ ಗೌಡ, ಗದ್ಯ ನಿನ್ನ ಮಾಧ್ಯಮ ಎಂದು ಎಚ್ಚರಿಕೆ ಹೇಳುವ ಉಪಾಧ್ಯಾಯರ ಮಾತು. ತಮ್ಮಂದಿರನ್ನು ಓದಿಸುವ ಜವಬ್ದಾರಿ. ವಿಜ್ಞಾನ ವಿಷಯಗಳಿಂದ ಕಲಾವಿಭಾಗಕ್ಕೆ ಬದಲಾಯಿಸಿಕೊಳ್ಳುವ ಜಂಜಾಟ.

ರಾತ್ರಿಯೆಲ್ಲಾ ಆರ್. ಎಂ. ಎಸ್. ಉದ್ಯೋಗ. ಬೆಳಗಾದರೆ ಎಂ.ಎ. ಓದು ಸುಮಾರು ಐದು ವರುಷಗಳ ಕಾಲ ಈತ ಗಂಟೆಗಟ್ಟಲೆ ನಿದ್ದೆ ಮಾಡಿಯೇ ಅರಿಯ. ಆ ಕಾಲದಲ್ಲಿ ಇವರು ದಿಕ್ಕೆಟ್ಟು ದಾರಿತಪ್ಪದೆ ಉಳಿದದ್ದೇ ಒಂದು ದಿಗ್ಭ್ರಮೆ ನನ್ನಂತಹವನಿಗೆ. ನಿಜಕ್ಕೂ ಈತ ಒಂದು ಅದ್ಭುತ, ಹತ್ತಿರದಿಂದ ಬಲ್ಲವರಿಗೆ.

ಸದಾ ಹಸನ್ಮುಖಿಯಾಗಿಯೂ ಕಾಣುವ ಗೌಡರ ಮನದಾಳದ ಎಂತದೋ ನೋವು ಈತನನ್ನು ಅಮರಿಕೊಂಡು ಪದ್ಯ ಬರೆಯದೆ ಉಳಿಯಲಾರದ ಸ್ಥಿತಿಯೊಂದನ್ನು ನಿರ್ಮಿಸಿ ಬಿಟ್ಟಿದೆ. ಇದನ್ನು ಕಂಡು ಉಂಡ ಜಡ್ಡು ಗಟ್ಟಿಹೋಗಿರುವ ಗೆಳೆಯ ಬೆಳೆಸಿಕೊಂಡಿರುವ ನಿರ್ಲಿಪ್ತತೆ ಅಸಾಧಾರಣವಾದುದು. ಅನಾನುಕೂಲಗಳನ್ನು ಅನುಕೂಲಗಳನ್ನಾಗಿ ಪರಿವರ್ತಿಸಿಕೊಂಡು ನೋವನ್ನು ಪಾಲಿಸುವ ಇವರ ಮಾನಸಿಕ ಸಮತೋಲನ ಅನುಕರಣ ಯೋಗ್ಯ. ನನ್ನ ಪಾಲಿಗೆ ಈತ ಒಂದು ಆಶ್ಚರ್ಯ ಸೂಚಕ ಚಿಹ್ನೆ.

ಆಗ ಅಗಲಿರಲಾರದಂತಹ ಗೆಳೆಯರಾಗಿದ್ದ ನಾವು ಈಗ ಸೇರುವುದು ವರುಷಕೊಮ್ಮೆಯೋ ಎರಡು ಬಾರಿಯೋ ಅಷ್ಟೆ. ಅದೂ ಕರ್ನಾಟಕದ ಜನಪ್ರಿಯ ಗೀತರಚನೆಕಾರನಾಗಿ ಆತ, ಚಲನ ಚಿತ್ರ ಕಲಾವಿದನಾಗಿ ನಾನು ಆಗಾಗ ಘಟಿಸುವ ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಮಾತ್ರ.

ಗೌಡರು ೧೯೬೪ ರಿಂದ ೧೯೭೦ ರ ತನಕ ಬರೆದ ಪ್ರತಿ ಅಕ್ಷರವನ್ನು ಓದಿರುವವನು ನಾನು. ಅನಂತರ ಪತ್ರಿಕೆಯ ವಿಶೇಷಾಂಕಗಳಲ್ಲಿ, ಸಾಪ್ತಾಹಿಕಗಳಲ್ಲಿ ಪ್ರಕಟವಾದ ಅವರ ಬಿಡಿಗವನಗಳನ್ನು, ರೇಡಿಯೋಗಳಲ್ಲಿ ಹರಿದು ಬರುವ ಚಿತ್ರಗೀತೆಗಳನ್ನಷ್ಟೇ, ಓದಿ ಕೇಳಿ ಮಿತ್ರದ್ರೋಹಿಯಾಗಿ ಬಿಟ್ಟನೇನೋ ಎನಿಸಹತ್ತಿದೆ. ಅವರ ಇತರ ಬರಹಗಳನ್ನು ಅವಲೋಕಿಸುವ ಅವಕಾಶವನ್ನು ಸೃಷ್ಟಿಸಿಕೊಂಡು ಪ್ರಾಯಶ್ಚಿತ್ತ ಮಾಡಿಕೊಳ್ಳುವ ಬಯಕೆ ನನ್ನದು.

ನಾವಿಬ್ಬರೂ ಮಿತ್ರರೊಡಗೂಡಿ ಪ್ರಕಟಿಸಿದ "ಜ್ಯೋತಿರ್ಧಾರಿ (ಶೀರ್ಷಿಕೆಯೂ ಗೌಡರದ್ದೇ) ನಮ್ಮ ಪ್ರಥಮ ಸಾಹಸ. ೧೯೬೪ರ ಅಂದಿನಿಂದ ೯೫ರವರೆಗೆ ಅವ್ಯಾಹತವಾಗಿ ಸಾಗಿರುವ ಗೆಳೆಯ ಗೌಡರ ಸಾಹಿತ್ಯ ಕೃಷಿ ನಿರಾತಂಕವಾಗಿ ಸಾಗಿ ಅವರಿಂದ ಮತ್ತಷ್ಟು ಉತ್ಕೃಷ್ಟಕೃತಿಗಳು ಹೊರಬರಲಿ ಎಂದು ಶುಭಹಾರೈಸುತ್ತೇನೆ.

* * *

ಸಾವಿರದ ಶೈಲಿಯಿಹುದು ಜಗದ ಸಾಹಿತ್ಯದಲಿ
ರೂಪಿಸಿಕೋ ನಿನ್ನ ಅನುಭವ ಅಭಿರುಚಿ ಹಿನ್ನೆಲೆಯಲಿ
ಎರಕ ಹೊಯ್ಯಿ ಸ್ವೋಪಜ್ಞತೆಯ ಮೌಲ್ಯಗಳ ಜೊತೆಜೊತೆಯಲಿ
ಹೃದ್ಭಾವ ಪಲ್ಲವಿಸೆ ಕಾವ್ಯೋದಯ - ಮಣ್ಣಿನಮಗ

* * *

ಬರಹವೆಂಬುದು ಒಂದು ದಿನದಿ ಸಾಧಿಸುವುದಲ್ಲ
ಸ್ವರ ಮಾಧುರ್ಯ ಒಂದು ಕ್ಷಣಕೆ ಸಿದ್ಧಿಸುವುದಿಲ್ಲ
ಅರೆ ಕಡೆಯುವುದೂ ಅರೆಘಳಿಗೆಗೆ ದಕ್ಕುವುದಲ್ಲ
ಬರೆದು ಹರಿದಷ್ಟೂ ಚಿತ್ರ - ಮಣ್ಣಿನ ಮಗ

* * *

ಕಲಾವಿದ ಮತ್ತೆ ಮತ್ತೆ ಯತ್ನಿಸಲು ಯಶ
ಕಲೆ ಎಂಬುದು ಕನಸಿನ ಕಲಹಂಸ
ಕಲಿತಷ್ಟು ಕೋನರುವುದು ಕಲ್ಪನಾ ವಿಲಾಸ
ಕಲೆಗಾರಗೆ ಒಲಿವಳು ಕಾವ್ಯ ಕಲ್ಯಾಣಿ - ಮಣ್ಣಿನ ಮಗ

# ಎಲ್ಲರಂಥವನಲ್ಲ ನನ್ನ ಗಂಡ

✍ ಕೆ. ರಾಜೇಶ್ವರಿಗೌಡ

ಬದುಕಿನಲ್ಲಿ ನಾವು ಊಹೆಯೇ ಮಾಡಿಕೊಳ್ಳಲಾಗದ ಅನೇಕ ಘಟನೆಗಳು ಜರುಗುತ್ತವೆ, ಅವುಗಳ ಪರಿಣಾಮ ವಿಸ್ಮಯ ... ಸಂತೋಷವೆಲ್ಲಾ ಆಗಿರಬಹುದು.

ಮೂಲತಃ ತೆಲುಗಿನವಳಾದ ನಾನು ಕನ್ನಡ ಸಾಹಿತ್ಯ ಓದಿದ್ದೇ ಒಂದು ಆಕಸ್ಮಿಕ.. ಕನ್ನಡದ ಮೇಲಿನ ನನ್ನ ಪ್ರೀತಿ ಎಷ್ಟೆಂದರೆ ಮನೆಯಲ್ಲಿ ಹಠಮಾಡಿಕೊಂಡೇ ಕನ್ನಡ ಎಂಬ (ಅನರ್ಥ)ಗೆ ಸೇರಿದೆ. ವಿಜ್ಞಾನದ ಬಗ್ಗೆ, ಇಂಗ್ಲೀಷಿನ ಬಗ್ಗೆ ವ್ಯಾಮೋಹವಿದ್ದ ಕುಟುಂಬದಲ್ಲಿ ಮೊಟ್ಟ ಮೊದಲಿನವಳಾಗಿ ಕನ್ನಡ ಸಾಹಿತ್ಯ ಪದವಿಗೆ ಸೇರಿದ್ದು ನನಗೆ ಹೆಮ್ಮೆ ಎನಿಸಿತ್ತು.

೧೯೭೦ ರ ಅಕ್ಟೋಬರನ ಅದೊಂದು ದಿನ ಚರ್ಚಾಸ್ಪರ್ಧೆಯಲ್ಲಿ ಆಸಕ್ತಿ ಇದ್ದ ನಾನು ಮತ್ತು ನನ್ನ ಗೆಳತಿ ಇಬ್ಬರೂ ನಾವು ಓದುತ್ತಿದ್ದ ಮಹರಾಣಿ ಕಾಲೇಜನ್ನು ಪ್ರತಿನಿಧಿಸಿ ಆಚಾರ್ಯಪಾಠಶಾಲಾದಲ್ಲಿ ನಡೆದ ಬಾಷಣ ಸ್ಪರ್ದೆಗೆ ಹೋಗಿದ್ದೆವು ಆಗ ಅಲ್ಲಿಗೆ ಇನ್ನಿತರ ಕಾಲೇಜನಿಂದಲೂ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಪಾಲ್ಗೊಳ್ಳಲು ಬಂದಿದ್ದರು. ನಮ್ಮ ನಮ್ಮಲ್ಲಿ ಪರಿಚಯವಾಯಿತು. ಆ ಸಂದರ್ಭದಲ್ಲಿ ನನಗೆ ಕನ್ನಡ ಎಂ.ಎ. ಓದುತ್ತಿದ್ದ ಕವಿಯೊಬ್ಬರು ಸೆಂಟ್ರಲ್ ಕಾಲೇಜನಿಂದ ಭಾಷಣ ಸ್ಪರ್ಧೆಗೆ ಬಂದಿದ್ದವರ ಪರಿಚಯವಾಯಿತು. ಅವರೇ ದೊಡ್ಡರಂಗೇಗೌಡ. (ನಾನು ಪ್ರೀತಿಯಿಂದ ಅವರನ್ನು ಕರೆಯುವುದು 'ಡಾಲಿ' ಎಂದು)

ಅವರ ಬಗ್ಗೆ ನಾನು ಕೇಳಿದ್ದೆ; ಅವರ ಕವಿತೆಗಳನ್ನು ಓದಿದ್ದೆ; ಇದೀಗ ಮುಖತಃ ಅವರ ಪರಿಚಯವಾಯಿತು, ತೆಳ್ಳಗಿದ್ದ, ಗೌರವರ್ಣದ, ಗುಂಗುರು ಕೂದಲಿನ, ಸೌಮ್ಯ ಸ್ವಭಾವದ ಅವರನ್ನು ಮೊದಲ ಬಾರಿ ಕಂಡಿದ್ದೆ, ಅವರ ಮಾತಿನ ವೈಖರಿ ನನಗೆ ಹಿಡಿಸಿತ್ತು... ಮುಂದೆ ಕೆಲವು ಸಲ ಬಾಷಣ ಸ್ಪರ್ಧೆಗೆ ಅವರಿಂದಲೇ ಅಂಶಗಳನ್ನು ಪಡೆದಿದ್ದೆ. ಹೀಗೆ ಪರಿಚಯ ... ಸ್ನೇಹ ಆಕರ್ಷಣೆ ...ಪ್ರೀತಿ ...ಈ ಎಲ್ಲಾ ಹಂತಗಳನ್ನು ನಾನು ಅವರೊಂದಿಗೆ ಹಂಚಿಕೊಂಡೆ ... ಮದುವೆ ಕನಸುಗಳನ್ನು ಹಾಯುತ್ತಾ ಮದುವೆಯ ನನಸಿನ ನೆಲೆ ತಲುಪಿದೆ .. ನಾನು ಮೆಚ್ಚಿಕೊಂಡವರನ್ನೇ ವಿವಾಹವಾದ ನಾನು ಭಾಗ್ಯ ಶಾಲಿ.

ಲೆಕ್ಕವಿಲ್ಲದಷ್ಟು ವಿರೋಧಗಳು, ಅಗಣಿತ ಕಷ್ಟಗಳು - ಈ ಎಲ್ಲಾ ಮೂಸೆಯಲ್ಲಿ ಕಾದ ನಮ್ಮ ಪ್ರೀತಿ ಚೊಕ್ಕ ಚಿನ್ನವಾಗಿತ್ತು. ಕಷ್ಟಗಳು ನಮ್ಮನ್ನು ಬೇರ್ಪಡಿಸಲಾಗದಷ್ಟು ಗಟ್ಟಿಗೊಳಿಸಿದವು. ಜಾತಿ, ಭಾಷೆ, ಎಲ್ಲವನ್ನೂ ಮೀರಿ ನಾವು ದಂಪತಿಗಳಾದೆವು. ಒಲವೇ ನಮ್ಮ ಬದುಕಾಯಿತು.

ನನ್ನ ಪತಿ ನನ್ನ ಭಾಗಕ್ಕೆ ಬರೀ ಗಂಡಾನಾಗುಳಿಯದೆ, ನನ್ನನ್ನು ತಿದ್ದಿದ ಗುರುವಾದರು; ತಂದೆಯಂತೆ ವಿದ್ಯೆ ಕಲಿಯಲು ಅನುವು ಮಾಡಿಕೊಟ್ಟರು. ಕಷ್ಟ

ಸುಖಗಳಲ್ಲಿ ಸಮಪಾಲು ಹಂಚಿಕೊಂಡರು; ಅವರು ಬೆಳೆದರು; ನನ್ನನ್ನು ಬೆಳೆಸಿದರು.

ಮದುವೆ ಆದಾಗ ನನಗೆ ಅಡುಗೆ ಮಾಡುವುದೇ ಬರುತ್ತಿರಲಿಲ್ಲ. ನಾನು ಮಾಡಿದ್ದೇ ಅಡುಗೆ. ಆದರೆ ಈ ಕುರಿತು ಒಮ್ಮೆಯೂ ಅವರು ನನ್ನನ್ನು ಬೈಯಲಿಲ್ಲ ಹಾಗಾಗಿ ನನಗೇ ಅನ್ನಿಸಿತು... ನಾನು ಇವರಿಗೆ ರುಚಿ ರುಚಿಯಾಗಿ ಅಡುಗೆ ಮಾಡಿ ಬಡಿಸಬೇಕೆಂದು... ಮುಂದೆ ನಾನು ಚೆನ್ನಾಗಿ ಅಡುಗೆ ಮಾಡುವುದನ್ನು ಕಲಿತು ಅವರಿಂದ ಶಬಾಸ್ ಗಿರಿ ತೆಗೆದುಕೊಂಡಾಗ ನನಗಾದ ಆನಂದ ಅಷ್ಟಿಷ್ಟಲ್ಲ.

ಏನಾದರೂ ಸಮಸ್ಯೆ ಬಂದಾಗ ನಾವಿಬ್ಬರೂ ಕುಳಿತು ತೀರ್ಮಾನಿಸುತ್ತೇವೆ. ಈ ತನಕವೂ ನಾವೂ ಪರಸ್ಪರ ಎಂತಹ ಸಣ್ಣ ವಿಷಯವನ್ನು ಮುಚ್ಚಿಟ್ಟುಕೊಂಡಿದ್ದಿಲ್ಲ. ಪ್ರಾಮಾಣಿಕವಾಗಿರಲು ನಾವಿಬ್ಬರೂ ಇಷ್ಟಪಡುತ್ತೇವೆ.

ನಾನು ಸ್ವಲ್ಪ ಮಂಗೋಪಿ; ಅವರಿಗೆ ತಾಳ್ಮೆ ಹೆಚ್ಚು. ಎಷ್ಟೋ ಸಾರಿ ನಾನೇ ಅದೂ ಇದೂ ವಟಗುಟ್ಟಿಕೊಂಡು ಅವರು ಏನೂ ಅನ್ನದೇ ಹೋದಾಗ ಕೊನೆಗೆ ಸುಮ್ಮನಾಗಿ ಬಿಡುತ್ತೇನೆ. ಮಕ್ಕಳನ್ನು ಅವರೆಂದೂ ಗದರಿಸಿದ್ದೇ ಕಾಣೆ. ಅವರು ಮಕ್ಕಳಿಗೆ ಪ್ರೀತಿಯ ಅಪ್ಪನಾಗಿ ಬಿಟ್ಟಿದ್ದಾರೆ.

ನನ್ನವರು ನನಗೆ ಸೀರೆ ಒಡವೆ ತಂದುಕೊಡುವುದಕ್ಕಿಂತ ಪುಸ್ತಕ ತಂದುಕೊಡುವುದೇ ಹೆಚ್ಚು. ಪ್ರವಾಸ ನಮಗಿಬ್ಬರಿಗೂ ಇಷ್ಟ. ನಾನು ಎಂದೂ ಅವರಿಗೆ ಮನೆವಾರ್ತೆ, ವ್ಯವಹಾರವನ್ನು ತಲೆಗೆ ಅಂಟಿಸಿಲ್ಲ; ಅಂಟಿಸಿಕೊಳ್ಳುವ ಜಾಯಮಾನವೂ ಅವರದಲ್ಲ.

ಕುಟುಂಬದ ಎಲ್ಲಾ ಆಗುಹೋಗುಗಳ ಸಮಸ್ತ ಜವಾಬ್ದಾರಿ ನನ್ನದಾಗಿದ್ದು ಅವರು ಪದ್ಮ ಪತ್ರದ ಜಲಬಿಂದುವಿನಂತಿರುವುದನ್ನು ಕಂಡಾಗ ಕೆಲವೊಮ್ಮೆ 'ನಾನೊಬ್ಬಳೇ ಎಲ್ಲಾ ನೋಡಿ ಕೊಳ್ಳಬೇಕಲ್ಲಾ' ಎಂದು ಅಸಮಾಧಾನವಾದರೂ, ಅವರೊಬ್ಬ ಬರಹಗಾರರು, ಭಾವಜೀವಿ ಅವರಿಗೇಕೆ ಕೌಟುಂಬಿಕ ತಾಪತ್ರಯ ತಲೆಗೆ ಹಚ್ಚಬೇಕೆಂದು' ಸುಮ್ಮನಾಗಿ ಬಿಡುತ್ತೇನೆ. ಹಾಗೆಂದು ಅವರೇನೂ ಕೈ ಚೆಲ್ಲಿಕೂರುವುದಿಲ್ಲ ನಾನು ಕಂಗಾಲಾದಗ ಭರವಸೆಯ ಉಸಿರು ತುಂಬಿದ್ದಾರೆ; ಪ್ರೀತಿಯ ಪ್ರಾಣ ದೀಪವಾಗಿದ್ದಾರೆ. ಒಂದು ಹೆಣ್ಣು ಬಯಸುವ 'ಸರಿಯಾದ ಗಂಡ' ನನ್ನವರೆಂಬ ಅಭಿಮಾನ ನನಗಿದೆ. ಅದನ್ನು ನಾನು ನನ್ನ ಪೂರ್ವ ಜನ್ಮದ ಪುಣ್ಯ ಎಂದೇ ಭಾವಿಸಿದ್ದೇನೆ.

ನಾವು ಹಂತ ಹಂತವಾಗಿ 'ಮೇಲೇರಿದವರು. ಆ ಆರೋಹಣದಲ್ಲಿ ಅವರು ನನಗೆ, ನಾನು ಅವರಿಗೆ ಜೊತೆ ಜೊತೆಯಾಗೇ ದೃಢ ಹೆಜ್ಜೆಯಿಟ್ಟಿದ್ದೇವೆ. ಬದುಕು ಎಂದರೆ ಏನೆಂದು ನನಗೆ ತೋರಿದವರೇ ನನ್ನವರು. ಅವರು ನನ್ನೊಳಗೆ ಉಳಿದಿದ್ದಾರೆ. ಪರಸ್ಪರ ಅರಿವು ಸಾಮರಸ್ಯವೇ ದಾಂಪತ್ಯದ ಸಫಲತೆಯ ಗುಟ್ಟು. ಪ್ರೇಮ ವಿವಾಹಗಳು ಸಫಲವಾಗುವುದಿಲ್ಲ" ಎಂಬ ಮಾತನ್ನು ಸುಳ್ಳುಮಾಡುವಂತೆ ನಾವು ಬಾಳುತ್ತಿದ್ದೇವೆ.

ಸಮಾನವಿದ್ಯೆ, ಸಮಾನ ಅಭಿರುಚಿ, ಸಮಾನ ಹುದ್ದೆಯ ಪತಿ, ಉತ್ತಮ ಮಕ್ಕಳು, ನೆಮ್ಮದಿಯ ಸಂಸಾರ-ಎಲ್ಲರೂ ಬಯಸುವುದೇ ಇದನ್ನು. ಈ ಎಲ್ಲವನ್ನೂ ಪಡೆದ ನನಗೆ ಅದಕ್ಕೆ ಕಾರಣರಾದ ನನ್ನವರ ಬಗ್ಗೆ ಪ್ರೀತಿ ಗೌರವ, ಕೃತಜ್ಞತೆ. 'ಎಲ್ಲರಂಥವನಲ್ಲ ನನ ಗಂಡ' ಎಂಬ ಹೆಮ್ಮೆ ಅದಕ್ಕಾಗಿ ದೇವರಲ್ಲಿ 'ಇವರೇ ನನಗೆ ಎಂದೆಂದಿಗೂ ಜೊತೆಯಾಗಿರಲಿ' ಎಂದು ಪ್ರಾರ್ಥನೆ.

# ಸೌಂದರ್ಯಾರಾಧಕ: ಶ್ರೀ ದೊಡ್ಡರಂಗೇಗೌಡ

✍ ಕೆ. ವಿ. ಚಂದ್ರಣ್ಣಗೌಡ

ಹಾಡಿನ ಕವಿಯಾಗಿ, ಹೊಸ ತಲೆಮಾರಿನ ಕವಿಗಳಲ್ಲಿ ಹಿರಿಯ ಗೆಳೆಯರಾದ ಶ್ರೀ ದೊಡ್ಡರಂಗೇಗೌಡ ಅವರು ಮನದಾಳದಲ್ಲಿ ಮೂಡುವ ಭಾವನೆಗಳನ್ನು ಜನರೆದುರಿಗೆ ಬಿಚ್ಚಿಡುವ ಪ್ರತಿಭಾವಂತ. ಶ್ರೀಯುತರು ವಿದ್ಯಾರ್ಥಿ ದಿಸೆಯಲ್ಲಿಯೇ ತಮ್ಮ ಕಣ್ಣುಗಳಲ್ಲಿ ಅನೇಕ ಕನಸುಗಳನ್ನು ತುಂಬಿಕೊಂಡು, ಭಾವಗೀತೆಗಳ ಮುಖಾಂತರ ಜನ-ಮನಕೆ ಹಂಚುತ್ತಿರುವ ಸೌಂದರ್ಯರಾಧಕ-ಎಂಬುದು ಅನೇಕರ ಉವಾಚ. ಸುಮಧುರ - ಆಹ್ಲಾದಕರ - ನೂತನ ಭಾವಗೀತೆಗಳನ್ನು ಬರೆದು ಕನ್ನಡ ನಾಡಿನ ಮನ-ಮನೆಗಳಲ್ಲಿ ಪ್ರಜ್ವಲಿಸುತ್ತಿದ್ದಾರೆ. "ಮಾಟಗಾತಿಯಾದ ಕಾವ್ಯ ಭಾಮಿನಿ ಎಲ್ಲರಿಗೂ ಮಣಿಯುವುದಿಲ್ಲ ಆದರೆ ಕೆಲವರಿಗೆ ಅಪರೂಪಕ್ಕೆ ಮಾತ್ರ ಮಣಿಯುತ್ತಾಳೆ." ಅಂತಹ ಅಪರೂಪವಾದ ವ್ಯಕ್ತಿ ದೊ.ರಂ.ಗೌ ಅವರು.

ಕನ್ನಡ ನಾಡಿನ ಮಣ್ಣಿನ ಮಗನಾಗಿ, ಇಲ್ಲಿಯ ಮೂಲ ಸೊಗಡಿನೊಂದಿಗೆ ಬೆರೆತು, ಅರಿತು, ಉಂಡು, ಉಟ್ಟು, ತೊಟ್ಟು ಅನುಭವದ ಮೂಸೆಯೊಳಗೆ ಬೆಂದು, ಕಾವ್ಯದ ರಸಪಾಕದೊಳಗೆ ಮಿಂದು - ಸಹೃದಯ ರಸಿಕರಿಗೆ ಭಾವಹೂರಣವನ್ನು ಉಣಬಡಿಸುತ್ತಿರುವ ಗೀತ ಗಾರುಡಿಗ. ಎಲ್ಲವನ್ನೂ ತೆರೆದ ಮನಸ್ಸಿನಿಂದ ನೋಡುವ ಭಾವಜೀವಿಯಾದ ಇವರು ತಮಗೆ ಅನಿಸಿದ್ದನ್ನು ನೇರವಾಗಿ ಸರ್ವರ ಹೃದಯ ತಟ್ಟುವಂತೆ ಪ್ರೀತಿಯಿಂದ ನವುರಾಗಿ ಹೇಳುವ ಭಾವುಕ.

ಹೊಸ ಛಂದಸ್ಸು, ಹೊಸ ಭಾವಲಹರಿ, ವಿಚಾರಗಳನ್ನು ಹೊಸ ಹೊಸ ರೀತಿಯಲ್ಲಿ ನವ ನವ ಪದಗಳಲ್ಲಿ ಅಭಿವ್ಯಕ್ತಿಗೊಳಿಸುವ ಹೊಸ ಕವಿತೆಗಳು ಹುಟ್ಟಿದ್ದು ನವೋದಯ ಕಾಲದಲ್ಲಿ. ಶ್ರೀಮಾನ್ ಬಿ. ಎಂ. ಶ್ರೀ ಅವರು ಈ ಹೊಸ ಕವಿತೆಗಳ ಹುಟ್ಟಿಗೆ ಬೀಜಾಂಕುರ ಮಾಡಿದ ಧೀಮಂತ. ಕಾವ್ಯ ಸರ್ವಕಾಲದಲ್ಲಿಯೂ ಪ್ರಯೋಗದಲ್ಲಿಯೇ ಇರುತ್ತದೆ. "the intolerable wrestle with words and meaning" ಪದಗಳು ಮತ್ತು ಅರ್ಥಗಳೊಂದಿಗೆ ಅಸಹನೀಯವಾದ ಹೋರಾಟ" - ಎಂದಿರುವ ಟಿ. ಎಸ್. ಎಲಿಯಟ್ ಅವರ ಮಾತಿನಂತೆ, ಹಿಂದಿನದರ ನೆರಳಿನಲ್ಲಿಯೇ ಮುಂದಿನ ಬಗೆ ಬೆಳೆದಿರುವುದು ಕಾವ್ಯದಲ್ಲಿ ಕಂಡುಬರುವ ವಿಚಾರವಾಗಿದೆ. ಆದ ಕಾರಣ ಕಾವ್ಯ ಎಲ್ಲಿ ಮುಗಿಯುತ್ತದೆ, ಎಲ್ಲಿ ಪ್ರಾರಂಭವಾಗುತ್ತದೆ ಎಂದು ನಿಷ್ಕರ್ಷೆಯಾಗಿ ಹೇಳಲು ಬರುವುದಿಲ್ಲ.

ನವೋದಯ, ನವ್ಯ ಸಾಹಿತ್ಯದ ಸಾರವನ್ನು ಹೀರಿ ಮೀರಿ ಬೆಳೆದಿರುವ ಕವಿ ದೊಡ್ಡರಂಗೇಗೌಡ ಅವರು ಕಾವ್ಯೋದ್ಯೋಗವನ್ನು ನಿಷ್ಠೆಯಿಂದ ನಡೆಸಿಕೊಂಡು

ಬರುತ್ತಿರುವ ಭಾವಜೀವಿ. ಪ್ರಸ್ತುತ ಸಮಕಾಲೀನ ಕನ್ನಡ ಕಾವ್ಯ ಪ್ರಪಂಚಕ್ಕೆ ಹಾಗೂ ಭಾವ ಸಂಪತ್ತಿಗೆ ಉತ್ತಮ ಕೊಡುಗೆ ನೀಡಿರುವ ಚಿರಂತನ ಸೌಂದರ್ಯಾರಾಧಕರಾಗಿದ್ದಾರೆ. ಜೀವನದ ಮೃಗವನ್ನು ಹಿಡಿದು ಪಳಗಿಸುವ ತರಬೇತು ಕವಿ' - ಎಂಬ ಮಾತಿಗೆ ಸೂಕ್ತ ಉದಾಹರಣೆಯಾಗುವ ವ್ಯಕ್ತಿ ದೊಡ್ಡರಂಗೇಗೌಡ.

ಶ್ರೀಯುತರು ಕಂಡ ಗದ್ದೆ, ಹೊಲ, ಪೈರು, ರಾಗಿ, ಭತ್ತ, ಹುಚ್ಚೆಳ್ಳು, ಕಡಲೆ, ತೊಗರಿ, ಅವರೆ, ತೆಂಗು, ಅಡಿಕೆ, ಮಾವು, ಬೇವು, ಹಲಸು ಹೊಂಗೆ, ನಿಂಬೆ, ನದಿ, ಬೆಟ್ಟ, ಗುಡ್ಡ, ಆಕಾಶ, ಸೂರ್ಯ, ಚಂದ್ರ, ನಕ್ಷತ್ರ, ಹೀಗೆ ಒಟ್ಟಾರೆ ಇಡೀ ಪ್ರಕೃತಿಯ ಸಿರಿ-ಸಂಪತ್ತುಗಳನ್ನೆಲ್ಲ ಒಂದಲ್ಲ ಒಂದು ಬಗೆಯಲ್ಲಿ ತಮ್ಮ ಕವಿತೆಗಳಲ್ಲಿ ಅಳವಡಿಸುತ್ತಾ, ಸಹಜವಾದ ತಾಳಲಯಗಳ ವಿನ್ಯಾಸದಲ್ಲಿ ಪಳಗಿಸಿ ಮೋಹಕ ರಸಸ್ವಾದವನ್ನು ಓದುಗರಿಗೆ ನೀಡುತ್ತಾ ಬಂದಿರುವ ಸಂಪನ್ನ.

ಕವಿ ದೊಡ್ಡರಂಗೇಗೌಡ ಅವರು ತಮ್ಮ ಭಾವುಕ ತನದ ಹೃದಯಾಂತರಾಳದ ಭಾವಗಂಗೆಯನ್ನು ಗೇಯತೆಯ ಪದಪುಂಜಗಳೊಂದಿಗೆ ಅರ್ಥಪೂರ್ಣವಾದ ಧ್ವನಿಯೆಡೆಗೆ ಕೊಂಡೊಯ್ದು ಉತ್ತಮವಾದ ಭಾವಗೀತೆಗಳನ್ನು ರಚಿಸಿದ್ದಾರೆ. ಇವರ ಅನೇಕ ಭಾವಗೀತೆಗಳು ಸಹೃದಯರ ಅಂತರಂಗವನ್ನು ಮೀಟಿವೆ. ಹಾಡಿನ ಮೋಡಿ ಮನೆ-ಮನೆಯಲ್ಲಿ ಹರ್ಷ ತಂದಿವೆ; ಸುಖ ನೀಡಿವೆ. ಈ ಸುಖ ನೀಡುವ ಗಾರುಡಿಗನ ಕಾವ್ಯ ಸರಣಿಯಲ್ಲಿ ಅನುಭವದ ಸಂಪತ್ತು ತುಂಬಿ ನಿಂತಿದೆ. ಕನಸುಗಳನ್ನು ಹಾಡಬಲ್ಲ ಜೀವನದ ಪ್ರೀತಿಯಿದೆ. ಗೌಡರು ನಗರದ ಪರಿಸರದಲ್ಲಿ ತಮ್ಮೆಲ್ಲ ಒಡನಾಟ ಇಟ್ಟುಕೊಂಡಿದ್ದರೂ, ಗ್ರಾಮೀಣ ಪರಿಸರದ ಎಲ್ಲಾ ಅನುಭವಗಳನ್ನು ತಮ್ಮ ಹೃದಯಾಂತರಾಳದಲ್ಲಿ ಹಿಡಿದಿಟ್ಟುಕೊಂಡವರಾಗಿದ್ದಾರೆ. ಆದ ಕಾರಣ ಶ್ರೀಯುತರು ಕಾಣುವ ವಾಸ್ತವದ ಕಠೋರ ಸತ್ಯಗಳನ್ನು ಗ್ರಹಿಸುತ್ತಲೇ, ವಿನಾಶಕಾರಕ ಪ್ರವೃತ್ತಿಗಳನ್ನು ವಿರೋಧಿಸುತ್ತಾರೆ. ಬದುಕಿನಲ್ಲಿ ಅಚ್ಚುಕಟ್ಟುತನವನ್ನು ಸಾಧಿಸಿದ್ದಾರೆ. ಬದುಕನ್ನು ಕುರಿತಾದ ನಿಷ್ಠೆ, ಸಾಮಾಜಿಕ ಅನ್ಯಾಯಗಳ ಬಗ್ಗೆ ಸಿಡಿದೇಳುವ ಪ್ರಾಮಾಣಿಕ ಧೈರ್ಯ, ಸಾರ್ಥಕ ಕಾವ್ಯದ ಸೃಷ್ಟಿಗಾಗಿ ಚಡಪಡಿಸುವ ಹಸನಾದ ಮನಸ್ಸು ತಮ್ಮ ಅನಿಸಿಕೆಗಳಿಗೆ ಪೂರ್ಣ ಸಮರ್ಥ ದನಿಯನ್ನು ಕೊಡಲು ನಿತ್ಯ ನಿರಂತರ ಹೋರಾಟದಲ್ಲಿಯೇ ತೊಡಗಿರುವ ಶ್ರೀಯುತರು ತಮ್ಮ ಬದುಕಿನುದ್ದಕ್ಕೂ ಹೋರಾಟ ನಡೆಸುತ್ತಲೇ ಬಂದಿದ್ದಾರೆ.

ನಾಡು ನುಡಿಯ ಬಗ್ಗೆ ಅಪಾರ ಪ್ರೀತಿ ಪ್ರೇಮವಿರಿಸಿಕೊಂಡಿರುವ ಶ್ರೀಯುತರು ನಮ್ಮ ದೇಶದ ಪರಂಪರೆಯ ಬಗ್ಗೆಯೂ ಉತ್ತಮ ಒಲವನ್ನಿರಿಸಿಕೊಂಡಿದ್ದಾರೆ. ಅಧ್ಯಯನ ಮತ್ತು ಅಧ್ಯಾಪನವನ್ನು ಸಮರ್ಥ ರೀತಿಯಲ್ಲಿ ಮುಂದುವರಿಸಿರುವ ಗೌಡರು ಸಹಸ್ರಾರು ವಿದ್ಯಾರ್ಥಿಗಳ ಮನಗೆದ್ದು ಶಿಕ್ಷಣ ಚತುರರಾಗಿದ್ದಾರೆ. ನಾಡಿನ ಹಲವಾರು ಸಂಘ-ಸಂಸ್ಥೆಗಳೊಂದಿಗೆ ನಿಕಟವಾದ ಸಂಪರ್ಕವನ್ನೇರ್ಪಡಿಸಿ ಕೊಂಡಿದ್ದು; ಸಾಹಿತ್ಯ ಮತ್ತು ಸಾಂಸ್ಕೃತಿಕ ವಿಚಾರಗಳಲ್ಲಿ ಅನೇಕ ಸಲಹೆ-ಸೂಚನೆ ಮಾರ್ಗದರ್ಶನಗಳನ್ನು ನೀಡುತ್ತಿದ್ದಾರೆ. ಕನ್ನಡದ ಕಿಂಕರನಾಗಿ ಕರೆದೆಡೆಗೆ ಕನ್ನಡ ಕಾರ್ಯಕ್ರಮಗಳಿಗೆ ಹೋಗುವ ದೊಡ್ಡ ಮನಸ್ಸಿನವರು ದೊಡ್ಡರಂಗೇಗೌಡರು. ಉತ್ತಮ ಚಲನಚಿತ್ರ ಗೀತೆಗಳನ್ನು ರಚಿಸುತ್ತಾ ಶ್ರೀಸಾಮಾನ್ಯನಿಂದ ಹಿಡಿದು ಪ್ರತಿಭಾನ್ವಿತರವರೆಗೆ ಅಭಿಮಾನಿಗಳನ್ನು ಪಡೆದಿರುತ್ತಾರೆ.

ನಿಸ್ಯ ಭಾಷೆಯೊಂದಿಗೆ ಚಕ್ಕಂದವಾಡುತ್ತಾ, ಸಮೃದ್ಧ ಪದಸಂಪತ್ತನ್ನು ತನ್ನದನ್ನಾಗಿ ಮಾಡಿಕೊಂಡಿರುವ ಚೈತ್ರದ ಚಿಗುರು ನಮ್ಮ ದೊಡ್ಡರಂಗೇಗೌಡರು.

ಇವರ ಅನೇಕ ಕವಿತೆಗಳು ಶಬ್ದಮಯ ಪ್ರಪಂಚಕ್ಕೆ ಕರೆದೊಯ್ದು ಭಾವಪರವಶತೆಯ ರಮಣೀಯತೆಯನ್ನು ತಂದು ಕೊಡುತ್ತವೆ. ಸೌಂದರ್ಯಾರಾಧಕರಾದ ಈ ಕವಿ ಸೌಂದರ್ಯ ದರ್ಶನದಿಂದ ಉನ್ನತವಾದ ಕವಿ ಹೃದಯದ ಆನಂದದ ಪರಾಕಾಷ್ಠತೆಯಲ್ಲಿ ಸದಾ ಮಿಂದು, ಹೊಸ ಹೊಸ ಹೊಂಬೆಳೆಗಳನ್ನು ನಾಡು-ನುಡಿಗೆ ಸಮರ್ಪಣೆ ಮಾಡುವ ಕಾವ್ಯ ಕೃಷಿಕರಾಗಿದ್ದಾರೆ.

## ಮಣ್ಣಿನ ಮಗ ; ಅಂತರ ದೃಷ್ಟಿ

✍ ಈಶ್ವರ ದೈತೋಟ

ಮಂಕುತಿಮ್ಮ ಮರಳ ಮುನಿಯನ ಮಾದರಿಯಲ್ಲಿ ಈಗೊಬ್ಬ "ಮಣ್ಣಿನಮಗ" ಜನ್ಮ ತಾಳಿದ್ದಾನೆ. ಹೊಸ ತಲೆಮಾರಿನ ಪ್ರಮುಖ ಕವಿಗಳಲೊಬ್ಬರಾದ ದೊಡ್ಡರಂಗೇಗೌಡರ ಕವನಗಳು ಓದಲು, ಆಗಾಗ ಕೇಳಲು ಹಿತವಾಗಿರುತ್ತದೆ.

ಅವರ ಕವನಗಳಲ್ಲಿ ರಾಕ್-ರೂಪರಸಗಳ ಹೃದಯಂಗಮ ಸಂಗಮ ಮೈದಾಳಿವೆ. ಅವರ ಕವಿತೆಗಳ ಸೊಗಸು ಸೊಬಗಗಳು ಗಮನಾರ್ಹ; ಅವುಗಳ ಸಾಚಾತನ, ತಾಜಾತನಗಳು ಉಲ್ಲೇಖನೀಯ ಎಂದಿದ್ದಾರೆ ಹಿರಿಯ ಸಾಹಿತಿ ಡಾ|| ಸಿದ್ದಯ್ಯ ಪುರಾಣಿಕ.

ಮುಕ್ತಕಗಳಿಗೆ ಪ್ರಾಚೀನ ಪರಂಪರೆ ಇದೆ. ಸಂಸ್ಕೃತ ಸುಭಾಷಿತಗಳು, ಭರ್ತೃಹರಿಯ ಶತಕಗಳು, ಪರ್ಶಿಯನ್, ಉರ್ದು ಭಾಷೆಗಳ ರುಬಾಯಿಗಳು, ತಮಿಳಿನ ತಿರುಕ್ಕುರಳೆ, ತೆಲುಗಿನ ವೇಮನನ ಚೌಪದಿಗಳು, ನಮ್ಮವರೇ ಆದ ಸರ್ವಜ್ಞನ ತ್ರಿಪದಿಗಳು ಇದೇ ಪರಂಪರೆಯಲ್ಲಿ ಬಂದ ಕೊಡುಗೆಗಳು, ನೀತಿಕಾವ್ಯಗಳೆಂದು ಕರೆಯಲಾಗುವ ಇವುಗಳಲ್ಲಿ ಭಾವಾಂಶಗಳಿಗಿಂತ ಚಿಂತನ ಅಂಶವೇ ಹೆಚ್ಚೆಂದು ಹೇಳಬಹುದು.

ದೊಡ್ಡರಂಗೇಗೌಡರ "ಮಣ್ಣಿನ ಮಾತುಗಳು" ಸ್ಯಾಂಪಲ್ ಹೀಗಿದೆ.

ಗೂಗೆಗಳ ಪರಿಷೆಯಲ್ಲಿ ಕಾಗೆಗಳ ಗಾಯನ
ಕೋಣಗಳ ಚೆಂದಕ್ಕೆ ಕತ್ತೆಗಳ ಮೌಲ್ಯಮಾಪನ
ದಡ್ಡರ ಸಾಹಸಕ್ಕೆ ಹೆಡ್ಡರದೇ ಗುಣಗಾನ
ಮೂರ್ಖನಿಗೆ ಮೂರ್ಖಪ್ರಿಯ - ಮಣ್ಣಿನ ಮಗ.

# ಗೆಳೆಯ ದೊರಂಗೌ

✍ ಎಂ. ಎನ್. ವ್ಯಾಸರಾವ್

ಗೆಳೆಯ ದೊಡ್ಡರಂಗೇಗೌಡ ನನ್ನ ಕೆಲವೇ ಆತ್ಮೀಯರಲ್ಲಿ ಒಬ್ಬ. ಯಾವತ್ತೂ ಯಾವ ಕಾಲಕ್ಕೂ ಯಾವ ಸಂದರ್ಭದಲ್ಲೂ ಸ್ನೇಹಿತನಾಗಿಯೇ ಉಳಿದವನು. ನನ್ನ ಅವನ ಸ್ನೇಹ ಬೆಳೆದದ್ದು ಅವನ ಮೊದಲ ಕವನ ಸಂಕಲನ "ಜಗಲಿ ಹತ್ತಿ ಇಳಿದು" ಮುಖಾಂತರ. ಅವನು ಆರ್. ಎಂ. ಎಸ್.ನಲ್ಲಿ ಕೆಲಸಮಾಡುತ್ತಿದ್ದಾಗ, ಎಂ.ಎ. ಓದುತ್ತಿದ್ದಾಗ ಎಷ್ಟೋ ಸಲ ಅವೆನ್ಯೂ ರಸ್ತೆಯ ಒಂದು ಚಿಕ್ಕ ಕ್ರಾಸಿನ ಮಹಡಿ ಮನೆಯ ಒಂದು ಸಣ್ಣ ಕೋಣೆಯಲ್ಲಿ ನಾವು ಸಾಹಿತ್ಯದ ಚರ್ಚೆ ಮಾಡುತ್ತಿದ್ದುದು ಇನ್ನು ನೆನಪಿದೆ.

ಅವನು ಪ್ರೀತಿಸಿ ಮದುವೆಯಾದ ಅವನ ಹೆಂಡತಿ ರಾಜೇಶ್ವರಿ ಕಳಿಸಿ ಕೊಡುತ್ತಿದ್ದ ಅನ್ನವನ್ನು ಒಟ್ಟಿಗೆ ತಿಂದು ನಮ್ಮ ನಮ್ಮ ಕೆಲಸಗಳಿಗೆ ಹೋಗುತ್ತಿದ್ದೆವು. ಆಗ ನಾನು ಇದ್ದದ್ದು ಕೆಂಪೇಗೌಡ ರಸ್ತೆಯ ನಮ್ಮ UCO ಬ್ಯಾಂಕಿನ ಬ್ರಾಂಚಿನಲ್ಲಿ, ಸಾಮಾನ್ಯವಾಗಿ ನಾವು ಸೇರುತ್ತಿದ್ದುದು ಮಧ್ಯಾಹ್ನದ ಬಿಡುವಿನ ಸಮಯದಲ್ಲಿ . ಸಿಕ್ಕುತ್ತಿದ್ದ ಅರ್ಧಗಂಟೆಯ ಅವಧಿಯಲ್ಲೇ ಕವನಗಳ ಬಗ್ಗೆ ಮಾತನಾಡುತ್ತಿದ್ದೆವು, ಅವನು ಬರೆದದ್ದನ್ನು ತೋರಿಸುತ್ತಿದ್ದ.

ಆ ಕಾಲ ನಿಜಕ್ಕೂ ನಮ್ಮ ಸಾಹಿತ್ಯ ಮಿತ್ರರೆಲ್ಲರನ್ನು ಒಟ್ಟು ಹಿಡಿದು ಪರಸ್ಪರ ಪ್ರೀತಿ ವಿಶ್ವಾಸ ಸ್ನೇಹದ ಮೂಲಕ ಕಟ್ಟಿಹಾಕಿದ ದಿನಗಳೆಂದೇ ಹೇಳಬೇಕು. ನಾನು ಸೆಂಟ್ರಲ್‌ಕಾಲೇಜಿನ ವಿದ್ಯಾರ್ಥಿ ಅಲ್ಲದಿದ್ದರೂ ನನಗೂ ಅದು ನನ್ನ ಕಾಲೇಜಿ ಎನ್ನುವಷ್ಟರ ಮಟ್ಟಿಗೆ ನನ್ನನ್ನು ಆಕರ್ಷಿಸಿತ್ತು. ಸೆಂಟ್ರಲ್ ಕಾಲೇಜಿನ ಕನ್ನಡ ಸಂಘ ನಡೆಸುತ್ತಿದ್ದ ಸಮಾರಂಭಗಳಲ್ಲಿ ಭಾಗವಹಿಸುವುದೇ ನಮ್ಮ ಪುಣ್ಯವೆಂದು ತಿಳಿದಿದ್ದ ಕಾಲ. ಅದಕ್ಕೊಂದು ಇತಿಹಾಸವಿದೆ. ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬಂದವರು ನಮ್ಮ ಹಿರಿಯ ಕವಿಗಳಾದ ಡಾ.ಜಿ.ಎಸ್.ಎಸ್, ಅವರು ನಡೆಸುತ್ತಿದ್ದ ಪ್ರತಿಯೊಂದು ಕಾರ್ಯವು ವೈವಿಧ್ಯತೆಯಿಂದ ಕೂಡಿರುತ್ತಿತ್ತು. ಸಾಹಿತ್ಯದ ಚೌಕಟ್ಟಿನಲ್ಲಿ ಗಾಂಬೀರ್ಯತೆಯನ್ನು ಪಡೆದಿರುತ್ತಿದ್ದವು. ಹೀಗಾಗಿ ನಮ್ಮಲ್ಲಿದ್ದ ಸುಪ್ತ ಸಾಹಿತ್ಯಕ ಒಲವನ್ನು ಈ ಸಮಾರಂಭಗಳು ಬೆಳೆಸಿದವು.

ಅಧ್ಯಾಪಕರು ವಿದ್ಯಾರ್ಥಿಗಳು ಹೊರತರುತ್ತಿದ್ದ 'ಸಂಕೀರ್ಣ' ಕಿರು ಹೊತ್ತಗೆಯಲ್ಲಿ ದೊಡ್ಡರಂಗೌಡ. ಬರೆಯುತ್ತಿದ್ದ ಕವನಗಳನ್ನು ನನಗೆ ತೋರಿಸುತ್ತಿದ್ದ. ಎಷ್ಟೋಸಲ ಕೊಂಚ ಖಾರವೆನಿಸಿದರೂ ನನ್ನ ಅಭಿಪ್ರಾಯಕ್ಕೆ ಗೌರವ ಕೊಡುತ್ತಿದ್ದ, ಅದೇ ಗೆಳೆತನ, ವಿಶ್ವಾಸ ಉಳಿಸಿಕೊಂಡು ಬಂದವನು ದೊಡ್ಡರಂಗೇಗೌಡ.

ಹೀಗೆ ನಮ್ಮ ಸ್ನೇಹ ಬೆಳೆಯಿತು. ಪ್ರಾರಂಭದಲ್ಲಿ ಅವನೇ ತನ್ನ ಕವನ ಸಂಕಲನಗಳನ್ನು ಪ್ರಕಟಿಸುತ್ತಿದ್ದ. ಕಷ್ಟದ ವರ್ಷಗಳು ಅವು. ರಾತ್ರಿಯ ವೇಳೆಯಲ್ಲಿ ಕೆಲಸ ಮಾಡಿ, ಹಗಲಿನಲ್ಲಿ ಕಾಲೇಜನ್ನು ಸೇರಿ ಓದಿ ಎರಡನ್ನು ತೂಗಿಸಿಕೊಂಡು,

ತನ್ನ ಹಳ್ಳಿಯ ನೆನಪಿನ ಬತ್ತಿಯನ್ನು ಆಗಾಗೆ ಮೆಲುಕು ಹಾಕುತ್ತ ತನ್ನ ಬವಣೆಯ ಶಿಲುಬೆಯನ್ನು ತಾನೇ ಹೊತ್ತು, ನೋವನ್ನು ನುಂಗುತ್ತಾ ದಡ ತಲುಪಲು ಹೋಗುತ್ತಿದ್ದ.

ಈ ಹಳ್ಳಿಯ ಮುಗ್ಧ ಪ್ರಕಟಿಸಿದ ಪುಸ್ತಕಗಳನ್ನು ಕೊಳ್ಳುವವರು ಎಷ್ಟು ಜನ? ನನ್ನ ಮುಂದೆ ಅವನು ದುಃಖದಿಂದ ವ್ಯಾಸ ಬರೀಬಾರ್ದು ನಾವು ಬರೆದ್ರೂ ಅದನ್ನ ನಾವೇ ಪುಸ್ತಕ ರೂಪದಲ್ಲಿ ಪ್ರಕಟಿಸಬಾರದು ಎಂದು ಭಾರವಾದ ದನಿಯಲ್ಲಿ ಹೇಳುತ್ತಿದ್ದ. ಅವನ ಕೋಣೆಯಲ್ಲಿ ಪ್ರತಿಗಳ ಕಟ್ಟುಗಳು ತುಂಬಿ ಹೋಗಿದ್ದವು. ನಾನು ಕೆಲವನ್ನು ಮಾರಿ ಹಣ ಕಳುಹಿಸಿಕೊಟ್ಟಿದ್ದೆ. ಆಗ ಅವನು ನುಡಿದ ಹೃದಯಾಂತರಾಳದ ಮಾತುಗಳನ್ನು ನಾನೆಂದಿಗೂ ಮರೆಯಲಾರೆ.

ಕವಿತೆಯೇ ನನ್ನ ಬದುಕು. ಬದುಕಿದರೆ ಕವಿತೆ ಬರದೇ ಬದುಕುತ್ತೇವೆ ಎನ್ನುವ ಅವನ ಅಂತರಂಗದ ಛಲ ಇವತ್ತು ದೊಡ್ಡರಂಗೇಗೌಡನನ್ನು ಬೆಳೆಸಿವೆ, ಅವನ ಆಂತರ್ಯದ ಕೂಗಿಗೆ ಒಂದು ರೂಪ ನೀಡಿದೆ. ಕನ್ನಡದ ಪುಸ್ತಕಗಳು ಮಾರಾಟವಾಗುವುದೇ ಕಡಿಮೆ. ಅದರಲ್ಲೂ ಕವನ ಸಂಕಲನಗಳೆಂದರೆ, ಏನಾದರೂ ಸಬೂಬು ಹೇಳಿ ಜಾರಿಕೊಳ್ಳುವವರೇ ಹೆಚ್ಚು, ಇದು ಅವನ ವಿಷಯಕ್ಕೆ ಮಾತ್ರ ಅನ್ವಯಿಸುವುದಿಲ್ಲ, ಕರ್ನಾಟಕದ ಪ್ರತಿಯೊಬ್ಬ ಲೇಖಕನಿಗೂ, ಅದರಲ್ಲೂ ತಾನೇ ಪ್ರಕಟಿಸಿ ಮಾರಾಟ ಮಾಡುವ ಎಲ್ಲರಿಗೂ ಇದು ಅನ್ವಯವಾಗುವಂಥದು.

ಒಮ್ಮೆ ಗೋಪಾಲಕೃಷ್ಣಅಡಿಗರು ಹೇಳಿದ್ದರು: "ಏನಯ್ಯ ಈ ಪುಸ್ತಕಗಳನ್ನು ನಾನೇ ಮನೆಮನೆಗೂ ಮಾರೋಕ್ಕೆ ಆಗತ್ತೇನಯ್ಯ" ಅಡಿಗರಂಥ ಶ್ರೇಷ್ಠ ಕವಿಗಳೇ ಇಂತಹ ಮಾತು ಹೇಳಬೇಕೆಂದರೆ ಉಳಿದವರ ಪಾಡು ಹೇಗಿರಬೇಡ? ಆದರೆ ದೊಡ್ಡರಂಗೇಗೌಡ ತನ್ನ ಪುಸ್ತಕ ಮಾರಾಟವಾಗದಿದ್ದಕ್ಕೆ ಮುದುಡುತ್ತಿರಲಿಲ್ಲ ಧೈರ್ಯಗೆಡುತ್ತಿರಲಿಲ್ಲ. ಅವನ ಸ್ವಭಾವವೇ ಹಾಗೆ. ಮತ್ತೊಂದು ಸಂಕಲನಕ್ಕೆ ತಯಾರಿ ನಡೆಸುತ್ತಿದ್ದ. ಮತ್ತದೇ ಬವಣೆ, ಅದೇ ಕೊರಗು, ಅದೇ ಛಲ!

ದೊಡ್ಡರಂಗೇಗೌಡನ ಮೂಲಕ ನನಗೆ ಅನೇಕರು ಮಿತ್ರರಾದರು. ಅವರಲ್ಲಿ ಮುಖ್ಯವಾಗಿ ಕವಿ ಜಯಸುದರ್ಶನ, ಹಾಗೂ ಇವತ್ತಿನ ನಮ್ಮ ಸಾಹಿತ್ಯದ ಸಂದರ್ಭದಲ್ಲಿ ಶ್ರೇಷ್ಠಬರಹಗಾರ ವಿಮರ್ಶಕ ನರಹಳ್ಳಿ ಬಾಲಸುಬ್ರಹ್ಮಣ್ಯ. ನರಹಳ್ಳಿ ದೊಡ್ಡರಂಗೇಗೌಡನ ಹೆಂಡತಿ ಸಹಪಾಠಿ ಎಂ.ಎ.ತರಗತಿಯ ಅನಂತರ ಆ ದಂಪತಿಗಳ ಮೂಲಕ ನರಹಳ್ಳಿ ನನಗೆ ಬಹಳ ಆತ್ಮೀಯನಾದ.

ದೊಡ್ಡರಂಗೇಗೌಡ ಕೆಲವು ಸಾಹಸಗಳನ್ನು ಮಾಡಿದ್ದಾನೆ ಅವುಗಳಲ್ಲಿ ನನಗೆ ಮುಖ್ಯವೆನಿಸಿದ್ದು ಜಯಸುದರ್ಶನನ ಜೊತೆಯಲ್ಲಿ ತನ್ನ ಕವನಗಳನ್ನು ಸೇರಿಸಿ ಒಂದು ಕವನ ಸಂಕಲನ ಪ್ರಕಟಿಸಿದ್ದು, ಇನ್ನೊಂದು ನವ್ಯ ಕಾವ್ಯ ಪ್ರಬಲವಾಗಿದ್ದ ಕಾಲದಲ್ಲಿ ಕೆಲವು ಕವಿಗಳನ್ನು ಸೇರಿಸಿಕೊಂಡು ಅಕಾವ್ಯ ಎನ್ನುವ ತ್ರೈಮಾಸಿಕವನ್ನು ಪ್ರಕಟಿಸಿದ್ದು ಅದಕ್ಕೆ ಚಂದ್ರಶೇಖರಕಂಬಾರರೂ ಒಬ್ಬ ಸಂಪಾದಕರಾಗಿದ್ದರೆಂದು ನೆನಪು. ಮೂರು ಜನ ಸಂಪಾದಕರಲ್ಲಿ ದೊಡ್ಡರಂಗೇಗೌಡನು ಒಬ್ಬನಾಗಿದ್ದ. ನವ್ಯದಿಂದ ಭಿನ್ನವಾದದ್ದೊಂದನ್ನು ತರಬೇಕೆನ್ನುವುದು ಆ ಪತ್ರಿಕೆಯ ನಿಲುವಾಗಿತ್ತು. ಧಾರವಾಡದಿಂದ ಪಾಟೀಲರ "ಸಂಕ್ರಮಣ" ಬೆಂಗಳೂರಿನಿಂದ ಅಡಿಗರ 'ಸಾಕ್ಷಿ' ಪ್ರಕಟವಾಗುತ್ತಿತ್ತು ಅಕಾವ್ಯ ಈ ಪತ್ರಿಕೆಗಳ ನಡುವೆಯೂ ಗಮನ ಸೆಳೆದಿತ್ತು. ಆದರೆ ಅದು ಮೊದಲನೆಯ ಹಾಗೂ ಎರಡನೆಯ ಸಂಚಿಕೆಗಳು ಹೊರಬಂದು ನಿಂತು ಹೋಯಿತು.

ಎಷ್ಟೋ ಜನ ಚಂದಾದಾರರನ್ನು ಮಾಡಿ 'ಅಕಾವ್ಯ'ವನ್ನು ವಿಶಿಷ್ಟ ರೀತಿಯ ಅಭಿವ್ಯಕ್ತಿ ವೇದಿಕೆಯನ್ನಾಗಿ ಮಾಡಬೇಕೆಂದಿದ್ದ ದೊಡ್ಡರಂಗೇಗೌಡನ ಕನಸು ಪ್ರಾರಂಭದಲ್ಲೇ ಕಮರಿ ಹೋಯಿತು. ಆ ದುಃಖ ಬಹಳ ದಿನಗಳವರೆಗೂ ಅವನಲ್ಲಿ ಉಳಿದೇ ಇತ್ತು.

ಉತ್ಸಾಹ, ಉದ್ವೇಗ, ಆಸೆ, ಕನಸು, ಛಲ ಎಲ್ಲವನ್ನೂ ಮೈಗೂಡಿಸಿ ಕೊಂಡಿದ್ದ ದೊಡ್ಡರಂಗೇಗೌಡ ಈಗ ಒಂದೇ ರೀತಿಯ ನಿರ್ಲಿಪ್ತನಂತೆ ಕಾಣುತ್ತಾನೆ. ಈಗ ಅವನಿಗೆ ಎಷ್ಟೋ ಪ್ರಕಾಶಕರು ಒದಗಿದ್ದಾರೆ. ಕಾವ್ಯ ಕೃಷಿ ಎಡೆಬಿಡದೆ ನಡೆಯುತ್ತಲೇ ಇದೆ. ಅಜಾತ ಶತ್ರುವೆಂದೇ ಕರಸಿಕೊಳ್ಳುವ ದೊರಂಗೌಗೆ ಅಪಾರ ಸ್ನೇಹಿತರು ಹಿತೈಷಿಗಳು ಇದ್ದಾರೆ.

ಕವನ ಸಂಕಲನಗಳ್ನು ಹೊರ ತಂದಿದ್ದಾನೆ. ಹಳ್ಳಿಯ ಚಿತ್ರಗಳನ್ನು ಕೊಟ್ಟಿದ್ದಾನೆ. ಯೋಗಿಯಂತೆ, ದಾರ್ಶನಿಕನಂತೆ, ಚಿಂತಕನಂತೆ, ಹಳ್ಳಿಯ ಮುಗ್ಧನಂತೆ ಅನೇಕ ರೀತಿಯಲ್ಲಿ ಕವನಗಳನ್ನು ಬರೆದು ಓದುಗರಿಗೆ ಅರ್ಪಿಸಿದ್ದಾನೆ

ಭಾವಗೀತೆಗಳನ್ನು, ಗೇಯಗೀತೆಗಳನ್ನು, ಬರೆದು ಆಕರ್ಷಿಸಿದ್ದಾನೆ ಇವನ ಗೀತೆಗಳು ಎಷ್ಟೋ ಕ್ಯಾಸೆಟ್ಟುಗಳಾಗಿವೆ. ಚಲನ ಚಿತ್ರರಂಗದಲ್ಲೂ ವ್ಯಾಪಿಸಿ ತನ್ನದೇ ಬಗೆಯಲ್ಲಿ ನೂರಾರು ಒಳ್ಳೆಯ ಗೀತೆಗಳನ್ನು ಬರೆದು ಜನಪ್ರಿಯನಾಗಿದ್ದಾನೆ.

ಚಿತ್ರರಂಗದಲ್ಲಿ ನಾನು ಅವನು ಒಟ್ಟಾರೆ ಎಷ್ಟೋ ಚಿತ್ರಗಳಿಗೆ ಕೆಲಸಮಾಡಿದ್ದೇವೆ ಆಗಲೂ ನಮ್ಮ ಸಾಹಿತ್ಯದ ಚರ್ಚೆ ಬಿಟ್ಟಿಲ್ಲ. ತನ್ನ ಪದ್ಯ ತೋರಿಸುವುದನ್ನು ಮರೆತಿಲ್ಲ. ಎರಡು ಭಿನ್ನವಾದ ಮಾಧ್ಯಮಗಳಿಗೆ ಸೇತುವೆಯನ್ನು ನಿರ್ಮಿಸಲು ಒದ್ದಾಡುತ್ತಿರುವ ದೊಡ್ಡರಂಗೇಗೌಡ ತನ್ನ ಮಿತಿಯಲ್ಲೂ ಒಳ್ಳೆಯ ಕಾವ್ಯವನ್ನು ನೀಡುವ ಪ್ರಯತ್ನ ಮುಂದುವರಿಸುತ್ತಲೇ ಇದ್ದಾನೆ. ಅಗೋಚರವಾದ ಕಾವ್ಯಕನ್ಯೆಯ ಕಣ್ಣಮುಚ್ಚಾಲೆಯಾಟ ಅವನನ್ನು ಭಾಧಿಸುತ್ತಲೇ ಇದೆ. ಆದರೂ ಅವನ ಛಲ ಅವನನ್ನು ವಿಮುಖಗೊಳಿಸದೆ ಏಕಮುಖಿಯಾಗಿ ಹುರಿದುಂಬಿಸುತ್ತಲೇ ಇದೆ.

ಅವನಿಗೆ ಈಗ ಐವತ್ತು. ಮಗಭರತ್. ಮಗಳು ಚಿನ್ನಿ (ನಾನು ಮುದ್ದಿನಿಂದ ಕರೆಯುವುದು) ಬೆಳೆದು, ವಯಸ್ಸನ್ನು ನೆನಪಿಸುತ್ತಿದ್ದಾರೆ. ಕಾಲದ ಕೋಶಾವಸ್ಥೆಯಲ್ಲಿ ಏನೆಲ್ಲಾ ಅಡಗಿವೆ ಎಂದು ನೋಡ ಬೇಕಾದರೆ ಬಹುಶಃ ವ್ಯಕ್ತಿಗೆ ವಯಸ್ಸಾಗಬೇಕು ಎಂದು ಕಾಣುತ್ತದೆ.

ಸಣ್ಣತನಗಳು, ನಮ್ಮ ನಡುವಿನ ಮತ್ಸರ, ಕೋಪ ಅಹಂಕಾರ, ಪ್ರತಿಷ್ಠೆಗಳನ್ನು ಕಾಲಕ್ರಮೇಣ ಕರಗಿಸಿ, ಕೇವಲ ಪ್ರೀತಿಯನ್ನಷ್ಟೇ ಚಿಮ್ಮುವ ಕಾಲದ ಕಡಲಲ್ಲಿ ದೊಡ್ಡರಂಗೇಗೌಡ ಪ್ರಯತ್ನಿಸುತ್ತಿದ್ದಾನೆ. ಸಹಸ್ರಾರು ಜನ ಅಭಿಮಾನಿಗಳು ಹಾರೈಕೆಯ ಮಹಾ ಪೂರವನ್ನೇ ಹರಸುತ್ತಿದ್ದಾರೆ. ಅವರ ಜೊತೆಯಲ್ಲಿ ನಾನು ನಿಂತು ನನ್ನ ಹೃದಯಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ.

# ಅಪಾರ ಕೀರ್ತಿಯ ದೊರಂಗಾ

✍ ಮ. ಯ. ದೊಡ್ಡಮನಿ
ರಾಜಭಾಷಾ ಆಯೋಗದ ಸದಸ್ಯರು

ನನ್ನ ತರುಣ ಮಿತ್ರರಾದ ಶ್ರೀ ದೊಡ್ಡರಂಗೇಗೌಡರಿಗೆ ಸನ್ಮಾನ ಮಾಡಬೇಕೆಂದು ತೀರ್ಮಾನ ಮಾಡಿರುವುದು ನನಗೆ ತುಂಬ ಸಂತೋಷದ ವಿಷಯ. ಇಪ್ಪತ್ತಾರು ವರ್ಷಗಳ ಹಿಂದೆ ನಾನು ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕನೆಂದು ೧೯೬೯ರಿಂದ ೧೯೭೩ರ ವರೆಗೆ ಕೆಲಸ ಮಾಡುತ್ತಿದ್ದೆನು. ಬಿ.ಎ.(ಆನರ್ಸ್) ತರಗತಿಯಲ್ಲಿ ಓದುತ್ತಿದ್ದ ನನ್ನ ನೆಚ್ಚಿನ ವಿದ್ಯಾರ್ಥಿಯಾದ ರಾಜೇಶ್ವರಿಯವರು ಚರ್ಚೆಯಲ್ಲಿ ದಿಟ್ಟಮನಸ್ಸುಳ್ಳವರು ಹಾಗೆಯೇ ದಿಟ್ಟವಾದ ಹೆಜ್ಜೆಯನ್ನಿಟ್ಟು ನನ್ನ ನೆಚ್ಚಿನ ಶ್ರೀ ದೊಡ್ಡರಂಗೇಗೌಡರನ್ನು ಅಗಲೇ ಪತಿಯನ್ನಾಗಿ ಆರಿಸಿಕೊಂಡರು.

ಶ್ರೀ ದೊಡ್ಡರಂಗೇಗೌಡರು ವೇಳಾಪಟ್ಟಿಯಂತೆ ಒಂದು ಕ್ಲಾಸನ್ನು ತಪ್ಪಿಸದೆ ಪಾಠವನ್ನು ಮಾಡುತ್ತಿದ್ದರು. ವಿದ್ಯಾರ್ಥಿಗಳಿಗೆ ಪಾಠಮಾಡುವುದರಲ್ಲಿಯೇ ಅವರಿಗೆ ಸಂತೋಷವಾಗುತ್ತಿತ್ತು. ಒಮ್ಮೆ ಧರ್ಮ ಸಂಸ್ಥೆಯಿಂದ ಪ್ರಥಮ ದರ್ಜೆ ಕಾಲೇಜಿಗೆ ಪ್ರಾಂಶುಪಾಲರೆಂದು ಕೆಲಸಮಾಡಬೇಕೆಂದು ಕೇಳಿದಾಗ, ಅದಕ್ಕೆ ಅವರು ಕೊನೆಯವರೆಗೂ ಪ್ರಾಧ್ಯಾಪಕರಾಗಿಯೇ ಉಳಿಯುತ್ತೇನೆಯೇ ಹೊರತು, ಪ್ರಾಂಶುಪಾಲರ ಹುದ್ದೆ ಒಲ್ಲೆ ಎಂದು ಬರೆದು ಕೊಟ್ಟರು. ಇಲ್ಲಿ ಅವರ ಪಾಠಮಾಡುವದರಲ್ಲಿಯ ಉತ್ಸುಕತೆ ಮತ್ತು ಪ್ರಾಮಾಣಿಕತನವೇ ಕಂಡು ಬರುತ್ತದೆ.

ವಿದ್ಯಾದಾನವೇ ಶ್ರೇಷ್ಠವೆಂದು ಅವರು ಪಾಠಮಾಡುವ ಕೆಲಸವನ್ನು ಬಸವಣ್ಣನವರು ಹೇಳಿದ ತತ್ವದಂತೆ "ಕಾಯಕವೇ ಕೈಲಾಸ" ಎಂಬಂತೆ ವಿದ್ಯಾರ್ಥಿಗಳ ಮನಸ್ಸಿಗೆ ನಾಟುವಂತೆ ಪಾಠಮಾಡುತ್ತಿದ್ದರು. ಅಂತೆಯೇ ಅವರು ಸಾವಿರಾರು ವಿದ್ಯಾರ್ಥಿಗಳ ವಿಶ್ವಾಸವನ್ನು ಮತ್ತು ಗೌರವವನ್ನು ಗಳಿಸಿದ್ದಾರೆ.

ಶ್ರೀ ದೊಡ್ಡರಂಗೇಗೌಡರಿಗೆ ಈ ಚಿಕ್ಕವಯಸ್ಸಿನಲ್ಲಿಯೇ ಬಿಡುವಿಲ್ಲದ ಕಾರ್ಯಕ್ರಮಗಳು. ಕಾಲೇಜಿನ ಪಾಠಗಳನ್ನು ಒಂದು ದಿನವೂ ತಪ್ಪದೇ ಮಾಡುತ್ತಿದ್ದರು. ಇಲ್ಲಿ ಅವರ ಪ್ರಾಮಾಣಿಕತನವನ್ನು ಕಾಣುತ್ತೇವೆ ಇಂತಹದರಲ್ಲಿಯೂ ಕನ್ನಡ ಸಾಹಿತ್ಯ ಪರಿಷತ್ತಿನಿಂದ ನಡೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು, ದೂರದರ್ಶನದಲ್ಲಿ ಬರುವ ಧಾರವಾಹಿಗಳು ಹಾಡುಗಳಿಗಾಗಿ ಆಕಾರ್ಯಕ್ರಮದ ನಿಯೋಜಕರಿಂದ ದೂರವಾಣಿ ಮೂಲಕ ಕರೆಗಳು ಬರುತ್ತಿದ್ದವು.

ಬೇರೆ ಬೇರೆ ಕಾಲೇಜಿನಲ್ಲಿ ನಡೆಯುವ ಕನ್ನಡ ಪರ ಸಂಘ ಸಂಸ್ಥೆಗಳಲ್ಲಿ ಭಾಗವಹಿಸುವುದಕ್ಕಾಗಿ ಕಾಲೇಜಿನಿಂದ ಆಡಳಿತ ಮಂಡಳಿಯವರು ಬಂದು ಕಾರ್ಯಕ್ರಮಕ್ಕೆ ಬರುವಂತೆ ಕೇಳಿಕೊಂಡು ಕರೆದುಕೊಂಡು ಹೋಗುತ್ತಿದ್ದರು. ಇವೆಲ್ಲ

ಕಾರ್ಯಕ್ರಮಗಳಿಗೆ ಬಿಡುವು ಮಾಡಿಕೊಂಡು ಹೋಗಿಬರುತ್ತಿದ್ದರು. ಅವರು ಮಾಡಿದ ಭಾಷಣಗಳು ಕನ್ನಡ ದಿನ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು.

ಎಸ್.ಎಲ್.ಎನ್ ಧರ್ಮ ಸಂಸ್ಥೆಯ ಜನೋಪಕಾರಿ ಶ್ರೀ ದೊಡ್ಡಣ್ಣ ಶೆಟ್ಟರ ಆರಾಧನಾ ಮಹೋತ್ಸವವು ಒಂದು ವಾರ ನಡೆಯುತ್ತದೆ. ಆ ಎಲ್ಲ ಕಾರ್ಯಕ್ರಮಗಳಲ್ಲಿಯೂ ಶ್ರೀ ದೊಡ್ಡರಂಗೇಗೌಡರು ಮುಖ್ಯ ಅಥಿತಿಯಾಗಿ ಬಂದು ವಿದ್ಯಾರ್ಥಿಗಳಿಗೆ ಹಿತೋಪದೇಶವನ್ನು ಹೇಳುತ್ತಿದ್ದರು. ಆ ಕಾರ್ಯಕ್ರಮದಲ್ಲಿಯೇ ಒಂದು ಪದ್ಯವನ್ನು ರಚಿಸಿ ವಿದ್ಯಾರ್ಥಿಗಳ ಮನ ಮೆಚ್ಚುವಂತೆ ಹಾಡಿಹೇಳುತ್ತಿದ್ದರು ಹೀಗಾಗಿ ಶ್ರೀ ದೊಡ್ಡರಂಗೇಗೌಡರು ವಿದ್ಯಾರ್ಥಿಗಳೆಲ್ಲರ ಪ್ರೀತಿಗೆ ಪಾತ್ರರಾಗಿದ್ದಾರೆ.

ನಾನು ನಂದಿನಿ ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲನಾಗಿದ್ದಾಗ ದಿನಾಂಕ ೧-೧೧-೧ ರಂದು "ಕನ್ನಡ ರಾಜ್ಯೋತ್ಸವ ದಿನದಂದು ಮುಖ್ಯ ಅತಿಥಿಗಳಾಗಿ ಶ್ರೀ ದೊಡ್ಡರಂಗೇಗೌಡರನ್ನು ಕರೆಯಿಸಿದ್ದೆ. ದೊಡ್ಡರಂಗೇಗೌಡರು "ಕನ್ನಡ ಮಹತ್ವದ ಬಗ್ಗೆ" ಬಹಳ ಮಾರ್ಮಿಕವಾಗಿ ಉದಾಹರಣೆಗಳೊಂದಿಗೆ ಒಂದು ಗಂಟೆ ಚೆನ್ನಾಗಿ ಮಾತನಾಡಿದರು "ಕನ್ನಡವೇ ನನ್ನ ಉಸಿರು" ಎಂದು ಹೇಳಿ ಆ ಕಾರ್ಯಕ್ರಮದಲ್ಲಿ ಒಂದು ಪದ್ಯವನ್ನು ರಚಿಸಿ ಹಾಡಿ ತೋರಿಸಿದರು ಮತ್ತು ಎಲ್ಲಾ ವಿಧ್ಯಾರ್ಥಿಗಳ ಮೆಚ್ಚುಗೆಗೆ ಪಾತ್ರರಾದರು.

ಶ್ರೀದೊಡ್ಡರಂಗೇಗೌಡರು ಚಲನ ಚಿತ್ರದಲ್ಲಿ ರಚಿಸಿದ ಒಂದು ಹಾಡು "ಪರಸಂಗದ ಗಂಡೆತಿಮ್ಮ" ಚಿತ್ರದಲ್ಲಿ ಶ್ರೀ ಲೋಕೇಶರವರ ಪಾತ್ರದಲ್ಲಿ ಹಾಡಿದ್ದು

"ತೇರಾನೇರಿ ಅಂಬರದಾಗೆ ನೇಸರು ನಗುತಾನೆ"

ಈ ಜನಪದ ಹಾಡು ಎಲ್ಲರ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಮಾಡಿದೆ. ಆ ಚಿತ್ರ ನೂರು ದಿನ ಓಡಿತು. ಈ ಹಾಡು ಎಲ್ಲರ ಬಾಯಿಯಲ್ಲಿ ಗುಣುಗುಣಾಡಿಸುತ್ತಿದೆ ಈ ಚಿತ್ರದ ಹಾಡಿನಿಂದಲೇ ಶ್ರೀ ದೊಡ್ಡರಂಗೇಗೌಡರ ಹೆಸರು ಎಲ್ಲರಿಗೂ ಪರಿಚಯವಾಯಿತು.ಇವರು ರಚಿಸಿದ ಹಾಡುಗಳು ಎಲ್ಲರ ಮೆಚ್ಚುಗೆಗೆ ಪಾತ್ರವಾಗಲಿಕ್ಕೆ ಹತ್ತಿದವು.

ಚಿತ್ರದಲ್ಲಿಯ ಹಾಡುಗಳು ಸನ್ನಿವೇಶಕ್ಕೆ ಹೊಂದಿಕೆಯಾಗಿ ಜನರ ಮನಸ್ಸನ್ನು ನಾಟುವಂತೆ ಮಾಡಿವೆ. ಈಗಿನ ಸಿನಿಮಾ ಯುಗದಲ್ಲಿ ವಿಧ್ಯಾರ್ಥಿಗಳು ಮತ್ತು ದೊಡ್ಡವರು ಸಿನಿಮಾ ನೋಡುವವರಾಗಿದ್ದರಿಂದ ದೊಡ್ಡರಂಗೇಗೌಡರು ರಚಿಸಿದ ಹಾಡುಗಳನ್ನು ಕೇಳುತ್ತಿರುವುದರಿಂದ ಅವರ ಹೆಸರು ಎಲ್ಲರಿಗೂ ಗೊತ್ತಿದೆ. 'ಅಡುಮುಟ್ಟದ ಸೊಪ್ಪಿಲ್ಲ' "ಶ್ರೀ ದೊಡ್ಡರಂಗೇಗೌಡರ ಹೆಸರು ಕೇಳದವರಾರಿಲ್ಲ" ಎಂದು ಹೇಳಬಹುದು.

# ಸಹೃದಯ ಸ್ನೇಹಜೀವಿ

✍ ಎಸ್. ಮರಳಸಿದ್ದಪ್ಪ
ಅಧ್ಯಾಪಕರು

ಮೂರು ದಶಕಗಳಿಂದ ನನ್ನ ಆತ್ಮೀಯ ಸ್ನೇಹಿತರಾಗಿರುವ ಕವಿ ಶ್ರೀ ದೊಡ್ಡರಂಗೇಗೌಡ ಮತ್ತು ನಾನು ಜನೋಪಕಾರಿ ಶ್ರೀ ದೊಡ್ಡಣ್ಣಶೆಟ್ಟರ ಶ್ರೀ ಲಕ್ಷ್ಮೀ-ನರಸಿಂಹಸ್ವಾಮಿ ಕಾಲೇಜಿನಲ್ಲಿ ಸಹೋದ್ಯೋಗಿಗಳಾಗಿದ್ದು ಕಾಲೇಜಿನ ವೃತ್ತಿಪರ ಕರ್ತವ್ಯಗಳ ಜೊತೆ ಅವರಲ್ಲಿ ನವೋದಯ ಸಾಹಿತ್ಯ ಕೃಷಿಯ ಬಗ್ಗೆ ಕುರಿತು ಉಪಯುಕ್ತ ಸಂವಾದಗಳಲ್ಲಿ ಕಾಲ ಕಳೆದಿದ್ದೇವೆ.

ಕವಿ ದೊರಂಗೌರ ಲೇಖನಿಯಿಂದ ಹೊರಬಂದ ಸಹಸ್ರ ಸಂಖ್ಯೆಗಳ ನವೋದಯ ಕಾವ್ಯಗಳು ಮತ್ತು ಕವನ ಸಂಕಲನಗಳು ಅವರ ಸಾಧನೆಗೆ ಕೈಗನ್ನಡಿಯಂತಿದೆ. ಗ್ರಾಮೀಣ ಪರಿಸರದಲ್ಲಿ ಬೆಳೆದ ಕವಿ ದೊರಂಗೌ ಅವರಿಗೆ ಮಣ್ಣಿನೊಳಗಡೆ ಅಡಗಿರುವ ಜೀವಸತ್ವಗಳಿಗೆ ಯಾವುದೇ ಫಲ ಅಥವಾ ಸುಖವನ್ನು ಬಯಸದ ನಾಡಿನ -ಏಳಿಗೆಗೆ ಸದಾ ಕಂಕಣಬದ್ಧನಾಗಿ ದುಡಿಯುವ ನಿಷ್ಕಾಮ ಕರ್ಮಯೋಗಿ ನೇಗಿಲಯೋಗಿಯಂತೆ ನುಡಿಮುತ್ತುಗಳ ಬೀಜ ಬಿತ್ತಿ ಭಾವ ಸ್ಫೂರ್ತಿಯಿಂದ ರಚಿಸಿದ ಭಾವಗೀತೆಗಳ ಬಣ್ಣದ ಕಾರಾಂಜಿಯಂತೆ ಜನಮನವನ್ನು ರಂಜಿಸುತ್ತಿವೆ.

ಶ್ರೀ ದೊಡ್ಡರಂಗೇಗೌಡರು ಅತ್ಯಂತ ಸರಳ ಸ್ವಭಾವದವರು, ಪ್ರಾಮಾಣಿಕತೆ, ಶ್ರದ್ಧೆ ನಿಷ್ಠೆಗಳು ಕಠಿಣ ಪರಿಶ್ರಮ ಬಾಲ್ಯದಿಂದಲೇ ಅವರೊಂದಿಗೆ ಬೆಳೆದುಕೊಂಡು ಬಂದಿವೆ. ಯಾರೊಡನೆಯೂ, ಯಾವ ಸಂದರ್ಭದಲ್ಲಿಯೂ ವಿಶ್ವಾಸವನ್ನು ಕೆಡಿಸಿಕೊಳ್ಳದೆ ಸ್ನೇಹ ಸಂಜೀವಿನಿಯಾಗಿ ಬೆಳೆಯುತ್ತಿರುವ ಒಬ್ಬ ಅಜಾತ ಶತ್ರು.

ಶ್ರೀ ದೊರಂಗೌಡರವರು ತಮ್ಮ ಅಧ್ಯಾಪನ ವೃತ್ತಿಯಲ್ಲಿ ಸಮಯ ಅಮೂಲ್ಯವಾದುದೆಂದು, ಒಂದು ಕ್ಷಣವೂ ವ್ಯರ್ಥಮಾಡದೆ ಕನ್ನಡ ನಾಡು ಸಾಹಿತ್ಯ ಸಂಸ್ಕೃತಿಗಳಿಗೆ ಅನುಪಮ ಸೇವೆ ಸಲ್ಲಿಸುವುದರ ಜೊತೆಗೆ ನಾಡಿನ ಹಲವಾರು ಸಂಘ ಸಂಸ್ಥೆ ಮತ್ತು ಸಮಾಜಕ್ಕೆ ಸಮರ್ಪಣಭಾವನೆಯಿಂದ ಸಲ್ಲಿಸುತ್ತಿರುವ ಸೇವೆ ಅಮೂಲ್ಯವಾದುದು, ಅನುಪಮವಾದುದು.

ಹಳ್ಳಿಗಾಡಿನ ಮಣ್ಣಿನ ಮಗ ನಗರಜೀವನದ ಸಂಕೀರ್ಣ, ಜನದಟ್ಟಣೆಯ ಪರಿಸರ ಮತ್ತು ಮಹಾನಗರದ ಯಾಂತ್ರಿಕ ಜಂಜಾಟದ ನಡುವೆ ದೀನದಲಿತರಿಗೆ ಹಾಲು ಜೇನಾಗಿ, ಸಹೃದಯ ಅಭಿಮಾನಿಗಳಿಗೆ ಅಕ್ಕರೆಯ ಸಕ್ಕರೆಯಾಗಿ ಎಲ್ಲರಲ್ಲೂ ಒಂದಾಗಿ ಹೆಸರಿಗೆ ತಕ್ಕಂತೆ ದೊಡ್ಡವರಾಗಿ ಬದುಕುತ್ತಾ ತಾನು ಬಾಲ್ಯದಲ್ಲಿ ಕಂಡ ಗ್ರಾಮೀಣ ಮುಗ್ಧ ರೈತರ, ಕಾರ್ಮಿಕರ ಬೆವರಿನ ಬೆಲೆ ಮತ್ತು ಅವರ ಅನುಭವಗಳನ್ನು ಭಾವಗೀತೆಗಳಲ್ಲಿ ರಚಿಸಿ ಗ್ರಾಮೀಣ ಜಾನಪದ ಬದುಕಿನ ನಿಸರ್ಗದ ಸೊಬಗಿನ ಸೌಂದರ್ಯ -ಪ್ರೇರಕ ಶಕ್ತಿಯಾಗಿ, ಸಾಹಿತ್ಯ ರಥಗಂಗೆಯ

ಚಿಂತನ ಚಿಲುಮೆಯಾಗಿ ಸ್ಫೂರ್ತಿ ನೀಡುವಂತಹ ಭಾವಗೀತೆಗಳನ್ನು ಸಂಯೋಜಿಸಿ, ಹಾಡಿ ಜನಮನವನ್ನು ರಂಜಿಸುತ್ತಿರುವ ಗೌಡರ ಸಾಧನೆ ನಿಜವಾಗಿಯೂ ಶ್ಲಾಘನೀಯವಾದುದು. ಹೀಗೆ ಹಲವಾರು ಮಜಲುಗಳಿಂದ ತಮ್ಮ ಪಾಂಡಿತ್ಯ, ಬಹುಮುಖ ಪ್ರತಿಭೆ, ಸಾಹಿತ್ಯ ಚಿಂತನೆ, ಕಾವ್ಯ ರಚನೆ ಮತ್ತು ಅನುಭವಗಳ ಮೂಲಕ ಶೈಕ್ಷಣಿಕ ಕ್ಷೇತ್ರಕ್ಕೆ ಕನ್ನಡ ಸಾಹಿತ್ಯವನ್ನು ಸಾರಸ್ವತ ಲೋಕಕ್ಕೆ ಸೃಜನಶೀಲರಾಗಿ ಸಲ್ಲಿಸುತ್ತಿರುವ ಸೇವೆ ಅನುಪಮವಾದುದು. ಅಂತಹ ಸೃಜನಾತ್ಮಕ ಕ್ರೀಯಾಶೀಲ ಭಾವಜೀವಿ ಶ್ರೀ ದೊಡ್ಡರಂಗೌಡರು ಈಗ ಐವತ್ತರ ಹೊಸ್ತಿಲಲ್ಲಿದ್ದಾರೆ. ಕನ್ನಡ ಸಾರತ್ವಕ ಲೋಕದಲ್ಲಿ ವಿಶಿಷ್ಟವಾದ ಹೆಸರು ಪಡೆದು ಕೀರ್ತಿವಂತರಾಗಿದ್ದಾರೆ. ಅವರ ಅಮೂಲ್ಯಸೇವೆ ಜನಪ್ರಿಯತೆಯನ್ನು ಮನಗಂಡು ಅವರ ಅಭಿಮಾನಿಗಳೆಲ್ಲರೂ ಕೂಡಿ ಅಭಿನಂದನಾ ಕೃತಿ ಅರ್ಪಿಸಿ ಸನ್ಮಾನಿಸುತ್ತಿರುವುದು ಅರ್ಹ ವ್ಯಕ್ತಿಗೆ ಸಮಾಜ ನೀಡುವ ಗೌರವವಾಗಿದೆ. ಕವಿ ಶ್ರೀ ದೊಡ್ಡರಂಗೇಗೌಡರು ನಮ್ಮೆಲ್ಲರ ಮಧ್ಯೆ ನೂರ್ಕಾಲ ಸಾರ್ಥಕ ಜೀವನ ನಡೆಸುವಂತೆ ಭಗವಂತನು ಆಯುರಾರೋಗ್ಯ ಐಶ್ವರ್ಯ ಭಾಗ್ಯವನ್ನು ಕರುಣಿಸಲೆಂದು ಹಾರೈಸುತ್ತೇನೆ.

## ಮಾನವೀಯತೆಯ ಕಾಳಜಿ

✍ ಗುತ್ತಲಗೌಡ

ಕಳೆದ ಮೂರು ದಶಕಗಳಿಂದಲೂ ಕನ್ನಡನಾಡು ನುಡಿ ಸಂಸ್ಕೃತಿಯ ಬಗ್ಗೆ ಅಪಾರ ಕಾಳಜಿ ಇಟ್ಟುಕೊಂಡು ಶ್ರೇಷ್ಠ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ದೊಡ್ಡರಂಗೇಗೌಡರು ಕನ್ನಡ ನಾಡುಕಂಡ ಖ್ಯಾತಕವಿಗಳು. ಪ್ರಸಿದ್ಧ ಚಲನಚಿತ್ರ ಸಾಹಿತಿಗಳು.

ನಮ್ಮ ರೋಗಗ್ರಸ್ಥ ಸಮಾಜದಲ್ಲಿ ಮಾನವೀಯ ಮೌಲ್ಯಗಳನ್ನು ಬಿತ್ತಿ ಆರೋಗ್ಯಕಾರಿ ಸಮಾಜ ನಿರ್ಮಾಣದ ಕಡೆ ದಿಟ್ಟ ಹೆಜ್ಜೆ ಇಟ್ಟವರು ಅವರು.

ಕಾವ್ಯ, ಕಥೆ, ಪ್ರಬಂಧ ಮತ್ತು ವಿಮರ್ಶಾಕ್ಷೇತ್ರಗಳಲ್ಲದೆ ೩೦೦ಕ್ಕೂ ಹೆಚ್ಚು ಚಲನಚಿತ್ರಗೀತೆಗಳ ರಚನೆ, ಟಿ.ವಿ. ಧಾರಾವಾಹಿಗಳಿಗೆ ಸಾಹಿತ್ಯ - ಸಂಭಾಷಣೆ ಹಾಗೂ ಅಸಂಖ್ಯಾತ ಗೀತೆಗಳನ್ನು ನೀಡಿ ಸಾಹಿತ್ಯ ಪ್ರಕಾರಗಳಲ್ಲಿ ಗಣನೀಯ ಪ್ರಮಾಣದ ಸೇವೆ ಸಲ್ಲಿಸಿದವರು ಅವರು.

# ಹಳ್ಳಿ ಸೊಗಡಿನ ಹಾಡುಗಾರ

✍ ಕೆ. ವಿ. ಜಯರಾಮ್
*ಚಲನ ಚಿತ್ರ ನಿರ್ದೇಶಕರು*

ದೊಡ್ಡರಂಗೇಗೌಡರ ಹೆಸರು ಕೇಳಿದಾಗ ತಮಗೆಲ್ಲರಿಗೂ ದೊಡ್ಡಶರೀರದ, ದೊಡ್ಡ ಎತ್ತರದ ಸ್ಥೂಲ ಕಾಯರಂತೆ ಕಲ್ಪನೆಯಾಗಬಹುದು, ಅದೇ ರೀತಿ ಅವರು "ಭಾವಬಂಧನ" ಚಿತ್ರದ ಹಾಡಿನ ಸಂಯೋಜನೆಗೆ ಬಂದಾಗ ನಮ್ಮ ಗುರು ಎಂ. ಆರ್. ವಿಠಲರ ಜೊತೆ ಇವರನ್ನು ಕಂಡಾಗ ಹೆಸರಿಗೆ ಮಾತ್ರ ದೊಡ್ಡರಂಗೇಗೌಡ, ಚಿಕ್ಕ ಶರೀರ, ಎಲ್ಲರಂತೆ ಇವರ ಎತ್ತರ, ಕನ್ನಡಕ, ಕೈಯಲ್ಲಿ ಕನ್ನಡದ ಕವನಸಂಕಲನಗಳು.

ನಾನು "ಪರಸಂಗದ ಗೆಂಡೆತಿಮ್ಮ" ಚಿತ್ರದಲ್ಲಿ ಕೆಲಸಮಾಡಲು ನಿರ್ಧಾರವಾದ ನಂತರ ಈ ಹಳ್ಳಿಯ ಸೊಗಡಿನ ಚಿತ್ರಕ್ಕೆ ಹಾಡು ಬರೆಯಲು ಗ್ರಾಮ್ಯ ಭಾಷೆ ಚೆನ್ನಾಗಿ ಗೊತ್ತಿರುವ ವ್ಯಕ್ತಿ ಬೇಕೆಂದು ಹುಡುಕುತ್ತಿದ್ದಾಗ ನಿರ್ದೇಶಕ ಮಾರುತಿ ಶಿವರಾಂಗೆ ಚಿತ್ರಕತೆ ಬರೆಯುತ್ತಿದ್ದಾಗ ನಾನು ಗೌಡರ ಹೆಸರನ್ನು ಸೂಚಿಸಿದೆ. ಅವರು ಸಂತೋಷದಿಂದ ಒಪ್ಪಿಕೊಂಡು ಅವರನ್ನು ಕರೆಸಿ ಅವರಿಗೆ ವಿಷಯ ತಿಳಿಸಲು ಬಂದರು, ನಿರ್ಮಾಪಕ ನಿರ್ದೇಶಕರಿಗೆ ಪರಿಚಯ ಮಾಡಿ ಓದಲು ಗೆಂಡೆತಿಮ್ಮ ಕಾದಂಬರಿ ಕೊಟ್ಟು ಹಾಡಿನ ಸನ್ನಿವೇಶ ತಿಳಿಸಿದೆ. ಮುಂದಿನವಾರ ಮದ್ರಾಸ್‌ನಲ್ಲಿ ರಾಗ ಸಂಯೋಜನೆ ಹಾಗೆ ಹಾಡುಗಳ ಧ್ವನಿ ಮುದ್ರಣ ಎಂದೆ, ಅವರು ಸಂತೋಷದಿಂದ ಒಪ್ಪಿಕೊಂಡರು.

ಅಲ್ಲಿಯವರೆಗೂ ೩ ಹಾಡನ್ನು ವಿಜಯಭಾಸ್ಕರ್ ನಿರ್ದೇಶನದಲ್ಲಿ ಗೌಡರು ಬರೆದಿದ್ದರು ಈಗ ಅವರು ಮೊದಲ ಬಾರಿಗೆ ರಾಜನ್-ನಾಗೇಂದ್ರ ಅವರ ಬಳಿ ಕೂತು ಬರೆಯಬೇಕಾಗಿತ್ತು. ನಾನು ಅಷ್ಟರಲ್ಲಿ ಕಂಸಾಳೆಯನ್ನು ಅವರಿಗೆ ಕೊಟ್ಟು ಅದನ್ನು ಉಪಯೋಗಿಸಿ ರಾಗ ಸಂಯೋಜನೆ ಮಾಡಲು ಹೇಳಿದೆ. ಸ್ವಾಗತ ಹೋಟೆಲನಲ್ಲಿ ಟ್ಯೂನಿಂಗ್ ರಾಗ ಕೇಳಿ ಗೌಡರು ಪಲ್ಲವಿಯ ನಾಲ್ಕು ಸಾಲು ಬರೆದು ಕೊಟ್ಟರು. ಬರೆಯುತ್ತಾ ಬರೆಯುತ್ತಾ ಗೌಡರು ತಮ್ಮ ೭ನೇ ಪಲ್ಲವಿಯಾಗಿ "ತೇರಾ ಏರಿ ಅಂಬರ ದಾಗೆ ನೇಸರು ನಗುತಾನೆ" ಅಂತ ಬರೆದರು ಅದರ ಅರ್ಥ ಸರಿಯಾಗಿ ಅರಿಯದೆ ಸಂಗೀತ ನಿರ್ದೇಶಕರು ಅಸಮಾನದಲ್ಲಿದ್ದರು. ಮತ್ತೆ ಗೌಡರು ಛಲ ಬಿಡದೆ ಬರೆಯುತ್ತಾ ಹೋದರು. ಸಂಜೆಯಲ್ಲಿ ೨೦ ಪಲ್ಲವಿ ಬರೆದರು. ಇಷ್ಟಾದರೂ ಸಾಹಿತ್ಯ ಸಂಗೀತ ಸರಿಹೊಂದಲಿಲ್ಲ. ರಾಜನ್-ನಾಗೇಂದ್ರ ನಾಳೆ ನೋಡುವ ಎಂದು ಬೆಳಿಗ್ಗೆ ಬರುವುದಾಗಿ ಹೇಳಿದರು.

ಬೆಳಿಗ್ಗೆ ಹಾಡು ಬರೆಯಲು ಶುರುವಾಯಿತು. ಇನ್ನೂ ಮೂರು ಪಲ್ಲವಿಯನ್ನು ಬರೆದರು. ರಾಜನ್-ನಾಗೇಂದ್ರ ಪೂರ್ತಿ ಮನಸ್ಸಿನಿಂದ ಒಪ್ಪಿಕೊಳ್ಳಲಿಲ್ಲ; ನಾನು ರಾಜನ್‌ರವರಿಗೆ ಪ್ರಾರಂಭ ಮಾಡಿ ೭ನೇ ಪಲ್ಲವಿ ರಾಗದಲ್ಲಿ ಹಾಡಿ ಎಂದೆ, ನಾನು

ಚೆನ್ನಾಗಿದೆ ಎಂದು, ಅವರು ಅರ್ಥವಾಗುವುದಿಲ್ಲವೆಂದು, ಹೇಳಲು ಇದು ಪೂರ್ತಿ ಕನ್ನಡವೆಂದು ನೇಸರು, ಅಂಬರ, ತೇರ ಏರಿ ..ಹೀಗೆ ಒಂದೊಂದು ಪದದ ಅರ್ಥವನ್ನ ತಿಳಿಸಿದೆ. ನಾಗೇಂದ್ರಪ್ಪರವರಿಗೆ ಇನ್ನೊಂದು ಬಾರಿ ಹಾಡಲು ಹೇಳಿದಾಗ, ಅವರು ಹಾಡಲು ಎಲ್ಲರಿಗೂ ಸಮಾಧಾನವಾಯ್ತು. ನಿರ್ದೇಶಕರು ಚೆನ್ನಾಗಿದೆ ಎಂದರು ಇದು ಹಳ್ಳಿಯ ಹಾಡು ಈ ವರ್ಷದ ಸೂಪರ್ ಹಿಟ್ ಸಾಂಗ್ ಆಗುವುದು ಸಾರ್ ಎಂದು ಅವರಿಗೆ ಹೇಳಿದೆ.

ಎಸ್. ಪಿ. ಬಿ. ಹಾಡಿದ ನಂತರ ಅದಕ್ಕೆ ಜೀವ ಬಂದು ಅವರು ಮೆಚ್ಚಿಗೊಂಡು ಮೊದಲ ಬಾರಿಗೆ ಈ ರೀತಿಯ ಪದಗಳನ್ನು ಹಾಡಿದೆ ಎಂದು ಸಂತೋಷಪಟ್ಟರು.

ಪ್ರೇಕ್ಷಕರು ಸಿನಿಮಾದಲ್ಲಿ ಹಾಡು ಕೇಳಿ ಹುಚ್ಚೆದ್ದರು. ಆ ಹಾಡು ಎಲ್ಲರ ಬಾಯಲ್ಲಿ ಹಾಡುವಷ್ಟು ಸರಳವಾಗಿತ್ತು. ಚಿತ್ರವನ್ನು ೩ನೇ ವಾರದಲ್ಲಿ ಅಲಂಕಾರ ಸಿನಿಮಾದಲ್ಲಿ 'ಗೆಂಡತಿಮ್ಮ' ನೋಡಲು ಹೋದ ಗೌಡರು, ಅವರ ಪತ್ನಿ ರಾಜೇಶ್ವರಿ ಮತ್ತು ಮಕ್ಕಳು ಸಭಿಕರು "ಯಾವನೋ ಕಾಲೇಜ್ ಲೆಕ್ಚರರಂತೆ ಎಷ್ಟು ಚೆನ್ನಾಗಿ ಬರದವನೋ" ಎಂಬ ಮಾತುಗಳು ಅಂದಾಗ ಗೌಡರಿಗೆ "ಕೋಟಿ ರೂಪಾಯಿ ಕೊಟ್ಟಷ್ಟು ಸಂತೋಷ" ಹಾಗೆ ಕನ್ನಡ ನಾಡಿಗೆ ಪ್ರಸಿದ್ಧ ಕವಿಯಾಗಿ ಸಿನಿಮಾ ಮೂಲಕ ನಾಲ್ಕು ಕೋಟಿ ಜನರ ನಾಡಿಯಲ್ಲಿ ಬೆರೆತು ಹೋದರು.

ನಾನು ಪೂರ್ಣ ಪ್ರಮಾಣದ ನಿರ್ದೇಶಕನಾದೆ. "ಮರಳು ಸರಪಣಿ" ಯಿಂದ ನನ್ನ ಚಿತ್ರದಲ್ಲಿ ಬರೆಯಲು ಶುರುಮಾಡಿ, ನನ್ನ ಇಪ್ಪತ್ತು ಚಿತ್ರಗಳಲ್ಲೂ ಗೌಡರು ಹಾಡುಗಳನ್ನು ಬರೆದಿದ್ದಾರೆ. ಅದರಲ್ಲೂ ಹಳ್ಳಿಯ ಸೊಗಡಿನ ಹಾಡುಗಳಲ್ಲಿ, ಪ್ರಕೃತಿ ಗೀತೆಗಳಲ್ಲಿ ಅವರದು ಎತ್ತಿದ ಕೈ ನನ್ನ 70MM ಚಿತ್ರ "ಶರವೇಗದ ಸರದಾರ" ದಲ್ಲಿ ಕೆಲವು ಪದಗಳ ಹೊಸರೀತಿಯ ಜೋಡಣೆಯ ಪ್ರಯೋಗದ ಅದ್ಭುತ ಯಶಸ್ಸಿನಲ್ಲಿ ಅವರ ಪಾಲು ಇದೆ.

ಯಾವ ಸಂದರ್ಭ ಕೊಟ್ಟರು ಲೀಲಾಜಾಲವಾಗಿ ಬರೆಯಬಲ್ಲ ಅನುಭವ ಕನ್ನಡವಲ್ಲದೆ ಬೇರೆ ಭಾಷೆಯ ಕವನಗಳನ್ನು ಓದಿ ಅರಗಿಸಿಕೊಂಡ ಅವರು ಅನೇಕ ಕಾವ್ಯ ಸಂಕಲನಗಳನ್ನು ಹೊರ ತಂದಿದ್ದಾರೆ. ಮೊನ್ನೆ ಮೊನ್ನೆ ಬರೆದ ಸುದೀರ್ಘ ಕಾವ್ಯ "ಪ್ರೀತಿ ಪ್ರಗಾಥ"ವನ್ನು ಹೊರತಂದಿರುವುದು ಒಂದು ಹೊಸ ಪ್ರಯತ್ನ.

ಇವರ ಕೃಷಿಯಲ್ಲಿ ಇವರ ಪತ್ನಿಯವರ ಪ್ರೀತಿಯ ಪ್ರಭಾವವೂ ಇದೆ. ಅವರ ಪ್ರೋತ್ಸಾಹ ತ್ಯಾಗವು ಇವರ ಸಾಹಿತ್ಯದ ಮೇಲೆ ಪರಿಣಾಮಕಾರಿಯಾಗಿದೆ.

ದೇವರು ಇವರಿಗೆ ಆಯಸ್ಸು ಭಾಗ್ಯವನ್ನು ಕೊಟ್ಟು ಇವರ ಎಲ್ಲ ಹಂತಗಳಲ್ಲೂ ಸಹಾಯಕ್ಕೆ ನಿಂತಿರುವ ಶ್ರೀಮತಿ ರಾಜೇಶ್ವರಿಯವರಿಗೆ, ಪುಟ್ಟಿ-ಭರತರವರಿಗೆ ಸಕಲ ಸಂಪತ್ತನ್ನು ಕೊಡಲಿ ಎಂದು ಹಾರೈಸುತ್ತೇನೆ.

# ಆರ್. ಎಂ. ಎಸ್. ನೌಕರಿಯ ಹಿನ್ನೆಲೆಯಲ್ಲಿ ದೊರಂಗೌ

✍ ಜಿ. ಎಸ್. ನಾಗೇಂದ್ರ

ಶ್ರೀ ದೊಡ್ಡರಂಗೇಗೌಡರು ಈದಿನ ಪ್ರಖ್ಯಾತ ಹಾಗೂ ಜನಪ್ರಿಯ ಕವಿ. ಕನ್ನಡ ಚಲನಚಿತ್ರಗಳಲ್ಲಿ ಅವರ ಹಾಡುಗಳು ಇರುತ್ತವೆ; ಮಾಸಪತ್ರಿಕೆ, ವಾರಪತ್ರಿಕೆ ವಿಶೇಷ ಸಂಚಿಕೆಗಳಲ್ಲಿ ಅವರ ಚುಟುಕಗಳು ಪ್ರಕಟವಾಗುತ್ತವೆ. ಖ್ಯಾತ ಹಿನ್ನೆಲೆಗಾಯಕರು ಅವರ ಕವನಗಳನ್ನು ಕ್ಯಾಸೆಟ್ಟುಗಳಲ್ಲಿ ಹಿಡಿದಿಟ್ಟಿದ್ದಾರೆ; ಅವು ಮನೆಮನೆಗಳಲ್ಲಿ ಗುನುಗುನಿಸುತ್ತಿವೆ, ಆಗಾಗ ಕವನ ಸಂಕಲನ ಪ್ರಕಟನಾ ಸಮಾರಂಭಗಳಾಗುತ್ತವೆ.

ಒಟ್ಟಿನಲ್ಲಿ ದೊಡ್ಡರಂಗೇಗೌಡ ಎಂಬ ಹೆಸರು ಚಾಲ್ತಿಯಲ್ಲಿರುತ್ತದೆ. ಈ ಮನುಷ್ಯ ಇಂದು ಇಷ್ಟು ಖ್ಯಾತನಾಗಿದ್ದರ ಹಿನ್ನೆಲೆ ಏನು? ಶಿಕ್ಷಣ ಪೂರ್ತಿಗೊಳ್ಳುವ ಮುನ್ನವೇ ಆರ್.ಎಂ.ಎಸ್.ನಲ್ಲಿ ನೌಕರಿಯಲ್ಲಿದ್ದರು ಎಂಬ ಕಾರಣಕ್ಕಾಗಿ ನಮ್ಮ ಪರಿಚಯ. ಸಮಾನ ಆಸಕ್ತಿಗಳಿಂದಾಗಿ ಸ್ನೇಹ.

ಹುಟ್ಟಿನಿಂದಾಗಿ ಹಳ್ಳಿ ಎಷ್ಟು ಮುಖ್ಯವೋ ಬೆಳೆಯುವುದಕ್ಕಾಗಿ ಮನೆತನ, ಪರಿಸರಗಳು ಎಷ್ಟು ಅನುಕೂಲಕರವೋ, ಜೀವನೋಪಾಯಕ್ಕಾಗಿ ಸೇರುವ ನೌಕರಿಯೂ ಮನುಷ್ಯನ ವ್ಯಕ್ತಿತ್ವ ರೂಪಿಸುವಲ್ಲಿ ಅಷ್ಟೇಲ್ಲಾ ಪ್ರಾಮುಖ್ಯತೆ ಪಡೆಯುತ್ತದೆ.

ಒಂದೇ ಹಳ್ಳಿಯಲ್ಲಿ ಹುಟ್ಟಿದವರೆಲ್ಲ ಪ್ರಸಿದ್ಧರಾಗುವುದಿಲ್ಲ, ಹಾಗೆಯೇ ಒಂದು ನೌಕರಿಗೆ ಸೇರಿದವರೆಲ್ಲ, ಒಂದೇ ರೀತಿ ಕೊನೆ ಮುಟ್ಟುವುದಿಲ್ಲ. ದೊಡ್ಡರಂಗೇಗೌಡರಿಗೆ ಆರ್.ಎಂ.ಎಸ್. ನೌಕರಿ ಬೇರೊಂದು ಪೆವ್ಹಾರಿ ಮುಟ್ಟುವುದಕ್ಕೆ ಕಾಲು ಹಾದಿಯಾಯಿತು ಅಷ್ಟೇ. ಆ ದಿನಗಳಲ್ಲಿ ಅವರಿಗೆ ನೌಕರಿಯು ಅಗತ್ಯ ಸಾಕಷ್ಟಿದ್ದರೂ ತಮ್ಮ ಪ್ರೀತಿಯ ಶಿಕ್ಷಣವನ್ನು ಮುಂದುವರಿಸುವುದಕ್ಕೆ ಸ್ವಉದ್ಯೋಗವನ್ನು ಹುಡುಕಿಕೊಳ್ಳುವುದಕ್ಕೆ ಒಂದು ಸಾಧನವಾಯಿತಷ್ಟೆ. ಆದರೆ ಅವರ ಸಾಧನೆ ಬೇರೆಕಡೆಯೇ ಇತ್ತು.

"ಅಲ್ಲಿದೆ ನಮ್ಮಮನೆ, ಇಲ್ಲಿ ಬಂದೆ ಸುಮ್ಮನೆ" ಎನ್ನುವ ಹಾಗೆ ಆರ್.ಎಂ.ಎಸ್.ನಲ್ಲಿ ದೊಡ್ಡರಂಗೇಗೌಡರು ಇದ್ದರು. ಅದಕ್ಕೆ ತಕ್ಕಂತೆ ಆ ನೌಕರಿಯೂ ಹಾಗೆಯೇ ಇತ್ತು. ಯಾರಿಗೂ ಗೊತ್ತಾಗದ ಹಾಗೆ ಆರ್.ಎಂ.ಎಸ್.ನಲ್ಲಿ ಅಂಚೆ ರವಾನೆಯಾಗುವ ಹಾಗೆ ತಮ್ಮ ಇರವೇ ಬೇರೆಯವರಿಗೆ ತಿಳಿಯದ ರೀತಿಯಲ್ಲಿ ರಾತ್ರೆಯೆಲ್ಲ ದುಡಿದು, ಬೆಳಗಾಗುವುದರೊಳಗೆ ಸೆಂಟ್ರಲ್ ಕಾಲೇಜಿಗೆ ಹೋಗಿ ತರಗತಿಯಲ್ಲಿ ಕೂಡುತ್ತಿದ್ದರು.

ಅರವತ್ತರ ದಶಕದ ಮಧ್ಯಭಾಗದಿಂದ ೭೦ರ ದಶಕದ ಮೊದಲ ಭಾಗದವರೆಗೂ ಅವರು ಈ ನೌಕರಿಯಲ್ಲಿದ್ದರೆಂದು ನೆನಪು. ಇಸವಿಗಳು ಅಷ್ಟು ಮುಖ್ಯವಲ್ಲ ಬಿಡಿ. ಕಾಲ ಎಲ್ಲಿದ್ದರೂ ಕೈಗೆ ಸಿಕ್ಕದೆ ಸಾಗುತ್ತದೆ. ಹೀಗೆ ನಿರಂತರವಾಗಿ ಸಾಗುವ ಕಾಲದ ಮಧ್ಯೆ ನುಣುಚಿಕೊಂಡು ಒಂದು ಸ್ಥಿರತೆ ಸ್ಥಾಪಿಸುತ್ತಾರಲ್ಲ - ಈ ಕೆಲವು ವ್ಯಕ್ತಿಗಳು ಅದು ಮುಖ್ಯ.

ಅಂಥವರಲ್ಲಿ ದೊಡ್ಡರಂಗೇಗೌಡರು ಒಬ್ಬರು. ನಿರಂತರ ದುಡಿಮೆ, ಅವರ ಮುಖ್ಯಗುಣ. ದಿನವೂ ಒಂದಷ್ಟು ಪದ್ಯ ಬರೆಯದಿದ್ದರೆ ಅವರಿಗೆ ನಿದ್ರೆ ಬರುವುದಿಲ್ಲ ಎಂದು ನನಗೆ ಅನಿಸುತ್ತದೆ. "ನನಗೇ ಎಂದು" ಯಾಕೆ ಒತ್ತುಕೊಟ್ಟಿದ್ದೇನೆ ಎಂದರೆ ನಾವು ಬೇಟಿಯಾಗುವುದೇ ಅಪರೂಪ. ಭೇಟಿಯಾದಾಗಲೂ ಕೇವಲ ಕೆಲವೇ ನಿಮಿಷಗಳ ಸಂಭಾಷಣೆ. ಯಾಕೆಂದರೆ ನಾನು ಯಾವಾಗಲೂ, ಬೇರೆ ರೀತಿ ತೊಡಗಿಸಿಕೊಂಡೇ ಇರುವಂಥವನು. ಅಂದರೆ, ದೂರದ ಸಂಬಂಧ.

ಒಟ್ಟಿನಲ್ಲಿ ದೂರದಿಂದಲಾದರೂ ಅವರ ಹಾದಿಯನ್ನು ಗಮನಿಸುತ್ತಲೇ ಇದ್ದೇನೆ "ಜಗಲಿ ಹತ್ತಿ ಇಳಿದು" ಅವರು ಓದುತ್ತಿದ್ದಾಗಲೇ ಅಂದರೆ ಆರ್.ಎಂ.ಎಸ್.ನಲ್ಲಿ ನೌಕರಿಯಲ್ಲಿದ್ದಾಗಲೇ ಪ್ರಕಟಿಸಿದ್ದು ಎಂದು ಕಾಣುತ್ತೆ. ನವ್ಯ ಕಾವ್ಯದಿಂದ ಆರಂಭವಾದರೆ ಅವರ ಕಾವ್ಯಕೃಷಿ ಹಲವು ಸಂಕಲನಗಳ ನಂತರ ಕಾವ್ಯ ಮನೋಧರ್ಮವನ್ನು ಬದಲಿಸಿಕೊಂಡು ಎಲ್ಲರಿಗೂ 'ಅರ್ಥವಾಗುವ' ಹಾಗೆ ಕಾವ್ಯ ರಚಿಸಿ, ಗೇಯತೆಯನ್ನು ಮೈಗೂಡಿಸಿಕೊಂಡು, ಚಿತ್ರಗೀತೆಗಳನ್ನು ಬರೆದು, ಸುಗಮ ಸಂಗೀತದ ತೆಕ್ಕೆಗೂ ಬಿದ್ದು ಕ್ಯಾಸೆಟ್ಟುಗಳನ್ನು ಬಿಡುಗಡೆಮಾಡಿ ದಿನಕರ ದೇಸಾಯಿಯವರ ಹಾದಿಯಲ್ಲಿ ಸಾವಿರಾರು ಚುಟುಕಗಳನ್ನು ಇನ್ನು ವಿಫುಲವಾಗಿ ರಚಿಸುತ್ತಾ ಇರುವ ದೊಡ್ಡರಂಗೇಗೌಡರನ್ನು ಕಂಡು, ಚಕಿತನಾಗಿದ್ದೇನೆ. ಅವರು ಆರ್.ಎಂ.ಎಸ್.ನಿಂದ ಹೊರಟು ಇಷ್ಟು ಪ್ರಸಿದ್ಧರಾಗಿದ್ದಾರೆ. ಅವರ ಹಾಡುಗಳು ನನಗೆ ಕೆಲವು ತುಂಬಾ ಇಷ್ಟವಾಗಿದೆ. ಅದರಲ್ಲೂ 'ಗೆಂಡೆತಿಮ್ಮ'ದ ಚಿತ್ರಗೀತೆಗಳು ಸುಂದರವಾಗಿದೆ.

ಪ್ರಸಿದ್ಧ ಕವಿಯಾಗಿದ್ದೇನೆಂಬ ಗರ್ವವಿಲ್ಲ; ಬಡತನದ ಮೂಲದಿಂದ ಬಂದವನು ಆರ್.ಎಂ.ಎಸ್.ನಲ್ಲಿದ್ದೆನೆಂಬ ಹಿಂಜರಿಕೆಯಿಲ್ಲ. ತಮ್ಮ ಪೂರ್ವಾಶ್ರಮದ ಎಲ್ಲರನ್ನು ಹಸನ್ಮುಖದಿಂದಲೇ ಈಗಲೂ ಮಾತನಾಡಿಸುತ್ತಾರೆ. ಸಮಾರಂಭಗಳಿಗೆ ಅಹ್ವಾನಿತರಾಗಿ ಬಂದಾಗ ಹಳ್ಳಿಯ ನೆನಪುಗಳನ್ನು ಮೆಲುಕು ಹಾಕುತ್ತಾರೆ.

ಒಟ್ಟಿನಲ್ಲಿ ಈ ಮನುಷ್ಯನಿಗೆ ವಯಸ್ಸಾಗುತ್ತಿರುವುದೇ ಗೊತ್ತಾಗುವುದಿಲ್ಲ, ಎಂದೂ ಮಾಸದ ಸಂಕೋಚಭರಿತ ಮುಗುಳ್ನಗೆ ಕನ್ನಡಕದೊಳಗಿಂದ ಹೊಳೆಯುವ ಕಣ್ಣುಗಳು, ಒಂದು ಕೂದಲೂ ನರೆಯದ ಗುಂಗುರು ತಲೆಗೂದಲು ಅಸೂಯೆಯನ್ನುಂಟು ಮಾಡುತ್ತವೆ. ಮುಗ್ಧತೆಯೇ ಮೈವೆತ್ತಿದ ಹಾಗೆ ಮಾತುಗಳು ಅವರ ಹಿನ್ನೆಲೆಯನ್ನು ಮರೆಸುವ ಹಾಗೆ ಇರುವ ಮುಖದ ಹೊಂಬಣ್ಣ ಸುಖೀಜೀವಿ ಇರಬಹುದೇ ಎಂಬ ಅನುಮಾನ ಬರುವ ಹಾಗೆ ಇರುವ ಸೇಬುಗೆನ್ನೆಗಳು ದಿರಸಿನಲ್ಲೂ ಅದೇ ಸರಳತೆ, ಶುಭ್ರತೆ ಹೋಗಲಿ ಬಿಡಿ. ನಮ್ಮ ದೊಡ್ಡರಂಗೇಗೌಡರು ಪ್ರಸಿದ್ಧ ಕವಿ. ಈಗ ಪ್ರಾಧ್ಯಾಪಕರೂ ಹೌದು. ನಿಷ್ಕಳಂಕ ಮನಸ್ಸಿಗೆ, ಬದುಕಿನ ಉತ್ತಮಗುಣಗಳ ಪ್ರತಿರೂಪನೆಂಬಂತಿರುವ ಈ ಸಜ್ಜನ ಕವಿಗೆ ಅಭಿನಂದನಾ ಕೃತಿ ಹೊರಬರುತ್ತಿರುವುದು. ಸಂತೋಷದ ವಿಷಯ.

# ನಾ ಕಂಡ ತ್ರಿಮೂರ್ತಿ

✍ ಎನ್. ಸುಂದರ್ ರಾಜನ್
ಪ್ರಧಾನ ಸಂಪಾದಕರು. ರಾಗಸಂಗಮ

ತ್ರಿಮೂರ್ತಿಗಳೆಂದ ಕೂಡಲೇ ಸೃಷ್ಟಿ, ಸ್ಥಿತಿ, ಲಯ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವ ಬ್ರಹ್ಮ ವಿಷ್ಣು ಮಹೇಶ್ವರರ ಜ್ಞಾಪಕವೇ ಬರುತ್ತದೆ.

ಆದರೆ ನನಗೆ ಉಪನ್ಯಾಸ, ಸಾಹಿತ್ಯ, ಚಿತ್ರಗೀತೆ ಈ ಮೂರು ಚಟುವಟಿಕೆಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವ ದೊಡ್ಡ ರಂಗೇಗೌಡರು ನೆನಪಿಗೆ ಬರುತ್ತಾರೆ.

## ಉಪನ್ಯಾಸಕರಾಗಿ

ಈ ಹಿಂದೆ ನಾನು ಸರ್ಕಾರಿ ಕೋಟೆ ಪ್ರೌಢಶಾಲೆಯಲ್ಲಿ ೧೯೫೫-೫೬-೫೭ರಲ್ಲಿ ಓದುತ್ತಿದ್ದಾಗ ಅಂದರೆ ನಾಲ್ಕು ದಶಕಗಳ ಹಿಂದೆ ನನಗೆ ಪಾಠ ಬೋಧಿಸುತ್ತಿದ್ದ ಶ್ರೀ ನಟೇಶ ಮುದಲಿಯಾರ್ ಎಂಬ ಉಪಾಧ್ಯಾಯರ ಹೆಸರನ್ನು ನಾನು ಇಂದಿಗೂ ಮರೆತಿಲ್ಲ, ಎಂದಿಗೂ ಮರೆಯಲಾರೆ, ಅವರು ಕಟ್ಟುತ್ತಿದ್ದ ಬಿಳಿ ಕಚ್ಚೆಪಂಚೆ ಧರಿಸುತ್ತಿದ್ದರು. ಉದ್ದನೆಯ ಬಿಳಿ ಜುಬ್ಬ ಸ್ವಲ್ಪವೇ ಬೋಳಾಗಿದ್ದ ಅವರ ಹಣೆ ನಾಲ್ಕು ದಶಕಗಳು ಕಳೆದರೂ ಇಂದಿಗೂ ನನ್ನ ಕಣ್ಣಮುಂದೆ ಕಾಣುತ್ತ. ಅವರ ಗಂಟಲಿನ ಸಿರಿಯು ಇಂದಿಗೂ ನನ್ನ ಕಿವಿಯಲ್ಲಿ ರಿಂಗಣಿಸುತ್ತಿದೆ.

ಇದನ್ನು ಇಲ್ಲಿ ಉಲ್ಲೇಖಿಸುವ ಕಾರಣವೇನೆಂದರೆ ಈ ರೀತಿ ಉಪನ್ಯಾಸಕರು ಬಹಳಷ್ಟು ವಿದ್ಯಾರ್ಥಿಗಳ ಮನದಾಳದಲ್ಲಿ ಶಾಶ್ವತವಾಗಿ ಉಳಿದುಬಿಡುತ್ತಾರೆ. ಇದಕ್ಕೆ ಕಾರಣ ಅವರು ಪಾಠ ಹೇಳುವ ರೀತಿ, ಅದು ವಿದ್ಯಾರ್ಥಿಯ ಮನದಾಳದಲ್ಲಿ ಉಳಿಯುವಂತೆ ವಿಶ್ಲೇಷಿಸುವ ವಿಧಾನ ರೀತಿ ಶ್ರೀ.ಲ.ಸ ಕಲೆ, ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯದ ವಿದ್ಯಾರ್ಥಿಗಳು ನನ್ನ ಹಾಗೆಯೇ ಮೂರ್‍ನಾಲ್ಕು ದಶಕಗಳ ನಂತರವೂ ನೆನಪಿನಲ್ಲಿ ಉಳಿಸಿಕೊಳ್ಳಬಹುದಾದಂತಹ ಉಪನ್ಯಾಸಕರು ದೊಡ್ಡರಂಗೇಗೌಡರು ಇದರಲ್ಲಿ ಯಾರಿಗೂ ಸಂಶಯವೇ ಉದ್ಭವಿಸಲಾರದು. ಅವರ ಪಾಠವನ್ನು ಕೇಳದೆಯೇ ನಾನು ಈ ತೀರ್ಮಾನಕ್ಕೆ ಬಂದಿದ್ದು ಹೇಗೆ ಎಂಬ ಸಂಶಯ ಕೆಲವರಲ್ಲಿ ಹುಟ್ಟಿದರೆ ಅದು ತಪ್ಪಾಗಲಾರದು. ಸಾಕಷ್ಟು ಸಂದರ್ಭಗಳಲ್ಲಿ ಬಹಳಷ್ಟು ವಿಷಯಗಳನ್ನು ದೊಡ್ಡರಂಗೇಗೌಡರ ಬಳಿ ಚರ್ಚಿಸಿರುವ ನಾನು ಈ ಚರ್ಚೆಗಳಲ್ಲಿ ಅವರು ವಿವರಿಸುವ ವಿಧಾನವನ್ನು ಪರಿಗಣಿಸಿದಾಗ ಅವರು ಉಪನ್ಯಾಸವನ್ನು ಈ ಮಟ್ಟಕ್ಕಿಂತ ಹೆಚ್ಚಾಗಿಯೇ ನೀಡಬಲ್ಲರೆಂಬುದನ್ನು ಅರಿತಿದ್ದೇನೆ.

## ಸಾಹಿತಿಯಾಗಿ

ಸುಮಾರು ಒಂದುವರೆ ದಶಕಗಳ ಹಿಂದೆ ನನ್ನ ರಾಗಸಂಗಮ ಪತ್ರಿಕೆಯಲ್ಲಿ ದೊಡ್ಡರಂಗೇಗೌಡರ ಕವನ ಪ್ರಕಟವಾಗಬೇಕೆಂಬ ಆಸೆಯನ್ನು ಹೊತ್ತು, ಚಿತ್ರಗೀತೆಗಳ ರಚನೆಯಲ್ಲಿ ಆಗಲೇ ಸಾಕಷ್ಟು ಜನಪ್ರಿಯರಾಗಿದ್ದ ಅವರು ರಾಗಸಂಗಮದಂತಹ ಸಣ್ಣ ಪತ್ರಿಕೆಗೆ ಬರೆಯುವರೋ ಇಲ್ಲವೋ ಎಂಬ ಸಂಶಯದಿಂದಲೇ ಅವರಿಗೆ ಒಂದು ಪತ್ರ ಬರೆದಿದ್ದೆ . ಆ ಪತ್ರದಲ್ಲಿ ರಾಗಸಂಗಮಕ್ಕೆ ಒಂದು ಕವನವನ್ನು ಬರೆದು ಕಳುಹಿಸುವಂತೆ ಅವರಿಗೆ ತಿಳಿಸಿದ್ದೆ. ನಾನು ಪತ್ರ ಬರೆದು' ಕೆಲವೇ ದಿನಗಳಾಗುವಷ್ಟರಲ್ಲಿ ಅವರು ನನ್ನ ಕೋರಿಕೆಯನ್ನು ನೆರವೇರಿಸಿದ್ದರು. ಅಂದೇ ನನಗೆ ಅರಿವಾಯಿತು, ಅವರಿಗೆ ಕಾವ್ಯ ಕ್ಷೇತ್ರದಲ್ಲಿರುವ ಆಸಕ್ತಿ, ಗೌರವ ಹಾಗೂ ಆಕಾಂಕ್ಷೆ.

ಚಿತ್ರಗೀತೆಗೆ ಲಭಿಸುವ ಗೌರವಧನದಲ್ಲಿ ಶೇಕಡಾ ೫ ರಷ್ಟೂ ಲಭ್ಯವಿಲ್ಲದ ಪತ್ರಿಕೆಯ ಕವನಕ್ಕೆ ಅವರು ತೋರಿದ ಪ್ರೋತ್ಸಾಹ ಪತ್ರಿಕಾ ಮಾಧ್ಯಮ ಎಂದಿಗೂ ಮರೆಯಲಾಗದಂತಹುದು.

ಅಂದಿನಿಂದ ಇಂದಿನವರೆಗೂ ಆ ಗೌರವವನ್ನು ಅವರು ಹಾಗೆಯೇ ಉಳಿಸಿಕೊಂಡು ಬಂದಿರುವುದು ನಿಜಕ್ಕೂ ಪತ್ರಿಕಾ ರಂಗದವರು ಹೆಮ್ಮೆ ಪಡಬೇಕಾದಂತಹ ವಿಷಯ.

ರಾಗಸಂಗಮಕ್ಕೆ ಕವನ ಬರೆಯುತ್ತಿದ್ದ ದೊಡ್ಡರಂಗೇಗೌಡರು 'ಪ್ರೀತಿ ಪ್ರಗಾಥ' ಎಂಬ ಕಾವ್ಯ ಮಾಲಿಕೆಯನ್ನು ಹಾಗೂ 'ಹಳ್ಳಿ ಹುಡುಗಿ ಹಾಡು ಪಾಡು' ಎಂಬ ಕಾವ್ಯ ಕಥಾನಕ ಬರೆಯಲು ಪ್ರೇರಣೆ ನೀಡಿದೆ. ಕಾವ್ಯಕ್ಷೇತ್ರದಲ್ಲಿ ಏನಾದರೂ ಒಂದು ಹೊಸತನವನ್ನು ಮಾಡಬೇಕೆಂದೆನಿಸಿದಾಗ ಕೂಡಲೇ ಚರ್ಚಿಸಲು ನಾನು ಜ್ಞಾಪಿಸಿಕೊಳ್ಳುವುದು ದೊಡ್ಡ ರಂಗೇಗೌಡರನ್ನು ಮಾತ್ರ.

ಅವರ ಮೇಲೆ ನಾನು ಹೇರುವ ಹೊರೆ ಹೆಚ್ಚಾದರೂ, ನನ್ನ ಮೇಲಿನ ಹಾಗೂ ಅದಕ್ಕಿಂತ ಹೆಚ್ಚಾಗಿ ಕವನಗಳ ಮೇಲೆ ತಮಗಿರುವ ಆಸಕ್ತಿಯಿಂದ ಎಲ್ಲಾ ಹೊಸತನಗಳಿಗೂ ಅವರು ರೂಪ ಕೊಟ್ಟಿದ್ದಾರೆ.

## ಗೀತರಚನೆಕಾರರಾಗಿ

ಇದರ ಬಗ್ಗೆ ದೊಡ್ಡರಂಗೇಗೌಡರು ಹೆಚ್ಚಾಗಿ ಚರ್ಚಿಸುವುದಿಲ್ಲ. ಈ ವಿಚಾರದಲ್ಲಿ ಒಂದೇ ಒಂದು ವಿಷಯವನ್ನು ಹೇಳಬಯಸುತ್ತೇನೆ.

ಆಕಾಶವಾಣಿಯಲ್ಲಿ ಚಿತ್ರಗೀತೆಗಳ ಪ್ರಸಾರ ಮಾಡುವುದಕ್ಕೆ ಮುಂಚೆ ಚಿತ್ರದ ಹೆಸರು, ಗೀತರಚನೆಕಾರರ ಹೆಸರು, ಸಂಗೀತ ನೀಡಿದವರ ಹೆಸರನ್ನು ಪ್ರಕಟಿಸುತ್ತಾರೆ ಈ ಪ್ರಕಟನೆಯನ್ನು ಕೇಳದೆಯೇ ನೀವು ಒಂದು ಹಾಡನ್ನು ಕೇಳುತ್ತೀರಿ ಎಂದಿಟ್ಟುಕೊಳ್ಳೋಣ. ಆ ಹಾಡಿನಲ್ಲಿ ಗ್ರಾಮೀಣ ಶೈಲಿ ಇದ್ದು, ಸ್ವಲ್ಪವೂ ಅಶ್ಲೀಲತೆ ಇಲ್ಲದಿದ್ದರೆ ಆ ಹಾಡು ದೊಡ್ಡರಂಗೇಗೌಡರಿಂದ ರಚಿತವಾದದ್ದೆಂದು ಸಂಶಯವಿಲ್ಲದೇ ತೀರ್ಮಾನಿಸಬಹುದು.

# ಕರ್ಮಯೋಗಿ ದೊರಂಗೌ

✍ ಕೆ. ಎಂ. ನಾರಾಯಣ
ಅಧ್ಯಾಪಕರು

ಸರಳ ಸಜ್ಜನಿಕೆಯ ಸಾಕಾರ ಮೂರ್ತಿವೆತ್ತಂತೆ ಶ್ರೀದೊಡ್ಡರಂಗೇಗೌಡರು ನನಗೆ ಸುಮಾರು ೨೫ ವರ್ಷಗಳ ಹಿಂದಿನಿಂದ ಚಿರಪರಿಚಿತರು. ಶ್ರೀಯುತರು ನಮ್ಮ ನಾಡ ಮಂದಾರ ಹೂ; ಕನ್ನಡಾಂಬೆಯ ನಲ್ಮೆಯ ಪುತ್ರರು; ನನಗೆ ಹಿರಿಯಣ್ಣ.

ಇಪ್ಪತ್ತೈದು ವರ್ಷಗಳ ಹಿಂದೆ ಅಂದರೆ ಸುಮಾರು ೧೯೭೧ರಲ್ಲಿ ಬಿ.ಕಾಂ ತರಗತಿಯಲ್ಲಿ ಕನ್ನಡ ಪಾಠ ಮಾಡುತ್ತಿದ್ದ ದೊಡ್ಡರಂಗೇಗೌಡರ ಅಂದಿನ ಸರಳ ವ್ಯಕ್ತಿತ್ವ ಇಂದಿಗೂ ಸ್ವಲ್ಪವೂ ಮಾಸಿಲ್ಲ. ಕನ್ನಡ ಪಾಠಗಳನ್ನು ಸಾಮಾನ್ಯವಾಗಿ ಅಲಕ್ಷಿಸುವ ಬಿ.ಕಾಂ. ವಿದ್ಯಾರ್ಥಿಗಳು ಗೌಡರ ತರಗತಿಯನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಇಂದೂ ತುಂಬಿದ ತರಗತಿಗಳಲ್ಲಿ ಗೌಡರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ವಿದ್ಯಾರ್ಥಿಗಳನ್ನು ಆಕರ್ಷಿಸಿ ವಿದ್ಯಾರ್ಥಿಗಳಿಗೆ ರುಚಿಸುವ ರೀತಿಯಲ್ಲಿ ಪಾಠಮಾಡುವ ಶೈಲಿ ನನಗೆ ತುಂಬಾ ಪ್ರಭಾವ ಬೀರಿದೆ.

ಶ್ರೀದೊಡ್ಡರಂಗೇಗೌಡರು ಎರಡನೇ ಬಿ.ಕಾಂ ತರಗತಿಯಲ್ಲಿ "ವಾಣಿಜ್ಯ ಕನ್ನಡ" (ವ್ಯಾವಹಾರಿಕ ಕನ್ನಡ) ತರಗತಿಯಲ್ಲಿ ದೇಶಿಯ ಭಾಷೆಯನ್ನು ಬಹು ಸಮರ್ಥವಾಗಿ ದುಡಿಸಿಕೊಂಡು ಪ್ರಭಾವಶಾಲಿಯಾದ ಪತ್ರವನ್ನು ಬರೆಯುವ ಮಾರ್ಗ ತಿಳಿಸುತ್ತಿದ್ದ ರೀತಿ ನನಗೆ ಇಂದಿಗೂ ಚಿರನೂತನವಾಗಿದೆ. ಸಹಜ ಸುಂದರ ಸಾಮಾನ್ಯರ ಆಡು ನುಡಿಗಳಲ್ಲಿ ಬರೆದರೆ ಓದುಗನಿಗೂ ಸುಲಭವಾಗಿ ಅರ್ಥವಾಗುವುದೆಂದು ಹಾಗೂ ಇದು ಕೃತಕತೆಗೆ ಬದಲಾಗಿ ಸಹಜ ಸುಂದರವಾಗಿರುವುದು. ತಮ್ಮ ಮಾತಿನಲ್ಲಿ ನಾಡ ಸೊಗಡನ್ನು ಯಥೇಚ್ಛವಾಗಿ ಉಪಯೋಗಿಸುವುದರಿಂದಲೇ ಇರಬಹುದು ಆತ್ಮೀಯತೆಯನ್ನು ಗೌಡರ ಮಾತಿನಲ್ಲಿ ನಾವು ಕಾಣುವುದು.

ಇವರು ತಮ್ಮ ಕೋಗಿಲೆ ಕಂಠದಿಂದ ಕಾವ್ಯಗಳ ಪಾಠಮಾಡುವಾಗಲು ವಿದ್ಯಾರ್ಥಿಗಳಿಗೆ ಸಮಯದ ಪರಿವೆಯೇ ಇರದು. ಸುಶ್ರಾವ್ಯವಾಗಿ ಇವರು ಕಾವ್ಯಧಾರೆಯನ್ನು ವಿದ್ಯಾರ್ಥಿಗಳಿಗೆ ಉಣಬಡಿಸುವ ರೀತಿಯಂತೂ ವರ್ಣನಾತೀತ ಅಂತೆಯೇ ನಾಟಕ ಮತ್ತು ಸಣ್ಣಕತೆಗಳ ಪಾತ್ರಗಳಲ್ಲಿ ಹೊಕ್ಕು ಆ ಪಾತ್ರಗಳು ವಿದ್ಯಾರ್ಥಿಗಳ ಸ್ಮೃತಿ ಪಟಲದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತೆ ಹೇಳುವ ಕಲೆ ದೊಡ್ಡರಂಗೇಗೌಡರ ತರಗತಿಯಲ್ಲಿ ಕುಳಿತೇ ತಿಳಿಯಬೇಕು.

ಮೊದಲು ಸರಳವಾಗಿ ಕಂಡರೂ ದೊಡ್ಡರಂಗೇಗೌಡರ ಬಳಿ ವಿದ್ಯಾರ್ಥಿಗಳು ಸಲಿಗೆ ತೆಗೆದುಕೊಳ್ಳುವುದಿಲ್ಲ, ಕಾರಣ ಶ್ರೀ ಗೌಡರ ಶಿಸ್ತಿನ ವರ್ತನೆ, ಅಶಿಸ್ತನ್ನು ಎಂದೂ ಗೌಡರು ಸಹಿಸುವುದಿಲ್ಲ ಮತ್ತು ನೇರವಾಗಿ ಅಶಿಸ್ತನ್ನು ಅವರು ಖಂಡಿಸುವ ರೀತಿ ಶ್ರೀ ದೊಡ್ಡರಂಗೇಗೌಡರಿಂದ ಕಲಿತಿರುವೆ. ಹೀಗೆಂದ ಮಾತ್ರಕ್ಕೆ ಗೌಡರು ವಿದ್ಯಾರ್ಥಿಗಳೊಡನೆ ದೂರವಿರುತ್ತಾರೆಂದೇನೂ ಅಲ್ಲ. ವಿದ್ಯಾರ್ಥಿಗಳಿಗೆ

ಅಂದಿನಿಂದ ಇಂದಿನವರೆವಿಗೂ ದೊಡ್ಡರಂಗೇಗೌಡರೆಂದರೆ ಭಯವಿದ್ದರೂ ಭಕ್ತಿಹಾಗೂ ವಿಶ್ವಾಸ ತನಗೆ ತಾನಾಗಿಯೇ ಬರುವಂತೆ ಗೌಡರು ವ್ಯವಹರಿಸುವ ರೀತಿ ಮನೋಹರ, ವಿದ್ಯಾರ್ಥಿಗಳಲ್ಲಿ ಅಡಗಿರುವ ಶಕ್ತಿಯನ್ನು ಗುರುತಿಸಿ ತಕ್ಕ ಮಾರ್ಗದರ್ಶನ ಮಾಡುತ್ತಿರುವುದರಿಂದ ಬಹುದೊಡ್ಡ ಸಂಪತ್ತನ್ನು ಅಂದರೆ ದೊಡ್ಡ ವಿದ್ಯಾರ್ಥಿ ವೃಂದದ ಪ್ರೀತಿ ಆದರಗಳಿಗೆ ಪಾತ್ರರಾಗಿದ್ದಾರೆ.

ಅಧ್ಯಾಪಕ ಬಂಧುವಾಗಿ ಶ್ರೀ ದೊಡ್ಡರಂಗೇಗೌಡರು ತಮ್ಮ ಕಾರ್ಯದಕ್ಷತೆ ಶಿಸ್ತು ಎಲ್ಲಕ್ಕಿಂತ ಮುಖ್ಯವಾಗಿ ಹಸನ್ಮುಖರಾಗಿ ಎಲ್ಲ ಕಾಲದಿಂದಲೂ ಸಂಯಮದಿಂದ ಎಂತಹ ಕ್ಲಿಷ್ಟ ಪರಿಸ್ಥಿತಿಯಲ್ಲೂ ಧೃತಿಗೆಡದೆ ವಿವೇಕದಿಂದ ಸಮಸ್ಯೆಗಳನ್ನೆದುರಿಸುವ ರೀತಿಯಂತು ಬಲು ಸೊಗಸು. ಒಬ್ಬ ಮಾದರೀ ಅಧ್ಯಾಪಕರಿಗಿರುವೆಲ್ಲ ಗುಣಗಳನ್ನು ಮೈವೆತ್ತುಕೊಂಡಿರುವುದರಿಂದಲೇ ಅವರೊಡನೆ ಸಹೋದ್ಯೋಗಿಗಳಲ್ಲಿ ಸಹೋದರ ವಾತ್ಸಲ್ಯ ತಮ್ಮ ಸಹೋದ್ಯೋಗಿಗಳ ಚಿಕ್ಕ ಪುಟ್ಟ ಪ್ರತಿಭೆಗಳನ್ನು ಕಂಡರೂ ಹಿರಿಯಣ್ಣನಂತೆ ಆ ಪ್ರತಿಭೆ ಬೆಳಕಿಗೆ ಬರಲು ಸೂಕ್ತ ಮಾರ್ಗದರ್ಶನ ಮಾಡುವುದನ್ನು ಕಂಡಾಗ ಇಂತಹ ಹಿರಿಯಣ್ಣನನ್ನು ಪಡೆದ ನಾವೆಷ್ಟು ಧನ್ಯರು ಎಂದೆನಿಸುವುದು.

೧೯೭೭ರಲ್ಲಿ ಶ್ರೀ.ಲ.ನ ಮಹಾವಿದ್ಯಾಲಯದಲ್ಲಿ ಅಧ್ಯಾಪಕನಾಗಿ ಸೇವೆ ಮಾಡಲು ಅವಕಾಶ ಒದಗಿಬಂದಾಗ ಹಿರಿಹಿರಿ ಹಿಗ್ಗಿದ ಕಾರಣ ನನ್ನನ್ನು ಒಬ್ಬ ವಿದ್ಯಾವಂತನನ್ನಾಗಿಸಿ ಗುರುಗಳ ಸಮೂಹದಲ್ಲಿ ಅವರೊಡನೆ ಕೆಲಸಮಾಡುವ ಸಂದರ್ಭ ಹಾಗೂ ನನ್ನ ಪ್ರೀತಿ ಪಾತ್ರ ಕವಿಗಳು ಹಾಗು ಮೆಚ್ಚಿನ ಅಧ್ಯಾಪಕ ಶ್ರೀ ದೊಡ್ಡರಂಗೇಗೌಡರ ಒಡನಾಟ ಸಿಗುವುದೆಂದು ಶ್ರೀ ದೊಡ್ಡರಂಗೇಗೌಡರು ಬಹಳ ಸಂತಸದಿಂದ ನನ್ನನ್ನು ಬರಮಾಡಿಕೊಂಡರು ಅಧ್ಯಾಪಕ ವೃತ್ತಿ ಪ್ರಾರಂಭಮಾಡಲು ಹಲವು ಬಹು ಅಮೂಲ್ಯವಾದ ಸಲಹೆ ಮತ್ತು ಸೂಚನೆಗಳನ್ನಿತ್ತು ಅಧ್ಯಾಪಕ ಪ್ರಾಮಾಣಿಕವಾಗಿ ತನ್ನ ಕರ್ತವ್ಯ ಹೇಗೆ ನಿರ್ವಹಿಸಬೇಕೆಂದು ಆಗಾಗ್ಗೆ ತಿಳುವಳಿಕೆಯನ್ನು ಯಥೇಚ್ಛವಾಗಿ ಈ ಶಿಷ್ಯನ ಮೇಲೆ ಪ್ರೇಮದಿಂದ ನೀಡಿದ್ದಾರೆ. ನನಗಂತೂ ಶ್ರೀ ದೊಡ್ಡರಂಗೇಗೌಡರು ನಮ್ಮ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರೆಂದು ಹೇಳಿಕೊಳ್ಳಲು ಅದರಲ್ಲೂ ನನಗೆ ಪಾಠ ಹೇಳಿದ ಗುರುಗಳೆಂದು ನೆನೆದರೇ ರೋಮಾಂಚನವಾಗುತ್ತದೆ. ಇಷ್ಟೆಲ್ಲಾ ಆದರೂ ಗೌಡರು ಎಂದೂ ನನ್ನನ್ನು ಕೇವಲ ಒಬ್ಬ ಶಿಷ್ಯನನ್ನು ಮಾತನಾಡಿಸುವ ರೀತಿ ಎಂದು ನನ್ನ ಅರಿವಿಗೆ ಬಂದಿಲ್ಲ. ಬದಲಿಗೆ ಗೌಡರು ನನ್ನನ್ನು ತಮ್ಮ ಸಹೋದರನಂತೆ ಉಪಚರಿಸಿ ನಡೆಸಿಕೊಳ್ಳುವ ರೀತಿಗೆ ನನ್ನನ್ನು ನಾನು ಸಂಪೂರ್ಣವಾಗಿ ಅವರ ನಿರ್ಮಲ ಭಾವಕ್ಕೆ ವಿಶಾಲ ಹೃದಯವಂತಿಕೆ ಮಾರು ಹೋಗಿದ್ದೇನೆ. ಹಾಗೂ ಈ ಪುಣ್ಯ ವಿಶೇಷಕ್ಕಾಗಿ ಎಷ್ಟು ಚಿರಋಣಿಯಾಗಿದ್ದರೂ ಕಡಿಮೆಯೇ.

ಶ್ರೀ.ಲ.ನ. ಮಹಾವಿದ್ಯಾಲಯದ ಚೇತನವೇ ಶ್ರೀ ದೊಡ್ಡರಂಗೇಗೌಡರೆಂದರೆ ಅತಿಶಯೋಕ್ತಿಯೇನಲ್ಲ. ಕವಿ ದೊಡ್ಡರಂಗೇಗೌಡರಿಂದ ಪ್ರೇರಣೆಗೊಂಡು ನಮ್ಮಲ್ಲಿ ಕೆಲವು ಅಧ್ಯಾಪಕ ಮಿತ್ರರು ಕಾವ್ಯ ರಚನೆಯಲ್ಲಿ ತೊಡಗಿರುತ್ತಾರೆ ಹಾಗು ಕೆಲವು ಕಾವ್ಯ ಸಂಕಲನಗಳನ್ನು ಹೊರತಂದಿರುವುದಕ್ಕೆ ಮುಖ್ಯವಾಗಿ ಶ್ರೀ ದೊಡ್ಡರಂಗೇಗೌಡರೇ ಕಾರಣ.

ಶ್ರೀ ದೊಡ್ಡರಂಗೇಗೌಡರು ಒಬ್ಬ ರಸಋಷಿಯೆಂದೇ ನನ್ನ ಭಾವನೆ ಕಾರಣ ತಮ್ಮ ಬಿಡುವಿನ ವೇಳೆಯಲ್ಲಿ ಯಾವುದಾದರು ಕಾವ್ಯ ವ್ಯಾಸಂಗ ಮಾಡುತ್ತಲೋ ವಿಮರ್ಶಿಸುತ್ತಲೋ ಅಥವಾ ಕವನ ರಚಿಸುತ್ತಲೋ ಸದಾ ಕಾರ್ಯಮಗ್ನ

ರಾಗಿರುವುದು ಗೌಡರ ಅನುದಿನದ ಕೈಂಕರ್ಯ ತಮಗೊಪ್ಪಿಸಿದ ಕೆಲಸವನ್ನು ಅಚ್ಚುಕಟ್ಟಾಗಿ ಕರಾರುವಕ್ಕಾಗಿ ನಿರ್ವಹಿಸುವುದನ್ನು ದೊಡ್ಡರಂಗೇಗೌಡರಿಂದಲೇ ಕಲಿಯಬೇಕು.

ಕರ್ನಾಟಕದ ಬಹು ಜನಪ್ರಿಯ ಕವಿಗಳು ಗೀತರಚನಕಾರರಾದರೂ ಗೌಡರ ಸ್ವಭಾವದಲ್ಲಿ ಅಹಂಕಾರದ ಲವಲೇಶವೂ ಪ್ರವೇಶಿಸದಂತೆ ಸೃಜನಾತ್ಮಕ ಭಾವ ಕವಿ ತಮಗೆ ತಾವೇ ದಿಗ್ಬಂಧನವಿಧಿಸಿ ಸಂಭಾಳಿಸುವ ರೀತಿ ಬಲು ಸೊಗಸು.

ಶ್ರೀ ದೊಡ್ಡರಂಗೇಗೌಡರದು ಅಜಾತಶತ್ರು ವ್ಯಕ್ತಿತ್ವ, ಇಲ್ಲಿಯವರೆವಿಗೂ ತಮ್ಮ ವೃತ್ತಿ ಜೀವನದಲ್ಲಿ ಸಂಯಮವನ್ನು ಕಳೆದುಕೊಂಡಿದ್ದನ್ನು ಕಾಣೆ, ಕೇಳೆ; ಇದು ಒಬ್ಬ ವ್ಯಕ್ತಿಯು ಹದವಾಗಿ ಮಾಗಿರುವುದರ ಸಂಕೇತವೆಂದು ಭಾವಿಸುವೆ.

ಕನ್ನಡ ಸಿನಿಮಾ ರಂಗದಲ್ಲಂತೂ ದೊಡ್ಡರಂಗೇಗೌಡರು ತಮ್ಮ ಗೀತೆಗಳಿಂದ ಕನ್ನಡಿಗರ ಹೃದಯ ಸಿಂಹಾಸನಾಧೀಶರಾಗಿ ಮೆರೆಯುತ್ತಿದ್ದಾರೆ. ಹಲವಾರು ಬಾರಿ ಸಿನಿಮಾ ಮಂದಿರದಲ್ಲಿ ಇದು ಗೌಡರದೇ ಹಾಡೆಂದು ಪ್ರೇಕ್ಷಕರು ದೊಡ್ಡರಂಗೇಗೌಡರ ಹಾಡನ್ನು ಗುರುತಿಸುವುದನ್ನು ಕಂಡು ಅಪರಿಮಿತ ಸಂತಸ ಪಟ್ಟಿದ್ದೇನೆ. ಬಹುಶಃ ಉದಯಶಂಕರ್ ನಂತರ ಕನ್ನಡಿಗರ ಸದಭಿರುಚಿಗೆ ತಕ್ಕಂತೆ ಚಿತ್ರ ಸನ್ನಿವೇಶಕ್ಕೆ ತಕ್ಕಂತೆ ನಮ್ಮ ನಾಡ ನುಡಿಯ ಸೊಬಗನ್ನು ತಮ್ಮ ಸೊಗಡಿನ ಗೀತೆಗಳಿಂದ ಪ್ರತ್ಯೇಕವಾಗಿ ತಮ್ಮದೇ ಛಾಪುವಿನಿಂದ ಸಂಗೀತಕ್ಕೆ ಸರಿಹೊಂದುವಂತೆ ಗೀತೆಗಳನ್ನು ರಚಿಸುತ್ತಿರುವ ಗೌಡರು, ರಾಷ್ಟ್ರೀಯ ಮಟ್ಟದಲ್ಲಿ ಶ್ರೇಷ್ಠ ಗೀತೆರಚನಕಾರರ ಪ್ರಶಸ್ತಿಗೆ ಪಾತ್ರರಾಗುವರೆಂದು ಆ ಸುದಿನ ಬೇಗನೇ ಬರಲೆಂದು ಭಗವಂತನಲ್ಲಿ ಕನ್ನಡಿಗರ ಕನಸು ನನಸಾಗಲೆಂದು ಪ್ರಾರ್ಥಿಸುವ ಓರ್ವ ಕನ್ನಡಾಭಿಮಾನಿ.

ಅವರ ಚಿಂತನೆಯ ಕುಲುಮೆಯಿಂದ ಪುಟವಿಟ್ಟ ಅಪರಂಜಿಯಂತೆ ಹಲವು ಕಾವ್ಯಗಳು ಬರಲಿ ಹಾಗೂ ನೂರುಕಾಲ ಬಾಳಿಕೆ ಬರಲಿ ಸಮಾಜದ ಓರೆಕೋರೆಗಳನ್ನು ತಿದ್ದಲಿ. ಒಟ್ಟಿನಲ್ಲಿ ದರ್ಶನಕಾರರಂತೆ ಅವರ ಜೀವನದ ರಾಗವು ಕರ್ನಾಟಕದ ಮೂಲೆ ಮೂಲೆಗಳಲ್ಲಿ ಮಾರ್ದನಿಸುತ್ತಿರಲೆಂದು ನನ್ನ ಅರಿಕೆ.

ಈ ಸಾಧನೆಗೆ ದೊಡ್ಡರಂಗೇಗೌಡರ ಪತ್ನಿ ಶ್ರೀಮತಿ ರಾಜೇಶ್ವರಿಯವರ ಸಹಕಾರ ಹಾಗು ತ್ಯಾಗ ಅಪಾರ. ಗೌಡರ ಬಾಳ ನೌಕೆಯು ಸಂಸಾರ ಸಾಗರದಲ್ಲಿ ಸುರಕ್ಷತೆಯಿಂದ ಸಾಗಿದೆ ಹೀಗೆ ಅವರ ಕುಟುಂಬದ ಎಲ್ಲರಿಗೂ ಮಂಗಳವಾಗಲೆಂದು ಆಶಿಸುವೆ.

ಯೋಗಾಯೋಗವೆಂಬಂತೆ ಅವರಿಂದ ಕಲಿತ ಒಬ್ಬ ವಿದ್ಯಾರ್ಥಿ ಗೌಡರೊಡನೆ ಅಧ್ಯಾಪಕನಾಗಿ ಸೇವೆ ಸಲ್ಲಿಸುತ್ತಿದ್ದೇನೆಂದು ಹೇಳಲು ನಾನಂತು ಬಹು ಜನ್ಮದ ಪುಣ್ಯವಂತನೆಂದು ನನ್ನ ಭಾವನೆ. ಹಾಗೂ ಹೀಗೆ ಗೌಡರಿಂದ ಕಲಿತವರು ಸಮಾಜದ ವಿವಿಧ ರಂಗದಲ್ಲಿ ಉನ್ನತೋನ್ನತ ಸ್ಥಾನವನ್ನು ಅಲಂಕರಿಸಿ ಗೌಡರಿಗೂ, ಕನ್ನಡ ತಾಯಿ ಭುವನೇಶ್ವರಿಗೂ, ಕೀರ್ತಿ ಸಂತಸ ಹಾಗೂ ಹಿರಿಮೆ ತರಲೆಂದು ಈ ಸಂದರ್ಭದಲ್ಲಿ ಗೌಡರನ್ನು ಅಭಿನಂದಿಸುವ ಅವರ ಸಹೋದರ ನಾನು.

# ಕಾವ್ಯ ತಾಪಸಿ

✍ ಹೆಚ್. ಎಲ್. ಶೇಷಚಂದ್ರ
*ಗೀತ-ಸ್ವರ ಸಂಯೋಜಕ*

ಶ್ರೀ ದೊಡ್ಡರಂಗೇಗೌಡರು ಕರುನಾಡಿನ ಜಾನಪದ ಕಾವ್ಯ ಲೋಕದ ಸರ್ವ ಸೃಷ್ಟಿಕರ್ತರು ಎಂದರೆ ಅತಿಶಯೋಕ್ತಿಯಲ್ಲ

ನನಗೆ ಶ್ರೀಯುತ ದೊಡ್ಡರಂಗೇಗೌಡರ ಪರಿಚಯ ಬಹು ಹಳೆಯದು. ಅವರ ಒಂದೊಂದು ಗೀತೆಗಳೂ ಸಹ ವಿವಿಧ ಭಾವ ಕಾರಂಜಿಗಳನ್ನು ಚಿಮ್ಮಿಸಿ ಎಲ್ಲರನ್ನು ಸೆಳೆದು ತನ್ಮಯಗೊಳಿಸುತ್ತದೆ. ಎಲ್ಲರ ಮನದ ಬಾನನ್ನು ತಾಕುತ್ತದೆ.

ಆಕಾಶವಾಣಿಗಾಗಿ ನಾನೇ ರಾಗ ಸಂಯೋಜಿಸಿ ಹಾಡಿದ್ದ ಅವರ

"ಚೆಲುವಿನ ಗೀತೆ ಉಲಿದಿದೆ ಕೋಗಿಲೆ
ನಗೆಯನು ಬೀರಿ ನಲಿದಳು ಶ್ಯಾಮಲೆ"

ಈ ಗೀತೆಯಲ್ಲಿ ಮಾಧುರ್ಯಭಾವನೆಯ ಸೌಂದರ್ಯ ಪದಗಳು ನನ್ನ ಮನವವನನ್ನು ಸೆಳೆಯಿತು"ಕಲಾವತಿ" ರಾಗದಲ್ಲಿ ಸಂಯೋಜಿಸಿದ್ದ ಈ ಗೀತೆಯನ್ನು ಶ್ರೀ ಗೌಡರು ಕೇಳಿ ಸಂತೋಷದಿಂದ "ನೀವು ಕವಿಯಾಗಿ ಕವಿ ಭಾವನೆಗೆ ತಕ್ಕ ರಾಗವನ್ನು ಆಯ್ಕೆ ಮಾಡಿರುತ್ತೀರಿ ಎಂದು ಉದ್ಗರಿಸಿದರು. ಇದೊಂದು ನನಗೆ ಹೆಮ್ಮೆಯ ವಿಚಾರ ನನ್ನ ಮನವನ್ನಾಕರ್ಷಿಸಿದ ಅವರ ಇನ್ನೊಂದು ಗೀತೆ ;

"ಹೊಸ ಹೊಸ ಹಸಿರಿನ ಬಸಿರಲಿ
ನಸು ನಗೆ ಸೊಗಡಿನ ಕಂಪಿದೆ
ತನಿ ತನಿ ಹೂವಿನ ಎಸಳಲಿ
ಗಮ ಗಮ ಪರಿಮಳ ಪೆಂಪಿದೆ"

ಇದನ್ನು ಕೀರ್ವಾಣಿ ರಾಗದಲ್ಲಿ ಸಂಯೋಜಿಸಿ ಅವರಿಗೆ ಕೇಳಿಸಿದ್ದೆ ಅವರಿಗೆ ಈ ಗೀತೆಯೂ ಸಹಾ ಇಷ್ಟವಾಯಿತು. ಈ ಹಾಡಿನಲ್ಲಿ ಯತಿ ಪ್ರಾಸ ಅಂತ್ಯ ಪ್ರಾಸಗಳಿಗೆ ಮಹತ್ವಕೊಟ್ಟಿರುವ ಜೊತೆಗೆ "ಶ್ರಾವ್ಯ"ದಲ್ಲಿ "ದೃಶ್ಯ"ವನ್ನು ಮನದಲ್ಲಿ ಚಿತ್ರಿತವಾಗುವಂತೆ ಮಾಡಿರುತ್ತಾರೆ. ಎಲ್ಲರೂ ಮೆಲುಕುಹಾಕುವಂಥಹ ಈ ಹಾಡು ಒಂದು ಅವರ ಸುಂದರಕಾವ್ಯ. ಈ ರೀತಿಯ ಅವರ ಇತರ ಪ್ರಕೃತಿ ಗೀತೆಗಳಲ್ಲಿಯೂ ಸಹಾ ನಾವಿದನ್ನು ಕಾಣಬಹುದು.

ಶ್ರೀ ಗೌಡರ ಪ್ರೇಮಗೀತೆಗಳಲ್ಲಿ ನಲ್ಲ ನಲ್ಲೆಯರ ಗೆಳೆಯ ಗೆಳತಿಯರ ಹಾಗೂ ಅನೇಕ ತರಹದ ಸ್ವಚ್ಛ ಪ್ರೇಮ ಭಾವಗಳನ್ನು ವ್ಯಕ್ತಪಡಿಸುತ್ತಾ ಬಂದು ಪ್ರಣಯ ಸಿದ್ಧಾಂತಗಳನ್ನೇ ನಮ್ಮ ಮುಂದಿಡುತ್ತಾರೆ. ಆದರಲ್ಲೂ ಅವರ ಗೀತೆಯ ವಿರಹ ಭಾವನೆಯು ಮನವನ್ನೇ ಮರೆಸುತ್ತದೆ.

ಶ್ರೀಯುತರು ನವ್ಯ ಕಾವ್ಯ, ಚುಟುಕು ಹಾಗೂ ಎಲ್ಲ ತರಹದ ರಚನೆಗಳಲ್ಲೂ ಸಿದ್ಧ ಹಸ್ತರು. ಅದರಲ್ಲಂತೂ ಅವರ ಚಟುಕಗಳಲ್ಲಿ ಹಲವೆಡೆ ಈ ವಿಶ್ವದ ಸಿದ್ಧಾಂತಗಳನ್ನು ಸರಳವಾಗಿ ಸೊಗಸಾಗಿ ನಿರೂಪಿಸಿರುತ್ತಾರೆ.

ತೆರೆಕಂಡ "ಪರಸಂಗದ ಗೆಂಡೆ ತಿಮ್ಮ" ಚಿತ್ರದ "ತೇರಾನೇರಿ ಅಂಬರದಾಗೆ ನೇಸರ ನಗುತಾನೆ" ಎಂಬ ಇವರ ಹಾಡಿಗೆ ಶ್ರೀ ಎಸ್. ಪಿ. ಬಾಲಸುಬ್ರಹ್ಮಣ್ಯಂರವರು ತಮ್ಮ ಸುಮಧುರ ಕಂಠಶ್ರೀಯಿಂದ ಈ ಕವಿಯ ಭಾವಕ್ಕೆ ಜೀವವಿತ್ತು ಇಡೀ ದಕ್ಷಿಣ ಭಾರತದ ಜನತೆಯನ್ನೇ ಸೆಳೆದಿರುವುದು ಯಾರೂ ಮರೆತಿರಲಾರರು. ಇದೇ ರೀತಿ ಶ್ರೀ ಗೌಡರ ಅನೇಕ ಜನಪದ ಹಾಡುಗಳು "ಹೋಳಿ ಹುಣ್ಣಿಮೆ" ಯನ್ನೊಳಗೊಂಡು ಇತರ ಹಲವಾರು ಧ್ವನಿಸುರುಳಿಗಳ ಮೂಲಕ ಜನರ ಮನವನ್ನು ಸೂರೆಗೊಂಡಿರುವುದು ಇವರ ಅದ್ಭುತ ಸಾಧನೆಗಳಲ್ಲಿನ್ನೊಂದು ಹೆಜ್ಜೆ.

ಶ್ರೀ ಗೌಡರು ಅನೇಕ ಚಲನ ಚಿತ್ರಗಳಿಗೂ ಸಹ ಹಾಡುಗಳನ್ನು ರಚಿಸಿ ಖ್ಯಾತರಾಗಿ ಕನ್ನಡ ಚಿತ್ರರಂಗದಲ್ಲೂ ಸಹಾ ಒಂದು ಒಳ್ಳೆಯ ಹೆಸರನ್ನು ಗಳಿಸಿರುವ ಕವಿ.

ಕರ್ನಾಟಕದ ಎಲ್ಲ ಆಕಾಶವಾಣಿಗಳಲ್ಲಂತೂ ಯಾರೇ ಗಾಯಕರ ಆಯ್ಕೆಯಲ್ಲಿ ಇವರ ಒಂದು ಗೀತೆ ಇಲ್ಲದಿಲ್ಲ. ಕೀರ್ತಿಶೇಷ ಮೈಸೂರು ಅನಂತಸ್ವಾಮಿ ಹಾಗೂ ಇಲ್ಲಿಯ ಇತರ ಪ್ರಸಿದ್ಧ ಗಾಯಕ ಗಾಯಕಿಯರುಗಳು ಇವರ ಭಾವಗೀತೆಗಳನ್ನು ಹಾಡಿರುತ್ತಾರೆ ಹಾಡುತ್ತಿರುತ್ತಾರೆ. ಇದಕ್ಕೆ ಕಾರಣ ಶ್ರೀ ಗೌಡರ ಭಾವನೆಗಳಲ್ಲಿ ಜೀವ ಸೆಳೆತವಿರುವುದು.

ಶ್ರೀ ಗೌಡರು ಇವಷ್ಟೇ ಅಲ್ಲ. ಹಲವಾರು ಭಕ್ತಿಗೀತೆಗಳನ್ನು ರಚಿಸಿರುತ್ತಾರೆ. ಇವುಗಳ ಧ್ವನಿ ಸುರುಳಿಗಳೂ ಸಹಾ ಬಂದಿರುತ್ತವೆ, ಅವುಗಳಲ್ಲಿ ನನ್ನ ಮನವನ್ನು ಮೀಟಿದ ಒಂದು ಹಾಡು "ಆದಿ ಚುಂಚನ ಗಿರಿ ಕ್ಷೇತ್ರ"ದ ಬಗ್ಗೆ ಇವರು ಬರೆದಿರುವ, ಹೆಸರಾಂತ ಸಂಗೀತ ನಿರ್ದೇಶಕ ಶ್ರೀ ಉಪೇಂದ್ರಕುಮಾರ್ ರವರ ಸಂಗೀತದಲ್ಲಿ ನಮ್ಮ ಭಾರತದ ಹೆಸರಾಂತ ಕಲಾವಿದರುಗಳಾದ ಶ್ರೀ ಎಸ್.ಪಿ, ಬಾಲಸುಬ್ರಹ್ಮಣ್ಯಂ ಮತ್ತು ಶ್ರೀಮತಿ ಎಸ್. ಜಾನಕಿಯವರು ಹಾಡಿರುವ ಮಾಧುರ್ಯ ಚೈತನ್ಯ ಗೀತೆ -

"ಯುಗ ಯುಗಾದಿ ಬೆಳಕಾಗಿ
ಜಗವಾ ಬೆಳಗಿದ ತೇಜ
ಅಣುರೇಣು ತೃಣಕಾಷ್ಟದಲಿ
ನೀನಿರೆ ಸಹಜಾ -ನಿನಗಿದೋ ಸುಪ್ರಭಾತ
ಗಂಗಾಧರನೇ ನಿನಗಿದೋ ಸುಪ್ರಭಾತ"

ಎಂಬ ಗೀತೆಯಲ್ಲಿ ಭಕ್ತಿಯ ಭಾವನೆಯ ಮಂದಾರ ಪುಷ್ಪದಲ್ಲಿ ಪ್ರಕೃತಿಯ ಕಂಪನ್ನು ಬೀರಿಸಿ ಅದರಿಂದ ಸಿದ್ಧಾಂತದ ಕಿರಣವನ್ನು ಮೂಡಿಸಿ ಬಹು ಜಾಣ್ಮೆಯಿಂದ ಮನವನ್ನೇನು ಜಗವನ್ನೇ ಮರೆಸುತ್ತಾ ನಮ್ಮನ್ನು ಸಾಗಿಸುತ್ತಾರೆ ಶ್ರೀ ಗೌಡರು. ಇವರ ಇನ್ನೊಂದು ಭಕ್ತಿಗೀತೆಗಳ ಸಂಕಲನದ ಧ್ವನಿಸುರುಳಿ "ಸಪ್ತ ಮಾತೃಕ್ಕೆ" ಯರ ಬಗ್ಗೆಯ ಗೀತೆಗಳನ್ನು ಶ್ರೀಮತಿ ಕಾವೇರಿಶ್ರೀಧರ್ ರವರ ಸಂಗೀತ ನಿರ್ದೇಶನದಲ್ಲಿ ದಕ್ಷಿಣ ಭಾರತದ ಖ್ಯಾತ ಕಲಾವಿದರುಗಳಾದ ಶ್ರೀಮತಿ ವಾಣೀಜಯರಾಂ ಮತ್ತು ಶ್ರೀ. ಮನು (ನಾಗೂರ್ ಬಾಬು)ರವರುಗಳು ಬಹು

ಮಾಧುರ್ಯವಾಗಿ ಹಾಡಿರುತ್ತಾರೆ-ಇವೆಲ್ಲವೂ ಶ್ರೀ ಗೌಡರ ಸಾಧನೆಯ ಮೈಲಿಗಲ್ಲು. ಹೀಗೆಯೇ ಅವರ ಬಗ್ಗೆ ಹೇಳುತ್ತಾ ಹೋದರೆ ಕೊನೆಯಿಲ್ಲ.

ಎಲ್ಲರಲ್ಲೂ ಅಪಾರ ಸೌಹಾರ್ದತೋರಿ ಪ್ರೀತಿಯ ನುಡಿಯನ್ನಾಡಿ ವಿನಯದಿಂದ ವರ್ತಿಸಿ, ಎಲ್ಲರಿಗೂ ಪ್ರೀತಿ ಪಾತ್ರರಾಗುತ್ತಾರೆ. ಇವು ಅವರ ಆಕರ್ಷಣೆಯನ್ನು ವೃದ್ಧಿಸಿದೆ, ವ್ಯಕ್ತಿತ್ವವನ್ನು ಬೆಳಗಿಸಿದೆ. ಅವರ ಕಲೆಯನ್ನು ಹೆಚ್ಚಿಸಿದೆ. ಶ್ರೀ ಗೌಡರು ಆಕಾರದಲ್ಲಿ ವಾಮನವಾಗಿದ್ದರೂ ವ್ಯಕ್ತಿತ್ವ ತ್ರಿವಿಕ್ರಮ. ಪರಿಶುದ್ಧ ಕಾವ್ಯ ಸೃಷ್ಟಿಯೇ ಇವರ ನೇಮ.

## "ಪ್ರೀತಿಪ್ರಗಾಥ"ದ ಬಗ್ಗೆ

✍ ಕೆ. ಎಂ. ಮುನಿಕೃಷ್ಣಪ್ಪ

ಕಲ್ಲು ಮುಳ್ಳಿನ ಹಾದಿಯಲ್ಲಿ ಮೆಲ್ಲಮೆಲ್ಲನೆ ಹಾದು ಬಂದ ದೊರಂಗೌಡರ ಬದುಕು ಒಂದು ರೀತಿಯ ಛಾಲೆಂಜ್, ಅದನ್ನು ಅವರು ಸಮರ್ಥವಾಗಿ ಎದುರಿಸಿದ್ದಾರೆ, ಎದೆಗಾರಿಕೆ ತೋರಿದ್ದಾರೆ. ಅವರು ಪಟ್ಟಿರುವ ಶ್ರಮಕ್ಕೆ ಅವರ ಕಾಲಮಾನದಲ್ಲಿಯೇ ಪ್ರತಿಫಲವನ್ನು ಕಂಡಿದ್ದಾರೆ. ಅದು ಇನ್ನೂ ವಿಶೇಷವೆಂದೇ ನನ್ನ ಭಾವನೆ.

ಇಂಥ ಸುಖ ಸಿಕ್ಕೀತೆಂದು ನಾ ಎಣಿಸಿದ್ದಿಲ್ಲ
ನನ್ನೆದೆಯ ರಸಭಾವ
ಹೀಗೆ ಮಾರ್ನುಡಿದೀತೆಂದು ಅನಿಸಿದ್ದಿಲ್ಲ!

ಮೇಲಿನ ನನ್ನ ಗ್ರಹಿಕೆ ಹಾಗೂ ದೊರಂಗೌಡರ ಕಲೆಗಾರಿಕೆ ಇವೆರಡನ್ನೂ ಈ ಸಾಲುಗಳ ಅಭಿವ್ಯಕ್ತಿಗೊಳಿಸುತ್ತವೆ.

ದೊರಂಗೌಡರ ಕವಿತೆಗಳನ್ನು ಮೊದಲಿನಿಂದಲೂ ಓದುತ್ತಾ ಬಂದಿರುವ ನನಗೆ ಅವರ "ಪ್ರೀತಿಪ್ರಗಾಥ" ಸಂಕಲನ ಒಂದು ಸ್ಪಷ್ಟವಾದ ಬೆಳವಣಿಗೆಗೆ ಎನ್ನಿಸಿದೆ.

# ಸ್ನೇಹ ಸಂಪನ್ನ

✍ ಪ್ರೊ|| ತಿಪ್ಪೇಸ್ವಾಮಿ
ಹಿಂದಿ ಪ್ರಾಧ್ಯಾಪಕ

ನನ್ನ ಪ್ರೀತಿಯಗೆಳೆಯರಾದ ಶ್ರೀ ದೊಡ್ಡರಂಗೇಗೌಡ ಎಪ್ಪತ್ತರ ನಂತರ ಕನ್ನಡದ ಕಾವ್ಯವನ್ನು ತಮ್ಮ ಅನನ್ಯ ಪ್ರತಿಭೆಯಿಂದ ಸಮೃದ್ಧಗೊಳಿಸಿರುವ ಕವಿ, ಅದರಲ್ಲೂ ವಿಶೇಷವಾಗಿ ಕಳೆದ ದಶಕದಲ್ಲಿ ಗದ್ಯ + ಸಂಗೀತ = ಸಿನಿಮಾಗೀತೆಗಳಾಗುತ್ತಿದ್ದ ಸಂದರ್ಭದಲ್ಲಿ ತಮ್ಮ ತೀವ್ರ ಸಂವೇದನೆ ಮತ್ತು ಕಾವ್ಯ ಸ್ಪರ್ಶದಿಂದ ಸಿನಿಮಾ ಗೀತೆಗಳನ್ನು ಕಾವ್ಯಾಂಶ ಗುಣಗಳುಳ್ಳ ಗೀತೆಗಳನ್ನಾಗಿ ಮಾಡಿದ ಕನ್ನಡದ ಕೆಲವೇ ಗೀತ ರಚನಾಕಾರರಲ್ಲಿ ದೊಡ್ಡರಂಗೇಗೌಡರೂ ಒಬ್ಬರು.

ತಮ್ಮ ಅನುಪಮ ಭಾವಗೀತೆಗಳ ಮೂಲಕ ಕನ್ನಡಿಗರ ಮನೆ-ಮನದಲ್ಲಿ ದಿನ ಬೆಳಗಾದರೆ ರೇಡಿಯೋ ಕ್ಯಾಸೆಟಗಳ ಮೂಲಕ ಅನುರಣುಸುತ್ತಿರುವ ಈ ಕವಿ ಮೂಲತಃ ಭಾವಜೀವಿ ಚಿಂತಕ ಮತ್ತು ಸ್ನಿಗ್ಧ ಪ್ರೀತಿಯ ಸಂಕೇತವಾಗಿದ್ದಾರೆ. ಈಚೆಗೆ ದೀರ್ಘಕವಿತೆಗಳಿಂದ ಹೊರಬಂದು ಮಿನಿ ಕವಿತೆ ಅಥವಾ ಮುಕ್ತಕಗಳ ರಚನೆಯಲ್ಲಿ ತೀವ್ರವಾಗಿ ತೊಡಗಿಕೊಂಡಿರುವ ಈ ಕವಿ ಇಲ್ಲಿ ಅಭಿವ್ಯಕ್ತಿಸಿರುವ ಬದುಕು ಅನುಭವಗಳು ಮತ್ತು ಜೀವನದೃಷ್ಟಿ ಪರಿಪಕ್ವ ಚಿಂತಕನ ಪಕ್ವಫಲಗಳಾಗಿವೆ.

ಮಾನವ ಲೋಕದ ಅಂತದರ್ಶನ ಮೂಡಿಸುವ ಇಂಥ ಮಿನಿ ಕವಿತೆಗಳು ಜೀವನೋಲ್ಲಾಸ ಬೆರಗನ್ನುಂಟುಮಾಡುತ್ತದೆ. ಅಂತೆಯೇ ಸಮಾಜದಲ್ಲಿನ ಅಸ್ವಾಂಗಾತ್ಯಗಳನ್ನು ವ್ಯಂಗ್ಯ - ವಿಡಂಬನೆಯ ಮೂಲಕ ಅರಳಿಸಿರುವ ರೀತಿ ಅವರ ಸೂಕ್ಷ್ಮ ಗ್ರಾಹಿ ಚೇತನಕ್ಕೆ ಹಿಡಿದ ಕನ್ನಡಿಯಾಗಿದೆ. ಈ ಮುಕ್ತಕ/ಮಿನಿ ಕವಿತೆಗಳನ್ನು ಓದುವುದೆಂದರೆ ವ್ಯಕ್ತಿ ಮತ್ತು ರಾಷ್ಟ್ರ ಜೀವನದ ಒಳಹೊಕ್ಕು ಹೊರಬಂದಂಥ ಅನುಭವವಾಗುತ್ತದೆ.

ಶ್ರೀ ದೊಡ್ಡರಂಗೇಗೌಡ ಮತ್ತು ನನ್ನ ಸ್ನೇಹ ಮೂವತ್ತು ವರ್ಷಗಳಷ್ಟು ಹಿಂದಿನದು. ತುಮಕೂರಿನಲ್ಲಿ ನಾನು ಕಾಲೇಜು ಸೇರಿದಾಗ ಅವರಾಗಲೇ ಬಿ.ಎಸ್.ಸಿ. ಎರಡನೇ ವರ್ಷದಲ್ಲಿದ್ದರು. ಶ್ರೀ ಜಿ.ಎಂ. ಸಿದ್ಧರಾಮಣ್ಣನವರ ವಿಧ್ಯಾರ್ಥಿ ನಿಲಯದಲ್ಲಿನ ಒಂದು ಮೂಲೆಯ ಕೋಣೆಯಲ್ಲಿದ್ದುಕೊಂಡು ಬಿ.ಎಸ್.ಸಿ ಓದುತ್ತಾ ಅದಕ್ಕಿಂತಲೂ ಹೆಚ್ಚಾಗಿ ಕವಿತೆಗಳನ್ನು ಬರೆಯುತ್ತ ಕಾಲೇಜು ಹುಡುಗರ ಮಧ್ಯೆ ಕವಿಯಾಗಿ ಅರಳುತ್ತಿದ್ದರು.

ಆಗ ದೊಡ್ಡರಂಗೇಗೌಡ "ಮನುಜ" ಎಂಬ ಕಾವ್ಯನಾಮದಲ್ಲಿ ಬರೆಯುತ್ತಿದ್ದ ಕವಿತೆಗಳು ಸ್ಥಳೀಯ ಪತ್ರಿಕೆಗಳಲ್ಲಿ, ಆಗ ಪ್ರಸಿದ್ಧವಿದ್ದ ಗೋಕುಲ, ಜನಪ್ರಗತಿ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿ ನಮ್ಮೆಲ್ಲರ ಆಕರ್ಷಣೆಯ ಕೇಂದ್ರವಾಗಿದ್ದುವು. ಹೀಗೆ 'ಮನುಜ'ರಾದ ದೊಡ್ಡರಂಗೇಗೌಡರ ಪರಿಚಯ ಸಾಹಿತ್ಯದ ವಿದ್ಯಾರ್ಥಿಯಾದ

ನನಗೂ ಆದದ್ದು, ಪರಿಚಯ ಆತ್ಮೀಯತೆಗೆ ತಿರುಗಿದ್ದು ನನ್ನಲ್ಲಿ ಸಾಹಿತ್ಯಾಸಕ್ತಿ ಬೆಳೆಯಲು ಸಹಾಯಕವಾಯಿತು.

ಶ್ರೀ ದೊಡ್ಡರಂಗೇಗೌಡರು ವಿಜ್ಞಾನದ ವಿಧ್ಯಾರ್ಥಿ ಹಾಗೂ ಸಾಹಿತ್ಯದ ಪ್ರವೃತ್ತಿಯನ್ನು ಮೈ-ಮನಗಳಲ್ಲಿ ತುಂಬಿಕೊಂಡಿದ್ದವರು ೩೦ ವರ್ಷಗಳ ಹಿಂದಿನ ನೆನಪನ್ನು ಕೆದರಿದರೆ ನನ್ನ ನೆನಪು ಸರಿಯಾಗಿದ್ದರೆ-ದೊಡ್ಡರಂಗೇಗೌಡರು "ಈ ಲೆಕ್ಕಗಳನ್ನು ಮಾಡುವುದು ತನ್ನ ಜಾಯಮಾನಕ್ಕಲ್ಲ. ನನಗೆ ಇವುಗಳಲ್ಲಿ ಹೆಚ್ಚಿನ ಆಸಕ್ತಿಯೇ ಇಲ್ಲ; ಬಿ.ಎಸ್.ಸಿ ಪಾಸ್ ಮಾಡುವುದು ಸುಲಭವಾದರೂ.. ಬದುಕಿನುದ್ದಕ್ಕೂ ಬರೀ ಲೆಕ್ಕಗಳನ್ನೇ ಮಾಡಿಕೊಂಡು ಕುಳಿತಿರಬೇಕಲ್ಲ." ಎಂದು ಹೇಳುತ್ತಿದ್ದರು. ಇಂಥ ಮನಸ್ಥಿತಿಯಲ್ಲಿದ್ದಾಗಲೇ ಅವರಿಗೆ ಆರ್.ಎಂ.ಎಸ್.ನಲ್ಲಿ ಸಾರ್ಟರ್ ಆಗಿ ನೇಮಕದ ಆದೇಶ ಬಂದಾಗ ತುಂಬಾ ಸಂತೋಷದಿಂದಲೇ ಬೆಂಗಳೂರು ಬಸ್ಸನ್ನು ಏರಿದರು. ಬೆಂಗಳೂರಿಗೆ ಬಂದು ಹಗಲು ಹೊತ್ತಿನಲ್ಲಿ ಕಾಲೇಜ್ ಸೇರಿದರು ಮೊದಲ ವರ್ಷದ ಬಿ.ಎ. (ಆನರ್ಸ್) ತರಗತಿಗೆ ಸೇರಿದರು; ಕನ್ನಡವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು ಬಿ.ಎ.(ಆನರ್ಸ) ಮುಗಿಸಿ ನಂತರ ಎಂ.ಎ. ಮಾಡಿದರು.

ರಾತ್ರಿ ಹೊತ್ತು ಸಾರ್ಟಿಂಗ್ ಹಗಲು ಹೊತ್ತು ರೀಡಿಂಗ್ ದೊಡ್ಡರಂಗೇಗೌಡರ ಬದುಕಿನ ಭಾಗಗಳಾಗಿದುವು ಈ ಪ್ರಸಂಗವನ್ನು ಹೇಳಿದ್ದರ ಉದ್ದೇಶ ಅವರು ಛಲವಾದಿ, ಹೀಗಾಗಿ ಸಾಹಿತ್ಯವನ್ನು ಅಭ್ಯಸಿಸಬೇಕೆಂಬ ತಮ್ಮ ಛಲವನ್ನು ಈಡೇರಿಸಿಕೊಂಡರು, ಮುಟ್ಟಬೇಕಾದ ಗುರಿಯನ್ನು ಮುಟ್ಟಿದರು, ಇದೊಂದು ಸಾಹಸ., ಸಾಹಸಗಾದೆಯೇ ಆಗಿದೆ. ೩೦ ವರ್ಷಗಳ ಹಿಂದೆ ತುಮಕೂರಿನಲ್ಲಿ ದೊಡ್ಡರಂಗೇಗೌಡರ ನೇತೃತ್ವದಲ್ಲಿ ಒಂದು "ಪುಟ್ಟ ಕವಿಗಳ ಬಳಗ" ವಿತ್ತು ದೊಡ್ಡರಂಗೇಗೌಡರು, ಈಗ ಪ್ರಸಿದ್ಧ ಚಲನಚಿತ್ರ ನಟರಾಗಿರುವ ಶ್ರೀ ಟಿ. ಎಸ್. ಲೋಹಿತಾಶ್ವ ಆಗ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಟೈಪಿಸ್ಟ್ ಆಗಿದ್ದ ಶ್ರೀ ವೇಣುಗೋಪಾಲ್, ಕೊರಟಗೆರೆಯ ಅಧ್ಯಾಪಕ ಶ್ರೀ ಪುಟ್ಟರಾಜು ("ಕನ್ನಡ ಕಂದ") ನಾನು ಮತ್ತು ಇನ್ನೊಂದಿಬ್ಬರು ಈ ಬಳಗದಲ್ಲಿದ್ದವು.

ಬರೆಯುವ ವಯಸ್ಸು ಮನಸ್ಸು ನಮ್ಮೆಲ್ಲರಲ್ಲೂ ಇತ್ತು ಪ್ರಕಟಿಸುವ ಹುಮ್ಮಸ್ಸು ನಮ್ಮನ್ನ ಕಾಡುತಿತ್ತು ಆದರೆ ಪ್ರಕಟಣೆಗೆ ಹಣ ವಿಧ್ಯಾರ್ಥಿಗಳಾಗಿದ್ದ ನಮ್ಮಲ್ಲಿ ಇರಲಿಲ್ಲ ದಿನೇ ದಿನೇ ನಮ್ಮ ಚೀಲಗಳಲ್ಲಿ ಕವಿತೆಗಳು ಹೆಚ್ಚುತ್ತಿದ್ದವು ನಾವು ಕಿರಿಯರು ಬರೆದ ಕವಿತೆಗಳನ್ನು ದೊಡ್ಡರಂಗೇಗೌಡ ಮತ್ತು ಲೋಹಿತಾಶ್ವ ಓದುತ್ತಿದ್ದರು ತಿದ್ದುತ್ತಿದ್ದರು, ಚರ್ಚಿಸುತ್ತಿದ್ದರು ನಮ್ಮೆಲ್ಲರ ಕವಿತೆಗಳು ಅಲ್ಲಲ್ಲಿ ಪ್ರಕಟವಾದಾಗ ಒಟ್ಟಾಗಿ ಸಂತೋಷಿಸುತ್ತಿದ್ದೆವು. ಹಿಗ್ಗನ್ನು ಅನುಭವಿಸುತ್ತಿದ್ದೆವು.

ಪ್ರಕಟಿಸುವಷ್ಟು ಹಣ ನಮ್ಮಲ್ಲಿರಲಿಲ್ಲ, ನಿಜ. ಆದರೆ ಉತ್ಸಾಹಗಳ ಕೊರತೆಯಿರಲಿಲ್ಲ. ಆಗ ದೊಡ್ಡರಂಗೇಗೌಡ ಒಂದು ಉಪಾಯ ಹೇಳಿದರು ಸ್ಟೆನ್ಸಿಲ್ ಮಾಡಿದ ಪುಸ್ತಕವನ್ನು ಪ್ರಕಟಿಸೋಣ ಎಂದರು. ಸರಿ, ಈ ಯೋಜನೆ ಬಂದಿದ್ದೇ ತಡ ಅವರ ಸಂಪಾದಕತ್ವದಲ್ಲಿ ನಮ್ಮೆಲ್ಲರ ಎರಡೆರಡು ಅಥವಾ ಮೂರು ಕವಿತೆಗಳನ್ನು ಆಯ್ದು ವೇಣುಗೋಪಾಲ್ ಅವರಿಗೆ ಕೊಟ್ಟೇಬಿಟ್ಟರು ಅವರು ಟೈಪು ಮಾಡಿಯೇ ಬಿಟ್ಟರು ಮುಖಪುಟವನ್ನು ಮಾತ್ರ ಪ್ರಿಂಟ್ ಮಾಡಿಸಿ ೨೦೦-೩೦೦ ಪ್ರತಿಯನ್ನು 'ಜ್ಯೋತಿರ್ಧಾರಿ' ಎಂಬ ಹೆಸರಿನಲ್ಲಿ ಗಾಂಧೀ ಜಯಂತಿಯ ದಿನ ೧೯೬೩ನೇ ಅಕ್ಟೋಬರ್ ಎರಡುರಂದು ಬಿಡುಗಡೆ ಮಾಡಿಯೇ ಬಿಟ್ಟರು, ಆಗಿನ ಕಾಲಕ್ಕೆ ಇದೊಂದು ವಿಶಿಷ್ಟ ಪ್ರಯೋಗವಾಗಿತ್ತು ಎಂದೇ ನಾನು ಭಾವಿಸಿದ್ದೇನೆ.

ವಿದ್ಯಾರ್ಥಿ ಮಿತ್ರರ ಸಮ್ಮಿಲನದ ಪ್ರಯತ್ನದಿಂದಾಗಿ ಹೊರಬಂದ ಮೊದಲ ಪ್ರಯತ್ನ ಅದು - ಆ ದಿನದ ಮಟ್ಟಿಗೆ 'ಜ್ಯೋತಿರ್ಧಾರಿ ನಮ್ಮೆಲ್ಲರ ಮೊದಲ ಸಂಕಲನ ಅದು, ಆ ಕೃತಿ ಪ್ರಕಟವಾದ ದಿನ ನಾವು ಪಟ್ಟ ಸಂಭ್ರಮ ಇಂದಿಗೂ ನನ್ನ ಮನಸ್ಸಿನಲ್ಲಿ ಹಸಿರಾಗಿದೆ.

ಶ್ರೀ ದೊಡ್ಡರಂಗೇಗೌಡರು ಅಂದಿನಿಂದ ಇಂದಿನವರೆಗೆ ದಿನದಿಂದ ದಿನಕ್ಕೆ ಬೆಳೆಯುತ್ತ ತಮ್ಮ ಸಂಪರ್ಕಕ್ಕೆ ಬಂದವರನ್ನು ಬೆಳೆಯುತ್ತಾ ಖುಷಿ ಪಟ್ಟವರಾಗಿದ್ದಾರೆ.

ಈಗಲೂ ತುಮಕೂರಿಗೆ ಹೋದಾಗ ಪುರಸಭೆಯ ಮುಂದಿನ ಪಾರ್ಕುಗಳತ್ತ ಕಣ್ಣುಗಳನ್ನು ಹಾಯಿಸಿದಾಗ ೩೦ ವರ್ಷಗಳ ಹಿಂದಿನ ನೆನಪುಗಳು ಗರಿಗೆದರಿಕೊಳ್ಳುತ್ತವೆ. ಇವೇ ಪಾರ್ಕುಗಳಲ್ಲಿ ನಾನು ಲೋಹಿತಾಶ್ವ ದೊಡ್ಡರಂಗೇಗೌಡ ಮತ್ತಿತರೆ ಕವಿ-ಮಿತ್ರರು ಕುಳಿತು ಕಳೆದ ಎಷ್ಟೋ ಸಂಜೆಗಳನ್ನು ಕವಿತೆಗಳನ್ನು ಓದುತ್ತಾ, ಶಬ್ದಗಳ ಸರಿಯಾದ ಪ್ರಯೋಗವನ್ನು ಹುಡುಕುತ್ತಾ ತಮಾಷೆ ಮಾಡುತ್ತಾ, ಅದೂ ಇದೂ ಮಾತನಾಡುತ್ತಾ ಕಳೆದದ್ದು ಜ್ಞಾಪಕಕ್ಕೆ ಬರುತ್ತೆ.

ಶ್ರೀ ದೊಡ್ಡರಂಗೇಗೌಡರ ಮೋಹಕ ವ್ಯಕ್ತಿತ್ವ; ಅಂತೆಯೇ ಅವರ ಸುಂದರ ಬರವಣಿಗೆ ನನಗೆ ಯಾವಾಗಲೂ ಪ್ರೀತಿಯ ಕೇಂದ್ರಗಳಾಗಿವೆ; ಅವರ ನಿರ್ಮಲ ಅಂತಃಕರಣ ನಿರ್ವ್ಯಾಜ ಸ್ನೇಹ ನನ್ನಂಥ ಯಾವನೇ ಮಿತ್ರನಿಗೆ ಅವರು ನೀಡಿರುವ ಬಳುವಳಿಗಳಾಗಿವೆ.

೧೯೬೫ - ೬೬ ರಲ್ಲಿ ಅವರು ಬೆಂಗಳೂರಿಗೆ ಹೋದರು ನಾನು ಮೈಸೂರಿಗೆ ಬಂದೆ ಅಲ್ಲಿಂದ ಎಷ್ಟೋ ವರ್ಷಗಳವರೆಗೆ ನಮ್ಮ ಭೇಟಿಯೂ ಆಗಿರಲಿಲ್ಲ ಈಚೆಗೆ ಒಂದೆರಡು ವರ್ಷಗಳ ಹಿಂದೆ ಅವರ ಅನಿರೀಕ್ಷಿತ ಭೇಟಿ, ಮೈಸೂರಿನಲ್ಲಿದ್ದಾಗ ತುಂಬ ಸಂತೋಷವಾಯಿತು ಅದೇ ಮೂವತ್ತು ವರ್ಷಗಳ ಹಿಂದಿನ ಪ್ರೀತಿ ಮತ್ತು ಅಂತಃಕರಣ ಈ ಭೇಟಿಯಲ್ಲೂ ನಾನು ಕಂಡೆ. ದೊಡ್ಡರಂಗೇಗೌಡರೊಡನೆ ಮಾತನಾಡುವುದೆಂದರೆ ಅದೊಂದು ಅಕ್ಕರೆಯ ಅನುಭವ; ಇಂಥ ಸ್ನೇಹಿತನನ್ನು ಗೌರವಿಸುತ್ತ ಅವರಿಗೆ "ಸೃಜನ ಸಂಪನ್ನ" ಗ್ರಂಥವನ್ನು ಅರ್ಪಿಸುವುದು ಸಾರ್ಥಕವಾಗಿದೆ. ನಿಜವಾದ ಅರ್ಥದಲ್ಲೂ ದೊಡ್ಡರಂಗೇಗೌಡರು 'ಸೃಜನ ಸಂಪನ್ನರೂ ಹೌದು, ಸ್ನೇಹ ಸಂಪನ್ನರೂ ಹೌದು.

**ಮಣ್ಣಿನ ಮಾತುಗಳು**

✍ ಬಿ. ಆರ್. ಲಕ್ಷ್ಮಣರಾವ್

ದೊ. ರಂ. ಗೌ. "ಮಣ್ಣಿನ ಮಾತುಗಳು", "ಮಂಕುತಿಮ್ಮನ ಕಗ್ಗ"ದ ಪರಂಪರೆಗೆ ಇನ್ನೊಂದು ಗಮನಾರ್ಹ ಸೇರ್ಪಡೆ. ಕವಿಯ ಪ್ರಯೋಗಶೀಲತೆ ನಿಜಕ್ಕೂ ಅಭಿನಂದಾನರ್ಹ

# ಸ್ನೇಹ ಶೀಲ

– ಡಾ. ಸು. ರುದ್ರಮೂರ್ತಿ ಶಾಸ್ತ್ರಿ
*ಚಲನಚಿತ್ರ ಗೀತ ರಚನೆಕಾರರು*

ಪ್ರಿಯಮಿತ್ರರಾದ ದೊಡ್ಡರಂಗೇಗೌಡರಿಗೆ ಆಗಲೇ ೫೦ ಎಂಬುದನ್ನು ಕೇಳಿ, ಎಷ್ಟು ಬೇಗ ವರ್ಷಗಳು ಉರುಳಿಹೋದವು ಎಂದು ಒಂದು ಕ್ಷಣ ದಿಗ್ಭ್ರಾಂತಿಯಾಯಿತು. ಇನ್ನ ನಾಲ್ಕೇ ವರ್ಷಗಳಲ್ಲಿ ನಾನೂ ಆ ಘಟ್ಟವನ್ನು ಮುಟ್ಟುವುದರಿಂದ ಈ ದಿಗ್ಭ್ರಾಂತಿಗೆ ಅರ್ಥವಿದೆ. ಜೀವಿತದ ಹೆಚ್ಚು ಕ್ರಿಯಾಶೀಲವಾದ ಈ ಅವಧಿಯ ಸ್ಮರಣೆಯ ಸಂದರ್ಭದಲ್ಲಿ ಆತ್ಮ ನಿರೀಕ್ಷಣೆ ಮಾಡಿಕೊಂಡು ಸೋಲುಗೆಲುವುಗಳನ್ನು ಲೆಕ್ಕ ಮಾಡಿಕೊಳ್ಳುವುದು ಒಂದು ವಿಧ. ತನ್ನನ್ನು ಬಲ್ಲವರು, ಸ್ನೇಹಿತರು, ಹಿತೈಷಿಗಳು, ಅಭಿಮಾನಿಗಳು ಆ ಕೆಲಸ ಮಾಡುವುದು ಇನ್ನೊಂದು ವಿಧ. ಒಬ್ಬ ಕವಿ ಅಥವಾ ಲೇಖಕನ ೫೦ ವರ್ಷ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಹೆಚ್ಚು ಹೆಚ್ಚು ಮಹತ್ವ ಪಡೆದುಕೊಳ್ಳುತ್ತದೆ. ದೊಡ್ಡರಂಗೇಗೌಡರ ಅಭಿಮಾನಿಗಳು ಅಂಥ ಒಂದು ಮಹತ್ವದ ಪ್ರಯತ್ನದಲ್ಲಿ, ಅವರ ೫೦ ವರ್ಷದ ನೆನಪಿಗೆ ಒಂದು ಅಭಿನಂದನಾ ಗ್ರಂಥವನ್ನು ಅರ್ಪಿಸಲಿರುವುದು ಸಂತೋಷದ ವಿಷಯ.

ನನ್ನ ಮತ್ತು ಗೌಡರ ಸ್ನೇಹ ೨೮ ವರ್ಷಗಳಷ್ಟು ಹಳೆಯದು, ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್ ಮೊದಲ ವರ್ಷದಲ್ಲಿ ಆರಂಭವಾದದ್ದು. ಇದರೊಂದಿಗೆ ಸೆಂಟ್ರಲ್ ಕಾಲೇಜು, ಪಾರ್ಕು, ಕಲ್ಲುಬೆಂಚುಗಳು, ಗ್ರಂಥಾಲಯ, ಕ್ಯಾಂಟೀನ್, ತರಗತಿಗಳು, ಗುರುಗಳು, ಗೆಳೆಯ ಗೆಳತಿಯರು ಇತ್ಯಾದಿ ಸವಿನೆನಪುಗಳು ಸಾಲು ಸಾಲಾಗಿ ಮನಸ್ಸಿನಲ್ಲಿ ನುಗ್ಗಿ ಬರುತ್ತಿವೆ. ಆಗ ಗೌಡರು ಬಹಳ ಸಣ್ಣಗಿದ್ದರು. ತಿರುಚಿದ ಮೀಸೆ ಮಾತ್ರ ಎದ್ದು ಕಾಣುತ್ತಿತ್ತು. ಆದರೆ ಆಗಲೇ ಪದ್ಯ ಬರೆದು, ಅವು ಪತ್ರಿಕೆಗಳಲ್ಲಿ ಪ್ರಕಟವಾಗಿ, ಗುರುಗಳ ವಿಧ್ಯಾರ್ಥಿಗಳ ವಲಯದಲ್ಲಿ ತಕ್ಕಮಟ್ಟಿನ ಖ್ಯಾತಿ ಪಡೆದಿದ್ದರು. ಅವರು ಆನರ್ಸ್ ವಿಧ್ಯಾರ್ಥಿಯಾಗಿದ್ದಾಗಲೇ ಅವರ ಮೊದಲ ಕವನ ಸಂಕಲನ 'ಜಗಲಿ ಹತ್ತಿ ಇಳಿದು' ಪ್ರಕಟವಾದದ್ದೂ ನೆನಪಿದೆ.

ಎಂ.ಎ. ಮುಗಿದನಂತರ ಅವರಂತೆ ನಾನು ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯನ್ನು ಅವಲಂಬಿಸಿದ್ದಾಯಿತು, ೧೦ ವರ್ಷಗಳ ನಂತರ ಅದನ್ನು ಬಿಟ್ಟು ಆಯಿತು. ಅದೃಷ್ಟವಶಾತ್ ಸಿನಿಮಾಗಳಲ್ಲಿ ನಾನು ಗೌಡರಂತೆ ಗೀತೆ ರಚನೆ ಮಾಡುವುದರಿಂದ, ಆಗಾಗ ಭೇಟಿಯಾಗುವ, ಲೋಕಭಿರಾಮವಾಗಿ ಹರಟೆ ಕೊಚ್ಚುವ ಸಂದರ್ಭಗಳಲ್ಲಿ ನಮ್ಮ ಸ್ನೇಹದ ಮೊನಚು ತುಕ್ಕು ಹಿಡಿಯದ ಹಾಗೆ ಸಾಣೆ ಹಿಡಿಯುವ ಅವಕಾಶಗಳು ಒದಗಿ ಬರುತ್ತಿರುವುದು ಸಂತೋಷದ ಸಂಗತಿ. ಒಮ್ಮೆ ಸಂಭಾಷಣೆ ಬರೆಯುವುದಿಲ್ಲ, ನನ್ನ ಮಿತ್ರರೊಬ್ಬರಿದ್ದಾರೆ, ಅವರಿಗೆ ಕಾದಂಬರಿ ಬರೆದು ಅನುಭವ ಇದೆ, ಚೆನ್ನಾಗಿ ಬರೆಯುತ್ತಾರೆ" ಎಂದು ಆ ಅವಕಾಶ ನನಗೆ

ದೊರಕುವಂತೆ ಮಾಡಿದರು. ಅದು ನಾನು ಸ್ವತಂತ್ರವಾಗಿ ಸಂಭಾಷಣೆ ಬರೆದ ಮೊದಲ ಚಿತ್ರವಾಯಿತು. (ಅನಂತರ) ಅದನ್ನು ನಾನು ಮರೆಯುವಂತೆಯೇ ಇಲ್ಲ.

ಕಾವ್ಯ ರಚನೆ ಗೌಡರಿಗೆ ಉಸಿರಾಡಿದಷ್ಟೇ ಸರಾಗವಾಗಿ, ಸಮೃದ್ಧವಾಗಿ ಕವಿತೆಗಳನ್ನು ಬರೆದಿದ್ದಾರೆ ಮತ್ತು ಅವರು ಗಂಭೀರವಾಗಿ ಕಾವ್ಯ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಮೊದಮೊದಲು ನವ್ಯ ಕವಿಗಳೆಂದೇ ಖ್ಯಾತರಾಗಿದ್ದ ಗೌಡರು, ಬಹುಶಃ ಚಲನಚಿತ್ರಗೀತೆಗಳನ್ನು ಬರೆಯಲು ಆರಂಭಿಸಿದ್ದರಿಂದಲೋ ಏನೋ ನಂತರ ಗೇಯ ಗುಣವುಳ್ಳ ಸಾಕಷ್ಟು ಭಾವಗೀತೆಗಳನ್ನು ಬರೆದಿದ್ದಾರೆ. 'ಜಗಲಿ ಹತ್ತಿ ಇಳಿದು'., ಕಣ್ಣು ನಾಲಿಗೆ ಕಡಲು, ಮೌನ ಸ್ಪಂದನ ಇತ್ಯಾದಿ ಸಂಕಲನಗಳಲ್ಲಿ ನವ್ಯ ಕವಿತೆಗಳಿದ್ದರೆ, ಗೀತಗಾರುಡಿ, ಹೋಳಿಹುಣ್ಣಿಮೆ, ಇತ್ಯಾದಿ ಸಂಕಲನಗಳಲ್ಲಿ ಭಾವಗೀತೆಗಳಿವೆ, ಪ್ರೀತಿ ಪ್ರಗಾಥ ಮತ್ತು ಮಣ್ಣಿನ ಮಾತುಗಳು ಕೃತಿಗಳು ಅವರ ಪ್ರಯೋಗಶೀಲತೆಗೆ ಸಾಕ್ಷಿಯಾಗಿವೆ, ಕೆಲವು ಸಣ್ಣಕತೆಗಳು ಮತ್ತು ವೈಚಾರಿಕ ಲೇಖನಗಳನ್ನು ಬಿಟ್ಟರೆ ಅವರು ಬರೆದ ಗದ್ಯ ಬಹಳ ಕಡಿಮೆಯೆಂದೇ ಹೇಳಬೇಕು. ಇನ್ನೊಂದು ದೃಷ್ಟಿಯಿಂದ ಹೇಳುವುದಾದರೆ ಅಷ್ಟರಮಟ್ಟಿಗೆ ಅವರು ಕಾವ್ಯ ಪ್ರಕಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ಗದ್ಯ ಅವರನ್ನು ಅಷ್ಟಾಗಿ ಆಕರ್ಷಿಸಲಿಲ್ಲ, ಕವಿಯಾಗಿ ಸಾಹಿತ್ಯವಲಯದಲ್ಲಿ ಸಾಕಷ್ಟು ಖ್ಯಾತಿಯನ್ನು ಗಳಿಸಿರುವುದು ನಿಜವಾದರೂ, ಅಷ್ಟೇ ಅಥವಾ ಅದಕ್ಕಿಂತ ಹೆಚ್ಚಾಗಿಯೇ ತಮ್ಮ ಸಿನಿಮಾ ಗೀತೆಗಳಿಂದ ಖ್ಯಾತರಾಗಿದ್ದಾರೆ. ಅಲ್ಲದೆ ತಮ್ಮ ಅಧ್ಯಾಪಕ ವೃತ್ತಿಯಲ್ಲೂ ಯಶಸ್ಸನ್ನು ಪಡೆದು, ವಿಧ್ಯಾರ್ಥಿವಲಯದಲ್ಲಿ ತುಂಬಾ ಜನಪ್ರಿಯರಾಗಿದ್ದಾರೆ. ಅವರ ನೂರಾರು ವಿದ್ಯಾರ್ಥಿಗಳು ತುಂಬು ಗೌರವದಿಂದ ಅವರನ್ನು ನೆನೆಯುತ್ತಾರೆ.

ಎಲ್ಲಕ್ಕಿಂತ ಮುಖ್ಯವಾಗಿ ದೊಡ್ಡರಂಗೇಗೌಡರು ವ್ಯಕ್ತಿಯಾಗಿ ಸರಳ ಸಜ್ಜನಿಕೆಯ ವ್ಯಕ್ತಿ. ಸ್ನೇಹಶೀಲ. ಅವರು ಕೆರಳಿ, ಸಭ್ಯತೆಯ ಎಲ್ಲೆ ಮೀರಿ ಮಾತನಾಡಿದ್ದನ್ನು ನಾನು ನೋಡಿಲ್ಲ. ಯಾರ ಬಗ್ಗೆಯೂ ಹಗುರವಾಗಿ, ಅಗೌರವದ ಮಾತನಾಡಿದ್ದನ್ನು ಕಂಡಿಲ್ಲ. ನನ್ನ 'ಪ್ರಾಸಪ್ರಯಾಸ' ಪುಸ್ತಕದಲ್ಲಿ ಅವರನ್ನು ಕುರಿತು ಬರೆದ ಒಂದು ಸಣ್ಣ ಪದ್ಯ ಹೀಗಿದೆ :

ಗೌಡರು ಗೌಡರು
ಗಿಡ್ಡದಾಗಿ ಕಾಣುವಂಥ
ದೊಡ್ಡರಂಗೇಗೌಡರು

ಅಚ್ಚಕನ್ನಡದಲ್ಲಿ
ಉಚ್ಚಕವಿಗೌಡರು

ಬಳಸಲಿಲ್ಲ ಎಂದೂ ಇವರು
ಯಾವ ಟಾಲ್ಕಂ ಪೌಡರು
ದಿನಾ ಸಂಜೆ ಹೊಸಕೋಟೆಗೆ
ದೌಡರು ದೌಡರು.

ನಿಜ, ಅವರು ಯಾವ ಟಾಲ್ಕಂ ಪೌಡರನ್ನು ಹಚ್ಚಿ ಸೋಗಿನ ಅಲಂಕಾರ ಮಾಡಿಕೊಳ್ಳದೆ, ಬೂಟಾಟಿಕೆಯ, ದೊಡ್ಡಸ್ತಿಕೆಯ ಗಮ್ಮತ್ತುಗಳನ್ನು ತೋರಿಸದೆ ನೇರವಾಗಿ, ಸರಳವಾಗಿ, ಸೌಜನ್ಯಶೀಲರಾಗಿ ಉಳಿದುಕೊಂಡಿದ್ದಾರೆ. ಅವರ ಸ್ನೇಹಭಾಗ್ಯ ದೊರೆತದ್ದು ನನ್ನ ಪುಣ್ಯ.

# ಶ್ರೀ ದೊಡ್ಡರಂಗೇಗೌಡರ ಕನ್ನಡಾಭಿಮಾನ

✍ ಎಲ್ಲೇಗೌಡ ಬೆಸಗರಹಳ್ಳಿ
ಅಧ್ಯಾಪಕರು

ಶ್ರೀ ದೊರಂಗೌ ಅವರು ಕನ್ನಡದ ಮಹಾ ಚೇತನಗಳಲ್ಲಿ ಒಬ್ಬರಾಗಿದ್ದಾರೆ. ಕನ್ನಡವನ್ನು ಕಾಯುವ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಹನೀಯರಲ್ಲಿ ಒಬ್ಬರೆಂದು ಗುರುತಿಸಿಕೊಂಡಿದ್ದೆ. ನನ್ನ ಅಭಿಪ್ರಾಯವನ್ನು ಯಾರಾದರೂ ಒಪ್ಪಬಹುದು ಅಥವಾ ಬಿಡಬಹುದು. ಆದರೆ ನನ್ನ ದೃಷ್ಟಿಯಲ್ಲಿ "ಕನ್ನಡ ಕಾವ್ಯರಾಧಕರಾಗಿ, ನಿಸರ್ಗ ಪ್ರೇಮಿಯಾಗಿ, ಗ್ರಾಮೀಣ ಬದುಕಿನ ಹಿನ್ನಲೆಯಿಂದ ಬಂದ ನೇರ ಮಾತಿನ ನುಡಿಕಾರರಾಗಿ, ಬೆಳೆಯುತ್ತ ಬಂದಂತೆ ಕವಿಯಾಗಿ, ತನ್ನ ಸುತ್ತಲಿನ ಪ್ರಕೃತಿಯ ಚೆಲುವು, ಕಂಡ ಪ್ರೀತಿ ಸವಿದ ಸೌಂದರ್ಯ, ಸ್ನೇಹದ ಬಂಧ, ಸಂಗೀತದ ನಂಟು, ಕಲೆಯ ಅಂಟು ಹಸಿವಿನ ನಂಟನ್ನು ಬಿಡಿಸಿಕೊಳ್ಳಲಾರದೆ ಕಂಡುಂಡ ಅನುಭವವನ್ನು ತನ್ನೊಳಗಿನ ನೋವು - ನಲಿವುಗಳನ್ನು ಕನ್ನಡದ ಕವನಗಳನ್ನಾಸಿಸಿದ್ದಾರೆ, ಭಾವಗೀತೆಗಳನ್ನಾಗಿಸಿ ಕನ್ನಡ ಜನಮನದಲ್ಲಿ ನಿಂತ ಜನಪ್ರಿಯ ಕವಿಯಾಗಿದ್ದಾರೆ ದೊಡ್ಡರಂಗೇಗೌಡರು.

ಕನ್ನಡ ವರ್ಷಾಚರಣೆಯ ದಿನಗಳಲ್ಲೇ ಎಸ್.ಎಲ್.ಎನ್. ಕಾಲೇಜಿನಲ್ಲಿ ಕೆಲವು ತರಗತಿಗಳಲ್ಲಿ ಐಚ್ಛಿಕ ಕನ್ನಡವನ್ನು ಮುಚ್ಚುವ ಸಂದರ್ಭದಲ್ಲಿ ಪ್ರತಿಭಟಿಸಿದ್ದಾರೆ, ನೊಂದಿದ್ದಾರೆ. ಆ ಬಗ್ಗೆ ತಮ್ಮ ದುಃಖವನ್ನು ಹಂಚಿಕೊಂಡಿದ್ದಾರೆ ಕನ್ನಡ ಕೈಂಕರ್ಯವನ್ನು ಶ್ರದ್ಧಾಭಕ್ತಿಗಳಿಂದ ಮಾಡುತ್ತಿದ್ದಾರೆ. ತಮ್ಮ ಕನ್ನಡಪರ ಒಲವು-ನಿಲುವುಗಳನ್ನು "ಮಣ್ಣಿನ ಮಾತುಗಳ"ಲ್ಲಿ ಅಲ್ಲಲ್ಲಿ ಹೇಳಿಕೊಂಡಿದ್ದಾರೆ. ಕನ್ನಡದ ಬಗೆಗಿನ ಅನನ್ಯ ಪ್ರೀತಿಯೇ ಅವರನ್ನು ಕವಿಯನ್ನಾಗಿಸಿದೆ.

ನಾನು ಕಂಡಂತೆ; ೧೯೮೯ ರಿಂದ ೧೯೯೨ ರ ೩ ವರ್ಷಗಳ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಮಿತಿಯ ಸದಸ್ಯರಾಗಿ, ಹೊಸಕೋಟೆ ತಾಲ್ಲೂಕು ಸಮಿತಿ ಅಧ್ಯಕ್ಷರಾಗಿ, ಕನ್ನಡದ ಕಾರ್ಯಕ್ರಮಗಳನ್ನು ನಡೆಸಿದ್ದಾರೆ. ಕನ್ನಡದ ಬಗ್ಗೆ ತಮಗಿರುವ ಪ್ರೀತಿ ಎಷ್ಟು ಎಂಬುದನ್ನು ತೋರಿದ್ದಾರೆ. ಕೇಳುಗರಲ್ಲಿ ಕನ್ನಡತನವನ್ನು ಮೂಡಿಸಿದ್ದಾರೆ. ಜನಪದ ಸೊಗಡಿನ ಗೀತೆಗಳನ್ನು ಹಾಡಿದ್ದಾರೆ. ಕಾರ್ಯಕ್ರಮಗಳಿಗೆ ಬರಲು ಕಾರು ಕೇಳಲಿಲ್ಲ, ಗೌರವ ಸಂಭಾವನೆ ಕೊಡಬೇಕೆಂದು ಸೂಚಿಸಲಿಲ್ಲ, ಬಿಡುವಿಲ್ಲದ ಕೆಲಸಗಳ ನಡುವೆಯೂ ಕರೆದಾಗ ಬಂದಿದ್ದಾರೆ. ಕವಿಗೋಷ್ಠಿಗಳಿಗೆ ರಂಗು ನೀಡಿದ್ದಾರೆ. ಕಾವ್ಯ ಪ್ರೀತಿಯೇ ದೊಡ್ಡದೆಂದು ನಂಬಿದ್ದಾರೆ. ಕಾವ್ಯ ಲೋಕದ ಗೌಡರಾಗಿ ಮೆರೆದಿದ್ದಾರೆ.

ಸೂರ್ಯಚಂದ್ರರಿರುವ ತನಕ ಬೆಳಗುತಿರಲಿ ಕನ್ನಡ. ಕನ್ನಡ ಸಿರಿಗನ್ನಡ ಎಂದಿದ್ದಾರೆ. ಭೂಮಿ ಬಾನು ಇರುವತನಕ ನಗುತಲಿರಲಿ ಕನ್ನಡ ಸವಿಗನ್ನಡ ಎಂದು ಬಯಸಿದ್ದಾರೆ. ನದ-ನದಿಗಳು ದೊರೆವ ತನಕ ಮೊರೆಯುತಿರಲಿ ಕನ್ನಡ ಎಂದು ಸಾರುವ ಸಿರಿಗನ್ನಡ ಕವಿಯಾಗಿ ಕನ್ನಡದಲ್ಲಿ ಹೆಸರಾಗಿದ್ದಾರೆ; ಹಸಿರಾಗಿದ್ದಾರೆ. ಅವರ ಕನ್ನಡ ಪ್ರೇಮ ಅನುಕರಣೀಯ ಕುವೆಂಪು ಅವರಂತೆ ಪ್ರಕೃತಿ ಪ್ರೇಮದ ಪ್ರಭಾವ, ಬೇಂದ್ರೆಯವರಂತೆ ಜನಪದದ ಗಾರುಡಿಗತನ. ಕೆ. ಎಸ್. ನರಸಿಂಹಸ್ವಾಮಿಯವರಂತೆ ಪ್ರೇಮ ಕವಿತ್ವವುಳ್ಳ ಕವಿಯಾಗಿದ್ದರೂ, ದೊಡ್ಡರಂಗೇಗೌಡರು ಕನ್ನಡ ಕಾವ್ಯ ಲೋಕದಲ್ಲಿ ತಮ್ಮದೇ ಆದ ಹೆಜ್ಜೆಗುರುತುಗಳನ್ನು ರೂಪಿಸಿರುವ "ಸೃಜನ ಸಂಪನ್ನ" ಕವಿಯಾಗಿದ್ದಾರೆ.

## ಸೃಜನ ಸಂಪನ್ನ

✍ ಎಂ. ವಿಶ್ವನಾಥ್

ವೃತ್ತಿಯಲ್ಲಿ ಅಧ್ಯಾಪಕ, ಪ್ರವೃತ್ತಿಯಲ್ಲಿ ವಿದ್ಯಾರ್ಥಿ
ಇವೆರಡರ ಸಂಯೋಗಾರ್ಥದಲ್ಲಿ ಸಕಲಾರ್ಥಿ
ಪರಿಣಾಮ - ಕನ್ನಡ ಕಾವ್ಯವಾಹಿನಿಗೆ ಹೊಸ ಜೀವ
ಹೊಸಭಾವ, ಹೊಸ ಹೊಸ ಚಿದ್ಭಾವ, ತದ್ಭಾವ
ಭಾವ ಬಂಧುರ ಇವರ ಕಾವ್ಯ ಹಂದರ

* * *

ದೊರಂಗೌ ಅಭಿನಂದನೆಯಲ್ಲಿ ಅಕ್ಷರಲೋಕ
ಧನ್ಯತಾ ಭಾವ ತಳೆದಿದ್ದರೆ, ರಸಿಕಜನ ತನ್ಮಯರಾಗಿದ್ದಾರೆ,
ಕನ್ನಡದ ಮಣ್ಣು ಫಲ ಮೊಳೆಸಿ ಮೆರೆಯುತ್ತಿದ್ದರೆ
ಇದಕ್ಕೆ ಕಾರಣ ಶ್ರೀಯುತರು ಮೈಗೂಡಿಸಿಕೊಂಡಿರುವ
ಸೃಜನಶೀಲತೆ ಮತ್ತು ಸತ್ಫಲ ಸಂಪನ್ನತೆ
ಅದಕ್ಕೊಂದೇ ಈ ಗ್ರಂಥದ ಹೆಸರು; "ಸೃಜನ ಸಂಪನ್ನ".

# ಹೊಸ ಸೃಷ್ಟಿ, ಹೊಸ ದೃಷ್ಟಿ

✍ ಮಾರುತಿ ಶಿವರಾಂ
ಚಲನಚಿತ್ರ ನಿರ್ದೇಶಕರು

ಇಲ್ಲಿಗೆ ೨೦ ವರ್ಷಗಳ ಹಿಂದಿನ ಮಾತು, ನನ್ನ ಮೊದಲನೇ ಚಿತ್ರ "ಮಹಾತ್ಯಾಗ" ಬಿಡುಗಡೆ ಆಯಿತು, ಆ ದಿನಗಳಲ್ಲಿ ಸಿನಿಮಾಕ್ಕೆ ಹಾಡುಗಳನ್ನು ಬರೆಯುವ ಕವಿಗಳು ಬಹಳ ಕಡಿಮೆ. ಆ ದೃಷ್ಟಿಯಿಂದಲೇ ನಾನು ಹೊಸ ಪ್ರತಿಭೆಯನ್ನು ಗುರುತಿಸಿ ಡಾ|| ಚಂದ್ರಶೇಖರಕಂಬಾರರಿಂದ ಒಂದು ಹಾಡನ್ನು ಬರೆಸಿದೆ. ಮುಂದಿನ ಚಿತ್ರಗಳಲ್ಲೂ ಹೊಸ ಪ್ರತಿಭೆಗಳಿಗೆ ಅವಕಾಶಕೊಡಬೇಕೆಂದು ನಿರ್ಧರಿಸಿದೆ.

ನನ್ನ ಮೊದಲ ಚಿತ್ರ ಬಿಡುಗಡೆಯಾಗಿ ಸಾಕಷ್ಟು ಹೆಸರುಗಳಿಸಿ ಮುಂದಿನ ಚಿತ್ರಕ್ಕೆ ಕೈ ಹಾಕಲು ಧೈರ್ಯ ತಂದು ಕೊಟ್ಟಿತು. ಈ ದಿಸೆಯಲ್ಲಿ ಒಂದು ಒಳ್ಳೆಯ ಕಥೆಯ ಹುಡುಕಾಟದಲ್ಲಿ ಇದ್ದಾಗ "ಪರಸಂಗದ ಗೆಂಡೆತಿಮ್ಮ" ಪುಸ್ತಕ ನನಗೆ ಸಿಕ್ಕಿತು; ಓದಿ ಸಂತೋಷ ಪಟ್ಟು ಗೆಳೆಯರ ಸಹಾಯದಿಂದ ಈ ಚಿತ್ರ ಮಾಡಲು ನಿರ್ಧರಿಸಿದೆ. ಇದು ಸಂಪೂರ್ಣ ಗ್ರಾಮೀಣವಲಯದ ಚಿತ್ರವಾದ್ದರಿಂದ ಹಾಡುಗಳನ್ನು ಗ್ರಾಮೀಣ ಭಾಷೆಯ ಬಳಕೆಯಲ್ಲಿಯೇ ಬರೆಸಬೇಕೆಂದು ನಿರ್ಧರಿಸಿದೆ. ಅಂತಹ ಪ್ರತಿಭೆಗಾಗಿ ಶೋಧನಾ ಕಾರ್ಯದಲ್ಲಿರುವಾಗ ಹೊನ್ನಯ್ಯ ಎಂಬ ಮಿತ್ರರೊಬ್ಬರು ದೊಡ್ಡರಂಗೇಗೌಡರ ಹೆಸರನ್ನು ಸೂಚಿಸಿದರು. ಸರಿ ಅವರನ್ನು ಬರಮಾಡಿಕೊಂಡೆವು.

ದೊಡ್ಡರಂಗೇಗೌಡರು, ಹೆಸರೇ ಸೂಚಿಸುವಂತೆ ದೊಡ್ಡ ವ್ಯಕ್ತಿ. ಜೊತೆಗೆ ಅವರು ಎಂ.ಎ. ಓದಿ ಅಧ್ಯಾಪಕರಾಗಿರೋರು ಅಂತಹವರು ಈ ಸಿನಿಮಾಕ್ಕೆ ಹಾಡು ಬರಿತಾರೋ ಇಲ್ವೋ ಅಂತಾ ಯೋಚ್ನೆ ಮಾಡಿದ್ವಿ. ಆ ಮೇಲೆ ಏನಾದ್ರೂ ಆಗ್ಲಿ ಕೇಳೇಬಿಡೋಣ ಅಂತಾ ಗೌಡರನ್ನು ಕೇಳಿದ್ವಿ ಗೌಡರು ಬಹಳ ಸಂತೋಷದಿಂದ ಖಂಡಿತಾ ಬರೀತೀನಿ ಅಂತ ಹೇಳಿದ್ರು.. ಈ ವೇಳೆಗಾಗಲೇ ಗೌಡ್ರು "ಮಾಗಿಯ ಕನಸು" ಅನ್ನೋ ಚಿತ್ರಕ್ಕೆ ವಿಜಯಭಾಸ್ಕರವರ ನಿರ್ದೇಶನದಲ್ಲಿ ಒಂದು ಹಾಡು ಬರೆದಿದ್ದರು. ನಮ್ಮ ಗೆಳೆಯರಿಗೆಲ್ಲಾ ಬಹಳ ಸಂತೋಷ ಆಯ್ತು. ಗೌಡರನ್ನು ನಮ್ಮ ಜೊತೆಗೆ ಮದ್ರಾಸಿಗೆ ಕರ್ಕೊಂಡು ಹೋದೆವು.

ಮದ್ರಾಸಲ್ಲಿ ಸ್ವಾಗತ್ ಹೋಟೆಲ್‌ನಲ್ಲಿ ರೂಂ ಮಾಡಿ, ಖ್ಯಾತ ಸಂಗೀತ ನಿರ್ದೇಶಕರಾದ ರಾಜನ್ ನಾಗೇಂದ್ರ ಅವರನ್ನು ಗೌಡರಿಗೆ ಪರಿಚಯ ಮಾಡಿಸಿಕೊಟ್ವೆ. ರಾಜನ್ ನಾಗೇಂದ್ರ ಅವರು ಹಾಕಿರುವ ಟ್ಯೂನನ್ನು ಮತ್ತೊಮ್ಮೆ ನಮ್ಮೆಲ್ಲರಿಗೂ ಕೇಳಿಸಿ ಕೆಲವು ಮಾರ್ಪಾಟುಗಳೊಡನೆ ಗೀತರಚನೆ ಮಾಡಿಸಲು ಪ್ರಾರಂಭಿಸಿದರು.

ಈ ಚಿತ್ರಕ್ಕೆ ಗೌಡರು ಒಟ್ಟು ನಾಲ್ಕು ಹಾಡುಗಳನ್ನು ಬರೆಯಬೇಕಿತ್ತು. ನಾವು ತಯಾರಿಸುತ್ತಿರುವ ಚಿತ್ರ ಕಡಿಮೆ ಬಂಡವಾಳದ ಚಿತ್ರವಾದರೂ ಗೌಡರಿಗೆ ಸಂಪೂರ್ಣ ಕಾಲಾವಕಾಶಕೊಟ್ಟು ಅವರಿಂದ ಉತ್ತಮ ಸಾಹಿತ್ಯ ನಿರೀಕ್ಷಿಸಿದೆವು. ಗೌಡರೂ ಕೂಡ ನಮ್ಮ ನಿರೀಕ್ಷೆ ಹುಸಿಮಾಡದೆ ಉತ್ತಮ ಸಾಹಿತ್ಯದ ಮೂರು ಹಾಡು ಸಿದ್ಧಪಡಿಸಿದರು. ನನಗಂತೂ ಬಹಳ ಮೆಚ್ಚಿಗೆ ಆಯಿತು.

ಅದರಲ್ಲಿ "ನೋಟದಾಗೆ ನಗೆಯ ಮೀಟಿ" ಹಾಡನ್ನು ಎರಡು ಸಂದರ್ಭಗಳಲ್ಲಿ ಬಳಸಬೇಕಿತ್ತು, ಒಂದು ಸಂತೋಷದ ಸಂದರ್ಭ, ಮತ್ತೊಂದು ದುಃಖದ ಸನ್ನಿವೇಶದ ಹಾಡು "ನೋಟದಾಗೆ ನಗೆಯ ಮೀಟಿ", ಬಹಳ ಉತ್ತಮವಾದ ಸಾಹಿತ್ಯವಾಗಿತ್ತು. ಆ ಸಾಹಿತ್ಯಕ್ಕೆ ತಕ್ಕಂತೆ ರಾಜನ್-ನಾಗೇಂದ್ರ ಅವರ ರಾಗ - ಸಂಯೋಜನೆ ಹೊಂದಿಕೊಂಡಿತ್ತು. ಎಲ್ಲರಿಗೂ ಬಹಳ ಸಂತೋಷವಾಯಿತು. ಉಳಿದ ಒಂದು ಹಾಡನ್ನು ಬರೆಯಲು ಗೌಡರು ಉತ್ಸಾಹದಿಂದ ಕುಳಿತರು.

ಗೌಡರು ಅತ್ಯಂತ ಪರಿಶ್ರಮದಿಂದ ರಾತ್ರಿಯೆಲ್ಲಾ ಕುಳಿತು ಹಲವು ಹತ್ತಾರುಸಲ ಪಲ್ಲವಿ, ಅನುಪಲ್ಲವಿ, ಚರಣಗಳನ್ನು ಬೇರೆ ಬೇರೆ ದಾಟಿಯಲ್ಲಿ ಬರೆದರು. ಆ ಹೊಸ ಸೃಷ್ಟಿ ಹೊಸ ದೃಷ್ಟಿಯಲ್ಲಿ ಹುಟ್ಟಿದ್ದೇ "ತೇರಾ ಏರಿ ಅಂಬರದಾಗೆ". ಈ ಹಾಡು ಕನ್ನಡಿಗರ ಮನೆಮಾತಾಗಿ ದೊಡ್ಡರಂಗೇಗೌಡರನ್ನು ಒಂದು ವಿಶಿಷ್ಟ ಸ್ಥಾನದಿಂದ ಗುರುತಿಸಿದೆ. ಬಹುಶಃ ಸಿನಿಮಾಕ್ಕಾಗಿ ಹಾಡು ಬರೆದು, ಪಠ್ಯ ಪುಸ್ತಕದಲ್ಲಿ ಸೇರಿರುವ ದಾಖಲೆ ಎಂದರೆ ದೊಡ್ಡರಂಗೇಗೌಡರೊಬ್ಬರದ್ದೆ!

"ಪರಸಂಗದ ಗೆಂಡೆತಿಮ್ಮ" ಚಿತ್ರ ಆಗಸ್ಟ್ ೧೮ ರ ೧೯೭೮ರಂದು ಬಿಡುಗಡೆಯಾಯಿತು. ಆ ದಿನಗಳಲ್ಲಿ ಕನ್ನಡ ಹಾಡಿಗೆ ಸೃಜನಶೀಲ ಸಾಹಿತ್ಯವೇ ಇಲ್ಲದೆ ಹಿಂದಿ ಹಾಡಿನ ಅನುಕರಣೆಗಳು ಆ ಸಂದರ್ಭದಲ್ಲಿ ಹೆಚ್ಚು ಚಲಾವಣೆಯಲ್ಲಿದ್ದವು. ಗೆಂಡೆತಿಮ್ಮದ ಹಾಡುಗಳು ಕನ್ನಡ ಚಿತ್ರ ರಂಗದಲ್ಲಿ ಹೊಸ ಅಲೆಯನ್ನೇ ಎಬ್ಬಿಸಿ ಜನ-ಮನದ ಮೆಚ್ಚಿಗೆ ಗಳಿಸಿದವು.

### ಏಳು ಬೀಳಿನ ಹಾದಿ

✍ ಡಾ. ಕೆ. ವಿ. ತಿರುಮಲೇಶ್

ಏಳುಬೀಳಿನ ಹಾದಿಯಲ್ಲಿ ಅನೇಕ ಉತ್ತಮ ಕವಿತೆಗಳಿವೆಯೆಂಬುದರಲ್ಲಿ ಸಂದೇಹವಿಲ್ಲ.

ಯುವಕ, ಮಳೆಯು ಬಂದಾ ಮಾರನೇ ದಿನ, ಮುಸ್ಸಂಜೆ, ಓಡುವ ನದಿಯ ತೊಡೆಯ ಮೇಲೆ, ವಿಚಾರ ವೀಳ್ಯ ಮುಂತಾಗಿ ಹೆಸರಿಸುತ್ತಾ ಹೋಗಬಹುದು. ಕನ್ನಡ ಭಾಷೆಯನ್ನು ದೊಡ್ಡರಂಗೇಗೌಡರು ಲೀಲಾಜಾಲವಾಗಿ ಬಳಸುವ ಶಕ್ತಿ ಹೊಂದಿದ್ದಾರೆ.

# ಜನಪರ ಧೋರಣೆಯ ಕವಿ

✍ ರಾಮಣ್ಣ ಎಚ್. ಕೋಡಿಹೊಸಹಳ್ಳಿ
ಪತ್ರಕರ್ತರು

ಶ್ರೀ ದೊಡ್ಡರಗೇಗೌಡ ಅವರದು ಹೆಸರಿಗೆ ತಕ್ಕಂತೆ ಕನ್ನಡ ಸಾಹಿತ್ಯ ಹಾಗೂ ಚಲನ ಚಿತ್ರ ಕ್ಷೇತ್ರಗಳಲ್ಲಿ ದೊಡ್ಡ ಹೆಸರು. ಇಂದಿನ ದಿನಗಳಲ್ಲಿ ಸಾಮಾನ್ಯವಾಗಿಬಿಟ್ಟಿರುವ 'ಗಾಡ್‌ಫಾದರ್'ಗಳ ಕೃಪೆ ಇಲ್ಲದೆಯ ಸ್ವಯಂ ಸಾಮರ್ಥ್ಯದಿಂದ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಮುನ್ನಡೆದಿರುವ ಅವರು, ನಿಷ್ಕಳಂಕ ಮನಸ್ಸು ಸ್ನೇಹಪರತೆ, ಸರಳ ಸಜ್ಜನಿಕೆಗಳಿಂದ ತಮಗೆ ಪರಿಚಿತರಾದ ಎಲ್ಲರ ಪ್ರೀತಿಗೂ ಪಾತ್ರರಾಗಿದ್ದಾರೆ. ತಮ್ಮ ಕನ್ನಡಪರ ಹಾಗೂ ಜನಪರ ಧೋರಣೆಗಳಿಂದಾಗಿ ಕರ್ನಾಟಕದ ಮೂಲೆ ಮೂಲೆಗಳಲ್ಲಿ ತಮ್ಮದೇ ಆದ ಅಭಿಮಾನಿ ವೃಂದವನ್ನು ಹೊಂದಿದ್ದಾರೆ.

ಎಂ. ಎ. ವ್ಯಾಸಂಗದ ಬಳಿಕ ಬದುಕಿಗಾಗಿ ಅವರು ಉದ್ಯೋಗಕ್ಕೆ ತೊಡಗಿದುದು ಪ್ರತ್ರಿಕಾ ಕ್ಷೇತ್ರದಲ್ಲಿ. ಆದರೆ ಅನತಿ ಕಾಲದಲ್ಲಿಯೇ ಅವರು ತಮ್ಮ ತಂದೆಯವರು ಮಾಡುತ್ತಿದ್ದ ಶಿಕ್ಷಕ ವೃತ್ತಿಯನ್ನೇ ಅಪ್ಪಿಕೊಂಡರು. ಜೊತೆ ಜೊತೆಗೇ ತಮ್ಮ ಮೆಚ್ಚಿನ ಕಾವ್ಯ ಕ್ಷೇತ್ರದಲ್ಲಿ ಅಪಾರ ಕೃಷಿ ಮಾಡಿ ಹೆಸರು ಮಾಡಿದ್ದಾರೆ. ಓದುಗರು ಮತ್ತು ಕೇಳುಗರ ದೃಷ್ಟಿಯಲ್ಲಿ ರಂಗೇಗೌಡರದು 'ದೊಡ್ಡ' ಹೆಸರಾದರೂ ಪಟ್ಟಭದ್ರ ಹಿತಾಸಕ್ತಿಯಿಂದ ಕೂಡಿದ ಪರಸ್ಪರ ಪ್ರಸಂಶಾ ಕೂಟವನ್ನು ಹೊಂದಿರುವ ಕನ್ನಡ ವಿಮರ್ಶೆ ಕ್ಷೇತ್ರದಲ್ಲಿ ಅವರನ್ನು ಅರ್ಹತೆಗನುಗುಣವಾಗಿ ಪರಿಗಣಿಸದಿರುವುದು ದುರದೃಷ್ಟಕರ.

ಕಳೆದ ಒಂದುವರೆ ದಶಕದಿಂದ ಚಲನಚಿತ್ರ ಕ್ಷೇತ್ರದಲ್ಲಿಯೂ ತಮ್ಮ ಸಾಹಿತ್ಯಕ ಗೀತೆಗಳ ಮೂಲಕ ಕನ್ನಡ ಚಿತ್ರ ರಸಿಕರ ಮನಸ್ಸನ್ನು ಸೂರೆಗೊಂಡಿರುವ ಈ ಗೌಡರ ಬಗೆಗೆ ಪತ್ರಿಕಾ ಮಾಧ್ಯಮವೂ ಸಹ ನಿರೀಕ್ಷಿತ ಪ್ರಮಾಣದಲ್ಲಿ ನ್ಯಾಯ ದೊರಕಿಸುವ ಹಾಗೆ ಬರೆದಿಲ್ಲ. ಕೇವಲ ಒಂದೆರಡು ಚಿತ್ರಗಳಿಗೆ ಗೀತೆಬರೆದ ಸಾಹಿತಿಯನ್ನು ಹಾಡಿ ಹೊಗಳಿ ಪುಟಗಟ್ಟಲೆ ಬರೆದ ನಮ್ಮ ಚಲನ ಚಿತ್ರ ಪತ್ರಕರ್ತರು, ಎಲ್ಲಾ ವಯೋಮಾನದವರನ್ನು ರಂಜಿಸುವಂತಹ ಗೀತೆಗಳನ್ನು ರಚಿಸಿರುವ ದೊಡ್ಡರಂಗೇಗೌಡರ ಬಗೆಗೆ ಅದೇ ಉದಾರತೆಯನ್ನು ತೋರದೆ ಹೋದುದು ವಿಷಾದಕರ. ದೊಡ್ಡರಂಗೇಗೌಡರು ಇದಾವುದನ್ನೂ ಲೆಕ್ಕಿಸದೆ ತಾವು ತುಳಿದ ಹಾದಿಯಲ್ಲಿ ಮುನ್ನಡೆದು ನಾಡಿನ ಜನಮನದಲ್ಲಿ ಸ್ಥಾನ ಪಡೆದುಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ಗಾಯನದಲ್ಲಿಯೂ ಆಸಕ್ತಿ ತಳೆದಿರುವ ಅವರು ಒಂದೆರಡು ಧ್ವನಿಸುರುಳಿಗಳಲ್ಲಿ ಸ್ವತಃ ಹಾಡುವ ಮೂಲಕ ಆ ರಂಗದಲ್ಲಿಯೂ ಪ್ರತಿಭೆಯನ್ನು ಮೆರೆದಿದ್ದಾರೆ.

ಗ್ರಾಮೀಣ ಪರಿಸರದಿಂದ ಬಂದ 'ದೊರಂಗೌ' ಅವರು ನಗರದ ಬೆಡಗಿನ ರಂಗು-ರಂಗಿನ ಜೀವನಕ್ಕೆ ಹಾತೊರೆಯದೆ ತಮ್ಮ ಕಾವ್ಯ ಹಾಗೂ ಚಲನಚಿತ್ರ ಗೀತೆಗಳಲ್ಲಿ ಗ್ರಾಮೀಣ ಸೊಗಡನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿದ್ದಾರೆ. ನಿರಾಡಂಬರ ಬದುಕು ನಡೆಸುತ್ತಾ ನಿಗರ್ವಿಯಾಗಿ ಎಲ್ಲರೊಡನೆ ಬೆರೆತು ಬಾಳುತ್ತಾ ಐವತ್ತು ವಸಂತಗಳನ್ನು ಕಂಡಿದ್ದಾರೆ. ಈ ಶುಭ ಸಂಧರ್ಭದಲ್ಲಿ ಅವರ ಶಿಷ್ಯ ವೃಂದ ಹಾಗೂ ಅಭಿಮಾನಿ ಬಳಗ ಅವರನ್ನು ಗೌರವಿಸಿ, ಅಭಿನಂದನಾ ಗ್ರಂಥವೊಂದನ್ನು ಸಮರ್ಪಿಸಲು ಮುಂದಾಗಿರುವುದು ಅತ್ಯಂತ ಸಂತೋಷದ ಹಾಗೂ ಸ್ತುತ್ಯಾರ್ಹವಾದ ಸಂಗತಿ. 'ದೊರಂಗೌ'ರಿಂದ ಕನ್ನಡ ಸಾರಸ್ವತ ಪ್ರಪಂಚಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲುವಂತಾಗಲಿ ಎಂಬುದು ನಮ್ಮ ಶುಭ ಹಾರೈಕೆ.

ಕನ್ನಡ ಸಂಘರ್ಷ ಸಮಿತಿಯ ಆಜೀವ ಸದಸ್ಯರಲ್ಲಿ ಒಬ್ಬರು, ಹಿತೈಷಿಗಳೂ ಆದ ಗೌಡರು, ನಾವು ಕೇಳಿಕೊಂಡಾಗಲೆಲ್ಲ ನಮ್ಮ ಕರೆಗೆ ಓಗೊಟ್ಟು ಸಮಿತಿಯ ಚಟುವಟಿಕೆಗಳಲ್ಲಿ ಭಾಗಿಯಾಗಿ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿರುವುದನ್ನು ಈ ಸಂದರ್ಭದಲ್ಲಿ ತುಂಬು ಹೃದಯದಿಂದ ಸಮಿತಿ ನೆನೆಯುತ್ತದೆ. ಅವರು ನೂರ್ಕಾಲ ಬಾಳಲಿ, ನಾಡು-ನುಡಿಗಳಿಗೆ ಅವರಿಂದ ಕೀರ್ತಿ ಪ್ರತಿಷ್ಠೆಗಳು ಲಭಿಸುವಂತಾಗಲಿ ಎಂದು ಸಮಿತಿಯ ಹಾರೈಕೆ.

## ಬೆಳಕಿನೈಶ್ವರ್ಯ

✍ ರಾಜಾನಂದ್

ಮುಸುಕಿರುವ ಕರಾಳ ಕತ್ತಲೆಯಲ್ಲೂ
ಮಿರಿ ಮಿರಿ ಮಿಂಚುವವರು ನೀವು;
ಭವದ ಹುಳಿಯನ್ನು ಮಧುರಗೊಳಿಸುವ
ನಿಮ್ಮ ವೈಚಾರಿಕ ಕವನಗಳು
ನನಗೆ ನಿಜವಾಗಿಯೂ ಬೆಳಕಿನೈಶ್ವರ್ಯವು!

# "ಭಾವ ಗಂಧರ್ವ" - ಕವಿ ದೊಡ್ಡರಂಗೇಗೌಡರು

✍ ಜಯಶ್ರೀ ಅರವಿಂದ್
*ಸಂಗೀತ ನಿರ್ದೇಶಕರು*

ಭಾವಗೀತ ರಚನಾಕಾರದಲ್ಲಿ ಶ್ರೀ ದೊಡ್ಡರಂಗೇಗೌಡರದು ಬಹುದೊಡ್ಡ ಹೆಸರು. ಅವರನ್ನು ಅರಿಯದವರೇ ಇಲ್ಲ, ಅಕ್ಷರಸ್ಥರಿಂದ ಅನಕ್ಷಕಸ್ಥರವರೆವಿಗೆ ಅವರು ಅತ್ಯಂತ ಜನಪ್ರಿಯಕವಿ. ಗೀತರಚನಕಾರ. ಕವಿಯಾದರೋ ಪಾಂಡಿತ್ಯ ಪ್ರೇಮಿಗಳನ್ನು ಮಾತ್ರ ಆಕರ್ಷಿಸಬಲ್ಲ. ಆದರೆ ಗೀತರಚನಕಾರ ಪಂಡಿತರಿಂದ ಪಾಮರರವರೆವಿಗೆ ಎಲ್ಲರನ್ನೂ ಏಕಕಾಲದಲ್ಲಿಯೇ ತನ್ನತ್ತ ಸೆಳೆದುಕೊಳ್ಳಬಲ್ಲ. ದೊಡ್ಡರಂಗೇಗೌಡರಾದರೋ ಸವ್ಯಸಾಚಿ. ಅವರು ಈ ಎರಡೂ ಪ್ರಕಾರಗಳಲ್ಲೂ ಸಲ್ಲುವವರು.

ಯಾವ ಸದ್ದುಗದ್ದಲಗಳ ಅಬ್ಬರ, ಪರಾಕು ಇಲ್ಲದೆ ನಿಃಶಬ್ದ ಪ್ರವಾಹವಾಗಿ ಪ್ರವಹಿಸಿದವರು. ಅವರ ಕವಿತೆಗಳಲ್ಲಿ ಉತ್ತಮ ಭಾವಗೀತೆಯ ಎಲ್ಲಾ ಲಕ್ಷಣಗಳು ಥಾಳಾಗಿರುತ್ತವೆ. ಜಾನಪದ ಭಾಷೆಯ ಸಹಜತೆ ಸರಳತೆಗಳೇ ಮೈವೆತ್ತ ಅವರ ಕಾವ್ಯಕನ್ನಿಕೆ, ಗೇಯತೆಯ ಅನುಪಮ ಸುಂದರ ನವಿರು ಹೊದಿಕೆಯೊಂದಿಗೇ ಮೂಡಿಬರುತ್ತಾಳೆ. ಇದು ದೊಡ್ಡರಂಗೇಗೌಡರ ಗೀತೆಗಳ ವಿಶೇಷತೆ. ಜೊತೆಗೆ ಆಡುಮಾತಿನ ಬನಿ, ಅಪೂರ್ವ ಮೋಡಿ ಮಾಡುತ್ತವೆ. ಅವರ ಹಾಡುಗಳು ಅವರದೇ ಸ್ವಂತ ಛಾಪನ್ನು ಒತ್ತಿ ನಿಲ್ಲುತ್ತವೆ. ಶ್ರೋತೃಗಳಿಗೆ ಅವರ ಹಾಡಿನ ಎರಡು ಸಾಲುಗಳನ್ನು ಕೇಳಿದಾಗಲೇ ಅವು ದೊ.ರಂ.ಗೌಡರದೇ ಎಂಬುದು ನಿಚ್ಚಳವಾಗಿ ಅರಿವಾಗುತ್ತದೆ. ವಸ್ತು, ಭಾವ, ರೀತಿ, ಗುಣ ಈ ನಾಲ್ಕು ವಿಶೇಷತೆಗಳಲ್ಲಿ ದೊ.ರಂ.ಗೌಡರು ಸಿದ್ಧಹಸ್ತರು ಮುಗ್ಧ ಪ್ರೇಮಗೀತೆಯಿಂದ ವೈರಾಗ್ಯದವರೆವಿಗೆ, ಬುದ್ಧಿಮಾತಿನಿಂದ ನಾಡಗೀತೆಯವರೆವಿಗೆ ಇವರ ಗೀತೆಗಳು ಗಂಧರ್ವರಂತೆ, ಕಿನ್ನರರಂತೆ ಗಾಳಿಯಲ್ಲಿ ತೇಲಿಕೊಂಡೇ ನಾದಮಯವಾಗಿ ಮೂಡುತ್ತವೆ.

ದೊಂ.ರಂ.ಗೌಡರು ಹಳ್ಳಿಯ ಗ್ರಾಮ್ಯ ಭಾಷೆಯಲ್ಲಿ ಪ್ರಕೃತಿಯ ಚಿತ್ರಣವನ್ನು ಅತ್ಯಂತ ಚೆಲುವಾಗಿ ನೀಡಿದ ವಿನೂತನರೆನ್ನಬಹುದು.

ಇವರು ಕವಿತೆಗಳಲ್ಲಿ ನೇಸರಿನ ಪಾತ್ರ ಒಂದು ಕಥೆಯಲ್ಲಿ ಬರುವ ನಾಯಕನ ಪಾತ್ರದಷ್ಟೆ ಪ್ರಮುಖವಾಗಿದೆ. 'ತೇರ ಏರಿ ಅಂಬರದಾಗೆ ನೇಸರು ನಗುತಾನೆ' ಎಂದು ಆರಂಭವಾಗುವ ಕವಿತೆಯಲ್ಲಿ ನೇಸರಿನ ಸುಂದರ ಚಿತ್ರದೊಂದಿಗೆ ಅವನ ಮಹತ್ವಗುಣವನ್ನು ವರ್ಣಿಸುತ್ತಾರೆ. ಭೇದ ಭಾವ ಮುಚ್ಚುಮರೆ ಒಂದೂ ಮಾಡ್ದೇನೇ ಆ ಸೂರ್ಯ ಒಂದೇ ಬೆಳಕಾ ನಮಗೆ ನೀಡ್ತಾನೆ - ಎರಡು ಸಾಲುಗಳಲ್ಲಿ

ನೇಸರಿನ ಚೆಲುವಿನ ಇನ್ನೊಂದು ಪ್ರಮುಖ ಗುಣವಾದ ಸರ್ವೋದಯ ಸಮಾನತೆಗಳನ್ನು ಪ್ರತಿಧ್ವನಿಸುತ್ತವೆ.

ಪ್ರೀತಿಗೂ ಬೆಳೆದಿಂಗಳಿಗೂ ಅನಾದಿಕಾಲದ ನಂಟು. 'ಹೋಳಿ ಹುಣ್ಣಿಮೆ' ಮೂಡಿದಾಗ ಪ್ರೀತಿಪೂರ ಉಕ್ಕುತ್ತದೆ. ಆ ಹುಣ್ಣಿಮೆಯ ಪ್ರೇಮಿಗಳನ್ನು ಕಾಡುತ್ತದೆ ಕೂಡಾ. ದೊ.ರಂ.ಗೌಡರ "ಹೋಳಿಹುಣ್ಣಿಮೆ" ಕವಿತೆಯಲ್ಲಿ ಹುಣ್ಣಿಮೆ ಮೂಡಿದಾಗ ಪ್ರೀತಿ ಉಕ್ಕುತ್ತದೆ. ಹುಣ್ಣಿಮೆ ಕಾಡಿದಾಗ ಕನಸು ಮನಸುಗಳ ತೇಲುತ್ತದೆ. ಹುಣ್ಣಿಮೆ ಹಾಡಿದಾಗ ಪ್ರೇಮಿಗಳಲ್ಲಿ ಅಂತರ ಕಡಿಮೆಯಾಗುತ್ತದೆ. ಹುಣ್ಣಿಮೆ ನೋಡಿದಾಗ ಭಾವ ಥಳ ಥಳ ಹೊಳೆಯುತ್ತದೆ. ಆ ಪ್ರೀತಿಯ ರೀತಿಯಾದರೋ ಹೇಗಿರುತ್ತದೆ. ಎಂಬುದನ್ನು 'ಪ್ರೇಮಸಿಂಧು' ಎನ್ನುವ ಕವಿತೆ ಬಿರುಬೇಗೆಯಲ್ಲಿ ನಲ್ಮೆ ಸೋಗೆ ನವಿಲು ಕುಣಿಕುಣಿದ ಮೋದವನ್ನು ಬಣ್ಣಿಸುತ್ತದೆ. 'ನಮ್ಮೂರ್ರ ಮಂದಾರದ ಹೂವೆ' ಎನ್ನುವ ಗೀತೆಯಲ್ಲಿ ಪ್ರೀತಿಯ ಮಂದಾರ ಹೂವು ಬಾಂದಳದ ಚೆಲುವಿಗೆ ಸರಿಸಾಟಿಯಾಗಿ ಬಾಳನ್ನು ಬೆಳಗುತ್ತದೆ.

ಹೂವು ಗಂಧ ಬೆರೆತಂತೆ ಎನ್ನುವ ಮತ್ತೊಂದು ಕವಿತೆಯಲ್ಲಿ ಪ್ರೇಮಿಗಳ ಸಂಗಮವನ್ನು ಬೇರ್ಪಡಿಸಲಾಗದ ಹೂವು - ಗಂಧಗಳಿಗೆ ಹೋಲಿಸುತ್ತಾರೆ. ತಾಳ ಮೇಳಗಳಿಗೆ ಹೋಲಿಸುತ್ತಾರೆ ಸೂರ್ಯ ಚಂದ್ರರಿಗೂ ಹೋಲಿಸುತ್ತಾರೆ ಕವಿಯ ಭಾವನೆಗಳು ಗರಿಕೆದರಿ ಬಾನ ಬೆಳ್ಳಕ್ಕಿಯಾಗಿ ಪ್ರೀತಿ ಲೋಕಕ್ಕೆ ಹಾರಾಡುತ್ತವೆ. ಪ್ರೀತಿ ಇಲ್ಲದ ಬಾಳು 'ಪ್ರಾಣವಿರದ ದೇಹ' ಎನ್ನುವ ಕವಿತೆ, ಪ್ರೀತಿ ಏಳು ಬೀಳು'ವಿನಲ್ಲಿ 'ಪ್ರೀತಿಯನ್ನು ಉಲ್ಲಾಸದ ಹೊನಲಿಗೆ ನಿತ್ಯ ಸತ್ಯದ ಸುಖದ ಕಡಲಿಗೆ ಹೋಲಿಸುವಲ್ಲಿ ಕವಿಯ ಸಮೃದ್ಧ ಭಾವನೆಗಳು ಗರಿಗೆದರುತ್ತವೆ.

ಪ್ರೀತಿಯನ್ನು ಉಲ್ಲಾಸದ ಕಡಲಿಗೆ ಹೋಲಿಸುವ ಕವಿ, ವಿರಹವನ್ನು 'ಈ ವಿರಹ ಕಡಲಾಗಿದೆ ನೀನಿರದೆ' ಎಂದು ಕಡಲಿನ ವಿಸ್ತಾರದಂತೆ (ದೀರ್ಘತೆಯಂತೆ) ಮುಗಿಯದಾಗಿದೆ; ಎನ್ನುವ ಉಪಮೆ ನೀಡುತ್ತಾರೆ. ಒಂದೇ ಉಪಮೆಯನ್ನು ದುಃಖ-ಸುಖಗಳಿಗೆ ಬಳಸಿರುವಲ್ಲಿ ದೊ.ರಂ.ಗೌಡರ ಜಾಣ್ಮೆಯನ್ನು ಮೆಚ್ಚಲೇಬೇಕು. ಪ್ರೀತಿಯನ್ನು ವಿವಿಧ ಭಾವಗಳಲ್ಲಿ ಪ್ರಕಾಶಪಡಿಸುವ ಕವಿ, ವಿರಹವನ್ನು ಅಷ್ಟೇ ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ. ಪ್ರೇಮಿಗಳನ್ನು ಅಗಲಿಸುವ ಅಷಾಢ ಮಾಸ ಯಾಕೆ ಬಂತೋ ಭೂಮಿಯ ಮ್ಯಾಗೆ ಎಂಬ ಮತ್ತೊಂದು ಕವನ ನವದಂಪತಿಗಳ ಅಗಲಿಕೆಯ ವಿರಹ ವೇದನೆಯನ್ನು ಮಿಡಿಯುತ್ತದೆ.

ದೊ.ರಂ.ಗೌಡರ ಪ್ರಕೃತಿ, ಪ್ರಣಯ, ವಿರಹದ ಬಗೆಗೆ ಗೀತೆಗಳನ್ನು ಬರೆಯುವಂತೆ, ಮಾನವ ವ್ಯಕ್ತಿತ್ವಕ್ಕೂ ಕನ್ನಡಿ ಹಿಡಿದು ಋತದ ಹಾದಿಯಲ್ಲಿ ಆತ ಸಾಗಬೇಕೆಂದು ಎಚ್ಚರಿಕೆ ನೀಡುತ್ತಾರೆ. ಬದುಕನ್ನ ಹೇಗೆ ಸ್ವೀಕರಿಸಬೇಕೆಂದು ಕವಿಮಾತು ಹೇಳುತ್ತಾರೆ.

ಮಾನವ ತನ್ನ ಅಹಂಕಾರವನ್ನು ತಾನೇ ದಮನಿಸಿ ಸ್ನೇಹದಿಂದ ಬಾಳಬೇಕೆಂಬುದನ್ನು 'ಮೆರೆಯಬೇಡವೋ ಮನುಜ, ಅಂತರಾಳದ ಅಂಕೆ ಮೀರಿ' ಎಂಬ ಕವಿತೆಯಲ್ಲಿ ಸ್ಪಷ್ಟಪಡಿಸುತ್ತಾರೆ. ಭಗವದ್ ಗೀತೆಯ ವಿರಾಟ್‌ದರ್ಶನದಲ್ಲಿ ಅರ್ಜುನ ಕಂಡ ಉಪದೇಶದ ಸಾರವನ್ನು ಮೇಲಿನ ಎರಡು ಸಾಲುಗಳು ಚಿತ್ರವತ್ತಾಗಿ ಮೂಡಿಸುತ್ತವೆ. ಜಾನಪದ ಸೊಗಡಿನ ಭಾಷೆಯ ನಿರೂಪಣೆ ಎದೆಗೆ ತಾಗುತ್ತದೆ. 'ನೋವು ನಲಿವು ಕವಿತೆಯುದ್ದಕ್ಕೂ ಕವಿ' ನೋವು ನಲಿವು ಎಂಬುದೆಲ್ಲಾ ಇದ್ದರೇನೇ ಈ ಬದುಕೆಲ್ಲ..... ಬವಣೆಗೆಂದೂ ಅಂಜಬೇಡಯ್ಯ

ಎಂದು ಧೈರ್ಯ ನೀಡುತ್ತಾರೆ. ಸಹೃದಯ, ತಾಳ್ಮೆಯಿಂದ ಬದುಕಬೇಕೆಂಬುದು ಬುದ್ಧಿಮಾತು ಹೇಳುತ್ತಾರೆ. ಮೋಸ ಕಪಟ ಒಂದೂ ಬೇಡಯ್ಯಾ ಸಹೃದಯ ಎಲ್ಲಾ ಅರಿತು ಪಯಣ ಮಾಡಯ್ಯ ಎಂಬ ಸಾಲುಗಳು ಸರಳತೆ, ಸಹಜತೆಯೊಂದಿಗೆ ಬದುಕಿನ ಮೌಲ್ಯಗಳನ್ನು ಅರ್ಥವತ್ತಾಗಿ ಬಿಂಬಿಸುತ್ತದೆ. ಸಹನೆಯ ಹಾಡಿನಲ್ಲೂ 'ಮೋಸ ಕಪಟ ಕಹಿಯ ಹೊಂಡ - ರೋಷ ಎಂದೂ ಬೆಂಕಿ ಕುಂಡ- ಬಿಡಬೇಕು ನಿದ್ದೆ ಕುರುಡ ಕಲಿಯಯ್ಯ ಸಹನೆ ಹಾಡ - ಎಂಬ ಸಾಲುಗಳು ಮಾನವ ಸಾಗಬೇಕಾಗಿದ್ದ ಬದುಕಿನ ಸತ್ಯದ ದಾರಿಗೆ ಬೆಳಕಾಗುತ್ತದೆ. 'ನಿದ್ದೆ ಕುರುಡ ಕಲಿಯಯ್ಯ ಸಹನೆ ಹಾಡ - ಎಂಬ ಸಾಲುಗಳು ಮಾನವ ಸಾಗಬೇಕಾಗಿದ್ದ ಬದುಕಿನ ಸತ್ಯದ ದಾರಿಗೆ ಬೆಳಕಾಗುತ್ತದೆ 'ನಿದ್ದೆ ಕುರುಡ' ಎನ್ನುವ ಪದದಲ್ಲಿ ಹೊಳೆಯುವ ಅರ್ಥಸಂಪತ್ತು ನಮ್ಮನ್ನು ಬೆರೆಗಾಗಿಸುತ್ತವೆ.

ಬದುಕಿನ ನೈಜ ದರ್ಶನವನ್ನು ಪ್ರಕಾಶ ಪಡಿಸುವ ಮತ್ತೊಂದು ಕವನ 'ಗಾಳಿಗೊಡ್ಡಿದಾ ದೀಪದಂತೆ ನಮ್ಮ ಬಾಳುವೆ'ಯಲ್ಲಿ ಗೌಡರು ನೀಡುವ ಬಾಳಿನ ಚಿತ್ರಣ ಸಾರ್ವಕಾಲಿಕವಾದುದ್ದು. ಬದುಕಿನ ಇತಿ ಮಿತಿಗಳನ್ನು ಅನಿವಾರ್ಯ ಆಗು ಹೋಗುಗಳನ್ನು ಈ ಕವಿತೆ ಕಣ್ಣಿಗೆ ಕಟ್ಟಿದಂತೆ ಮೂಡಿಸುತ್ತದೆ. ಗಾಳಿಗೊಡ್ಡಿದ ಸೊಡರಿನಂತೆ ಮನುಜನ ಬದುಕಿರುವುದು ಹೊಯ್ದಾಟದಲ್ಲೇ. ಈ ಜೀವ ಅಸ್ಥಿರ. ಆದರೆ ನಾವು ಇದನ್ನೇ ಸ್ಥಿರವೆಂದು ನಂಬಿ ಇದಕ್ಕಾಗಿ ಹೋರಾಡುತ್ತೀವಲ್ಲಾ 'ಎಂಬ ಅರ್ಥವಂತಿಕೆಯಲ್ಲಿ ಕವಿ ಮಾರ್ಮಿಕವಾಗಿ ನುಡಿಯುತ್ತಾರೆ.' ರಾಗವು ಗಂಗೆಯಾಗಿ ಹರಿದಂತೆಲ್ಲಾ ಸಂಗವೇ ಭೋಗವು ಮೈಯಲ್ಲೂರಿ ಬೆಳೆದಂತೆಲ್ಲಾ ಕೆಂಡವೆ' ಎಂಬ ಸಾಲುಗಳು - ರಾಗ ಭೋಗಗಳ ಸಮದರ್ಶನವನ್ನು ನೀಡುತ್ತವೆ. ದೊ.ರಂ.ಗೌಡರು ತಮ್ಮ ಕವಿತೆ ಅರಳುವ ಬಗೆಗೆ ತಾವೇ ಬರೆದಿರುವ 'ಕವಿತೆ ಅರಳಿತು' ಕವಿತೆಯಲ್ಲಿ ಹತ್ತೂರ ನೀರು ಕುಡಿದು - ವಿಸ್ತಾರ ರುಚಿಯ ಪಡೆದು - ಎತ್ತರದ ಕನಸು ಬೆಳೆದು - ಚಿತ್ತಾರವಾಯ್ತು ಮನಸು - ಸಾಲುಗಳಲ್ಲಿ ಕವಿಯ ಅನುಭವ, ಅರ್ಥವಂತಿಕೆಯೊಂದಿಗೆ ಜಾಣ್ಮೆಯೂ ಅರಿವಾಗುತ್ತದೆ.

ಗೌಡರ ಕವಿತೆಯು ಹುಟ್ಟಿನಲ್ಲಿಯೇ ನಾದದ ಒರತೆಯಿದೆ, ನಾದದುಡಿಗೆ ಹೊದೆದುಕೊಂಡೇ ಅವರ ಕಾವ್ಯಕನ್ಯೆ ಅಡಿಯಿಡುತ್ತಾಳೆ. ನಾದದ ಮೂಲದಲ್ಲಿ ಹುಟ್ಟಿದ ಹಾಡಿಗೆ ದೀರ್ಘಾಯುಷ್ಯವಿದೆ. ಭಾವಲೋಕವೇ ಕವಿಗೆ ದೇವಲೋಕವಾಗುತ್ತದೆ. ಗಂಧರ್ವಲೋಕವಾಗುತ್ತದೆ. ಗೀತೆಯು ವೃತ್ತದಲ್ಲಿ ನಿಮಗ್ನರಾದ ದೊರಂಗೌಡರು ತಾವು ಆನಂದಾಮೃತದಲ್ಲಿ ತೇಲಾಡಿದ್ದಾರೆ.

ತಮ್ಮ ಕವಿತೆಯನ್ನು ಓದುವ ಸಹೃದಯರನ್ನ ಅದೇ ಆನಂದದ ತುತ್ತತುದಿಗೆ ಕರೆದೊಯ್ಯುತ್ತಾರೆ. ಅವರ ಕಾವ್ಯ ಕನ್ನಿಕೆಯಾದರೂ ಸಹಜ ಸುಂದರಿ. ಪಂಡಿತ ಪಾಮರ ಇಬ್ಬರಿಗೂ ದಕ್ಕುವ ಚೆಲುವೆ. ದೊ.ರಂ.ಗೌಡರು ರಚಿಸಿದ ಹಾಡುಗಳು ಜನಜನಿತವಾಗಲು ೧೯೯೦ರಲ್ಲೇ ಬಿಡುಗಡೆಯಾದ ಅವರ 'ಮಾವು ಬೇವು' ಕ್ಯಾಸೆಟ್ಟು ಕೂಡಾ ಕಾರಣ ಕನ್ನಡ ಭಾಷೆಯ ಕ್ಯಾಸೆಟ್ಟು ಪ್ರಪಂಚದಲ್ಲಿ ಅತ್ಯಂತ ಹೆಸರಾದುದೇ ಅಲ್ಲದೆ, ಮಾರುಕಟ್ಟೆಯಲ್ಲಿ ದಾಖಲೆ ಸ್ಥಾಪಿಸಿತು. ಇಂದಿಗೂ ಅಪಾರ ಬೇಡಿಕೆಯಲ್ಲಿದೆ.

ದೊ.ರಂ.ಗೌಡರ ಕವಿತೆಗಳನ್ನೊಳಗೊಂಡ 'ತಂಗಾಳಿ' ಸ್ನೇಹಸಂಗಾತಿ 'ಪ್ರೇಮ ಪಯಣ' ಹೀಗೆ ಹದಿನಾರು ಕ್ಯಾಸೆಟ್ಟುಗಳು ಹೊರಬಂದಿವೆ. ಜಾನಪದ ಸೊಗಡಿನಲ್ಲಿ ಆಡು ಮಾತಿನ ದನಿಯಲ್ಲಿ ಬಾಳಿನ ಅರ್ಥವಂತಿಕೆಯ ಸಿರಿಯಲ್ಲಿ, ಇವರ ಕವಿತೆಗಳು ಹಾಡುತ್ತಲೇ ಹುಟ್ಟುತ್ತವೆ. ಹುಟ್ಟುತ್ತಲೇ ಹಾಡುತ್ತವೆ.

# ದೊರಂಗೌ ; ಆಶಾವಾದಿತ್ವದ ಪ್ರತೀಕ

✍ ಕ. ನಂ. ನಾಗರಾಜು
ಕನ್ನಡ ಪ್ರಾಧ್ಯಾಪಕರು

. 'ದೊರಂಗೌ' ವಿದ್ಯಾರ್ಥಿಯಾಗಿದ್ದಾಗಲೇ ಕವನಗಳನ್ನು ರಚಿಸಿ, ಪ್ರಕಟಿಸಿ ನಮ್ಮ ನಡುವೆ 'ಹೀರೊ' ಆಗಿದ್ದವರು. ಸ್ನೇಹಪರರು, ದಾಕ್ಷಿಣ್ಯಪರರು, ಆತ್ಮೀಯರು, ವಿನಯಶೀಲರೂ ಆದ 'ದೊರಂಗೌ' ಅವರು ಸರಸಿಗಳು. ನೇರ, ಸರಳ, ಮುಗ್ಧತನದ ಅವರ ನಡವಳಿಕೆ ಗಮನ ಸೆಳೆಯುವಂಥದ್ದು.

ಮೆದುಮಾತಿನ 'ದೊರಂಗೌ ಬೆಚ್ಚನೆಯ ಮನಸ್ಸಿನ ಕವಿ. ಪ್ರತಿಕ್ರಿಯೆಗಳನ್ನು ಅಲಕ್ಷಿಸದೆ ತಮ್ಮ ಪಾಡಿಗೆ ತಾವು ಬರೆಯುತ್ತಾ ಬಂದವರು. ನೋವನ್ನು ನಗೆಯಲ್ಲಿ ತೇಲಿಸುತ್ತಾ ಒಂದಾದ ಮೇಲೆ ಒಂದರಂತೆ ಅವರು ಪ್ರಕಟಿಸುತ್ತಾ ಬಂದ ಕವನ ಸಂಕಲನಗಳ ಸಂಖ್ಯೆ ಬೆರಗುಗೊಳಿಸುವಂಥದ್ದು. ಅವರು 'ಜಗಲಿ ಹತ್ತಿ ಇಳಿದು' ಕವನ ಸಂಕಲನ ಪ್ರಕಟಿಸಿದಾಗ ತೋರಿದ ಉತ್ಸಾಹ, ಶ್ರದ್ಧೆ ಇಂದಿಗೂ ಉಳಿದುಕೊಂಡು ಬಂದಿರುವುದು ಅವರ ಆಶಾವಾದಿತ್ವದ ಪ್ರತೀಕ.

ನವ್ಯಕಾವ್ಯ ಮೊರೆಯುತ್ತಿದ್ದಾಗ ಬರೆಯಲು ತೊಡಗಿದ 'ದೊರಂಗೌ' ನವೋದಯದ ಬಗ್ಗೆ ಆಕರ್ಷಣೆ ಕಳೆದು ಕೊಂಡಿರಲಿಲ್ಲ. ಮುಂದೆ ನವ್ಯೋತ್ತರವೆಂಬ ಘೋಷಣೆ ಮೊಳಗಿದಾಗಲೂ ನವ್ಯದ ಕಾಳಜಿಗಳನ್ನು ಬಿಟ್ಟುಕೊಡಲಿಲ್ಲ. ಹೀಗೆ ಸುತ್ತಲಿನ ಯಾವ ಧೋರಣೆಗೂ ವಿಮುಖರಾಗದೆ, ಕನ್ನಡ ಕಾವ್ಯವನ್ನು ಪಾಠಮಾಡುತ್ತಾ ಬರೆದಕವಿ 'ದೊರಂಗೌ'. ಈ ಮಧ್ಯೆ ಚಲನ ಚಿತ್ರಗೀತೆಗಳನ್ನು ರಚಿಸುತ್ತಾ ಸಭೆಯ ಒತ್ತಾಯಕ್ಕೆ ಈಡಾಗಿ ತಮ್ಮ ಕವನಗಳನ್ನು ಹಾಡುತ್ತಾ ಸ್ವಂತಿಕೆ ಕಳೆದುಕೊಳ್ಳದೆ ತಮ್ಮ ಅನಿಸಿಕೆಗಳನ್ನು ಜನರಿಗೆ ದಾಟಿಸಲು ಪರದಾಡಿದವರು.

"ಎಂಥ ವಿಕ್ಷಿಪ್ತತೆಯಲ್ಲೂ ಧೈರ್ಯದ ಬೆನ್ನುಹತ್ತುವ, ಸರಿ ಎಂದು ಕಂಡ ನಂಬಿಕೆಗಳನ್ನಷ್ಟೇ ಮೂಲಧನ ಮಾಡಿಕೊಂಡು ನುಡಿ ಚಲಾವಣೆಗೆ ಹಾತೊರೆಯುವ ವ್ಯಕ್ತಿ ನಾನು" - ಎಂದು ದೊರಂಗೌ "ಕಣ್ಣು ನಾಲಗೆ ಕಡಲು" ಕವನ ಸಂಕಲನದ ಮುನ್ನುಡಿಯಲ್ಲಿ ತಮ್ಮ ವಿಚಾರಕ್ಕೆ ನುಡಿಯ ಕನ್ನಡಿ ಹಿಡಿದು ತೋರಿದ್ದಾರೆ. 'ದೊರಂಗೌ' ಪ್ರತಿಭಟನೆಯ ಹಾದಿ ಹಿಡಿಯುವುದು ಸೌಮ್ಯ ರೂಪದಲ್ಲೆ. ಅವರ 'ಗಪದ್ಯ' ಅಕಾವ್ಯ' ರಚನೆಯ ಪ್ರಯತ್ನಗಳನ್ನಿಲ್ಲಿ ನೆನಪಿಸಿಕೊಳ್ಳಬಹುದು. ಅವುಗಳು ಎದುರಾದ ಸಂದರ್ಭಕ್ಕೆ ತಕ್ಷಣದ ಪ್ರತಿಕ್ರಿಯೆಗಳಾಗಿದ್ದವೇ ಹೊರತು ಬೇರೆ ದಾರಿಯಲ್ಲಿ ಮುನ್ನಡೆಯುವ ಉದ್ಧಟತನವಾಗಿರಲಿಲ್ಲ.

"ಕಣ್ಣುನಾಲಗೆಕಡಲು" ಸಂಕಲನದಲ್ಲಿ ಆ ವಯಸ್ಸಿಗೆ ತಕ್ಕ ವಸ್ತು ವ್ಯಾಪಿಸಿದ್ದರೂ "ದರ್ಶನವಿಲ್ಲ, ದಾರ್ಶನಿಕನಲ್ಲ ಎನ್ನುವುದೆಲ್ಲ ಹುರುಳಿಲ್ಲದಿಲ್ಲ (ಪ್ರಪಂಚ ಹುಟ್ಟಿದ್ದು)

"ನೆಲ ನೀಲವಾಗುವುದೂ ಉಂಟು ಮಹಾರಾಯರೇ
ನೀಲ ಆಕಾಶ ನೆಲದ ಬಣ್ಣ ಕಾಣಿಸಿದರೆ ತಪ್ಪೇನು?"
(ಸತ್ಯದ ಸುತ್ತ)

ಇಂಥ ಎಚ್ಚರಿಕೆಯ ಮಾತುಗಳು ಕವಿಯ ಆಂತರ್ಯದಿಂದ ಹೊಮ್ಮಿ ವಿಚಾರ ದರ್ಶನ ಮಾಡಿಸುತ್ತವೆ.

"ನಾಡಾಡಿ" ಸಂಕಲನದಲ್ಲಿ ವಿಚಾರ ಇನ್ನಷ್ಟು ಪ್ರಖರಗೊಳ್ಳುವುದನ್ನು ಕಾಣಬಹುದು,

"ಮೈಸುರಿಸದ ಬೆವರ ಹನಿಹನಿಯಲ್ಲೂ
ಕಷ್ಟಜೀತದ ರಕ್ತ ಸೋರಿ
ಕಣ್ಣೀರು ಹರಿದ ದನಿಗೊತ್ತಿಲ್ಲ
ನಮ್ಮ ಯುಗದ ಮೇಧಾವಿಗಳಿಗೆ" (ಈ ಯುಗದ ಸವಾಲು)

"ಘಳಿಗೆ ಘಳಿಗೆಗೆ ಚುಚ್ಚುವುದೇ ದಣಿಯ ಕೆಲಸ.
ಚಚ್ಚುವುದೇ ಅವನ ಹವ್ಯಾಸ" (ದಣಿ ಪುರಾಣ)

ಇನ್ನು ಇಂಥ ಎಷ್ಟೋ ಉಕ್ತಿಗಳು ಅವರ ಮುಂದಿನ ಸಂಕಲನಗಳಲ್ಲಿ ಜೀವ ಪರವಾಗ ಬಯಸುವ ಕವಿಯ ಮಾನವೀಯ ಆಶಯವನ್ನು ಸೂಚಿಸುತ್ತವೆ.

'ದೊರಂಗೌ' ಅವರ ಜಾತ್ಯತೀತ ಧೋರಣೆ ಅನುಕಂಪಸಹಿತವಾದದ್ದು "ನೆಲವಿಲ್ಲದೆ ಬೇರಿಲ್ಲ" ಸಂಕಲನದಲ್ಲಿ

"ನೂರಾರು ಮತಗಳಲ್ಲಿ ಮರೆಯಾದ
ಮತಿಗೆಟ್ಟ ಬದುಕು" (ಬದು ಕಟ್ಟಲಾರದ ಬದುಕು)

"ಏಳು ಬೀಳಿನ ಹಾದಿ" ಸಂಕಲನದಲ್ಲಿ

"ಇಲ್ಲವಾದರೆ - ಮಾನವತೆ ಜಗದಲ್ಲಿ
ಬರಡು ಹೊಲಮಾತ್ರ ಬಾಯ್ದೆರೆದು ಅಣಕಿಸೀತು"
(ವಿಚಾರ ವರ್ಷ ಸುರಿದರೆ...)

ಹೀಗೆ ಪ್ರಕಟಗೊಳ್ಳುತ್ತದೆ. ಮಾನವೀಯತೆಯ ಮೂಲ ಕಾಳಜಿಗಳನ್ನು ಬಿಟ್ಟುಕೊಡದೆ ದೊರಂಗೌ ಕಾವ್ಯ ಸದ್ದುಗದ್ದಲವಿಲ್ಲದೆ ಹರಿಯುತ್ತದೆ.

# ಜನಮನದ ಕವಿ

✍ ಜಿ. ವಿ. ಅತ್ರಿ
*ಸಂಗೀತ ನಿರ್ದೇಶಕರು*

ಪಂಡಿತ ಪಾಮರರನ್ನೂ, ಆಬಾಲವೃದ್ಧರನ್ನೂ ಲೀಲಾಜಾಲವಾಗಿ ತನ್ನ ಮೋಡಿಯಲ್ಲಿ ಸಿಲುಕಿಸಿಕೊಂಡು ಆನಂದವನ್ನು ನೀಡುವ ಶಕ್ತಿ ಸುಗಮ ಸಂಗೀತಕ್ಕಿದೆ. ಇದನ್ನು ಅರ್ಥ ಮಾಡಿಕೊಳ್ಳಲು ವಿಶೇಷವಾದ ಪರಿಣತಿಯಾಗಲಿ, ಜ್ಞಾನವಾಗಲಿ ಅವಶ್ಯಕತೆಯಿಲ್ಲ. ಅದಕ್ಕೆಂದೇ ಇದು ಸುಗಮ-ಸಂಗೀತವೆನಿಸಿದೆ. ಕೇಳುಗನಿಗೆ ಕವಿ-ರಸಿಕ ಹೃದಯ ಮಾತ್ರ ಇರಬೇಕಷ್ಟೆ

ಒಂದು ರೀತಿಯಲ್ಲಿ ನಮ್ಮ ದೊಡ್ಡರಂಗೇಗೌಡರು "ಸುಗಮ ಸಂಗೀತ" ಪದಕ್ಕೆ ಪರ್ಯಾಯ 'ವ್ಯಕ್ತಿ' ಎಂದರೆ ಅತಿಶಯೋಕ್ತಿಯಲ್ಲ.

ಪಂಡಿತರಿರಲಿ, ಸಾಮಾನ್ಯರಿರಲಿ, ವಯೋವೃದ್ಧರಾಗಲಿ, ಕಿರಿಯರಾಗಲಿ ಸಾಹಿತ್ಯದ ಮೇರು ಕೃತಿಗಳನ್ನು ರಚಿಸಿದ ಜ್ಞಾನಿಗಳಾಗಿ ಅಥವಾ ಸಾಹಿತ್ಯ ಸೌಧದ ಮುಂದೆ ಕೇವಲ ಪ್ರೇಕ್ಷಕರಾದ ಕನ್ನಡಮ್ಮನ ಸಾಧಾರಣ ಮಕ್ಕಳಾಗಲಿ.... ಎಲ್ಲರೊಡನೆ ಸುಲಭವಾಗಿ ಅತ್ಯಂತ ಆತ್ಮೀಯವಾಗಿ ಬೆರೆತು, ಅವರೊಡನೆ ಒಡನಾಡುವ ಸುಗಮ ವ್ಯಕ್ತಿತ್ವ ನಮ್ಮ ದೊಡ್ಡರಂಗೇಗೌಡರು. ಸ್ನೇಹ-ಪ್ರೀತಿ ವಿಶ್ವಾಸಗಳಿಗೆ ಕಟ್ಟುಬೀಳುವ ಗೌಡರು ಕನ್ನಡ ನಾಡು-ನುಡಿ-ಸಂಸ್ಕೃತಿಗಳ ಅನನ್ಯ ಆರಾಧಕರು - ಸಾಧಕರು; ಕನ್ನಡ ಸಾಹಿತ್ಯದ ಮೇಲಿನ ಇವರ ಶ್ರದ್ಧೆ ಪ್ರಶ್ನಾತೀತವಾದುದು.

ನಾನು ಎಚ್.ಎಂ.ವಿ, ಸಿ.ಬಿ.ಎಸ್. ಕಂಪೆನಿಗಳಲ್ಲಿ ಕೆಲಸ ಮಾಡುತ್ತಿದ್ದ ಕಾಲದಿಂದಲೂ ಗೌಡರ ಆತ್ಮೀಯತೆ-ಸ್ನೇಹಗಳ ಸವಿಯನ್ನು ಉಂಡಿದ್ದೇನೆ. ಸಂಗೀತ ಸಾಹಿತ್ಯ ಕ್ಷೇತ್ರದಲ್ಲಿ ನನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಮೇಲಂತೂ ನಮ್ಮ ಒಡನಾಟ ಮತ್ತಷ್ಟು ಹೆಚ್ಚಿದೆ. ದೊರಂಗೌ ಅವರ ಹಲವಾರು ಕವಿತೆ-ಭಾವಗೀತೆಗಳಿಗೆ ರಾಗ ಸಂಯೋಜಿಸಿರುವುದಲ್ಲದೆ ನಾವಿಬ್ಬರೂ ಒಟ್ಟಿಗೆ ಕುಳಿತು ಕೆಲವಾರು ಸ್ವರ-ಸಾಹಿತ್ಯ ಸಂಯೋಜನೆ ಮಾಡಿದ್ದೇವೆ. ಈ ಎಲ್ಲಾ ಸಂದರ್ಭಗಳಲ್ಲೂ ಅವರ ಸರಳತೆ ಸಜ್ಜನಿಕೆಗಳ ಗಾಢ ಅನುಭವ ನನಗಾಗಿದೆ. ತಮ್ಮ ಎಲ್ಲ ಕಾರ್ಯಭಾರಗಳ ನಡುವೆಯೂ ಇಂತಹ ಸೃಷ್ಟಿಶೀಲ ಕೆಲಸಗಳಲ್ಲಿ, ಒಂದಾಗುವ ಅವರ ಅದಮ್ಯ ಉತ್ಸಾಹ ಕಂಡು ಬೆರಗಾಗಿದ್ದೇನೆ - ಗೌರವಿಸಿದ್ದೇನೆ.

ಗೌಡರು ತುಂಬಾ ವಾಸ್ತವವಾದಿ ಕವಿ ಎಂದರೆ 'ವಾಸ್ತವ'ವಾಗಿ ತಮ್ಮ ಮನೋಧರ್ಮವನ್ನೇ ಕವಿತೆಗಳಲ್ಲಿ ಬಿಂಬಿಸತಕ್ಕಂತಹ ಧೈರ್ಯಶಾಲಿಗಳು, ಜೀವನದಲ್ಲಿನ ಇವರ ಉತ್ಸಾಹ ಸಮಾಜದ ಮೇಲಿನ ಪ್ರೀತಿ ಕೆಡುಕುಗಳ ಮೇಲಿನ ಸಾತ್ವಿಕ ಕ್ರೋಧ ಇವೆಲ್ಲವುಗಳಲ್ಲಿಯೂ ಇವರ ಸಮುದಾಯದ ಕುರಿತ ಶ್ರದ್ಧೆ ವ್ಯಕ್ತವಾಗುತ್ತದೆ. ಜೊತೆಗೆ ಇವರ ರಸಿಕ ಹೃದಯದಿಂದ ಮೂಡಿ ಬರುವ

ಕವಿತೆಗಳು - ಗೀತೆಗಳು ಹಾಡುಗಾರನ ಎದೆ ಮಿಡಿತದೊಂದಿಗೆ ಮಿಳಿತವಾಗಿ ರಮ್ಯಲೋಕವನ್ನೇ ಸೃಷ್ಟಿಸುವಲ್ಲಿ ಸಫಲವಾಗುತ್ತವೆ. ಜಗತ್ತಿನ ಸೊಗಸನ್ನು ಸೌಂದರ್ಯವನ್ನು ತಮ್ಮ ಸಾಹಿತ್ಯದಲ್ಲಿ ಆರಾಧಿಸುವುದರೊಂದಿಗೆ, ಗ್ರಾಮೀಣ ಜನಪದ ಜೀವನದೊಂದಿಗೆ ತಮ್ಮಿಷ್ಟಕ್ಕೆ ಹಾಸುಹೊಕ್ಕಾಗಿರುವ ಇವರ ಸಾಹಿತ್ಯ ಸತ್ವ ಬಹುಶಃ ಇವರ ಜನಪ್ರಿಯತೆಗೆ ಕಾರಣ ಎಂದು ನನ್ನ ನಂಬಿಕೆ.

ಸೃಜನಶೀಲ ಸಾಹಿತ್ಯ ಸೃಷ್ಟಿಯೊಂದಿಗೇ ಜನಪ್ರಿಯ ಪ್ರಕಾರಗಳಲ್ಲೂ ತೊಡಗಿಸಿಕೊಂಡು ಸಿನಿಮಾ ರಂಗದಲ್ಲೂ 'ಸೈ' ಎನಿಸಿಕೊಂಡ ಗೌಡರು ಅಲ್ಲಿಯೂ ಸುಗಮ ಸಂಗೀತದ ಛಾಪನ್ನು ಒತ್ತಿದವರು. ಇವರು ರಚಿಸಿರುವ ಚಿತ್ರಗೀತೆಗಳೂ ಕೂಡ ಕನ್ನಡದ ಕಂಪು ಬೀರುವ ಪುಷ್ಪಗಳಾಗಿವೆ. 'ಪರಸಂಗದ ಗೆಂಡೆತಿಮ್ಮ' ಚಿತ್ರದ ಎಲ್ಲ ಹಾಡುಗಳು 'ಆಲೆಮನೆ' ಚಿತ್ರದ ನಮ್ಮೂರ ಮಂದಾರ ಹೂವೇ, ಶರವೇಗದ ಸರದಾರ ಮತ್ತು 'ಅಶ್ವಮೇಧ' ಚಿತ್ರದ ಗೀತೆಗಳು ಹೀಗೆ ಅಸಂಖ್ಯಾತ ಜನಪ್ರಿಯ ಹಾಡುಗಳು ಗೌಡರನ್ನು ಸದಾ ಜನಮನದಲ್ಲಿ ಹಸಿರಾಗಿಸಿವೆ.

ಸಾಹಿತ್ಯದ ಸೃಷ್ಟಿಯೊಂದಿಗೆ ಒಳ್ಳೆಯ ಕೇಳುಗರೂ ಕೂಡಾ ಆದ ದೊ.ರಂ.ಗೌ ಅವರದು ತೆರೆದಕವಿ-ತೆರೆದಹೃದಯ. ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಉಲ್ಲಾಸದಿಂದ ಭಾಗಿಗಳಾಗಿ ಆಸ್ವಾದಿಸುವಂತಹ ಸಹೃದಯರು.

ಎಷ್ಟೋ ಪ್ರಶಸ್ತಿ ಗೌರವಗಳಿಗೆ ಪಾತ್ರರಾಗಿರುವ ದೊಡ್ಡರಂಗೇಗೌಡರು ಇವೆಲ್ಲವುಗಳಿಗೂ ಮಿಗಿಲಾದ "ಜನಪ್ರೀತಿ"ಯನ್ನು ಅಪಾರವಾಗಿ ಗಳಿಸಿಕೊಂಡಿದ್ದಾರೆ. ಒಂದು ರೀತಿಯಲ್ಲಿ ಇವರು "ಜನರ ಕವಿ" ಇಂತಹ ದೊಡ್ಡರಂಗೇಗೌಡರು ಸ್ನೇಹ - ಪ್ರೀತಿ ವಿಶ್ವಾಸಗಳ 'ಸಂಬಂಧಿ' ನಾನಾಗಿರುವುದು ನಿಜಕ್ಕೂ ನನಗೆ ಅತ್ಯಂತ ಅಭಿಮಾನ ಹಾಗೂ ಸಂತಸದ ವಿಚಾರ.

## ಜಾನಪದ ಸೊಗಡಿನ ಮಾಂತ್ರಿಕ

✍ ರಾ. ವೀರು

ಚಲನಚಿತ್ರ ಮತ್ತು ಸಾಹಿತ್ಯ ಹೆಚ್ಚು ಪ್ರಚಲಿತದಲ್ಲಿರುವ ಹೆಸರು ದೊಡ್ಡರಂಗೇಗೌಡ. ಏಕತಾನತೆ ಮತ್ತು ಅಶ್ಲೀಲಗೀತೆಗಳೇ ಅಧಿಕವಾಗುತ್ತಿದ್ದ ಸಮಯದಲ್ಲಿ ಸೃಜನಶೀಲತೆ ಮತ್ತು ಜನಪ್ರಿಯತೆಗಳ ನಡುವೆ ಹೊಸ ಆಯಾಮ ತಂದುಕೊಟ್ಟವರಲ್ಲಿ ಪ್ರಮುಖರು.

ಇವರ ಬರಹದಲ್ಲಿ ಜಾನಪದ ಸೊಗಡಿನ ಮಾಂತ್ರಿಕ ಸ್ಪರ್ಶವಿದೆ. ನವಿರು ಭಾವಗಳ ತಂತ್ರವಿದೆ. ಹೃದಯಗಳಿಗೆ ನೇರ ಲಗ್ಗೆ ಹಾಕುವ ಗೇಯ ಗುಣಗಳ ಶ್ರೀಮಂತ ಅನ್ವೇಷಣಾ ಸೃಷ್ಟಿ ಕೋನವಿದೆ.

# ಅಪ್ಪನನ್ನು ನಾನು ಕಂಡಂತೆ...

✍ ಡಿ. ಭರತ್

ಯಾವುದೇ ಮಗುವಿನ ಬದುಕಿನಲ್ಲಿ ಅಪ್ಪ ಅಮ್ಮನ ಪಾತ್ರ ಸ್ಮರಣೀಯವಾದುದು, ಬಹಳ ಮುಖ್ಯವಾದುದು. ಅದರಲ್ಲಿ 'ಮನೆಯ ಯಜಮಾನ' ನೆನಿಸುವ ಅಪ್ಪನ ಪಾತ್ರ ಸ್ವಲ್ಪ ಹೆಚ್ಚೇ ಎನ್ನುವುದರಲ್ಲಿ ಸಂಶಯವಿಲ್ಲ, ಮಗುವಿನ ಮನದಾಳದಲ್ಲಿ ಬದುಕಿನುದ್ದಕ್ಕೂ ಬೇರು ಬಿಟ್ಟು ನೆನಪಿನ ಆಲದ ಮರವಾಗುವ ಶಾಶ್ವತ ಪಾತ್ರ ಅಪ್ಪನದೇ ಆಗಿರುತ್ತೆ.

ನೆನಪು ಸಿಹಿಯಾಗಲಿ-ಕಹಿಯಾಗಲಿ ಅದರ ಕ್ರಿಯೆ ನಿಲ್ಲುವಂಥಲ್ಲ. ಹಸಿರಾಗಿ ಉಳಿಯುವಂಥದ್ದು.

ಈ ಹಿನ್ನಲೆಯಲ್ಲಿ ನಾನು ಅಪ್ಪನ ಕುರಿತು ಹೇಳುವುದು ಸರಿಯೆನ್ನಿಸುತ್ತೆ. ನನ್ನ ಅಪ್ಪ ಎಲ್ಲಾ ಅಪ್ಪಂದಿರಂತೆ ತಪ್ಪು ಮಾಡಿದಾಗ ಬೈಯುವುದು, ಹೊಡೆಯುವುದು ಅಳುವಾಗ ರಮಿಸುವುದು ಇರುವುದಾದರೂ ಹಲವು ವಿಶೇಷಣಗಳನ್ನು ಪಡೆದ ಅಪ್ಪನೆಂದೇ ಕರೆಯುವುದರಲ್ಲಿ ಹೆಮ್ಮೆಯಿದೆ. ಯಾಕೆ ಗೊತ್ತೇ ? ಅಪ್ಪ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು, ಕವಿ ಹಾಗೂ ಕನ್ನಡ ಚಿತ್ರರಂಗದ ಗೀತರಚನಕಾರ. ಆದ್ದರಿಂದಲೇ ಸಹಜವಾಗಿ ಮನೆಯಲ್ಲಿ ಪುಸ್ತಕಗಳು ತುಂಬಿ ತುಳುಕಿವೆ. ಪಂಪ, ರನ್ನ, ಜನ್ನ, ನಾಗಚಂದ್ರ, ಬಸವಣ್ಣ, ಅಲ್ಲಮ, ದಾಸರ ಕೀರ್ತನೆಗಳು, ಬೇಂದ್ರೆ, ಕುವೆಂಪು, ಪುತಿನ, ಕೆ.ಎಸ್.ನ., ಗೋ. ಕೃ. ಅಡಿಗರ ಪುಸ್ತಕಗಳ ಜೊತೆಯಲ್ಲೇ ಅಪ್ಪನ ಹೊಸ ಹೊಸ ಕವನ ಸಂಕಲನಗಳೂ ಬಂದು ಸೇರುತ್ತಿವೆ.

ಚಿಕ್ಕ ವಯಸ್ಸಿನಲ್ಲಿ ನಾನಂತೂ ಬಹಳ ತುಂಟ. ಬುಗುರಿ, ಗೋಲಿ, ಟೈರು, ಬಸ್ಸು, ಕಾರು, ರೈಲು ಇತ್ಯಾದಿ ಆಟಿಕೆಗಳು ಬೇಕೆಂದು, ಅಪ್ಪನಿಗೆ, ಅಮ್ಮನಿಗೆ ಬಹಳಷ್ಟು ತ್ರಾಸ ಕೊಡುವ ಹಠಮಾರಿ ಪೋರ. ಅಮ್ಮನಿಗಿಂತ ಅಪ್ಪ ಹೆಚ್ಚಾಗಿ ನನ್ನ ಈ ಬೇಡಿಕೆಗಳನ್ನು ಈಡೇರಿಸುತ್ತಿದ್ದುದರಿಂದ ನನ್ನ ಬಾಲ್ಯ ಸಾಮ್ರಾಜ್ಯಕ್ಕೆ ಏಕೈಕ ಅನಭಿಷಕ್ತ ದೊರೆ ನಾನೇ ಆಗಿದ್ದೆ. (ಈ ದೊರೆ ಪಟ್ಟ ತಂಗಿ ಬರುವವರೆಗೂ ಮಾತ್ರ ಮೀಸಲಾಗಿತ್ತಷ್ಟೇ) ಬೇಡಿಕೆ ಚಿಕ್ಕದಾಗಿ, ಚೊಕ್ಕವಾಗಿ ಇರುತ್ತಿದ್ದುದರಿಂದ ಸಲೀಸಾಗಿ ಈಡೇರುತ್ತಿತ್ತು. ಆದರೆ ಅದೇ ಬೇಡಿಕೆ ದೊಡ್ಡದಾಗಿ ಬೆಳೆದಾಗ ಮಾತ್ರ ಒಂದೊಂದು ಹೊಡೆತ ಬೀಳುತ್ತಿತ್ತು.

ಉದಾ॥ ಸೈಕಲ್ಲು. ಹೀಗಾಗಿ ಅಪ್ಪನ ಬಹುತೇಕ ಗೆಳೆಯರಿಗೆ ನಾನು ನನ್ನ ತಂಗಿಗಿಂತಲೂ ಹೆಚ್ಚು ಚಿರಪರಿಚಿತ.

ಹೀಗಿದ್ದ ನಾನು ಅಪ್ಪನಿಂದ ಬರಬರುತ್ತಾ ಅಪ್ಪನು ಬರೆದ ಕವನಗಳನ್ನು ಸುಂದರ ಹಸ್ತಪ್ರತಿ ಮಾಡುತ್ತಿದ್ದುದರಿಂದ ಕೋಳಿ ಕಾಲಿನ ನನ್ನ ಅಕ್ಷರವನ್ನು ಸುಂದರ ಮುತ್ತಾಗಿ ಪೋಣಿಸುವ ದುಂಡನೆಯ ಅಕ್ಷರಗಳನ್ನಾಗಿಸಿದ್ದೆ. ಅಪ್ಪನ ಪದ್ಯ ಓದಿ

ನನಗೆ ಅರ್ಥವಾದ ಸಾಲುಗಳಿಗೆ ಚಿತ್ರ ಬಿಡಿಸುತ್ತಿದ್ದೆ. ಇದೇ ಹಾದಿಯಲ್ಲಿ ದಿನಗಳನ್ನು ವರ್ಷಗಳನ್ನು ಕಳೆದ ಈಗ ಯುವ ಲೇಖಕನಾಗುವಷ್ಟು ಬೆಳೆದಿದ್ದೇನೆ.

ಮಕ್ಕಳ ಕತೆಯಿಂದ ಹಿಡಿದು ಅಪ್ಪನಂತೆ ಒಂದೆರಡು ನವ್ಯ ಕವಿತೆಗಳನ್ನು ಭಾವಗೀತೆಗಳನ್ನು, ಭಕ್ತಿಗೀತೆಗಳನ್ನು ಲೇಖನಗಳನ್ನು ಬರೆಯುವಂತಾದುದು, ಕನ್ನಡ ಸಾಹಿತ್ಯವನ್ನು ತಿಳಿಯುವಂತಾದುದು, ಈಗ ಕನ್ನಡ ಎಂ.ಎ. ಮಾಡುತ್ತಿರುವುದು ಅಪ್ಪನಿಂದ. ಕವನಗಳನ್ನು ಓದಿ ಅಭಿಪ್ರಾಯ ವ್ಯಕ್ತಪಡಿಸುವುದು, ಲೇಖನ, ಚುಟುಕಗಳ ಬಗ್ಗೆ ವಿಮರ್ಶಿಸುವಂತಾಗಿರುವುದು, ನನ್ನದೇ ಪದ್ಯಗಳ ಜೊತೆಗೆ ಅಪ್ಪನ ಕೆಲ ಪದ್ಯಕ್ಕೂ ರಾಗ ಸಂಯೋಜಿಸುವಷ್ಟು ಪ್ರಬುದ್ಧನಾಗಿರುವುದು ಅಪ್ಪನಿಂದ.

ಮೈಸೂರಿನ ವಿಶ್ವ ಕನ್ನಡ ಸಮ್ಮೇಳನ, ಒಂದೆರಡು ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯದ ಮೇರು ಶಿಖರಗಳಾದ ದಿ|| ಕುವೆಂಪು, ಕಾರಂತ, ಪುತಿನ, ದಿ/ಮಾಸ್ತಿ, ದಿ//ಎಂ. ವಿ. ಸೀತಾರಾಮಯ್ಯ, ಮುಂತಾದವರನ್ನು ಕಾಣುವಂತಾಗಿದ್ದು ಅಪ್ಪನಿಂದ. ಕನ್ನಡ ಚಿತ್ರಗಳ ಶೂಟಿಂಗ್ ನೋಡುವಂತಾದುದು ಸಂಕೇತ್, ಚಾಮುಂಡೇಶ್ವರಿ, ಪ್ರಸಾದ್ ರೇಕಾರ್ಡಿಂಗ್ ಸ್ಟುಡಿಯೋಗಳಲ್ಲಿ ಹೆಸರಾಂತ ಸಂಗೀತ ನಿರ್ದೇಶಕರನ್ನು ಹೆಸರಾಂತ ಗಾಯಕರನ್ನು ನೋಡುವಂತಾದುದು, ಬರೆದ ಗೀತೆ ಚಿತ್ರಗೀತೆಯಾಗಿ ಹೇಗೆ ರೆಕಾರ್ಡ್ ಆಗುತ್ತೆ ಎನ್ನುವ ಅಂಶವನ್ನು ಅರಿಯುವಂತಾದುದು, ಸಾಂಗ್ ಕಂಪೋಸಿಂಗ್‌ಗಳನ್ನು, ಶತದಿನೋತ್ಸವ ಸಮಾರಂಭಗಳನ್ನು ಕಾಣುವಂತಾದುದು ಈ ಸಂದರ್ಭಗಳಲ್ಲಿ ಜನಪ್ರಿಯ ನಾಯಕನಟರುಗಳನ್ನು ಪ್ರತ್ಯಕ್ಷವಾಗಿ ಕಾಣುವಂತಾಗಿದ್ದು ಅಪ್ಪನಿಂದಲೇ.

ಡೆಲ್ಲಿಯ ರಿಪಬ್ಲಿಕ್‌ಡೇಪೆರೇಡ್, ರೆಡ್ ಫೋರ್ಟ್, ಕುತುಬ್‌ಮಿನಾರ್, ರಾಷ್ಟ್ರಪತಿ ಭವನ, ಮಹಾತ್ಮಗಾಂಧಿ ಸಮಾಧಿ. ಆಗ್ರಾದ ತಾಜಮಹಲ್, ಮಥುರಾದ ಕೃಷ್ಣದೇವಾಲಯ, ಊಟಿ ಮದರಾಸು ನೋಡುವಂತಾಗಿದ್ದು ಅಪ್ಪನಿಂದ.

ಹೀಗೆ ಇಷ್ಟೆಲ್ಲಾ ಸೌಭಾಗ್ಯವನ್ನು ಒದಗಿಸಿಕೊಟ್ಟ ನನ್ನ ಅಪ್ಪನಿಗೆ ನನ್ನ ಧನ್ಯವಾದಗಳನ್ನು ಎಷ್ಟು ಅರ್ಪಿಸಿದರೂ ಸಾಲದು, ತೀರದು. ರೇಡಿಯೋದಲ್ಲಿ ಅಪ್ಪನ ಹಾಡು ಕೇಳುವಾಗ ಟಿ.ವಿ.ಯಲ್ಲಿ ಅಪ್ಪನನ್ನು ಕಂಡಾಗ ಭಾರೀ ಖುಷಿ ಪಡುತ್ತೇನೆ. ಸಭೆ ಸಮಾರಂಭಗಳಲ್ಲಿ ಭಾಷಣ ಕೇಳುವಾಗ, ಕವಿತೆಯ ವಾಚನ ಆಲಿಸುವಾಗ ಮೆಚ್ಚಿ ಮೂಕನಾದ ನಾನು ಅಪ್ಪನಂತಾಗಲು ಹೆಜ್ಜೆ ಹೆಜ್ಜೆಗೆ ದಿನ ನಿತ್ಯ ಯತ್ನಿಸುತ್ತಿದ್ದೇನೆ.

* * *

ಯುಗ ಯುಗದ ಚಿಂತನೆಗಳು ಮಾತಾಗುತ್ತವೆ ಕವಿಯಲ್ಲಿ
ಕೋಟಿ ಕೋಟಿ ಮೌನಗಳು ನಾಲಗೆಯಾಗುತ್ತವೆ ಕವಿಯ ಕಾವ್ಯದಲ್ಲಿ
ಎಲ್ಲಿ ಸಮುದಾಯದ ಕಳಕಳಿ, ಅಲ್ಲಿ ಚೈತನ್ಯಮಯ
ವಾಗರ್ಥ ರಂಗವಲ್ಲಿ
ಕವಿ ಜಗದ ಯುಗದ ದ್ರಷ್ಟಾರ ಕಾಣೋ - ಮಣ್ಣಿನ ಮಗ

* * *

# ಕೋಮಲ ಕವಿ

✍ ಉತ್ತನೂರು ರಾಜಮ್ಮ ವಿ. ಶೆಟ್ಟಿ

ತೇರಾನೇರಿ ಅಂಬರದಾಗೆ ನೇಸರ ನಗುತಾನೆ
ಮರಗಿಡ ತೂಗ್ಯಾವೆ ಚಿಲಿಪಿಲಿ ಹಕ್ಕಿಹಾಡ್ಯಾವೇ

ಸ್ಕೂಲು, ಕಾಲೇಜು, ಕೆರೆದಿನ್ನೆ, ಹಳ್ಳಿಗುಡಿಕಟ್ಟೆ, ಅಂಗಳ, ಒಪ್ಪಾರ, ಕಾಳು ಒಟ್ಟುವ ಕಣ. ಎಲ್ಲಿನೋಡಿ ಮಬ್ಬು ಮಬ್ಬಾದ ಹೊರಮೈ ಒಳಗೆ ಮುಂಜಾವಿನ ಹಕ್ಕಿ ಇಂಚರವೇ ಅಲ್ಲೆಲ್ಲಾ ಕನ್ನಡಿಗರ ಪ್ರೀತಿಯ ಕವಿ ದೊಡ್ಡರಂಗೇಗೌಡರ ಮನಸು ತಟ್ಟುವ ಹಾಡು ವಾತವರಣವೆಲ್ಲವನ್ನು ತುಂಬಿಕೊಂಡಿದೆ,

ಹಿಂದಿನ ಪೀಳಿಗೆಗೆ ಗ್ರಾಮಾಂತರ ರಚ್ಚೆ ಅರಕು ಕೊರಕು ರಸ್ತೆಯಲ್ಲಿ ಹಾದು ಹೋಗುತ್ತಿದ್ದ ಜನಕ್ಕೆ ಕಿವಿ ವಾಲಿಸುವಂತೆ ಮಾಡುತ್ತಿದ್ದ ರಾಗಿ ಬೀಸೊ ಹಾಡುಗಳು ಮರೆಯಾಗುತ್ತಿದ್ದಂತೆ ರೇಡಿಯೊ ಮನೆಯೊಳಗಿನ ಗೂಡುಗಳಲ್ಲಿ ಉಲಿಯಲಾರಂಭಿಸಿದವು.

ಒಂದಿಷ್ಟು ಹಳ್ಳಿಪದಗಳಂತೆಯೆ ಮೊದಮೊದಲಿಗೆ ಅನಿಸುತಿದ್ದ ದೊಡ್ಡರಂಗೇಗೌಡರ ಪದಗಳು ಬರಬರುತ್ತಾ ಸ್ವಲ್ಪ ಸ್ವಲ್ಪವಾಗಿ ನಾಜೋಕಿನ ನಯವಾದ ಭಾಷೆಯ ಹೊದಿಕೆ ತಗಂಡದ್ದು ಹಳ್ಳಿಬಯಲಿಂದ ಪೇಟೆಯ ನಾಗರೀಕತೆಗೆ ಸಹಜವಾಗಿ ವಾಲುತ್ತಿದ್ದ ಬದುಕಿನ ವಿಪರ್ಯಾಸದಂತೆಯೇ ದೊಡ್ಡರಂಗೇಗೌಡರ ಶೈಲಿ, ಭಾಷೆ, ಇಂಗಿತ ಶಿಷ್ಟತೆಗೆ ಮುಖವಾಗಿದ್ದು ಕೂಡ ಸಹಜ ಗತಿ ಎನ್ನಬೇಕಲ್ಲವೆ.

ಕೇವಲ ಕವಿಯಾಗೇ ಉಳಿದ ಗೌಡರು ಮಿತಿಯಲ್ಲೂ ಹಾಡಿ ಪಾಡುವ (ಮಾವು-ಬೇವು) ಮೃದುಭಾವದ ಸ್ಪಂದನೀಯ ಗುಣ ವಿಶೇಷತೆಯನ್ನು ಅವರ ವ್ಯಕ್ತಿತ್ವ ಉಳಿಸಿಕೊಂಡಿತೆನ್ನುವುದು ಕವಿಮನಸಿನ ಕೋಮಲತೆಯನ್ನು ಎತ್ತಿ ಕಾಣಿಸುತ್ತದೆ. ವಿರ್ಮಶಕ ಪಂಡಿತರ ವ್ಯಾಖ್ಯೆಗಳಲ್ಲಿ ದೊಡ್ಡರಂಗೇಗೌಡರ ಇಂಚರದ ಹೃದಯ ಪಡೆಯದಿದ್ದರೂ ಮನುಷ್ಯ ಬದುಕಿನ ಜಂಜಡವನ್ನು ಗಳಿಗೆಯ ಮಟ್ಟಿಗಾದರೂ ಉಲ್ಲಾಸಗೊಳಿಸಿ, ಮನುಷ್ಯ ಮನಸ್ಸಿನ ಸ್ಥಿತ್ಯಂತರವನ್ನು ಸ್ಪರ್ಶಿಸಿ ಕೊಡುತ್ತದೆ. ಆ ಮಟ್ಟಿಗೆ ಕವಿ ಮನಸ್ಸು ಕಾವ್ಯ ವ್ಯಕ್ತಿತ್ವವಾಗಿಸಿ ದೊಡ್ಡರಂಗೇಗೌಡರು ಕನ್ನಡಿಗರ ಇಷ್ಟದ ಕವಿಯಾಗಿ ಉಳಿದಿದ್ದಾರೆ.

# ಜನಮನದ ಕವಿ ದೊರಂಗೌ

✍ ಹೆಚ್. ಕೃಷ್ಣ ಮೂರ್ತಿ
ಅಧ್ಯಾಪಕರು

ಕವಿ ದೊಡ್ಡರಂಗೇಗೌಡರು ಸಾಹಿತ್ಯ ಕ್ಷೇತ್ರದಲ್ಲಿ ತನ್ನನ್ನು ತನ್ನದೇ ಆದ ರೀತಿಯಲ್ಲಿ ಗುರುತಿಸಿಕೊಂಡವರು. ಸಾಹಿತ್ಯದಲ್ಲಿ ಪಾಂಡಿತ್ಯ ಉಳ್ಳವರು. ಬರವಣಿಗೆಯ ರೂಪದಲ್ಲಿ ತನ್ನೆಲ್ಲ ಭಾವನೆಗಳನ್ನು ಹೊರತಂದು ನಾಡು ನುಡಿಯ ಸೇವೆಗೆ ಸದಾಕಾಲ ತನ್ನನ್ನು ತೊಡಗಿಸಿಕೊಂಡವರು. ಇವರು ಜನಮನ ತಲುಪಿದ ಹೆಸರಾಂತ ಕವಿಗಳು. ಕನ್ನಡ ಸಾಹಿತ್ಯ ಬೇಸಾಯವನ್ನು ನಿರಂತರವಾಗಿ ನಡೆಸುತ್ತಾ ಅವಕಾಶ ಸಿಕ್ಕಾಗಲೆಲ್ಲಾ ಮಿಂಚಿನಂತೆ ಸುಳಿದವರು.

ಸ್ವಾಭಿಮಾನಿ ಸಾಹಿತಿಗಳು, ವಿಶಾಲ ಹೃದಯ ಹೊಂದಿದವರು, ಸರಳ ಸಜ್ಜನಿಕೆಯ ವ್ಯಕ್ತಿ ಇವರು, ಹಸನ್ ಮುಖಿಗಳು ಗಂಭೀರ ಸ್ವಭಾವದವರು, ಮಾನವತಾವಾದಿಗಳು, ಶಾಂತಿ ಪ್ರಿಯರು, ಮೌನಿಗಳು, ಸಮಯ ಬಂದಾಗ ಸಿಡಿಲ ಮರಿ ಇವರು. ಲೇಖನಿಯ ಮೂಲಕ ಕ್ರಾಂತಿ ಕಹಳೆಯ ಊದಲು ಹೊರಟವರು. ಸಾಮಾಜಿಕ ಅರೆ-ಕೊರೆಗಳನ್ನು ಸೆರೆ ಹಿಡಿದು ಮೌಲ್ಯಗಳನ್ನು ಎತ್ತಿ ಹಿಡಿದರು. ಹಿತ ಚಿಂತಕರು. ತಾನಿರುವ ಪರಿಸರ, ಸಮುದಾಯ, ಪರಿವಾರ ಸಮಾಜಗಳನ್ನು ತಿದ್ದುವ ಯತ್ನಗಳಲ್ಲಿ ಸಫಲರಾದವರು. ಪ್ರಜ್ಞಾವಂತ ಭಾರತೀಯರು; ವಿವೇಕಿಗಳು; ಸಮತೋಲನೆಯ ಮನಸ್ಸು; ಬರವಣಿಗೆಯ ಹುಮ್ಮಸ್ಸು; ಬರೆದೇ ತೀರುವ ಛಲ; ನಾಡು ನುಡಿಗಾಗಿ ಸದಾ ಸಿದ್ಧ ಇವರ ಕಾಯಕ ಹಾಗೂ ಗುಣ ವೃತ್ತಿಯಿಂದ ಕನ್ನಡ ಪ್ರಾಧ್ಯಾಪಕರಾಗಿ ಪ್ರವೃತ್ತಿಯಿಂದ ಚಲನಚಿತ್ರ ಸಾಹಿತ್ಯದಲ್ಲೂ ಖ್ಯಾತಿ ಪಡೆದವರು, ಅಭಿಮಾನಕ್ಕೊಳಗಾದವರು; ಅಭಿನಂದನಾರ್ಹರು.

ಅಪೂರ್ವ ಸಾಹಿತಿಗಳ ಸಾಲಿನಲ್ಲೇ ಬೆಳೆದು ಬಂದವರು. ದ. ರಾ. ಬೇಂದ್ರೆ, ಕುವೆಂಪು. ಕೆ. ಎಸ್. ರಾಜರತ್ನಂ, ಪುತಿನ ಡಾ|| ಶಿವರುದ್ರಪ್ಪ, ಗೋಪಾಲಕೃಷ್ಣ ಅಡಿಗ, ಕೆ. ಎಸ್. ನಿಸಾರ್ ಅಹಮದ್, ಅಂತಹವರಷ್ಟೇ ದೊರಂಗೌ ಅವರು ಪ್ರಭಾವಿತರು.

ಕಲಿಸುವ ಗುರುವಾಗಿ, ಕವಿಯಾಗಿ ಚಲನಚಿತ್ರ ಸಾಹಿತಿಯಾಗಿ ಗೀತ ರಚನಕಾರರಾಗಿ, ಅಂಕಣಕಾರರಾಗಿ ಸೇವೆ ಮಾಡುತ್ತಿರುವ ಇವರು ಕನ್ನಡ ಭಾಷೆಗೆ ಅಪೂರ್ವ ಕೊಡುಗೆ ನೀಡುತ್ತಿದ್ದಾರೆ.

ಮಾನ್ಯರು ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರು ಆಗಿ ಮಂಕುತಿಮ್ಮನ ಕಗ್ಗದಂತೆ, ದಾಸರ ಪದಗಳ ರೀತಿಯಲ್ಲಿ ತ್ರಿಪದಿ, ಚೌಪದಿಗಳನ್ನು ಸೊಗಸಾಗಿ ರಚಿಸಿದ್ದಾರೆ.

ಗೀತ ಗಾರುಡಿ, ಹೋಳಿ ಹುಣ್ಣಿಮೆ, ಪ್ರೀತಿ ಪ್ರಗಾಥ, ಚದುರಂಗದ ಕುದುರೆಗಳು, ಮೌನಸ್ಪಂದನ ಕವನ ಸಂಕಲನ ಕೃತಿಗಳ ಸಾಲಲ್ಲಿ ಬರುವ ಭಾವನೆ, ಒಲುಮೆ, ನಲಿವು, ಪ್ರೀತಿ ಪ್ರೇಮ, ಜೀವನ, ಬದುಕು, ಬಾಳುವೆ, ಅನುರಾಗ ಇವೆಲ್ಲವೂ ಕಾರಂಜಿಯಂತೆ ಪುಟಿಯುತ್ತವೆ. ಅದೇ ರೀತಿ ನೋವು, ಶೋಷಣೆ ಅಂತರಾಳ ತಾಕಲಾಟ, ಸಾಮಾಜಿಕ ವ್ಯವಸ್ಥೆಯ ಅಂಕುಡೊಂಕುಗಳಿರುವೆಡೆಯಲ್ಲೂ ಹೆಚ್ಚಿನ ಶ್ರಮವಹಿಸಿ, ನಿಗಾ ಇಟ್ಟು ಮನಕಲಕುವ ರೀತಿಯಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಅವರಿಗೆ ಪ್ರಿಯವಾದ ಮತ್ತೊಂದು ವಿಭಾಗ ಸೃಷ್ಟಿ ಸೊಬಗು ಚೈತ್ರಾಗಮನ, ವಸಂತಋತು, ಹಳ್ಳಿಯ ಸೊಗಡು ಇವುಗಳಲ್ಲೂ ರಸಾನುಭವ ನೀಡಿದ್ದಾರೆ.

ಗೀತ ಗಾರುಡಿಯಲ್ಲಿ ಬರುವ "ಗಾಳಿಗೊಡ್ಡಿದ ದೀಪದಂತೆ ನಮ್ಮ ಬಾಳುವೆ" ಸಾಲು ಎಷ್ಟೊಂದು ಅರ್ಥಗರ್ಭಿತವಾಗಿದೆ ಹಾಗೆಯೇ ಇಂದಿಗೂ ಎಷ್ಟು ಪ್ರಸ್ತುತ ಎಂಬುದು ಮನದಟ್ಟಾಗುತ್ತದೆ.

## ನಲ್ಮೆಯ ಕವಿಗೆ

ಕುಳಿತಲ್ಲೇ ಕುಳಿತು ಮನದಲ್ಲೇ ನೂತು
ಕ್ಷಣದಲ್ಲೇ ಕವನ ಹೆಣೆವ
ಸಾಕ್ಷರತೆಯ ತವರು ಇವರು.

ಹೆಜ್ಜೆ ಹೆಜ್ಜೆಯ ಕಾವ್ಯೋಪಾಸನೆ ಚಿಂತನೆಯಲಿ
ಅಕ್ಕರೆಯಿಂದ ಅಕ್ಷರ ಕಲಿಸುವ
ನವ್ಯ ನವೋದಯ ಶಿಲ್ಪಿ ಇವರು;

ಬೆಳ್ಳಿ ತೆರೆಯಲಿ ತನ್ನ ಶೈಲಿಯಲಿ
ಬಳ್ಳಿ ತರದಲಿ ಬೆಳೆದವರು ಇವರು;

ಪ್ರೀತಿಯ ತೋರಿ ನಗೆಯನು ಬೀರಿ
ಹೃದಯವಂತಿಕೆ ಸಜ್ಜನಿಕೆಯ ಕಲ್ಪತರು ಇವರು.

ಮೌನದಲಿ ನೀತಿಯ ಹೇಳಿ
ಕೀರ್ತಿಯ ಹಳಿಯಲಿ ತಾನುಸುಳಿ
ಹೊಸತನ ತಂದವರು ಇವರು;

ಸತ್ಯದಲಿ ಪ್ರಾಮಾಣಿಕ ನುಡಿ ನಿಯಮದಲಿ
ಮಾನವೀಯ ಮೌಲ್ಯವ ಬಿತ್ತಿ
ನಿಂದವರು ಇವರು;

ಕನ್ನಡಾಂಬೆಯ ಮಡಿಲಲಿ ಜನಿಸಿ
ನಾಡಿನ ತನುಮನ ಮನದಲಿ ಬಯಸಿ
ಜನಮನ ತಲುಪಿದ ನಲ್ಮೆಯ ಕವಿ
ಇವರು.

# ಆತ್ಮೀಯ ವ್ಯಕ್ತಿತ್ವ

ಇಂದೂ ವಿಶ್ವನಾಥ್
ಗಾಯಕಿ

ಗಂಭೀರವಾದ ಮುಖಮುದ್ರೆ, ಯಾವಾಗಲೂ ಯಾವುದೋ ಚಿಂತನೆಯಲ್ಲಿ ಮುಳುಗಿದ್ದರೂ ಪ್ರಶಾಂತ ಮುಖಭಾವ, ನೇರ ಮತ್ತು ಸ್ಪಷ್ಟ ಮಾತು, ಆತ್ಮೀಯ ವ್ಯಕ್ತಿತ್ವ, ಈ ಗುಣಗಳನ್ನು ನಾನು ಶ್ರೀಯುತ ದೊಡ್ಡರಂಗೇಗೌಡರಲ್ಲಿ ಕಂಡಿದ್ದೇನೆ. ನನಗೆ ಅವರ ಕವನಗಳೆಲ್ಲವೂ ಮೆಚ್ಚಿನವು. ಅವರ ಕವನಗಳನ್ನು ಮೆಚ್ಚಿ ಅವರಲ್ಲಿ ವಿಚಾರ-ವಿನಿಮಯ ಮಾಡಿದ ಎಷ್ಟೋ ಸಂದರ್ಭಗಳಲ್ಲಿ ಅವರು ನೀವು ಕವನಗಳಿಗೆ ರಾಗ ಹಾಕಿ ಹಾಡಿದರಷ್ಟೇ ಅದು ಎಲ್ಲರನ್ನು ತಲುಪುವುದು ಎನ್ನುತಿದ್ದರು. ಅದು ಅವರ ದೊಡ್ಡ ಗುಣವನ್ನು ಎತ್ತಿ ತೋರಿಸುತ್ತದೆ.

ನಾನು ಅವರ ಅನೇಕ ಕವನಗಳಿಗೆ ರಾಗ ಸಂಯೋಜಿಸಿ ಆಕಾಶವಾಣಿಯಲ್ಲಿ ಮತ್ತು ಅನೇಕ ಕಾರ್ಯಕ್ರಮಗಳಲ್ಲಿ ಹಾಡಿದ್ದೇನೆ. ನಾನು ನಡೆಸಿ ಕೊಟ್ಟ ಸುಗಮ ಸಂಗೀತ ಕಾರ್ಯಕ್ರಮಗಳಲ್ಲಿ ಗೌಡರ ಕವಿತೆಯನ್ನು ಹಾಡದೇ ಇರುವ ಕಾರ್ಯಕ್ರಮ ಯಾವುದೂ ಇಲ್ಲ, ಗ್ರಾಮೀಣ ಅರಿವು, ಜಾನಪದ ಸೊಗಡು ತುಂಬಿದ ಸಾಹಿತ್ಯ ಇವರ ಕವಿತೆಗಳಲ್ಲಿನ ವೈಶಿಷ್ಟ್ಯ. ಇವರ ಕವಿತೆಗಳನ್ನು ಹಾಡುವಾಗ ಸಹಜವಾಗಿಯೇ ತಾದಾತ್ಮ್ಯತೆ ಬರುತ್ತದೆ, ಹೃದಯ ತುಂಬುತ್ತದೆ ಮತ್ತು ಮನಸ್ಸಿಗೆ ಮುದವಾಗುತ್ತದೆ. ಇಂತಹ ಕವಿತೆಗಳನ್ನು ಬರೆಯುವಂತಹ ಕವಿ ಹೃದಯವಂತರಲ್ಲದೆಯೇ ಮತ್ತೇನು, ಆತ್ಮೀಯರಲ್ಲದೆಯೇ ಇನ್ನೇನು.

ಇವರ ಕವಿತೆಗಳಲ್ಲೆಲ್ಲಾ ನನಗೆ ತುಂಬಾ ಪ್ರಿಯವಾದುವು ಮತ್ತು ನಾನು ಆಗಾಗ ಹಾಡಿಕೊಳ್ಳುವುದು ಎರಡು ಕವಿತೆಗಳು "ಮಧುಬನದ ಜಾಡಿನಲ್ಲಿ" ಈ ಕವನವನ್ನು ದೂರದರ್ಶನದಲ್ಲಿ ಹಾಡಿದ್ದೇನೆ, ಅದು ತುಂಬಾ ಜನಪ್ರಿಯವಾಗಿದೆ. ಎರಡನೆಯದು "ನಿನ್ನ ಹೊರತು ಬದುಕು ಶೂನ್ಯ" ಅವರ ಕವನವೊಂದನ್ನು ಕ್ಯಾಸೆಟ್ ಒಂದರಲ್ಲಿ ಅಳವಡಿಸಲು ಅವರ ಅನುಮತಿ ಕೋರಿ ನನ್ನ ಪರಿಚಯದವರೊಬ್ಬನ್ನು ಅವರ ಬಳಿ ಕಳುಹಿಸಿದೆ. ಗೌಡರು ಅವರನ್ನು ಆತ್ಮೀಯವಾಗಿ ಮಾತನಾಡಿಸಿ, ಕವನದ ಭಾವಾರ್ಥವನ್ನು ವಿವರಿಸಿ ನನಗೆ ತಿಳಿಸುವಂತೆ ಹೇಳಿ ತಮ್ಮ ಒಪ್ಪಿಗೆಯನ್ನು ಕೊಟ್ಟರು. ಇದರಿಂದ ಅವರಿಗೆ ತಮ್ಮ ರಚನೆಗಳ ಬಗ್ಗೆ ಎಷ್ಟು ಕಾಳಜಿ ಇದೆ ಎಂದು ವ್ಯಕ್ತವಾಗುತ್ತದೆ.

ಇಂತಹ ಆತ್ಮೀಯರ ಬಗ್ಗೆ ಬರೆಯ ಹೊರಟರೆ ಪುಟಗಳು ಸಾಲದಾಗುತ್ತವೆ. ಶ್ರೀಯುತರು ಸಾರಸ್ವತ ಲೋಕದಲ್ಲಿ ತಮ್ಮದೇ ಆದ ವಿಶಿಷ್ಟ ಛಾಪು ಮೂಡಿಸಿದ್ದಾರೆ. "ಗ್ರಾಮೀಣ ಸೊಗಡಿನ ಕವಿ" ಎಂದು ಗುರುತಿಸಿ ಕೊಂಡಿದ್ದಾರೆ. ಇವರ ಸಾಹಿತ್ಯ ಕೃಷಿ ಅವಿರತವಾಗಿ ಸಾಗಲಿ, ಕನ್ನಡ ಸಾರಸ್ವತಲೋಕಕ್ಕೆ ಮತ್ತೂ ಹೆಚ್ಚಿನ ಕೊಡುಗೆಗಳನ್ನು ನೀಡಲಿ ಎಂದು ಹೃದಯ ತುಂಬಿ ಹಾರೈಸುತ್ತೇನೆ.

# ಸಹೃದಯಿ

✍ ಸ. ಜಗನ್ನಾಥ

"ಕೇಳಿಸದೆ ಕಲ್ಲು ಕಲ್ಲಿನಲಿ ಕನ್ನಡ ನುಡಿ
ಕಾಣಿಸದೆ ಹೊನ್ನ ಚರಿತೆಯಲಿ ಹಂಪೆಯಗುಡಿ?"

ಕನ್ನಡ ನಾಡಿನಲ್ಲಿ ಈ ಕವಿತೆಯನ್ನು ಕೇಳದವರಾರು? ಸಾಹಿತ್ಯದಲ್ಲಿ ಲಾಲಿತ್ಯವನ್ನು ಸೇರಿಸಿ ಬರೆದ ಕವಿ ಗೆಳೆಯ ಶ್ರೀ ದೊಡ್ಡರಂಗೇಗೌಡ. ನನಗಿಂತ ಹಿರಿಯರಾಗಿ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಎತ್ತರದಲ್ಲಿದ್ದ ಗೌಡರನ್ನು ನನ್ನ ಮತ್ತೋರ್ವ ಹಿರಿಯ ಗೆಳೆಯರಾದ ಶ್ರಿ ಹೊ. ರಾ. ಸತ್ಯನಾರಾಯಣರಾವ್ ಅವರೊಡನೆ ಸಮತಟ್ಟಿನಲ್ಲಿದ್ದ ನಾನು ಮೊದಲು ಕಂಡಾಗ, ಅವರ ಸ್ನೇಹಮಯ ನಿರ್ಮಾತ್ಸರ್ಯ ನುಡಿಗಳಿಂದ ಆಕರ್ಷಿತನಾಗಿ ಅಭಿಮಾನಿಯಾದೆ.

ಚಿತ್ರರಂಗದಲ್ಲೂ ಸಾಕಷ್ಟು ಹೆಸರು ಮಾಡಿರುವ ಗೌಡರ ಲೇಖನಿಯಿಂದ ಹಲವು ಕವನಗಳು (ಗೀತೆಗಳು) ಮೂಡಿ ಬಂದಿವೆ. ಅವುಗಳಲ್ಲಿ 'ಪರಸಂಗದ ಗೆಂಡೆ ತಿಮ್ಮ' ನ 'ತೇರಾ ನೇರಿ ಅಂಬರದಾಗೆ ನೇಸರ ನಗುತಾನೇ' 'ನೋಟದಾಗೆ, ನಗೆಯಾ ಮೀಟಿ ಮೋಜಿನಾಗೆ ಎಲ್ಲೆಯ ದಾಟಿ', 'ಅರುಣರಾಗ'ದ 'ನಾನೊಂದು ತೀರಾ, ನೀನೊಂದು ತೀರ,' ಲೇಖನದ ಆರಂಭದಲ್ಲಿ ಹೆಸರಿಸಿರುವ 'ಬೆಳ್ಳಿಕಾಲುಂಗುರ' ಚಿತ್ರದ ಗೀತೆ ಡಾ|| ರಾಜಕುಮಾರರ ಗಾಯನದಲ್ಲಿ ಯಶಸ್ವಿಯಾಗಿರುವ 'ಅಶ್ವಮೇಧ' ಚಿತ್ರದ ಗೀತೆ ಹೀಗೆ ಪಟ್ಟಿ ಲಂಬವಾಗುತ್ತದೆ. ತಮ್ಮ ಗೀತೆಗಳನ್ನು ಪರಭಾಷಾ ಗಾಯಕ/ಗಾಯಕಿಯರು ಹಾಡುವಾಗ ಧ್ವನಿಮುದ್ರಣ ಸಮಯದಲ್ಲಿದ್ದು ಕನ್ನಡ ಕವನಗಳಿಗೆ ನ್ಯಾಯ ದೊರಕಿಸಿಕೊಡುತ್ತಾರೆ ನಮ್ಮಗೌಡರು.

ನಾನು ಕಳೆದ ವರ್ಷ ಗೆಳೆಯರೊಡಗೂಡಿ ನಿರ್ಮಿಸಿದ ಭಾವಗೀತೆಗಳ ಧ್ವನಿ ಸುರುಳಿಯ ಹೆಸರಿನನ್ವೇಷಣೆಯಲ್ಲಿರುವಾಗ ಗೌಡರೇ ಅದಕ್ಕೆ ಸುಂದರವಾಗಿ 'ಸಂಭ್ರಮ' ಎಂಬ ಹೆಸರಿಟ್ಟು ಆಡಿದ ಎರಡು ಪ್ರೋತ್ಸಾಹಕ ನುಡಿಗಳು ಆ ಧ್ವನಿ ಸುರುಳಿಯಲ್ಲಿವೆ. ಎಲ್ಲದರಲ್ಲೂ 'ನೇಟಿವಿಟಿ'ಯನ್ನು ಕಾಣುವ ಹಂಬಲದ ಗೌಡರು ಧ್ವನಿಸುರುಳಿಗೆ ಸೂಚಿಸಿದ್ದ ಇನ್ನೊಂದು ಹೆಸರು 'ಚೆಂಡು ಹೂ'.

ಪತ್ರಿಕಾ ರಂಗದಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿರುವ ಜನಪ್ರಿಯ ವಾರ ಪತ್ರಿಕೆ 'ರಾಗ ಸಂಗಮ'ದಲ್ಲಿ ನನ್ನ ವಚನಗಳಾದ 'ಕೇಳು ಜಗದೀಶ್ವರಾ' ಅವರ 'ಪ್ರೀತಿ ಪ್ರಗಾಥ' ಧಾರವಾಹಿಯಾಗಿ ಒಬ್ಬರ ನಂತರ ಒಬ್ಬರದ್ದು ಸುಮಾರು ವಾರಗಳು ಪ್ರಕಟವಾದಾಗ ನಮ್ಮ ಗೆಳೆಯರ ಬಳಗದ ಕೆಲವರು 'ರಾಗಸಂಗಮ'ವನ್ನು ನೀವೇ 'ಮನಾಪಲಿ' ಮಾಡಿಕೊಂಡಿದ್ದೀರಾ ಎಂದು ಪ್ರೀತಿಯಿಂದ ಛೇಡಿಸಿರುವುದೂ ಉಂಟು.

ಕಲ್ಲು ಕಲ್ಲಿನಲಿ ಕನ್ನಡದ ಸೊಲ್ಲನ್ನು ಕೇಳಿಸಿ
ಕಾವ್ಯದಲ್ಲಿ ಜನಪದದ ಸೊಗಡನ್ನು ಬೆರೆಸಿ

ಹೊಲಗದ್ದೆ ಬದುಗಳಲಿ ಕಾವ್ಯಧಾರೆಯ ಹರಿಸಿ
'ಜಗಲಿ ಹತ್ತಿ ಇಳಿದು' ಬಂದ ಸಹೃದಯಿ ಸರಸಿ.

'ಏಳು ಬೀಳಿನ ಹಾದಿ'ಯಲಿ 'ಸಪ್ತ ಶೃಂಗ'ವ ನೇರಿ
'ತೀರದ ತುಡಿತ'ದಲಿ 'ಕಾವ್ಯ ಕಲ್ಯಾಣಿಯ ಸೇರಿ

'ಪ್ರೀತಿ ಪ್ರಗಾಥ'ದಲಿ 'ಮಣ್ಣಿನ ಮಾತುಗಳ'ನ್ನಾಡಿದ ಮಣ್ಣಿನಮಗ
'ಮೌನ ಸ್ಪಂದನ ಮಾಡಿದ 'ನಾಡಾಡಿ' 'ಗೀತಗಾರುಡಿ'ಗ!

## ಸಾರ್ಥಕ ಕೃತಿ

✍ ಬಿ. ಆರ್. ವಾಡಪ್ಪಿ

ಪ್ರೀತಿಯ ನೆಲೆಯನ್ನೇ ಪರೀಕ್ಷಿಸುವ ಸಂಕಟದ ಸಮಯಗಳನ್ನು ಅಭಿವ್ಯಕ್ತಿಗೊಳಿಸುವ

"ಹೆಸರಿಗೆ ಮದುವೆಯಾಯಿತು
ಬದುಕು ರೋದನವಾಯಿತು"

ಎಂಬುವಂತಹ ಪದಲಾಲಿತ್ಯದ ಅನೇಕ ಸನ್ನಿವೇಶಗಳು ದೊರಂಗೌಡರ "ಪ್ರೀತಿ ಪ್ರಗಾಥ"ದಲ್ಲಿದೆ.

ಸರಾಗವಾಗಿ ಹರಿದು ಬರುವ ಕಥನ ಇಲ್ಲಿ ತನ್ನತನವನ್ನು ಓದುಗರ ಮನದಲ್ಲಿ ಮೂಡಿಸಿ, ಪ್ರೀತಿಯ ತಾತ್ವಿಕತೆಯನ್ನು ಒರೆಹಚ್ಚುತ್ತದೆ. ದೊರಂಗೌ ನಿಲುವಿನಲ್ಲಿಯ ಒಲವು ಕುಸಿಯದೆ, ಒಲವಿನಲ್ಲಿಯ ಗೆಲವು ಸಾರ್ಥಕತೆಯನ್ನು ಪಡೆಯುತ್ತದೆ.

ದೊರಂಗೌರ "ಪ್ರೀತಿ ಪ್ರಗಾಥ" ನನಗೆ ತುಂಬ ಮೆಚ್ಚಿಗೆಯಾದ ಕೃತಿ. ಅವರ ಗೇಯ-ಗೀತೆಗಳ ರೀತಿಯೇ ಬೇರೆ; ಇಲ್ಲಿಯ ಪದ್ಯಗಳ ಸರಣಿಯೇ ಬೇರೆ ಎಂದೆನಿಸುತ್ತದೆ.

# ದೊರಂಗೌ ನಾನು ಕಂಡಂತೆ

✍ ವಿ.ಮನೋಹರ
*ಸಂಗೀತ ನಿರ್ದೇಶಕ*

"ನೋಟದಾಗೆ ನಗೆಯ ಮೀಟಿ ಮೋಜಿನಾಗೆ ಎಲ್ಲೆಯದಾಟಿ" ಆಕಾಶವಾಣಿಯಲ್ಲಿ ಪ್ರತಿ ದಿವಸವೂ ಬರುತ್ತಿದ್ದಕಾಲ - ಆಗೆಲ್ಲ ನಾವು ಕಾಲೇಜು ಮುಗಿಸಿ ಯಾವುದೇ ಜವಾಬ್ದಾರಿಯಿಲ್ಲದೆ ನಿತ್ಯ ರಜೆಯಲ್ಲಿ ಬೀದಿ ಬೀದಿ ಪೋಲಿ ದನಗಳಂತೆ ಅಲೀತಿದ್ದ ಸಮಯ. ಅಂಥಾ ಸೋಂಭೇರಿ ಮನಸಿಗೂ ಈ ಹಾಡು ತಿವಿದು ಗಮನ ಸೆಳೆದಾಗ "ಯಾರಯ್ಯ ಇದ್ನ ಬರ್ದಿದ್ದು?" ಅಂತ ಕೇಳ್ಕೊಂಡು "ಇದು ಆ ಮೇಷ್ಟ್ರು ದೊಡ್ರಂಗೇಗೌಡ್ರು ಬರ್ದಿದ್ದು, ಅದೇ ಪಡುವಾರಳ್ಳಿ ಪಾಂಡವರಲ್ಲಿ ಒಂದು ಹಾಡು ಬರ್ದಿದ್ರಲ್ಲ ಅವ್ರೇ" ಅಂತ ಗೊತ್ತಾಯಿತು.

ಅಂದಿನಿಂದ ಇಂದಿನವರೆಗೂ ದೊ.ರಂ.ಗೌ. ಎಷ್ಟೋ ಶ್ರೇಷ್ಠ ಕವನಗಳನ್ನು ಸಿನಿಮಾಗೆ ಬರ್ದಿದ್ದಾರೆ. ಆಗ ನಾನಿನ್ನೂ ಸಿನಿಮಾಲೈನ್‌ನಲ್ಲಿ ಇರಲಿಲ್ಲ. ದೊ.ರಂ.ಗೌ.ರ. "ನಮ್ಮೂರ ಮಂದಾರ ಹೂವೆ" ನಂಗೆ ಬಹಳ ಇಷ್ಟವಾಗಿತ್ತು (ಈಗಲೂ ಸಹ) ಮುಂದೆ ಇದೇ ದೊ.ರಂ.ಗೌ ನನ್ನ ಆತ್ಮೀಯರಾಗುತ್ತಾರೆ ಅಂತ ಕನಸು ಮನಸಲ್ಲಿ ನಾನು ಎಣಿಸಿರಲಿಲ್ಲ. ಅನಂತರ ನಾನು ಚಿತ್ರ ಸಾಹಿತಿಯಾದೆ.

ನಾನು ದೊ.ರಂ.ಗೌ. ಒಂದೇ ಸಿನಿಮಾದಲ್ಲಿ ಒಟ್ಟಿಗೆ ಹಾಡುಗಳನ್ನು ಬರೆಯುವ ಅವಕಾಶಗಳು ಬಂದವು - 'ನವಭಾರತ', 'ಅರಣ್ಯದಲ್ಲಿ ಅಭಿಮನ್ಯು'...ಹೀಗೆ ಹಲವಾರು ಚಿತ್ರಗಳಲ್ಲಿ ನಾನು ದೊ.ರಂ.ಗೌ ಅವರ ಜೊತೆ ಹಾಡುಗಳನ್ನು ಬರೆದಾಗ ನನಗೆ ಅನ್ನಿಸಿದ್ದು, "ಒಬ್ಬ ಕವಿಯಾಗಿ ಹೆಸರು ಮಾಡಿದ ಇವರು ಇಷ್ಟೊಂದು ಸರಳ, ಮೃದುಸ್ವಭಾವದವರು ಅಂತ ಅನ್ಕೊಂಡಿರಲಿಲ್ಲ" ಅನಂತರ ಹಾಡುಗಳ ಬಗ್ಗೆ, ವಿಷಯಗಳ ಬಗ್ಗೆ ಸಾಹಿತ್ಯದ ಬಗ್ಗೆ ಅನೇಕ ಬಾರಿ ನಾವು ಪರಸ್ಪರ ಚರ್ಚಿಸುತ್ತಿದ್ದೆವು ಅವರಿಂದ ಅನೇಕ ವಿಚಾರಗಳನ್ನು ತಿಳಿದುಕೊಳ್ಳುವ ಅವಕಾಶ ನನಗೆ ಒದಗಿತ್ತು.

ಇಲ್ಲಿಯವರೆಗೂ ಅವರ ನೂರಾರು ಹಾಡುಗಳು ಸೂಪರ್ ಹಿಟ್ ಆಗಿವೆ. ಆದರೆ ಗರ್ವದ ಸೋಂಕಿಲ್ಲದ ಗೌಡರು ಎಂದೂ ಪ್ರಚಾರ ಪ್ರಿಯ ಕೂಡ ಆಗಿಲ್ಲ. ಇವರ ಸರಳತೆ, ಸೌಮ್ಯ ಸ್ವಭಾವವನ್ನು ರೂಢಿಸಿಕೊಳ್ಳಬೇಕೆಂದು ನಾನು ಎಷ್ಟೋ ಸಲ ಮನಸ್ಸು ಮಾಡಿದ್ದುಂಟು.

ನನ್ನ ಸಂಗೀತ ನಿರ್ದೇಶನದಲ್ಲೂ ಕೂಡ ದೊ.ರಂ.ಗೌ.ರವರು ಕೆಲವು ಹಾಡುಗಳನ್ನು ಬರೆದಿದ್ದಾರೆ.

ನಲ್ಮೆಯ ದೊ.ರಂ.ಗೌ. ಅವರಿಂದ ಇನ್ನೂ ಹೆಚ್ಚು ಹೆಚ್ಚು ಸಾಹಿತ್ಯ ಸೇವೆಯಾಗಲಿ, ಉತ್ಕೃಷ್ಟ ಕಾವ್ಯಗಳ ಪೂರ ಹರಿದು ಬರಲಿ.

# "ಅಜಾತ ಶತ್ರು" - ದೊರಂಗೌ

✍ ಕೆ. ಮುಕುಂದನ್

ಮಿತ್ರ ದೊರಂಗೌ ಹಾಗೂ ನನ್ನ ಸ್ನೇಹ ಕಳೆದ 28 ವರ್ಷಗಳಿಂದ ನಡೆದು ಬಂದಿದೆ. ಅವರ ಮೊದಲ ಪರಿಚಯ ಆಗಿದ್ದು 1967ನೇ ಇಸವಿಯಲ್ಲಿ ನಾನು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಆನರ್ಸ್ ತರಗತಿಗೆ ಸೇರಿದ್ದಾಗ ಅವರು ಆಗ ವಿಜ್ಞಾನದ ವಿದ್ಯಾರ್ಥಿ ಆಗಿದ್ದು, ಅದನ್ನು ಬಿಟ್ಟು ಕನ್ನಡ ಆನರ್ಸ್‌ಗೆ ಸೇರಿದ್ದರು. ಆ ವೇಳೆಗಾಗಲೇ ಕವಿಯಾಗಿ ಹೆಸರು ಮಾಡುತ್ತಿದ್ದರು ದೊರಂಗೌ ಅವರನ್ನು ಕಂಡರೆ ನಮ್ಮ ಎಲ್ಲಾ ಸಹಪಾಠಿಗಳಿಗೂ ಒಂದು ರೀತಿ ಅಭಿಮಾನವಿತ್ತು. ರಾತ್ರಿಯೆಲ್ಲಾ ಆರ್.ಎಂ.ಎಸ್.ನಲ್ಲಿ ಕೆಲಸವನ್ನು ನಿರ್ವಹಿಸಿ ಹಗಲಿನ ಹೊತ್ತಿನಲ್ಲಿ ಕಾಲೇಜಿಗೆ ಬರುತ್ತಿದ್ದರು. ಪಠ್ಯವಷ್ಟೇ ಅಲ್ಲದೆ ಪಠ್ಯೇತರ ವಿಷಯದಲ್ಲೂ ಹೆಚ್ಚಿನ ಆಸಕ್ತಿಯನ್ನು ತಳೆದಿದ್ದ ಗೌಡರು ಒಂದು ರೀತಿ ನಮಗೆಲ್ಲಾ ಮಾರ್ಗದರ್ಶಕರಂತಿದ್ದರು.

ಬೆಂಗಳೂರಿನ ಯಾವುದೇ ಮೂಲೆಯಲ್ಲಿ ಸಾಹಿತ್ಯ ಸಮಾರಂಭವಾದರೂ ನಾವು ಬಹಳಷ್ಟು ಸಹಪಾಠಿಗಳೊಟ್ಟಿಗೆ ಅಲ್ಲಿಗೆ ಹೋಗುತ್ತಿದ್ದೇವು. ಮಾರನೇ ದಿವಸ ಅದರ ಬಗ್ಗೆ ಚರ್ಚೆ ನಡೆಸುತ್ತಿದ್ದೆವು. ನಮ್ಮೆಲ್ಲರಿಗಿಂತ ಸ್ವಲ್ಪ ಮಟ್ಟಿಗೆ ಹಿರಿಯರಾದ ಗೌಡರ ಅಭಿಪ್ರಾಯಕ್ಕೆ ಬಹಳಷ್ಟು ಸಂದರ್ಭದಲ್ಲಿ ನಮ್ಮ ಸಹಮತ ಇರುತ್ತಿತ್ತು. ಆಗ ನಮ್ಮ ತರಗತಿಯಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳಲ್ಲಿ ಕವಿಯಾಗಿ ಗುರುತಿಸಲ್ಪಟ್ಟವರೆಂದರೆ, ದೊರಂಗೌ ಹಾಗೂ ರುದ್ರಮೂರ್ತಿ ಶಾಸ್ತ್ರಿ ವಿದ್ಯಾರ್ಥಿ ದಿಸೆಯಲ್ಲಿಯೇ ಅವರಿಬ್ಬರ ಮೊದಲ ಕವನ ಸಂಕಲನ ಹೊರ ಬಂತು.

ಆಗ ಗೌಡರು 'ಮನುಜ' ಎಂಬ ಕಾವ್ಯನಾಮದಿಂದ ಬರೆಯುತ್ತಿದ್ದರು. ನನಗೆ ನೆನಪಿರುವಂತೆ ಬಹುಶಃ 1968ನೇ ಇಸವಿ ಆಗ ನಾನು, ಗೌಡರು, ಕೆ. ಎಸ್. ಮಧುಸೂಧನ್ ಮುಂತಾದ 3-4 ಜನ ಒಂದು ಕೈ ಬರಹದ ಪತ್ರಿಕೆಯನ್ನು ಹೊರತರಬೇಕೆಂದು ತೀರ್ಮಾನಿಸಿದೆವು. ಅದಕ್ಕಾಗಿ ಬೇಸಿಗೆ ರಜದಲ್ಲಿ ಪ್ರತಿ ದಿವಸ ಸೆಂಟ್ರಲ್ ಕಾಲೇಜಿನ ಲೈಬ್ರರಿಯಲ್ಲಿ ಸೇರುತ್ತಿದ್ದೆವು. ನಾವೆಲ್ಲಾ ಆರ್ಥಿಕವಾಗಿ ಹಿಂದುಳಿದ ವರ್ಗದಿಂದಲೇ ಬಂದವರಾದ್ದರಿಂದ ನಮ್ಮ ಬಳಿ ಕೈ ಬರಹದ ಪತ್ರಿಕೆಗೆ ಬೇಕಾದ ಕಾಗದವನ್ನು ಕೊಂಡುಕೊಳ್ಳಲೂ ಶಕ್ತಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಈಗಾಗಲೇ ದುಡಿಯುತ್ತಿದ್ದ ಗೌಡರು ನಮಗೆ ಕಾಗದವನ್ನು ಒದಗಿಸುತ್ತಿದ್ದಷ್ಟೇ ಅಲ್ಲ ಆ ಪತ್ರಿಕೆ ಯಾವ ರೂಪದಲ್ಲಿ ಹೊರತರಬೇಕೆಂದು ಸೂಚನೆ ಕೊಡುತ್ತಿದ್ದರು.

ಬಹಳ ಸರಳ ಸ್ವಭಾವದ ಮೃದು ಹೃದಯದ ಗೌಡರು ಎಂದೂ ಯಾರೊಂದಿಗೂ ಕಠಿಣವಾಗಿ ಮಾತನಾಡಿದವರಲ್ಲ. ಇವರನ್ನು ಕಂಡರೆ ಎಲ್ಲಾ ಸಹಪಾಠಿಗಳಿಗೂ ಅಧ್ಯಾಪಕರುಗಳಿಗೂ ವಿಶೇಷವಾದ ಅಭಿಮಾನವಿತ್ತು. 5 ವರ್ಷಗಳ ಕಾಲ ಅವರೊಂದಿಗೆ ನಾವು ಎಷ್ಟೋ ವಿಷಯಗಳ ಬಗ್ಗೆ ಚರ್ಚಿಸಿ, ಹರಟೆ ಹೊಡೆಯುತ್ತಿದ್ದ ದಿನಗಳು ಇಂದೂ ನನ್ನ ಮನದಲ್ಲಿ ಉಳಿದಿದೆ. ಮುಂದೆ 1972ನೇ

ಇಸವಿಯಲ್ಲಿ ನಾವೆಲ್ಲಾ ಕನ್ನಡದಲ್ಲಿ ಎಂ.ಎ. ತರಗತಿಯನ್ನು ಮುಗಿಸಿ ಕಾಲೇಜಿನಿಂದ ಹೊರಬಂದೆವು. ನಮ್ಮ ನಮ್ಮ ಮಾರ್ಗಗಳು ಬೇರೆಯಾದವು. ಆದರೂ ಗೌಡರು ಆಗೊಮ್ಮೆ ಈಗೊಮ್ಮ ಬೇಟಿ ಆದಾಗ ಅದೇ ಹಳೇ ವಿಶ್ವಾಸದಿಂದಲೇ ನಾವು ಹರಟೆ ಹೊಡೆಯುತ್ತಿದ್ದುದು ನನಗೆ ನೆನಪಿದೆ.

ಈಗ 4-5 ವರ್ಷಗಳ ಹಿಂದೆ ಅವರು ಕೆಲಸ ಮಾಡುತ್ತಿರುವ ಕಾಲೇಜಿಗೆ ಉಪಮುಖ್ಯಪರೀಕ್ಷಕನಾಗಿ ಹೋದಾಗ ಸುಮಾರು 15 ದಿನಗಳ ಕಾಲ ಮತ್ತೆ ಗೌಡರೊಂದಿಗೆ ಚರ್ಚಿಸುವ ಹರಟೆ ಹೊಡೆಯುವ ಅವಕಾಶ ಒದಗಿತು. ಈ ವೇಳೆಗಾಗಲೇ ಗೌಡರು ಚಲನಚಿತ್ರ ರಂಗದಲ್ಲಿ ಸಾಕಷ್ಟು ಹೆಸರು ಮಾಡಿದವರಾಗಿದ್ದರು. ಆದರೂ 1967 ನೇ ಇಸವಿಯಲ್ಲಿ ನೋಡಿದ ಗೌಡರೇ 1991ನೇ ಇಸವಿಯಲ್ಲೂ ಆಗಿದ್ದರು. ಯಾವುದೇ ರೀತಿಯ ಕೀರ್ತಿ ಶನಿ ಅವರನ್ನು ಹಿಡಿದಿರಲಿಲ್ಲ. ಸಾಹಿತ್ಯದ ಬಗ್ಗೆ ವಿಶೇಷವಾಗಿ ಕಾಳಜಿವುಳ್ಳ ಅವರು ಕಂಡಾಗ ಮಾತನಾಡುವುದು ಯಾವುದಾದರೂ ಕವನ ಸಂಕಲನದ ಬಗ್ಗೆಯೋ ವಿಚಾರ ಗೋಷ್ಠಿಯ ಬಗ್ಗೆಯೋ ಆಗಿರುತ್ತಿತ್ತು. ಇತ್ತೀಚೆಗೆ ಲಲಿತಕಲಾ ಅಕಾಡೆಮಿ 'ಚಿತ್ರಕಲಾ ಪ್ರಪಂಚ' ಎಂಬ ಬೃಹತ್ ಗ್ರಂಥವನ್ನು ಹೊರತಂದಾಗ, ಅದರಲ್ಲಿ ಗೌಡರ ಲೇಖನವೊಂದನ್ನು ಬಳಸಿಕೊಂಡೆವು. ಒಂದು ದಿವಸ ಅಕಸ್ಮಾತ್ ಗೌಡರು ಮದ್ದೂರಿನ ಹೋಟೆಲಿನ ಬಳಿ ಭೇಟಿ ಆದರು. ಆಗ ಅವರಿಗೆ ನಮ್ಮಲ್ಲಿರುವ ಕಲಾ ಪ್ರಪಂಚದ ಒಂದು ಪ್ರತಿಯನ್ನು ಕೊಟ್ಟು ಗೌರವ ಸಂಭಾವನೆಯನ್ನು ಸ್ಥಳದಲ್ಲೇ ನೀಡಿದಾಗ ಅವರಿಗೆ ಖುಷಿಯಾದದ್ದು ಅವರ ಕಣ್ಣಿನಲ್ಲೇ ಕಾಣುತ್ತಿತ್ತು. ಈ ನಿಷ್ಕಲ್ಮಶ ಸಹೃದಯ, ಕಲಾಪ್ರೇಮಿ ಇನ್ನು ಅನೇಕ ವರ್ಷಗಳ ಕಾಲ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಲಿ ಎಂದು ಹಾರೈಸುತ್ತಾ ದೊಡ್ಡರಂಗೇಗೌಡರ ಸ್ನೇಹ ನನಗೆ ದೊರೆತದ್ದು, ನನ್ನ ಭಾಗ್ಯವೆಂದೇ ಭಾವಿಸಿದ್ದೇನೆ.

## ಅಪ್ಯಾಯಮಾನ ದಾಂಪತ್ಯ ಕಥನ

✍ ಕಯ್ಯಾರ ಕಿಞ್ಞಣ್ಣ ರೈ

ದೊಡ್ಡರಂಗೇಗೌಡರು ಚಿತ್ರಿಸಿರುವ ಪ್ರೀತಿಯ ದಾಂಪತ್ಯದ ಕಥನ "ಪ್ರೀತಿ ಪ್ರಗಾಥ" ನಿಜವಾಗಿಯೂ ಆದರ್ಶವಾದದ್ದು. ಈ ಜೊತೆ ಅಷ್ಟೊಂದು ನೋವಿಗೆ ಒಳಗಾದರೂ ಇಡೀ ಆ ನೋವಿನಲ್ಲಿ ಅಂರ್ಗತವಾದ ದಿವ್ಯಪ್ರೀತಿ ಎಲ್ಲೆಡೆಯಲ್ಲಿ ಎದ್ದು ತೋರುತ್ತಿದ್ದು ತುಂಬಾ ಅಪ್ಯಾಯಮಾನವಾಗಿ ಚಿತ್ರಿತವಾಗಿದೆ.

# ನನ್ನ ನೆಚ್ಚಿನ ಮೇಷ್ಟ್ರು

✍ ವಿ. ರಾಘವೇಂದ್ರ

ಶ್ರೀಯುತ ದೊಡ್ಡರಂಗೇಗೌಡರು ನನ್ನ ಗುರುಗಳು "ಗುರು-ಶಿಷ್ಯ" ಸಂಬಂಧ ಬೆಸೆದು ಕೊಂಡದ್ದು ನಾನು ಸಂಜೆಯ ತರಗತಿಯ ವಿದ್ಯಾರ್ಥಿಯಾಗಿದ್ದಾಗ. ಅಂದಿನಿಂದ ಈವರೆವಿಗೂ. ಇನ್ನೂ ವಿದ್ಯಾರ್ಥಿಯಾಗಿಯೆ ಇದ್ದೇನೆ, ಕಲಿಯುವ ಆಸೆ ಹೊತ್ತು ಹೊರಟ ನನಗೆ ಸರಿಯಾದ ದಾರಿ ತೋರಿದವರು ನನ್ನ ಗುರುಗಳು ನಾನು ಕನ್ನಡದಲ್ಲಿ ಪಾಸು ಅಂಕಗಳನ್ನು ಪಡೆದರೆ. ಸಾಕು ಎನ್ನುವ ಅಭಿಪ್ರಾಯವಿದ್ದವನು. ಹೆಚ್ಚು ಕಷ್ಟ ಪಡದೆ ಜೀವನಾಂಶದ ಅಂಕಗಳನ್ನು ಪಡೆದರೆ ಸಾಕು ಎಂದು ಕೊಂಡಿದ್ದವನು. ನನ್ನನ್ನು ಬರೆಯುವ ಹಂತಕ್ಕೆ ತಂದವರು ಈ ನನ್ನ ಗುರುಗಳು.

ಶ್ರೀಯುತರು ಹೆಚ್ಚು ಜ್ಞಾನಿಗಳು. ಅವರ ಜ್ಞಾನ ಅಪಾರವಾದದ್ದು ಸಾಗರದಷ್ಟು ವಿಶಾಲವಾದುದ್ದು ಅದರಲ್ಲಿ ಬೊಗಸೆಯಷ್ಟನ್ನು ತುಂಬಿಕೊಂಡವನು ನಾನು. ಅವರ ವಿಶಾಲವಾದ ಹೃದಯ ಸಾಮ್ರಾಜ್ಯದಲ್ಲಿ ಸಾಸಿವೆಯಷ್ಟು ಜಾಗವನ್ನು ಪಡೆದುಕೊಂಡವನು, ನಗುಮೊಗದ ಮಿಂಚುಕಣ್ಣುಗಳ ಗಾಳಕ್ಕೆ ಸೆರೆಸಿಕ್ಕಿ ಕೊಂಡವನು ಸದಾ ಅವರಿಗೆ ಸಂಶಯದ ಪ್ರಶ್ನೆಗಳನ್ನು ಕೇಳಿ ಉತ್ತರವನ್ನು ಕಂಡುಕೊಡವನು. ಅವರ ಸಹವಾಸದಲ್ಲಿ ಅನೇಕ ಮಹಾ ಮಹಿಮರ ಪರಿಚಯವನ್ನು ನನಗೆ ಒದಗಿಸಿ ಕೊಟ್ಟವರು ನನ್ನ ಗುರುಗಳು.

ಸಂಜೆಯ ತರಗತಿಯು ಮುಗಿದ ನಂತರ ಒಟ್ಟಿಗೆ ಮನೆಗೆ ಹೊರಟು ದಾರಿಯುದ್ದಕ್ಕೂ ಅನೇಕ ವಿಷಯಗಳನ್ನು ಚರ್ಚಿಸಿದವನು ನಾನು,

ವಿದ್ಯಾರ್ಥಿಯಾಗಿದ್ದಾಗ ತರಗತಿಯಲ್ಲಿ ಪಾಠ ಕೇಳುತ್ತಿದ್ದಾಗ ನಾನು ಅವರು ಪಾಠದಲ್ಲಿ ಹೇಳುವ ಪ್ರತಿ ಪದಗಳನ್ನು ಜಾಗೂರೂಕನಾಗಿ ಕೇಳಿ ಆಪದಗಳನ್ನು ಬರವಣಿಗೆಯಲ್ಲಿ ತೊಡಗಿಸಿ ಕೊಳ್ಳುತ್ತಿದ್ದವನು ನನ್ನ ಅರಿವೆಗೆ ಬಾರದೆ ಅವರ ಪಾಠದ ಸಮ್ಮೋಹನಕ್ಕೆ ಮಾರುಹೋದವನು ನನ್ನ ಪ್ರತಿ ಲಘು ಪರೀಕ್ಷೆಗಳಲ್ಲಿ ಬರವಣಿಗೆಯನ್ನು ಗಮನಿಸಿ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದವರು ಬೆನ್ನು ತಟ್ಟಿ ಪ್ರೋತ್ಸಾಹಿಸಿದವರು ಗುರುಗಳು.

ಬೆನ್ನು ತಟ್ಟುವ ಕೆಲಸ ಮಾಡಿದ್ದಿರಿಂದ ನಾನು ಹಂತಹಂತವಾಗಿ ಮೇಲಕ್ಕೆ ಮೇಲಕ್ಕೆ ಮೆಟ್ಟಲುಗಳನ್ನು ಹತ್ತಿ ಬಂದು ತಲುಪಿದವನು ಸದಾ ನನ್ನ ಕೈ ಹಿಡಿದು ನಡೆಸಿದವರು ನನ್ನ ನೆಚ್ಚಿನ ಮೇಷ್ಟರು.

ನಾನು ಗುರುಗಳು ಒಂದೇ ಶಾಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ನಾನು ಪ್ರತಿದಿನ ಅವರನ್ನು ಒಮ್ಮೆಯಾದರೂ ಕಾಣಲೇಬೇಕು. ಕಾಣದಿದ್ದರೆ ಆ ದಿನ ಯಾವುದೋ ಮಹತ್ತರವಾದುದನ್ನ ನಾನು ಮರೆತ್ತಿದ್ದೇನೆ ಎಂದು ನನ್ನ ಎಣಿಕೆಯಾಗುತ್ತಿತ್ತು.

ಗುರುಗಳು ಕೂಡ ನನ್ನ ವಿಷಯದಲ್ಲಿ ಅದೇ ಅಭಿಪ್ರಾಯ ಪಟ್ಟವರು. ಅವರು ಯಾವುದೇ ಹೊಸಪದ್ಯಗಳನ್ನು ಬರೆದಾಗ ಅದನ್ನು ತಕ್ಷಣ ನನಗೆ ಓದಲು ಕೊಟ್ಟು ಓದಿ ಅಭಿಪ್ರಾಯ ತಿಳಿಸು ಎನ್ನುತ್ತಿದ್ದರು ಅವರ ಅನೇಕ ಹಸಿಬಿಸಿಯಾದ ಕವನಗಳನ್ನು ಓದುವ ಪುಣ್ಯ ನನಗೆ ಸಿಕ್ಕಿದ್ದು ನನ್ನ ಅದೃಷ್ಟವೆಂದು ಭಾವಿಸುತ್ತೇನೆ. ಈ ವಿಷಯದಲ್ಲಿ ಅವರು ನನ್ನನ್ನು ಸಹೃದಯನನ್ನಾಗಿ ಕಂಡದ್ದು ನನಗೆ ಬಹಳ ಸಂತಸ ತಂದಿದೆ. ಜೊತೆಗೆ ನನಗೆ ಅನೇಕ ಪದ್ಯಗಳನ್ನು ಬರೆಯಲು ಪ್ರೋತ್ಸಾಹಿಸಿದವರು ಎಂದರೆ ತಪ್ಪಾಗಲಾರದು.

ಮೇಷ್ಟ್ರು ಮತ್ತು ನಾನು ಒಟ್ಟಿಗೆ ಅನೇಕ ಕಡೆ ಹೊರಟಿದ್ದೇವೆ. ಅವರ ಜೊತೆಯಲ್ಲಿ ಪ್ರವಾಸ ಮಾಡುವುದೇ ಒಂದು ಸುಯೋಗ ಪ್ರವಾಸಕ್ಕೆ ಮೊದಲು ಅವರು ಆ ಜಾಗದ ಪೂರ್ಣವಿವರಗಳನ್ನು ಸಂಗ್ರಹಿಸಿರುತ್ತಿದ್ದರು, ನಮಗೆ ಆ ಜಾಗದ ಪೂರ್ಣವಿವರಗಳನ್ನು ವಿವರಿಸಿ ಹೇಳುತ್ತಿದ್ದರು. ನಾವು ಕೇಳುವ ಪ್ರತಿ ಪ್ರಶ್ನೆಗೂ ಗುರುಗಳ ಬಳಿ ಉತ್ತರ ಸಿದ್ಧವಾಗುತ್ತಿತ್ತು. ನಮ್ಮನು ನಗಿಸಿ ನಮ್ಮೊಡನೆ ಸಂತಸ ಪಡುತ್ತಿದ್ದವರು ಸಾಗರದ ಅನುಭವದಲ್ಲಿ ಕಾಗದದ ಪುಟ್ಟ ದೋಣಿಯಾಗಿರುತ್ತಿದ್ದೆ ನಾನು. ಕುತೂಹಲದ ಪ್ರಶ್ನೆಗಳು ಅವರ ನನ್ನ ನಡುವೆ ಚರ್ಚೆಗೆ ಕಾರಣವಾಗಿರುತ್ತಿತ್ತು. ಅದಕ್ಕೆ ಸರಿಯಾದ ಉತ್ತರವು ಸಿಕ್ಕುತಿತ್ತು. ಒಮ್ಮೆ ನಾನು ಅವರು ಒಟ್ಟಿಗೆ ಸೈಂಟ್ ಮೇರಿ ಐಲೆಂಡ್ ನೋಡಲೆಂದು ಹೊರಟು ನಮ್ಮ ಪ್ರವಾಸ "ಬಾದರ್‌ಗಡ"ದ ನಡುದಂಡೆಯಲ್ಲಿ ನಿಂತಿತು. ನಾವು ಹೊಸದೊಂದು ದ್ವೀಪಕ್ಕೆ ಹೋಗಿದ್ದರ ಅನುಭವ ನನ್ನಲ್ಲಿ ಇನ್ನು ಹಸಿರಾಗಿದೆ ಆದ್ವೀಪದ ಸುತ್ತಲೂ ನೀರು ಅಪ್ಪಳಿಸುವ ದೃಶ್ಯ, ಮರಳುರಾಶಿ, ಕೇದಿಗೆವನ, ಕರಿನಾಗರ ದರ್ಶನ, ಕಪ್ಪೆ ಚಿಪ್ಪಿನ ಸಂಗ್ರಹ, ಮೀನು ಸೀಗಡಿಗಳ ರಾಶಿ ರಾಶಿ ಎಷ್ಟು ನೋಡಿದರೂ ತಣಿಯದ ಮನಸ್ಸು, ಈ ಬಗ್ಗೆ ಮೇಸ್ಟ್ರು ಪದ್ಯ ಬಹು ಚೆನ್ನಾಗಿ ಮೂಡಿಬಂದಿದೆ, ಈ ಸಾಲುಗಳಲ್ಲಿ ಅವರ ಅನುಭವದ ದೃಶ್ಯ ಗರಿಕಟ್ಟಿ ಹೊರ ಹೊಮ್ಮಿದೆ.

**ಬಾದರ್‌ಗಡ**

ಬಾದರ್‌ಗಡ - ಸಮುದ್ರ ಮಧ್ಯದೊಂದು ನಡುಗಡ್ಡೆ

ಅಲ್ಲಿ ಮುಗಿಯುವ ಶಿಲ್ಪ ವಿನ್ಯಾಸ
ಪ್ರಕೃತಿ ಹಡೆದು ಕಡೆದ ವಿಚಿತ್ರ ವಿಲಾಸ
ಚೆಲ್ಲಾಪಿಲ್ಲಿ ಬಿದ್ದ ಸ್ಮಾರಕದಂಥ ಪರುಷ.
ಬಗೆ ಬಗೆ ಶಿಲೆಗಳ ಕಡಲ ಅಲೆ ಕೊರೆಕೊರೆದು ಬಿರಿದ ನಾಗರದಂಡೆ
ಜಗದ ರೂವಾರಿಗಳೆಲ್ಲ ಹೋಗಿ ಕಲಿಯಬೇಕಲ್ಲಿನ ಲೆಕ್ಕವಿರದ
ರೂಪಗಳ ಕಲ್ಲು ಕಲ್ಲಿಗೂ ಜೀವವಲ್ಲಿ; ಮುಗಿಲಿಗೆತ್ತಿವೆ ಅವು ಕಣ್ಣ
ಚೂಪುಗಳು ಜ್ಯಾಮಿತಿಯ ಶೈಲಿಗಳಲ್ಲಿ ನಗುತಿವೆ ನಿತ್ಯ
ನಿಸರ್ಗ ನಿರ್ಮಿಸಿದೆ ಓರೆಕೋರೆ ಉಬ್ಬು-ತಗ್ಗು ಪಾಕಗೊಂಡೆರಕವಾಗಿದೆ
ಸತ್ಯ ಸಮುದ್ರ ರಾಜ ತನ್ನೊಡಲ ಜಲ ಚೆಲ್ಲಿ
ಅರಳಿವೆ ಅಲ್ಲಿ ತಾನೇ ತಾನಾಗಿ - ಉಪ್ಪಿನಮಡಿ ರಂಗವಲ್ಲಿ
ಕಣ್ಣ ತಿರುಗಿಸಿದತ್ತ ಕೇದಗೆಬನ, ಕಾಡಸಂಪಿಗೆವನ
ಕುರುಚಲ ಗಿಡಗಳ ಬುಡಗಳಸುತ್ತ ಬಳ್ಳಿಮಾಡ ಬಹಳ
ನೋಡಿದಷ್ಟು ಸುಂದರ ಹಂದರ; ವಿಧ ವಿಧ ಬೆಡಗಿನ -ಜೇಡ ಜಾಲ

ಕವಡೆ ಶಂಖು ರಾಶಿ ರಾಶಿ - ಕಾಲಪುರುಷ ಕಕ್ಕಿದ್ದಾನಲ್ಲಿ ರಕ್ತ
ಬೀಜಾಸುರನಂತೆ ಅಸಂಖ್ಯ ಬಗೆ-ಎಲ್ಲೆಂದರಲ್ಲಿ ! ಅಲ್ಲಿ
ಮರಳೆನ್ನುವುದಿದ್ದರೆ ಅದು ವಿಪುಲ ಕಪ್ಪೆ ಚಿಪ್ಪಿನ ನುಸಿ, ಗಸಿ; ಆ
ನುಣುಪು ಪುಡಿಯ ಮೇಲೆ ಚೆರಗಿನ ಧೂಳಿಯ ಗಾಳಿಲೀಲೆ
ಹೆಜ್ಜೆಯೂರುತ್ತಾ ಹೋದರೆ ರಖಂವಾರಿ ಬೆಂಡಿನ ಸ್ಪಂಜಿನ ಮಾಲೆ
ಕವಡೆಯುಂಗುರ ಸರ ಹೆಕ್ಕಿದಷ್ಟೂ ತೀರದಾಗರ;

ಎಷ್ಟು ತರ ಜಲಚರ? ಎಷ್ಟೊಂದು ಚೆಂದ ಪ್ರತಿ ಫಲಿತ
ಸೂರ್ಯನಾಕಾರ ಬಂಡೆ ಬಂಡೆಯ ಮೇಲೆ ಬಿಸಿಲ ಕಾಯಿಸುವ
ಏಡಿಗಳ ಪಡೆ ಸಾವಿರ.
ಆ ದ್ವೀಪ ಸುತ್ತಿ ಬಂದರೆ ಸಾಕು.
ಸಿಕ್ಕಾವು ಕೈತುಂಬ ಪ್ರಾಸ್ಪೆರೋ - ಮಂತ್ರದಂಡ;
ಬುರುಡೆಗಳು, ಪ್ರಾಣಿ ಮೂಳೆಗಳು, ವಸ್ತು ಸಂಗ್ರಹಾಲಯಕ್ಕೆ
ಯೋಗ್ಯ-ಪಳೆಯುಳಿಕೆಗಳು ...ಆಯ್ದುಕೊಂಡಷ್ಟೂ ರೂಕ್ಷ ಭಾಗ್ಯ.

ಅಪರೂಪಗಳ ಸಂಚಯಿಸುವ ಪ್ರವಾಸಿಗೆ
ಬಾಯಾರಿದರೆ ಮಾತ್ರ ಬವಣೆಗೆ ಕೊನೆಯಿಲ್ಲ
ಸುತ್ತೆಲ್ಲ ಅಪಾರ ಜಲ;
ಕುಡಿಯಲೊಂದು ತೊಟ್ಟು ಸೀನೀರು ಸಿಗುವುದಿಲ್ಲ!

ಅನೇಕ ಹಿರಿಯ ಸಾಹಿತಿಗಳನ್ನು ಕಾಣಲು ನಾನು ಗುರುಗಳು ಜೊತೆಯಾಗಿ ಹೋಗುತ್ತಿದ್ದೆವು. ಅವರು ಅನೇಕ ಕನ್ನಡದ ಹಿರಿಯ ಸಾಹಿತಿಗಳಿಗೆ ಈ ವಿದ್ಯಾರ್ಥಿ ಮಿತ್ರನನ್ನು ಪರಿಚಯಿಸುತ್ತಿದ್ದರು, ಅವರೊಡನೆ ಗಂಟೆಗಟ್ಟಲೆ ಮಾತಾಡಿಸುತ್ತಿದ್ದರು.

ಒಮ್ಮೆ ಶಾಲೆಯ ವಾರ್ಷಿಕೋತ್ಸವಕ್ಕೆ ಶ್ರೀ ವಿನಾಯಕ ಕೃಷ್ಣ ಗೋಕಾಕ್‌ರವರನ್ನು ಅವರ ಮನೆಯಲ್ಲಿ ನಾನು ಗುರುಗಳು ಹಿ. ಮ. ನಾಗಯ್ಯನವರು ಜೊತೆಗೂಡಿ ಬೆಳಿಗ್ಗೆ ೮.೦೦ ಗಂಟೆಯ ಅಕ್ಕಿರೊಟ್ಟಿಯೊಡನೆ ಪ್ರಾರಂಭವಾದ ಸಾಹಿತ್ಯ ಸಂವಾದ ಪದ್ಯಗಳ ಓದು, ಚರ್ಚೆ, ಸಂಶಯ ಪರಿಹಾರಗಳು, ಊಟದ ಮನೆಯಲ್ಲಿ ನಡೆದು ಸಂಜೆ ೪.೦೦ ಘಂಟೆಗೆ ಬಿಡಲಾರದ ಮನಸ್ಸಿನಲ್ಲಿ ಬಿಟ್ಟು ಬಂದದು. ಈ ರೀತಿ ಅನೇಕ ಪರಿಚಯಗಳು ನೆನಪು ನನ್ನ ಮನದಲ್ಲಿ ಮೂಡಿಸಿದವರು. ಮರೆಯಲಾಗದ ಅನುಭವಗಳನ್ನು ಒದಗಿಸಿಕೊಟ್ಟವರು ಮಾಸ್ತರರು.

ಗುರುಗಳು ನಾನು ಒಂದೇ ಕಡೆ ಕೆಲಸಮಾಡುತ್ತಿರುವುದರಿಂದ ಅವರು ಸದಾ ನನ್ನ ಬೆಳವಣಿಗೆಯನ್ನು ಗಮನಿಸಿ ಸರಿಯಾದ ಮಾರ್ಗದರ್ಶನ ನೀಡಿ ಸದಾ ಎಚ್ಚರದಿಂದ ಕೆಲಸ ಮಾಡುವಂತೆ ಪ್ರೇರೇಪಿಸುತ್ತಿರುತ್ತಾರೆ. ಗುರುಗಳು ನಾನು ಒಂದೇಕಡೆ ಕೆಲಸ ಮಾಡುವುದು ಒಂದು ಸುಯೋಗ ನನ್ನ ಅದೃಷ್ಟ ಎಂದು ಭಾವಿಸಿರುತ್ತೇನೆ "ಎಚ್ಚರಿಸುವ ಗುರುವಿರಲು" ನನ್ನ ಕೆಲಸ ಬಹಳ ಸುಲಭವಾಗಿ ಸಾಗಿದೆ ಎಂದು ಅರಿತಿದ್ದೇನೆ.

# ಮಿನುಗುತಾರೆ

✍ ಅಣ್ಣಾಸ್ವಾಮಿಮೊದಲಿಯಾರ್
ಪತ್ರಕರ್ತರು

"ಕಾವ್ಯವೆಂಬುದು ಕವಿಯ ಶಾಂತಮನಸ್ಸಿನಲ್ಲಿ ಪುನರ್‌ಜನ್ಮ ಪಡೆದ ತೀವ್ರಭಾವಗಳ ನಿರರ್ಗಳ ಪ್ರವಾಹ" ಎಂದು ಮಹಾಕವಿ ವರ್ಡ್ಸ್‌ವರ್ತ್ ಹೇಳಿದ್ದಾನೆ. ಜೀವನದ ಘಟನೆಗಳನ್ನು ವಿಚಾರಗಳ ಸ್ವರೂಪವನ್ನು, ಕೆಟ್ಟದ್ದನ್ನು ಕಂಡು ಮರುಗುವ, ಧಿಕ್ಕರಿಸುವ, ಸೌಂದರ್ಯವನ್ನು ಕಂಡು ಸಂಭ್ರಮಪಡುವ, ವಿಷಾದ ಸಾಂಗತ್ಯವನ್ನು ಆದರ್ಶಗಳ ಹಳಿಯ ಕೂಗನ್ನು; ಯಾವುದೇ ವಿಷಯವನ್ನಾಗಲಿ ತಮ್ಮದೇ ಆದ ಧಾಟಿಯಲ್ಲಿ, ಸರಳ ಕನ್ನಡದಲ್ಲಿ, ಓದುಗರ ಮನಮುಟ್ಟುವಂತೆ, ಬರೆಯಬಲ್ಲ ಜನಪ್ರಿಯ ಕವಿ ದೊಡ್ಡರಂಗೇಗೌಡರು.

ಕಾವೇರಿ ಭವನದಲ್ಲಿ ವಿದ್ಯುತ್‌ಚ್ಛಕ್ತಿ ಇಲಾಖೆಯ ಕನ್ನಡ ಸಂಘದ ಕಾರ್ಯಕ್ರಮ ಕವಿ ದೊಡ್ಡರಂಗೇಗೌಡರು ಮಾತನಾಡಲು ಎದ್ದು ನಿಂತರು. ಅವರಿನ್ನೂ ಏನನ್ನೂ ಮಾತಾನಾಡಿಲ್ಲ ಆಗಲೇ ಉತ್ಸಾಹದಿಂದ ಸಭಿಕರಿಂದ ಚಪ್ಪಾಳೆ. ಅವರ ಭಾಷಣಕ್ಕೆ ಸ್ವಾಗತ ಕೋರುವ ರೀತಿ ಅದು.

ಅವರ ಮಾತುಗಳು ಮುಗಿದ ಕ್ಷಣ ಸಭಿಕರು ಅವರ ಹೊಸ ಕವನವನ್ನು ಓದಲು ಒತ್ತಾಯ ಮಾಡಿದರು ರಸಿಕರ ಒತ್ತಾಯಕ್ಕೆ ಮಣಿದು, ಶ್ರೀ ದೊಡ್ಡರಂಗೇಗೌಡರು ಎರಡು ನವ್ಯ ಕವನಗಳನ್ನು ಓದಿದರು, ಚಪ್ಪಾಳೆ ಸಭಾಭವನವನ್ನು ತುಂಬಿತು.

ವಂದನಾರ್ಪಣೆಯಾದ ನಂತರ, ದೊಡ್ಡರಂಗೇಗೌಡರ ಸುತ್ತ ಅವರ ಅಭಿಮಾನಿಗಳ ಗುಂಪು. ಹಸ್ತಾಕ್ಷರ ಪಡೆಯಲು ಒಬ್ಬರ ಮೇಲೊಬ್ಬರು ಕೈಚಾಚುತ್ತಿದ್ದರು. ನಗು ನಗುತ್ತಾ ಹಸನ್ಮುಖರಾಗಿ ಎಲ್ಲರಿಗೂ ಏನಾದರೊಂದು ಪ್ರಶ್ನೆ ಕೇಳಿ ಅವರಿಂದ ಉತ್ತರ ಪಡೆದು ಹಸ್ತಾಕ್ಷರ ಬರೆಯುತ್ತಿದ್ದರು. ಪರಿಚಯದವರೊಡನೆ ಹೆಚ್ಚು ವಿಚಾರ ಮಾಡುತ್ತಿದ್ದರು.

ಕರ್ನಾಟಕ ರತ್ನ ವರನಟ ರಾಜಕುಮಾರರವರ ಅಭಿಮಾನಿಗಳ ಸಮೂಹ ನೋಡಿದ್ದೇನೆ. ಜನರ ಮನಸ್ಸಿನಲ್ಲಿ ತಮ್ಮ ಪ್ರತಿಭೆಯಿಂದ ಶಾಶ್ವತವಾಗಿ ಉಳಿಯುವ ಚೈತನ್ಯ ಪುರುಷರು ಈಮಹಾಪುರುಷರು. ಈ ಹಾದಿಯಲ್ಲಿ ಹಂತಹಂತವಾಗಿ ಸಾಗುತ್ತಿರುವ ಹೊಸ ಪ್ರತಿಭೆ-ಕವಿದೊಡ್ಡರಂಗೇಗೌಡರು.

ಕೆಲವೇ ವರ್ಷಗಳಲ್ಲಿ ದೊಡ್ಡರಂಗೇಗೌಡರ ಹೆಸರು ಕಾವ್ಯ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದರು.

ಇವರು ಕೃತಿರಚನೆ ಮಾಡುವಾಗ ಕನ್ನಡ ಬಾಷೆಗೆ ಅವರು ಯಾವ ಸ್ವರೂಪವನ್ನಾದರೂ ಕೊಡಬಲ್ಲವರಾಗಿದ್ದಾರೆ. ಕ್ಲಿಷ್ಟವಾದ ತರ್ಕ ಸರಣಿಗಳಿಂದ

ಕೂಡಿದ ಗದ್ಯಸಾಹಿತ್ಯದಿಂದ ಹಿಡಿದು ಪ್ರೇಮ, ಸೌಂದರ್ಯಗಳ ಗಾನ ಮಾಧುರ್ಯದಿಂದೊಡಗೂಡಿದ ಪದ್ಯ ಸಾಹಿತ್ಯದವರೆಗೆ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಉಪಯೋಗಿಸದೇ ಇರುವ ತಂತ್ರಗಳೇ ಇಲ್ಲವೆನ್ನಬಹುದು. ಇವರ ಗದ್ಯ-ಪದ್ಯ ಗಳೆರಡರಲ್ಲೂ ಅಸಾಮಾನ್ಯವಾದ ಸಾಹಿತ್ಯ ನೈಪುಣ್ಯ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುತ್ತದೆ. ಕನ್ನಡ ಭಾಷೆಯನ್ನು ಹದಗೊಳಿಸಿ ಬಳಸಿಕೊಂಡಿದ್ದಾರೆ.

ಚಲನಚಿತ್ರಗಳಿಗೆ ಗೀತರಚನೆಕಾರರಾಗಿ ಕೂಡ ಇವರು ಕನ್ನಡಿಗರ ಹೃದಯ ಗೆದ್ದಿದ್ದಾರೆ.

ಸಾಹಿತ್ಯರಂಗ ಮತ್ತು ಚಿತ್ರರಂಗಗಳೆರಡರಲ್ಲೂ ಕೀರ್ತಿ ಪತಾಕೆ ಹಾರಿಸಿ ಜಯಬೇರಿ ಮೊಳಗಿಸಿ ತಮ್ಮ ಪ್ರತಿಭೆಯ ಪ್ರೌಢಿಮೆಯನ್ನು ಪ್ರದರ್ಶಿಸಿರುವ ದೊಡ್ಡರಂಗೇಗೌಡರು ಒಬ್ಬ ಅಪರೂಪದ ವ್ಯಕ್ತಿ.

ಅವರು ತಾವು ಬೆಳೆಯುವುದರ ಜೊತೆಗೆ. ಅನೇಕ ಯುವ ಕವಿಗಳನ್ನು ಬೆಳಕಿಗೆ ತರುತ್ತಿದ್ದಾರೆ. ಇತ್ತೀಚೆಗೆ ಖಾಸಗಿ ಕಂಪೆನಿಯೊಂದು ಏರ್ಪಡಿಸಿದ್ದ ಸಾಹಿತ್ಯ ಸ್ಪರ್ಧೆಯ ತೀರ್ಪುಗಾರನಾಗಿ ನಾನು ಹೋಗಿದ್ದೆ ಪ್ರಥಮ ಬಹುಮಾನ ಪಡೆದ ಕೃತಿ ಭಾಷೆ, ವಿಚಾರ, ನಿರೂಪಣೆ ಶೈಲಿ ಎಲ್ಲಾ ರೀತಿಯಲ್ಲೂ ಸುಂದರವಾಗಿತ್ತು. ಪ್ರಶಸ್ತಿ ನೀಡುವ ಮುನ್ನ ನಾನು ಆ ಯುವ ಕವಿಯನ್ನು ವಿಚಾರಿಸಿದೆ" ಸಾಹಿತ್ಯದಲ್ಲಿ ನಿಮಗೆ ಆಸಕ್ತಿ ಮೂಡಿದ್ದು ಹೇಗೆ? ಅವರು ಹೇಳಿದರು "ನಮ್ಮ ಗುರುಗಳಾದ ದೊಡ್ಡರಂಗೇಗೌಡರ ಮಾರ್ಗದರ್ಶನ-ನನಗೆ ಸಾಹಿತ್ಯದಲ್ಲಿ ನನ್ನನ್ನು ತೋಡಗಿಸಿಕೊಳ್ಳಲು ಪ್ರೇರಣೆ ನೀಡಿತು."

ಹೀಗೆ ಚರ್ಚಾಕೂಟಗಳಲ್ಲಿ, ಲೇಖನ ಸ್ಪರ್ಧೆಗಳಲ್ಲಿ ಅಂತರಕಾಲೇಜು ಸ್ಪರ್ಧೆಗಳಲ್ಲಿ ದೊಡ್ಡರಂಗೇಗೌಡರ ಶಿಷ್ಯ ಪರಂಪರೆಯನ್ನು ಕಾಣಬಹುದು.

ದೊಡ್ಡರಂಗೇಗೌಡರು ವಿನಯ ಶೀಲರು ವಿದ್ಯಾಸಂಪನ್ನರಾಗಿದ್ದರೂ ಅತ್ಯಂತ ಸರಳ ಸ್ವಭಾವದವರು. ಈ ರೀತಿಯ ವ್ಯಕ್ತಿತ್ವ ಅತಿವಿರಳ ತಾಯಿ ಭುವನೇಶ್ವರಿಗೆ ಅವರು ಪ್ರಾರ್ಥಿಸುತ್ತಾರೆ.

"ಮಂದ ಬುದ್ದಿಯ ನನಗೆ ನೀನೇ ಹಂಸವಾಹಿನಿ
ದಗ್ಧ ಹೃದಯದ ನನಗೆ ನೀನೇ ಹರ್ಷತರಂಗಿಣಿ
ಹಾದಿ ಕಾಣದ ನನಗೆ ನೀನೇ ಜ್ಯೋತಿರ್ಧಾರಿಣಿ
ದಿಕ್ಕು ತಪ್ಪಿದ ನನಗೆ ನೀನೇ ಮಾರ್ಗದರ್ಶಿನಿ"

ಈ ರೀತಿಯ ಸಹಜ ಸ್ವಭಾವವೇ ಅವರ ಕಾವ್ಯ ಜನಪ್ರಿಯವಾಗಲು ಕಾರಣವಾಗಿದೆ. ಕವಿಯ ಎಲ್ಲಾ ಲಕ್ಷಣಗಳನ್ನು ಮೈಗೂಡಿಸಿಕೊಂಡಿರುವ ಶ್ರೀ ದೊಡ್ಡರಂಗೇಗೌಡರು ಕರ್ನಾಟಕ ಸಾಹಿತ್ಯ ಕ್ಷೇತ್ರದ ಒಂದು ಮಿನುಗುತಾರೆ.

# ನಾನು ಮತ್ತು ಮೇಸ್ಟ್ರು

✍ ಜಿ. ಪ್ರಭಾಕರ ಗಂಗೊಳ್ಳಿ

ಸುಮಾರು ೬,೧೦ ವರ್ಷದ ಹಿಂದಿನ ಮಾತು ನಾನಾಗ ರಾಜಾಜಿನಗರದ (ನಿಜಲಿಂಗಪ್ಪ) ಸಂಜೆ ಕಾಲೇಜಿನಲ್ಲಿ ಎರಡನೆ ವರ್ಷದ ಪಿ.ಯು.ಸಿ. ವಿದ್ಯಾರ್ಥಿಯಾಗಿದ್ದೆ. ಪ್ರೊ|| ಅಬ್ದುಲ್ ಮಜೀದ್‌ಖಾನ್‌ರವರು ನನಗೆ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರು. ಅವರ ಕವನ, ಸಂಕಲನ-ಒಂದನ್ನು ಮೇಸ್ಟಿಗೆ ತಲುಪಿಸುವ ಜವಬ್ದಾರಿ ನನಗೆ ಬಂತು,

ಅದೇ ಮೊದಲ ಬಾರಿಗೆ ಮೇಸ್ಟರ ಭೇಟಿಯಾಯಿತು,

ಮೊದಮೊದಲು ಮೇಸ್ಟರನ್ನು ತಿಂಗಳಿಗೊಮ್ಮೆ ೧೫ದಿನಕ್ಕೊಮ್ಮೆ ಭೇಟಿಯಾಗುತ್ತಿದ್ದೆ. ಬರಬರುತ್ತಾ ಅವರ ಆತ್ಮೀಯತೆ, ಹೃದಯವಂತಿಕೆ ನನ್ನನ್ನು ಆಕರ್ಷಿಸಿ ದಿನ ನಿತ್ಯವೆಂಬಂತೆ ಅವರು ಭೇಟಿಮಾಡುತ್ತಿದ್ದೆ, ಅವರ ಹಲವು ಬರವಣಿಗೆಗಳ ಮೊದಲ ಓದುಗನಾಗಿ, ಓದಿ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದೆ ಅವರಂತೆ ನಾನೊಬ್ಬ ಒಳ್ಳೆಯ ಬರಹಗಾರನಾಗಬೇಕು ಎಂದು ಮಹದಾಸೆ ಪಟ್ಟಿದ್ದೆ ಅವರ ಸಲಹೆ ಸೂಚನೆಗಳನ್ನು ಪಡೆಯುವವರಲ್ಲಿ ನಾನೊಬ್ಬ . ಹಲವಾರು ಬಾರಿ ಅವರ ಜೊತೆಯಲ್ಲಿ ಬೆಂಗಳೂರು ಬಸ್ಟಾಂಡಿಗೂ, ಕಾರ್ಪೋರೇಷನ್ ಬಸ್ ಸ್ಟಾಂಡ್‌ವರೆಗೂ ನಡೆದು ಹೋಗುತ್ತಿದ್ದುದು ಮಾರ್ಗ ಮಧ್ಯದಲ್ಲಿ ಹಲವು ಸಂಗತಿಗಳನ್ನು ಹೇಳುತ್ತಿದ್ದರು.

"ಏನಾದರೂ ಮಾಡುತ್ತಿರು ತಮ್ಮ" ಎಂಬ ಮಾತನ್ನು ಕಾರ್ಯರೂಪಕ್ಕೆ ತಂದವರು ಸದಾ ಬಿಡುವಿಲ್ಲದ ವ್ಯಕ್ತಿಯೆಂದರೆ ಇವರು. ಅವರು ಬರೆಯದೆ ಇರುವ ದಿನ ಬಹಳ ಅಪರೂಪ. ಎಷ್ಟೋಸಲ ಅವರು ಚಿತ್ತಿಲ್ಲದೆ ನಿರ್ಗಳವಾಗಿ ಎಲ್ಲೂ ನಿಲ್ಲಿಸದೆ ಬರೆಯುತ್ತಿದ್ದರು. ಅದೇ ಅಂತಿಮ ಬರವಣಿಗೆ ಪ್ರತಿಯಾಗಿರುತ್ತಿತ್ತು.

ಶಿಸ್ತಿನ ಸಿಪಾಯಿಯಂತೆ ಅವಿರತ ದುಡಿಮೆ ಇವರದು. ಕಠಿಣ ತಪಸ್ಸು ಮಾಡಿ ಇವರು ಮುಂದಕ್ಕೆ ಬಂದವರು.ಅಂಚೆ ಇಲಾಖೆಯಲ್ಲಿ (RMS.) ೮ವರ್ಷ ಕಾಲ ಕೆಲಸ ಮಾಡುತ್ತಿದ್ದರಂತೆ. ರಾತ್ರಿ ಅಲ್ಲಿ ಕೆಲಸ ಹಗಲಿನಲ್ಲಿ ಕಾಲೇಜಿನಲ್ಲಿ ಓದು. ಇವರದು ಮಹಾ ಸಾಹಸ. ಇಂದೂ ಕೂಡ ಇವರು ಬಿಡುವಿಲ್ಲದ ವ್ಯಕ್ತಿ.

ನನ್ನ ಬರವಣಿಗೆಗಳನ್ನು ಅವರಿಗೆ ತೋರಿಸುತ್ತಿದ್ದೆ. ತಿದ್ದಿಕೊಡುತ್ತಿದ್ದರು. ಹಲವು ಬಾರಿ ಅದನ್ನೇ ಮತ್ತೆ ಮತ್ತೆ ತಿದ್ದಿಸಿಕೊಳ್ಳುತ್ತಿದ್ದೆ. ಎಂದೂ ತಾಳ್ಮೆಯನ್ನು ಕಳೆದುಕೊಂಡವರಲ್ಲಾ ನನ್ನನ್ನು ತನ್ನ ತಮ್ಮನಂತೆ ಪ್ರೀತಿ, ವಾತ್ಸಲ್ಯದಿಂದ ಕಂಡಿದ್ದಾರೆ. ಒಳ್ಳೆಯದಕ್ಕೆ ಬೆನ್ನುತಟ್ಟಿದ್ದಾರೆ, ಗುರುವಾಗಿ ತಿದ್ದಿ ತೀಡಿದ್ದಾರೆ. ಬೆಳೆಸಿದ್ದಾರೆ. ಆಶೀರ್ವದಿಸಿದ್ದಾರೆ.

# ಅನನ್ಯ ಕವಿ ದೊರಂಗೌ

✍ ವನಿತಾ ಸತೀಶ
ಅಧ್ಯಾಪಕಿ

ನವ್ಯ ಕಾವ್ಯವು ಆಗ ತಾನೇ ತಲೆಯೆತ್ತಿ ಬೆಳೆಯುತ್ತಿರುವಾಗ ಮತ್ತೊಂದು ಹೊಸ ಪ್ರತಿಭೆಯ ಪ್ರವೇಶವಾಯಿತು ಅವರೇ ನಮ್ಮ ದೊರಂಗೌ ಅವರು. ಮೊಟ್ಟಮೊದಲು ಕವನ ಬರೆದದ್ದು ೧೯೬೧ರಲ್ಲಿ ಮತ್ತು ಅವರ ಮೊದಲನೆಯ ಕೃತಿ 'ಜಗಲಿ ಹತ್ತಿ ಇಳಿದು' ಹೀಗೆ ಕಾವ್ಯ ಕ್ಷೇತ್ರವನ್ನು ಪ್ರವೇಶಿಸಿದ ಕವಿ, ತಾನು ಅಂಬೆಗಾಲಿಟ್ಟು ಬಂದ ಹಸುಳೆಯಂದು ಹೇಳಿಕೊಂಡರೂ, ಅವರ ಕೊಡುಗೆ ಅನನ್ಯವಾದದ್ದು.

ಬದುಕು ಮತ್ತು ಕಾವ್ಯ ಅವರ ಕಣ್ಣಲ್ಲಿ ಬೇರೆಯಲ್ಲ ಒಂದಕ್ಕೊಂದು ಪೂರಕ. ಜೀವನಕ್ಕೆ ಕಾವ್ಯ ಉಸಿರಾಗಿಸಿರುವ ದೊರಂಗೌ ಒಬ್ಬ ಸಂವೇದನಾಶೀಲ ಕವಿ. "ಬದುಕುತ್ತಾ ಬರೆಯಬೇಕು - ಬರೆಯುತ್ತಾ ಬದುಕಬೇಕು" ಎಂಬುದು ಅವರ ದೃಷ್ಟಿ. ಬಾಳಿನ ಎಲ್ಲ ಸ್ಪಂದನಗಳನ್ನು ಮೌನವಾಗಿ ಪದದಲ್ಲಿ ತುಂಬಿ ಎಲ್ಲರೆದುರು ಪ್ರತಿಮೆ/ರೂಪಕಗಳ ಮೂಲಕ ತೆರೆದಿಟ್ಟದ್ದು ಬದುಕಿನ ಹಲವು ಮುಖಗಳು ಪರಿಚಯ ನೀಡಿದ್ದಾರೆ. ಅದು ಬರೀ ನಗೆಯ ಕುಲುಮೆಯಷ್ಟೇ ಅಲ್ಲ; ಒಟ್ಟಿನಲ್ಲಿ ಸ್ವೇಚ್ಛೆ, ಕೊಚ್ಚೆ ಇಚ್ಛೆಗಳ ಮಂಥನ. ಬದುಕು ಸಿಹಿ-ಕಹಿಯ ಬುತ್ತಿ. ತಾರುಣ್ಯದ ಉತ್ಸಾಹದಿಂದ ಹಿಡಿದು, ನಡುವಯಸ್ಸಿನ ಸಂಧಿಗ್ಧತೆಯವರೆಗೂ ಬರೆದ ಕವಿ, ಯಾವ ವಿಷಯವನ್ನು ಬಿಡದೆ ಜೀವನದ ಇಂಚು ಇಂಚನ್ನು ಕಾವ್ಯವಾಗಿಸಿ ಒದುಗನಿಗೆ ನೀಡಿದ್ದಾರೆ. ಅವರ ಕವನದ ಸಾಲೊಂದೇ ಸಾಕು. ಇದೆಲ್ಲವನ್ನೂ ಹೇಳಲು

'ಬದುಕಬಲ್ಲೇ ನಿಯತ್ತಿನ ಸುತ್ತಲೇ
ನನ್ನ ನಡಿಗೆ ಹೆಜ್ಜೆ ಸಾರ್ಥಕ ಬಿತ್ತಬಲ್ಲೆ.'

ವೃತ್ತಿಯಲ್ಲಿ ಗುರುವಾಗಿರುವ ಕವಿ, ಪ್ರವೃತ್ತಿಯ ಎಳೆಯುನ್ನೂ ಬಿಡದೆ, ಸಮಾಜದ ಸ್ಥಿತ್ಯಂತರಗಳಿಗೆ ಸಹಜವಾಗಿ ಸ್ಪಂದಿಸಿದ್ದಾರೆ ಈ ವೃತ್ತಿಯಲ್ಲಿರುವುದರಿಂದ ವಿಧ್ಯಾರ್ಥಿಗಳ ಸಮಸ್ಯೆ, ಬದುಕಿನ ಸಂಘರ್ಷಗಳು ಪರೀಕ್ಷಾ ಪದ್ಧತಿ, ನಿರುದ್ಯೋಗ ಇವೆಲ್ಲಾ ಅವರ ಬರಹಗಳಲ್ಲಿ ಬಂದಿವೆ.

ತಮ್ಮ ಅನುಭವಗಳನ್ನು ಮತ್ತೆ ವಾಸ್ತವಗಳನ್ನು ಕವಿ ಕವನಗಳಲ್ಲಿ ಕೂಡಿಸಿ, ತಮ್ಮ ಕವನಕ್ಕೆ ಹೆಚ್ಚಿನ ತೂಕ ನೀಡಿದ್ದಾರೆ. ಅವರ ಅಜ್ಜ ಅಪ್ಪ ನೆಲದಲ್ಲಿ ಕೃಷಿ ಮಾಡಿದರೆ, ತಾವು ಕಾವ್ಯ ಕ್ಷೇತ್ರದಲ್ಲಿ ಕೃಷಿಮಾಡುತ್ತಿರುವುದಾಗಿ ಹೇಳುತ್ತಾ; ಅಜ್ಜ ನೆಟ್ಟ ಆಲದ ಬಗ್ಗೆ ಗೊತ್ತಿದ್ದೂ ಕಂದರದಲ್ಲಿ ಸಿಕ್ಕ ಅನುಭವ ಹೇಳುತ್ತಾರೆ. ಸುತ್ತಲಿರುವ ಜನರು ಬಣ್ಣ ಬದಲಾಯಿಸುವ ರೀತಿ ತಮ್ಮ ನೆನಪಿನಾಳದಲ್ಲಿ

ಮಾಯದ ಗಾಯವಾಗಿರುವ ನೈಜತೆಯ ಬಗ್ಗೆ ಒಂದೆಡೆ ಹೇಳಿದರೆ, ಬಯಸಿದ್ದೆ ಒಂದು. ಆದದ್ದು ಹಲವು ಹನ್ನೊಂದು ಎಂದು ಒಪ್ಪಿಕೊಳ್ಳುತ್ತಾರೆ.

ಒಬ್ಬ ಕವಿ ತನ್ನ ಜೀವನದ ಕಹಿ-ಸಿಹಿ ಅನುಭವಗಳನ್ನಷ್ಟೆ ಅಲ್ಲದೆ; ತನಗುಂಟಾದ ಸಂಧಿಗ್ಧತೆ, ಒತ್ತಾಯ, ಅದರ ಪರಿಣಾಮಗಳ ಬಗ್ಗೆ ಹೇಳಿದಾಗಲೇ ಆತ ಒದುಗನ ಮನ ಮುಟ್ಟುವಲ್ಲಿ ಯಶಸ್ವಿಯಾಗುತ್ತಾನೆ. ಅವರು ಯಾವುದನ್ನೂ ನೇರವಾಗಿ ಹೇಳದೆ, ಕಲ್ಪನೆಗೆಳೆದುಕೊಂಡೊಯ್ದು ಸ್ಪಷ್ಟಪಡಿಸುತ್ತಾರೆ. ಅವರ ಆಶಯ ಚಿಕ್ಕದಾದರೂ, ಕಟ್ಟುವ ಕನಸು ದೊಡ್ಡದು ಸಹಜವಾಗಿ ಬದುಕುತ್ತ ತೊದಲು ನುಡಿಯ ಹೇಳುವಾಸೆ' ಎಂದಾಗ ಅವರ ದೊಡ್ಡ ಗುಣಕ್ಕೆ ಇದು ಕನ್ನಡಿಯಾಗುತ್ತದೆ. 'ಕಣ್ಣಲ್ಲಿ ನವೀನ ಗುರಿಯ ನೆಟ್ಟು, ಶ್ರದ್ಧೆ, ಸಂಯಮದಿಂದ ಹೊಸಬೆಳಕನ್ನು ತೆಗೆಯುವಾಸೆ ಎಂದಾಗ ಅವರ ಸಭ್ಯತೆ ಸ್ಪಷ್ಟವಾಗುತ್ತದೆ. ಪ್ರತಿ ಕ್ಷಣಕ್ಕೂ ಹೊಸತನ ಹುಡುಕುವ ಅವರ ಮನಕ್ಕೆ ಮುಪ್ಪು ಆಡರುವುದಿಲ್ಲ ಎಂದು ಪ್ರತಿಪಾದಿಸುತ್ತಾರೆ.

ಒಟ್ಟಿನಲ್ಲಿ ಅವರ ವಂಶದಿಂದ ಬೆಳೆದು ಬಂದ ಕೃಷಿಯನ್ನೇ ತಾವೂ ಕಾವ್ಯ ಕ್ಷೇತ್ರದಲ್ಲಿ ಮಾಡಬೇಕು ಎಂದು ಬಯಸಿದಾಗ, ಕವಿಯ ಮನದ ಆಶಯ ಅಭಿವ್ಯಕ್ತವಾಗುತ್ತದೆ. ನವ್ಯ ಕಾವ್ಯಯುಗದಲ್ಲಿ ಕಾಲಿಟ್ಟ ದೊರಂಗೌ ಇಂದಿಗೂ ತಮ್ಮ ಕವನದ ವಿಶಿಷ್ಟ ಛಾಪು ಉಳಿಸಿಕೊಂಡಿದ್ದಾರೆ.

ಕವನ ಮೌನಗಾನಗಳ ಮೂರ್ತಾಮೂರ್ತಗೆ ಯುಗಳ ಗೀತ ಜಾಲ. ಇದನ್ನು ಸೃಷ್ಟಿಸುವ ಕವಿ, ಚಿಂತನೆಯ ತೋಟದಲ್ಲಿ ಹಾಯ್ದು ಚಿಗುರುವ ಹಸಿರ ಹುಲ್ಲನ್ನು ಕಿತ್ತು ತರುವವನು ಅಂತಹ ಕವಿಯಾದ ದೊರಂಗೌ ಅವರ ವ್ಯಕ್ತಿತ್ವ ಅಗಾಧವಾದದ್ದು ಕಾವ್ಯದ ಬೆಳವಣಿಗೆಯಲ್ಲಿ ತಮ್ಮ ಬೆಳವಣಿಗೆ ಕಂಡು ಕಾವ್ಯವೇ ಉಸಿರೆಂದವರು ಕಾವ್ಯ ಕ್ಯೇತ್ರದ ಬೆಳವಣಿಗೆಗೆ ಶ್ರಮಿಸಿದ್ದಾರೆ.

ಹಲವು ಕವನ ಸಂಕಲನಗಳನ್ನು ಹೊರತಂದು ಕನ್ನಡಕ್ಕೆ ಕಾವ್ಯವನ್ನೇ ಕಾಣಿಕೆಯಾಗಿ ನೀಡಿದ್ದಾರೆ, ಅವರೊಬ್ಬ ಕವಿಯೆಂದೇ ಗುರುತಿಸಲ್ಪಟ್ಟರೂ, ಗದ್ಯವನ್ನು ಬರೆದಿದ್ದಾರೆ. ಕೆಲವು ಕಥೆಗಳೂ ಅವರ ಕೃತಿಗಳಲ್ಲಿ ಸೇರಿವೆ. ಎಲ್ಲಾ ವ್ಯಥೆಗಳ ಜಾಲದಲ್ಲಿ ಸಿಲುಕಿದರೂ, ನಲುಗದೆ ತಮ್ಮ ದೌರ್ಬಲ್ಯಗಳ ಕಂಡುಕೊಂಡು, ಸ್ವಮೌಲ್ಯಮಾಪನದಿಂದ ಬದುಕುತ್ತಿದ್ದಾರೆ. ಹೀಗೇ ಕಾವ್ಯ ಕ್ಷೇತ್ರದಲ್ಲಿ ಅವರ ಬೆಳವಣಿಗೆ ಅದ್ವಿತೀಯವಾಗಲಿ ಎಂಬುದು ನಮ್ಮೆಲ್ಲರ ಆಶಯ. ಅವರ ಕವನವೇ ಅವರ ಪ್ರತಿಬಿಂಬ ಆದರಂತೆ

"ಕಣ್ಣಲ್ಲೀಗ ನವೀನ ಗುರಿಯ ನೆಡುವಾಸೆ
ಶ್ರದ್ಧೆ - ಸಂಯಮ ಬಿತ್ತಿ
ಹೊಸ ಬೆಳೆ ತೆಗೆಯುವಾಸೆ"

ಸದಾ ದೊರಂಗೌ ಅವರಿಗೆ ಲಭಿಸಲೆಂದು ಬಯಸುತ್ತೇನೆ.

# ನಾ ಕಂಡಂತೆ ಸೃಜನಶೀಲ ಕವಿ ದೊಡ್ಡರಂಗೇಗೌಡರು

✍ ಯಶವಂತ ಹಳಿಬಂಡಿ

ಹದಿನೆಂಟು ವರ್ಷಗಳ ಹಿಂದಿನ ಮಾತು, ಪರಸಂಗದ ಗೆಂಡೆತಿಮ್ಮ ಚಿತ್ರದ, ತೇರಾ ಏರಿ ಅಂಬರದಾಗೆ, ನೋಟದಾಗೆ ನಗೆಯ ಮೀಟಿ ಹಾಡುಗಳು ತಮ್ಮದೇ ಆದ ಹೊಸ ಶೈಲಿಯ ಜಾನಪದ ಸೊಗಡಿನ ಸಂಗೀತದ ಲೇಪನದೊಂದಿಗೆ ಕೋಲ್ಮಿಂಚಿನಂತೆ ಬಂದು ರಸಿಕರ ಕೇಳುಗರ ಮನಕ್ಕೆ ಲಗ್ಗೆ ಹಾಕಿ ಇವನ್ನು ಬರೆದ ಕವಿ ಯಾರಿರಬಹುದು? ಎಂಬ ಕೂತೂಹಲ ಕೆರಳಿಸಿ ಇವರು ದೊಡ್ಡರಂಗೇಗೌಡರು ಎಂದು ನೆನಪಿಸುವಂತಾಯಿತು.

ನಾನೂ ಸಹ ಚಿತ್ರದ ಗೀತೆಗಳನ್ನು ಮೆಚ್ಚಿ ಹಾಡಿಕೊಳ್ಳುತ್ತಿದ್ದೆ. ಮುಂದೆ ನನಗೆ ಗೊತ್ತಾಯಿತು ದೊಡ್ಡರಂಗೇಗೌಡರು ಚಿತ್ರ ಸಾಹಿತಿ ಮಾತ್ರ ಅಲ್ಲ ಒಬ್ಬ ಪ್ರತಿಭಾವಂತ ಸೃಜನಶೀಲ ಕವಿ ಎಂದು. ಕೆಲವು ಅಪರೂಪದ ಗ್ರಾಮೀಣ ಪದಗಳನ್ನು ಗೌಡರು ಕಾವ್ಯ ಪ್ರಪಂಚಕ್ಕೆ ಪರಿಚಯಿಸಿದ್ದಾರೆ.

ನಾನು ಬೆಂಗಳೂರಿಗೆ ಬಂದು ನೆಲೆಸಿದ ಹೊಸತರಲ್ಲಿ 1988 ನೇ ವರ್ಷದ ಸಮಯ, ಗಾಂಧಿ ಬಜಾರಿನ ರಸ್ತೆಯಲ್ಲಿ ನಾನು ಹಾದು ಹೋಗುತ್ತಿರುವಾಗ ಯಶವಂತ ಎಂದು ಬಸ್ ಸ್ಟಾಪ್‌ನಿಂದ ಯಾರೋ ಕೂಗಿ ಕರೆದದ್ದು ಕೇಳಿಸಿತು, ಯಾರಿರಬಹುದು ಎಂದು ನಾನು ಹಿಂತಿರುಗಿ ನೋಡಿದೆ, ಕೂಗಿದವರು, ಯಾರೆಂದು ತಿಳಿದು ಆ ಕ್ಷಣ ಅತೀವ ಆನಂದ ಆಶ್ಚರ್ಯ ಅವರ ಬಗ್ಗೆ ಗೌರವ ಉಕ್ಕಿ ಬಂದಿತು. ಕೂಗಿದವರು ಕವಿ ದೊಡ್ಡರಂಗೇಗೌಡರು. ಸರಳ ಸ್ವಭಾವದ, ಆತ್ಮೀಯ ಸ್ನೇಹಮಯಿ, ವ್ಯಕ್ತಿ ದೊಡ್ಡರಂಗೇಗೌಡರು. "ದೊಡ್ಡ ರಂಗೇಗೌಡರು" ಎಂದು ಅವರ ಹೆಸರೇ ಸೂಚಿಸುತ್ತದೆ.

ಅಂದು ಆದ ನಮ್ಮಿಬ್ಬರ ಪರಿಚಯ, ಸಾಹಿತ್ಯ - ಸಂಗೀತದ ನಂಟಿನಿಂದ ಇಂದು ನಾವಿಬ್ಬರು ಆತ್ಮೀಯ ಮಿತ್ರರಾಗಿದ್ದೇವೆ. ಅವರ ಅನೇಕ ಭಾವಗೀತೆಗಳನ್ನು ನಾನು ಸ್ವರಸಂಯೋಜಿಸಿ ದೂರದರ್ಶನ ಹಾಗೂ ಆಕಾಶವಾಣಿಗೆ ಹಾಡಿದ್ದೇನೆ. ನನ್ನ ವಾದ್ಯವೃಂದದ ವೇದಿಕೆಯ ಕಾರ್ಯಕ್ರಮಗಳಲ್ಲಿ ಗೌಡರ ಅನೇಕ ಗೀತೆಗಳನ್ನು ಹಾಡುತ್ತೇನೆ. ನಾನು ಹಾಡುವ ದ.ರಾ.ಬೇಂದ್ರೆಯವರ ಗೀತೆಗಳನ್ನು ಗೌಡರು ಮೆಚ್ಚಿ ನನ್ನ ಬೆನ್ನು ತಟ್ಟಿದ್ದಾರೆ.

ಕವಿ ದೊಡ್ಡರಂಗೇಗೌಡರು ಗಾಯಕರೂ ಅಹುದು. ಅವರು ಈಗಾಗಲೇ ಅನೇಕ ಧ್ವನಿಸುರುಳಿಗಳಿಗೆ ಹಾಡಿದ್ದಾರೆ.

# ಸ್ಫೂರ್ತಿಯ ಸೆಲೆ ದೊರಂಗೌ

✍ ಎಂ. ಚಂದ್ರರಾಜು

ಶ್ರೀ. ದೊಡ್ಡರಂಗೇಗೌಡರ ಬಗ್ಗೆ ಹೇಳಬೇಕೆಂದರೆ "ಅಡು ಮುಟ್ಟದ ಸೊಪ್ಪಿಲ್ಲ" ಎನ್ನುವಂತೆ ಗೌಡರು ಕೈಯಾಡಿಸದ ಸಾಹಿತ್ಯ ಪ್ರಕಾರವೇ ಇಲ್ಲವೆನ್ನಬಹುದು. ಕರ್ನಾಟಕದ ಜನತೆಗೆ ಗೌಡರ ಹೆಸರು ಚಿರಪರಿಚಿತ. ಶ್ರೀಯುತರು ನಮ್ಮ ಮಾತೃ ಸಂಸ್ಥೆಯಾದ ಶ್ರೀ ಜನೋಪಕಾರಿ ದೊಡ್ಡಣ್ಣ ಶೆಟ್ಟರ ಎಸ್.ಎಲ್.ಎನ್. ಕಾಲೇಜಿನಲ್ಲಿ ೧೯೭೨-೭೩ರಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿದರು. ದೊರಂಗೌ ಅವರ ಬಗ್ಗೆ ಹೆಚ್ಚಾಗಿ ಹೇಳಬೇಕೆಂದರೆ ನನಗೆ ಸಂಜೆ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದುದನ್ನು ನೆನಪಿಸಿಕೊಂಡರೆ ನಿಜಕ್ಕೂ ನಾವೆಲ್ಲ ಶಿಷ್ಯರೂ ಧನ್ಯ. ನನಗೆ ಕಲೆ ಮತ್ತು ಸಾಹಿತ್ಯ ಹಾಗೂ ಸಾಂಸ್ಕೃತಿಕವಾಗಿ ಅಭಿರುಚಿ ಮೂಡಿಸಿ ಮುಂದುವರೆಯಲು ಅವರ ಸ್ಫೂರ್ತಿಯೇ ಕಾರಣ. ಅವರಿಂದ ಬಹಳಷ್ಟು ಕಲಿಯುವುದಿದೆ. ಅವರಿಗಿರುವ ಪುಸ್ತಕ ಪ್ರೀತಿ ನನಗೆ ಮನೆಯಲ್ಲಿ ಒಂದು ಪುಟ್ಟಗ್ರಂಥಾಲಯವಿಟ್ಟುಕೊಳ್ಳುವಂತೆ ಮಾಡಿತು. ನನ್ನ ಶಾಲಾ ದಿನಗಳು ಕಳೆದಂತೆ ಸಂಜೆ ಕಾಲೇಜಿನಲ್ಲಿ ದೊಡ್ಡರಂಗೇಗೌಡರ ಸೆಳೆತಕ್ಕೆ ಸಿಕ್ಕಿ. ನನ್ನಂತಹ ನೂರಾರು ಮಂದಿ ರೂಪುಗೊಳ್ಳಲು ಕಾರಣರಾದರು. ಅಲ್ಲದೆ ತುಂಬು ಉತ್ಸುಕತೆಯಿಂದ ಬೆನ್ನುತಟ್ಟಿದರು. ನನ್ನನ್ನು ಕೇವಲ ನಾಟಕಕ್ಕೆ ಸೀಮಿತಗೊಳಿಸದೆ ಶ್ರೀ ಕೆ. ವಿ. ಜಯರಾಮಣ್ಣನವರಿಗೂ ಪರಿಚಯಿಸಿ ಚಲನ ಚಿತ್ರರಂಗಕ್ಕೆ ಪರಿಚಯಿಸಿದರು. ಸಣ್ಣ ಪುಟ್ಟ ಪಾತ್ರದಲ್ಲಿ ಸುಮಾರು ಹನ್ನೆರಡು ಚಲನಚಿತ್ರಗಳಲ್ಲಿ ಅಭಿನಯಿಸಲು ಗೌಡರೇ ಕಾರಣರಾದರು.

ಅವರ ಪುಸ್ತಕಗಳು ಅಚ್ಚಾದರೆ ಬಹುಶಃ ನಾನೇ ಬೋಣಿ ಮಾಡಿ ಹತ್ತರಿಂದ ಇಪ್ಪತ್ತೈದು ಪ್ರತಿಗಳನ್ನು ಖರೀದಿಸುತ್ತಿದ್ದೆ. ಹಾಗೆಯೇ ನಮ್ಮ ಪಂಚಮುಖಿ ಪ್ರಕಾಶನ ಸಂಸ್ಥೆ ಪ್ರಾರಂಭವಾಗ ಬೇಕಾದರೆ ದೊರಂಗೌ ಮತ್ತು ವಿ. ಕೃಷ್ಣಶೆಟ್ಟರೇ ಕಾರಣ. ಅವರ ಬಗ್ಗೆ ಹೇಳುತ್ತಾ ಹೋದರೆ ಕೊನೆ ಮೊದಲಿಲ್ಲ.

ನಮ್ಮ ಪ್ರಾತಃಸ್ಮರಣೀಯರಾದ ಶ್ರೀಜನೋಪಕಾರಿ ದೊಡ್ಡಣ್ಣ ಶೆಟ್ಟರ ಗುಣಗಾನದ ಕ್ಯಾಸೆಟ್ ಒಂದೇ ಸಾಕು. ಅವರಿಗೆ ಸಂಸ್ಥೆಯ ಮೇಲಿರುವ ಅಭಿಮಾನ, ಕಾಳಜಿಯನ್ನು ಎತ್ತಿ ತೋರಿಸುತ್ತದೆ. ದೊರಂಗೌ ತುಂಬಾ ಸರಳ ವ್ಯಕ್ತಿ. ನುಡಿದಂತೆ ನಡೆಯುವವರು. ಅವರು ಭಾಷಣ ಮಾಡುವಾಗ ನನಗೆ ಮೈ ರೋಮಾಂಚನವಾಗಿದೆ. ಶ್ರೀಯುತರಿಗೆ ಮತ್ತು ಅವರ ಮನೆಯವರಿಗೆ ಆ ಭಗವಂತ ಆಯುರಾರೋಗ್ಯ, ಸಕಲ ಸೌಭಾಗ್ಯಗಳನ್ನು ಕರುಣಿಸಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತಾ ಈ ನನ್ನ ಅಭಿಮಾನದ ಲೇಖನವನ್ನು ಸಂತೋಷದಿಂದ ನೀಡುತ್ತಿದ್ದೇನೆ.

# ನನ್ನ ಅಪ್ಪ

✍ ಡಿ. ಸ್ಮಿತಾ

ನಾನು ನನ್ನ ಅಪ್ಪನನ್ನು ತುಂಬಾ ಇಷ್ಟಪಡುತ್ತೇನೆ. ನಾನು ಅಪ್ಪನನ್ನು ಕಂಡಂತೆ "ಅಪ್ಪ ತುಂಬಾ ಶ್ರಮ ಜೀವಿ. ಜೀವನದಲ್ಲಿ ಅನೇಕ ಕಷ್ಟಗಳನ್ನು ಎದುರಿಸಿ, ಅದನ್ನು ನಿವಾರಿಸಿಕೊಂಡು ಮುಂದೆ ಬಂದವರು" ಇದಕ್ಕಾಗಿ ನನಗೆ ಅವರಲ್ಲಿ ತುಂಬಾ ಗೌರವ.

ಅಪ್ಪ ಮನೆಯಲ್ಲಂತೂ ತುಂಬಾ ಮೌನಿ. ತಾವಾಯಿತು, ತಮ್ಮ ಕವನವಾಯಿತು ಎಂದೂ ಸದಾ ಸಾಹಿತ್ಯದಲ್ಲಿಯೇ ತಮ್ಮನ್ನು ತೊಡಗಿಸಿ ಕೊಂಡಿರುತ್ತಾರೆ.

ಅಪ್ಪನಿಗಂತೂ ಬೇಗ ಕೋಪ ಬರುವುದೇ ಇಲ್ಲ. ಮನೆಯಲ್ಲಿ ನಾನು ಮತ್ತು ನನ್ನ ಅಣ್ಣ ಎಷ್ಟೇ ತಪ್ಪು ಮಾಡಿದರೂ ಅದನ್ನು ಸಮಾಧಾನವಾಗಿ ತಿದ್ದುತ್ತಾರೆ.

ಅಪ್ಪ ಸಾಹಿತ್ಯ ಕ್ಷೇತ್ರದಲ್ಲಿರುವುದರಿಂದ ನಾನು ಸಹ ಸಾಹಿತ್ಯ ಸಮ್ಮೇಳನಗಳಲ್ಲಿ ಪಾಲ್ಗೊಳ್ಳುವ, ಅದನ್ನು ನೋಡುವ ಅವಕಾಶ ಉಂಟಾಯಿತು. ಪ್ರಖ್ಯಾತರಾದ ಕನ್ನಡಿಗರ ಒಲವಿನಕವಿ ಕೆ.ಎಸ್.ನ. ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ. ಯು. ಆರ್. ಅನಂತಮೂರ್ತಿ ಮುಂತಾದವರನ್ನು ಹತ್ತಿರದಿಂದ ನೋಡುವ ಮಾತನಾಡಿಸುವ ಅವಕಾಶಸಿಕ್ಕಿತು.

ಆದರೆ ನನ್ನ ಜೀವನದಲ್ಲಿ ರಾಷ್ಟ್ರಕವಿ ಕುವೆಂಪು ಅವರನ್ನು ಜೀವಂತವಾಗಿ ನೋಡಬೇಕೆನ್ನುವ ಅಭಿಲಾಷೆ ಮಾತ್ರ ಈಡೇರಲಿಲ್ಲ.

ಅಪ್ಪ ಸಿನಿಮಾ ಕ್ಷೇತ್ರದಲ್ಲೂ ಇರುವುದರಿಂದ ನನ್ನ ನೆಚ್ಚಿನ ನಟನಾದ ಅನಂತನಾಗ್ ಅವರನ್ನು ಸಮೀಪದಿಂದ ನೋಡಿ ಮಾತನಾಡಿಸುವ ಪ್ರಸಂಗ ಒದಗಿತ್ತು.

ಒಟ್ಟಿನಲ್ಲಿ ಅಪ್ಪ ನಾನು ಕಂಡಂತೆ "ಮಿತಭಾಷಿ, ಸಂಯಮಿ ಹಾಗೂ, ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂಬ ಛಲವನ್ನು ಇಟ್ಟುಕೊಂಡವರು."

# ಕರುನಾಡಿನ ಕಾವ್ಯ ಚಿಲುಮೆ

✍ ಕವಿತಾಕೃಷ್ಣ

ಕನ್ನಡನಾಡಿನ ಸಹೃದಯ ಕವಿಗಳಲ್ಲಿ ದೊಡ್ಡರಂಗೇಗೌಡರು ಪ್ರಧಾನವಾಗಿ ಎದ್ದು ಕಾಣುವ ಕವಿ. ಎಲ್ಲ ಕವಿಗಳಿಗಿರುವಂತೆ ಅಪಾರವಾದ ಪ್ರತಿಭಾಶಕ್ತಿ ಇದೆ. ಸತತವಾಗಿ ಸಾಹಿತ್ಯಾಭ್ಯಾಸ ಮಾಡುವ ಗುಣ ಇದೆ. ಉತ್ತಮ ಕೃತಿಗಳನ್ನು ನೀಡುವ ಸಾಹಸವೂ ಸಹ ಇವರಲ್ಲಿದೆ. ಇವಲ್ಲದೆ ಅನ್ಯರಲ್ಲಿ ಕಾಣದ ಸಾತ್ವಿಕಗುಣ, ಸರಳತೆ, ನಿರಾಡಂಬರ, ಉತ್ತಮವಾದ ನಡೆ, ನಡೆಗನುಸಾರ ನುಡಿ ಇವುಗಳಿಂದ ಪರಮ ಪ್ರಿಯರೆನಿಸುತ್ತಾರೆ.

ದೊಡ್ಡರಂಗೇಗೌಡರು ಜನಿಸಿದ್ದು ಸುಜನ ಜಾನಪದ ಬೀಡೆನಿಸಿದ ತುಮಕೂರು ಜಿಲ್ಲೆಯಲ್ಲಿ. ಅವರನ್ನು ನಾನು ವಿದ್ಯಾರ್ಥಿ ದಿಸೆಯಿಂದಲೂ ಬಲ್ಲೆ. ಪ್ರತಿಭಾಸಂಪನ್ನ ವಿದ್ಯಾರ್ಥಿ ಎನಿಸಿದ್ದರಲ್ಲದೆ "ಆದರ್ಶ ವಿದ್ಯಾರ್ಥಿ" ಎಂಬ ಗೌರವಾದಾರಗಳಿಗೂ ಪಾತ್ರಾರಾಗಿದ್ದುದೊಂದು ವಿಶೇಷ. ವಿದ್ಯಾರ್ಥಿಗಳಾಗಿದ್ದಾಗ ಅವರಿಗಿದ್ದ ಜ್ಞಾನತೃಷೆ ಬೆರಗುಗೊಳಿಸುವಂತದ್ದು.

ಸಾಹಿತ್ಯವೆಂದರೆ ಎಲ್ಲಿಲ್ಲದ ಪ್ರೇಮ. ಸಾಹಿತ್ಯಾರಾಧನೆಗಾಗಿ ಸಹೃದಯ ಮಿತ್ರರ ತಂಡಕಟ್ಟಿ ಸಾಹಿತ್ಯ ಸಲ್ಲಾಪ ನಡೆಸಿ, ಕಾಲೇಜು ಗೆಳೆಯರಲ್ಲಿ ಸಾಹಿತ್ಯದ ಒಲವು ಮೂಡಿಸಿದ ಸಂಗತಿ ಸಾಮಾನ್ಯವಲ್ಲ.

ಮೂರು ದಶಕಗಳಿಗೂ ಹಿಂದೆ ಕನ್ನಡ ಬೆರಳಚ್ಚು ಯಂತ್ರ ಬಳಕೆಗೆ ಬಂತು. ಅನಂತಸುಬ್ಬರಾಯರ ಕೊಡುಗೆಯನ್ನು ಸದುಪಯೋಗ ಪಡಿಸಿಕೊಂಡವರಲ್ಲಿ ದೊಡ್ಡರಂಗೇಗೌಡರು ಮೊದಲಿಗರು. ಆಗಿನ್ನು ಕಾಲೇಜು ವಿದ್ಯಾರ್ಥಿಗಳಾಗಿ ತುಮಕೂರಿನ ವಿದ್ಯಾರ್ಥಿನಿಲಯವೊಂದರಲ್ಲಿ ವಾಸವಾಗಿದ್ದರು. ಆಗ ಉದಯೋನ್ಮುಖ ಬರಹಗಾರರನ್ನು ಒಗ್ಗೂಡಿಸಿ ಕನ್ನಡ ಬೆರಳಚ್ಚಿನಲ್ಲೇ ಒಂದು ಕವನ ಸಂಕಲನವನ್ನು ಹೊರತಂದರು. ಅದರ ಬಿಡುಗಡೆ ಸಮಾರಂಭ ಕೂಡ ಅದ್ದೂರಿಯಿಂದ ನಡೆಯಿತು. ಆಗ ನಮ್ಮಲ್ಲಿ ಸಾಹಿತ್ಯ ಸಮಾರಂಭಗಳು ತೀರಾ ವಿರಳವಾಗಿದ್ದವು. ಆಗ ಈ ಕೃತಿ ಬಿಡುಗಡೆ ಸಮಾರಂಭ ಎಲ್ಲರಿಗೂ ಉತ್ಸಾಹ ತಂದಿತು. ಸಾಹಿತ್ಯ ಸಮಾರಂಭಗಳನ್ನು ನಡೆಸುವ ಬಯಕೆ ಮೂಡಿಸಿತು.

ತುಮಕೂರಿನಿಂದ ಬೆಂಗಳೂರಿಗೆ ಬಂದ ತಕ್ಷಣ ದೊಡ್ಡರಂಗೇಗೌಡರು ದಿಢೀರ್ ಬದಲಾವಣೆಯಾಗಲಿಲ್ಲ, ಅವರ ಗ್ರಾಮೀಣ ಸಂಸ್ಕೃತಿ ಮಣ್ಣಿನ ವಾಸನೆ, ಹುಟ್ಟುಗುಣದ ಸಭ್ಯತೆ ಎಂದಿನಂತೆಯೇ ಇದ್ದುದು ಆಶ್ಚರ್ಯವೇ. ಅವರ ಚಿಂತನೆ ಎಷ್ಟು ಸುಂದರ. ಅವರ ಸೌಮ್ಯ ಸ್ವಭಾವ ಎಲ್ಲರನ್ನು ಆಕರ್ಷಿಸುವಂತದ್ದು. ಮಾತು-ಬರಹ-ನಡೆ ಎಲ್ಲದರಿಂದಲೂ ಅವರು ಇಂದು ನಾಡಿನ ದೊಡ್ಡಕವಿಯಾಗಿದ್ದಾರೆ. ಅವರು ಯಾವೊಂದು ಗುಂಪು - ಪಂಗಡಗಳ ಹಣೆಪಟ್ಟಿ ಕಟ್ಟಿಕೊಂಡರಲ್ಲ.

ಜಾತಿ-ಗುಂಪಿನ ಪ್ರಭಾವ ಬೀರಿ ಮೇಲೆ ಬಂದವರಲ್ಲ. ಅವರು ಸಮನ್ವಯ ಮನೋಧರ್ಮದಿಂದಲೇ ಉನ್ನತ ಸ್ತರವೇರಿ ಬಂದವರು.

ವೃತ್ತಿಯಲ್ಲಿ ಉಪನ್ಯಾಸಕರಾಗಿ ಸಲ್ಲಿಸುತ್ತಿರುವ ಸೇವೆ ಕೂಡ ಶ್ಲಾಘನೀಯ. ಇಂತಹವರೇ ಶಿಕ್ಷಕರಾದರೆ ನಮ್ಮ ಗುರುಕುಲ ಇರುವ ಕಳಂಕ ತೊಡೆದುಕೊಂಡು ಪಾವನವಾದೀತು. ನಿಷ್ಕಾಮ ಸೇವೆಗೆ ಇವರ ವೃತ್ತಿ ಬದುಕು ಸುಂದರ ಉದಾಹರಣೆಯಾಗಿದೆ. ಪ್ರವೃತ್ತಿಯಲ್ಲಿ ಕವಿಯಾಗಿ ನಾಡಿನ ಜನತೆಯ ಹೃನ್ಮನಗಳನ್ನು ತುಂಬಿದ್ದಾರೆ. ಗೌಡರ ಗೀತೆಗಳದೇ ಒಂದು ಜಾಯಮಾನ. ಪದಗಳು ಲಾಸ್ಯವಾಡುತ್ತವೆ. ಅರ್ಥಗಳು ಭಾವವನ್ನಾಕರ್ಷಿಸುತ್ತವೆ, ರಸಿಕರಲ್ಲಿ ರಸಾನುಭೂತಿಯನ್ನುಂಟು ಮಾಡುತ್ತವೆ. ಪ್ರಕೃತಿಯಲ್ಲಿ ಸುಕೃತಿಯಾಗಿ ಅರಳಿದ ಅವರ ಕವಿತನ ಎಲ್ಲರಿಗೂ ಸಲಭವಾಗಿ ದಕ್ಕುವಂತದಲ್ಲ ಪುಸ್ತಕ, ಕ್ಯಾಸೆಟ್, ಚಿತ್ರಗೀತೆಗಳ ಮುಖಾಂತರ ಗೌಡರು ಮಾಡಿದ ಸಾಹಿತ್ಯಕೃಷಿ ಅನುಪಮವಾದದ್ದು.

ಅವರು ಆದರ್ಶಕವಿಯಂತೆಯೇ ವಿಶ್ವಮಾನವ ಪ್ರಜ್ಞೆಹೊಂದಿದ ಸಂಸಾರಿಯೂ ಹೌದು, ಗೌಡರ ಸಂಸಾರ ಆನಂದ ತರುವಂತದ್ದು. ಅವರ ಸಹಧರ್ಮಿಣಿ ಶ್ರೀಮತಿ ಕೆ.ರಾಜೇಶ್ವರಿಗೌಡ ವೃತ್ತಿಯಲ್ಲಿ ಉಪನ್ಯಾಸಕರು ಪ್ರವೃತ್ತಿಯಲ್ಲಿ ಲೇಖಕರು ಹಾಗು ಉತ್ತಮ ಗೃಹಿಣಿ ಪತಿಗೆ ತಕ್ಕ ಸತಿ ಚಿಕ್ಕ ಸಂಸಾರದ ಚೊಕ್ಕ ಬದುಕಿನ ದೊಡ್ಡರಂಗೇಗೌಡರ ಬದುಕು ಸಹ ಒಂದು ಕಾವ್ಯವಾಗಿದೆ. ಕವಿಯ ಆದರ್ಶವನ್ನು ಕೃತಿಯಲ್ಲಿ ಮಾತ್ರ ಕಾಣಬಹುದು. ಆದರೆ ದೊಡ್ಡರಂಗೇಗೌಡರ ಬದುಕು ಸಹ ಒಂದು ಕಾವ್ಯವಾಗಿದೆ. ದೊಡ್ಡರಂಗೇಗೌಡರ ಶಿಷ್ಯಬಳಗ ಸಹ ಅವರ ಗುಣ ವಿಶೇಷಗಳನ್ನೇ ಅಳವಡಿಸಿಕೊಂಡು 'ಯಥಾಗುರು, ತಥಾಶಿಷ್ಯ' ಎಂಬ ಮಾತನ್ನು ನೆನಪಿಗೆ ತರುತ್ತದೆ. ನಮ್ಮೊಲುಮೆಯ ಕವಿ ದೊಡ್ಡರಂಗೇಗೌಡರು ಕರುನಾಡಿನ ಕಾವ್ಯ ಚಿಲುಮೆಯಾಗಿದ್ದಾರೆ.

* * *

ಪ್ರತಿಭೆಯೆಂಬುದು ಸಾವಿರ ಕಲ್ಪನೆ ಕೂಡುವ ಸುರಭಿ
ಕಲ್ಪನೆಯೆಂಬುದು ಕಾಣದ ಭಾವ ಮೊಳಗಿಸೋ ದುಂದುಭಿ-
ಭಾವವೆಂಬುದು ಜೀವ ಜೀವಾತ್ಮದ ನೋವು ನಲಿವಿನ ನಾಭಿ
ಪ್ರತಿಭೆಯಿದ್ದವನಪ್ರತಿಮ ಕವಿ ಕಾಣಾ - ಮಣ್ಣಿನಮಗ

* * *

# ವಿಶಿಷ್ಟ ಕವಿ : ದೊರಂಗೌ

✍ ಎಸ್. ಕೆ. ನಾಗರಾಜ

'ಸೃಜನ ಸಂಪನ್ನ'ರೂ ಅಸಂಖ್ಯಾತ ಶಿಷ್ಯ-ಅಭಿಮಾನಿ ವರ್ಗವನ್ನುಳ್ಳವರೂ ಪ್ರತಿಭಾವಂತರೂ ಹಿರಿಯರಲ್ಲಿ ಗೌರವವನ್ನು ಕಿರಿಯರಲ್ಲಿ ಪ್ರೀತಿ ವಿಶ್ವಾಸವುಳ್ಳವರೂ ವಿನಯವಂತರೂ ಸರಳರೂ ಹಿರಿಯಣ್ಣನಂತಿರುವವರೂ ಆದ ಸಹೃದಯ ವಿಶಿಷ್ಟ ಕವಿ ಸನ್ಮಾನ್ಯ ದೊರಂಗೌ ಅವರು.

ಮೊದಲು ಅವರ ಹೆಸರು ಕೇಳಿದ್ದು, ಪರಿಚಯವಾದದ್ದು ೧೯೮೪ರಲ್ಲಿ ನನ್ನ ತೀರ್ಥರೂಪರಾದ ಪ್ರೊ|| ವಿ. ಕೃಷ್ಣಶೆಟ್ಟಿಯವರ 'ಉಪಮಾ ಸರಸ್ಸು' ಪುಸ್ತಕ ಬಿಡುಗಡೆ ಸಮಯದಲ್ಲಿ. ಪುಸ್ತಕದ ಬಗ್ಗೆ ವಿಮರ್ಶಾತ್ಮಕ-ಸಹೃದಯ ಭಾಷಣದಿಂದ ಪ್ರಭಾವಿತನಾಗಿ ಅಭಿಮಾನಿಯಾದೆ. ತಮ್ಮ ಭಾವಗೀತೆ-ಚಲನಚಿತ್ರ ಗೀತೆಗಳಿಂದ ಖ್ಯಾತನಾಮರಾಗಿದ್ದ ಶ್ರೀಯುತರನ್ನು ವಯಸ್ಸಾಗಿರುವ ವ್ಯಕ್ತಿಯೆಂದು ಭಾವಿಸಿದ್ದ ನನಗೆ ಕಂಡದ್ದು ಯುವ ವ್ಯಕ್ತಿ. ಸಾಮಾನ್ಯವಾಗಿ ಯಾವುದೇ ಕ್ಷೇತ್ರದಲ್ಲಿ ಹೆಸರುಗಳಿಸಬೇಕೆಂದರೆ ಅವರ ಅನುಭವ-ವಯಸ್ಸು ಮುಖ್ಯ. ಬಹಳ ಚಿಕ್ಕ ವಯಸ್ಸಿನಲ್ಲೇ ಪ್ರಖ್ಯಾತರಾಗಿದ್ದು ತುಂಬಾ ಸಂತೋಷದ ವಿಷಯ.

ಶ್ರೀ ಲ. ನ. ಧರ್ಮ ಸಂಸ್ಥೆಯ ಧರ್ಮದರ್ಶಿಗಳಾಗಿದ್ದರಿಂದ ನಮ್ಮ ತಂದೆಯವರೊಡನೆ ಆಗಾಗ್ಗೆ ಹೋಗುತ್ತಿದ್ದಾಗ ಭೇಟಿಯಾಗುತ್ತಿದ್ದೆ. ನಂತರ ಶಿವಮೊಗ್ಗಕ್ಕೆ ಬಂದು, ನಮ್ಮ ತಂದೆಯವರ ರಚನೆಯಾದ 'ವಚನ ತರಂಗಿಣಿ' ಪುಸ್ತಕ ಬಿಡುಗಡೆ ಸಂದರ್ಭದಲ್ಲಿ ವಚನಗಳ ಬಗ್ಗೆ ವಿದ್ವತ್ ಪೂರ್ಣ ಅನುಭವಾಮೃತವನ್ನು ಕಾವ್ಯ ಮಾಧುರ್ಯವನ್ನು ಪರಿಚಯಿಸಿದ್ದು ನನ್ನ ಮನಸೂರೆಗೊಂಡಿತ್ತು; ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಈ ರೀತಿ ಒಬ್ಬ ಲೇಖಕರ ಕೃತಿ ರಚನೆಯನ್ನು ಸಹೃದಯನಾಗಿ ವಿಮರ್ಶಿಸಿದಾಗ ಲೇಖಕನಿಗೆ ಓದುಗನಿಗೆ ಒಂದು ಸುವರ್ಣ ಸೇತುವೆಯಾಗುತ್ತದೆ.

ನಂತರ ಪ್ರೊ|| ವಿ. ಕೆ. ಎಸ್. ರವರ 'ರಾಷ್ಟ್ರಪಿತ ಬಾಪೂಜಿ' ಮಹಾಕಾವ್ಯ ಬಿಡುಗಡೆ - ವಿಚಾರ ಸಂಕಿರಣ ಸಮಯದಲ್ಲಿ ಎರಡು ತಿಂಗಳ ಅವರ ಸಾಮಿಪ್ಯದಲ್ಲಿ ಅವರ ವಿಶಿಷ್ಟತೆ ನನ್ನ ಅರಿವಿಗೆ ಬಂದ್ದದ್ದು. ಬೆಳಗಿನಿಂದ ಮಧ್ಯಾಹ್ನದವರೆಗೆ ವಿದ್ಯಾಲಯದಲ್ಲಿ ಅಚ್ಚುಮೆಚ್ಚಿನ ಅಧ್ಯಾಪಕರಾಗಿ ಶಿಷ್ಯರಿಗೆ ಕನ್ನಡ ಬೋಧನೆ; ನಂತರ ಮಧ್ಯಾಹ್ನದಿಂದ ಸಾಯಂಕಾಲದವರೆಗೆ ಅವರ ವಿವಿಧ ಕಾರ್ಯ ಕ್ಷೇತ್ರ - ಚಟುವಟಿಕೆಗಳು ದಂಗು ಬಡಿಸುವಂತಹುದು. ಚಲನ ಚಿತ್ರ ರಂಗದವರು, ವಿವಿಧ ಸಂಘ- ಸಂಸ್ಥೆಯವರು, ಬೇರೆ ಬೇರೆ ಶಾಲಾ-ಕಾಲೇಜಿನವರು ...ಮುಂತಾದವರು ಅವರಿಗೆ ಕಾದು ಕುಳಿತು ಅವರನ್ನು ಕರೆದೊಯ್ಯುತ್ತಿದ್ದರು. ಅಲ್ಲಿಂದ ಬಂದು ಸಿಗುವ ವೇಳೆಯಲ್ಲಿ ತಮ್ಮ ಗೀತೆಗಳ ರಚನೆ -ವಿವಿಧ ಪತ್ರಿಕೆಗಳಿಗೆ ಲೇಖನಗಳನ್ನು ಸದ್ದು-ಗದ್ದಲಗಳ ನಡುವೆಯೇ, ಶಿಸ್ತು ಸಂಯಮ ಏಕಾಗ್ರತೆಯಿಂದ

ನಡೆಸುತ್ತಿದ್ದರು. ತಿದ್ದದೆ ತೀಡದೇ ಒಂದೇ ಬಾರಿಯಲ್ಲಿ ಗೀತೆಗಳನ್ನು -ಲೇಖನಗಳನ್ನು ಮುಗಿಸಿ ಬಿಡುತ್ತಿದ್ದರು. ಬಂದವರೊಡನೆ ಮಾತನಾಡುತ್ತಾ ಉತ್ತರಗಳನ್ನು ನೀಡುತ್ತ ತಮ್ಮ ಸಾಹಿತ್ಯ ಕೃಷಿಯನ್ನು ಮುಂದುವರಿಸುತ್ತಿದ್ದರು. ಎಷ್ಟೋ ಸಾರಿ ಮನೆಯಿಂದ ತರುತ್ತಿದ್ದ ಊಟವನ್ನು ಸಾಯಂಕಾಲ ತಿನ್ನುತ್ತಿದ್ದು, ಊಟವನ್ನೇ ಮರೆಯುತ್ತಿದ್ದ ದಣಿವರಿಯದ ಕ್ರಿಯಾಶೀಲತೆ ಕೂಡ ಒಂದು ಸೋಜಿಗ.

ಚಲನಚಿತ್ರ ರಂಗದಲ್ಲಿ - ಧ್ವನಿ ಸುರುಳಿಗಳ ಸಾಹಿತಿಗಳ ಸಾಹಿತ್ಯವನ್ನು ತಿದ್ದುವುದಾಗಲಿ ೨-೩ ಸಾರಿ ಬೇರೆ ಬೇರೆ ಬರೆಸುವುದಾಗಲಿ ಸಾಮಾನ್ಯ ವಾಡಿಕೆ, ಶ್ರೀಯುತರ ಸಾಹಿತ್ಯ ರಚನೆ ಸಂಗೀತಕ್ಕೆ ಒಂದೇ ಸಾರಿ ಸರಿಬರುವುದು ಕೂಡ ಒಂದು ವಿಸ್ಮಯ. 'ಜನೋಪಕಾರಿ ಗುಣಗಾನ' ಧ್ವನಿ ಸುರುಳಿಗೆ ೫-೬ ಗೀತೆಗಳನ್ನು ಸಂಗೀತ ನಿರ್ದೇಶಕರಿಗೆ ಕುಳಿತ ಕೊಠಡಿಯಲ್ಲೇ ಕೆಲವೇ ಗಂಟೆಗಳಲ್ಲಿ ಬರೆದು ಕೊಟ್ಟಿದ್ದು, ಮೇಲಿನ ಮಾತಿಗೆ ಸಾಕ್ಷಿ.

ಇಂದು ಭಾವಗೀತೆ-ಚಲನಚಿತ್ರಗೀತೆಗಳಲ್ಲಿ ದ್ವಂದ್ವ - ಅಶ್ಲೀಲಗಳೇ ತುಂಬಿರುವಾಗ, ಜಾನಪದ ಶೈಲಿಯ ಗ್ರಾಮೀಣ ಸೊಗಡಿನ ಅವರ ಗೀತೆಗಳು ಜನಪ್ರಿಯತೆಯನ್ನು ಕೋಟ್ಯಾಂತರ ಅಭಿಮಾನೀ ವೃಂದವನ್ನು ಅವರಿಗೆ ತಂದು ಕೊಟ್ಟಿದೆ.

## ಪ್ರಾಮಾಣಿಕತೆಗೆ ಪ್ರಾಧಾನ್ಯ

✍ ಡಾ. ಗುಂಡ್ಮಿ ಚಂದ್ರಶೇಖರ ಐತಾಳ್

ದೊಡ್ಡರಂಗೇಗೌಡರ "ಏಳು ಬೀಳಿನ ಹಾದಿ"ಯಲ್ಲಿ ಸಂಚರಿಸಿದಾಗ ಸಂತೋಷವಾಗುತ್ತದೆ.

ದೇಶಾಂತರಂಗ, ಅಂತರಂಗದಾವುಗೆಯೊಳಗೆ, ಪ್ರಮೇಯಗಳು, ಅಭಾವ, ಮಳೆಯು ಬಂದ ಮಾರನೆದಿನ, ಚೈತನ್ಯ ತಂದೆ, ಪರಿಸರ, ನಂಜಾಗುವ ಬಗೆ - ಎಂಬ ಕವನಗಳು ಮುದಕೊಡುತ್ತವೆ.

ಕಾವ್ಯದ ಕಲ್ಪನಾ ಸೌರಭ, ಧ್ವನಿರಮ್ಯತೆ, ರೂಪಕಗಳ ನಡೆ - ಎಲ್ಲದಕ್ಕಿಂತ ಪ್ರಾಮಾಣಿಕತೆ ದೊರಂಗೌ ಕಾವ್ಯದಲ್ಲಿ ಎದ್ದು ಕಾಣುವ ಅಂಶಗಳು.

# ಸಹಪಾಠಿಯ ನೆನಪಿನಂಗಳದಿಂದ

✍ ಎನ್. ಎನ್. ಮೂರ್ತಿ

ದೊಡ್ಡರಂಗೇಗೌಡ ಮತ್ತು ನಾನು ಬಿ.ಎಸ್ಸಿ. ವಿದ್ಯಾರ್ಥಿಗಳು. ಭೌತಶಾಸ್ತ್ರ ಗಣಿತಶಾಸ್ತ್ರ ಮೇಜರ್ ವಿಷಯಗಳಾದರೆ ರಸಾಯನ ಶಾಸ್ತ್ರ ಮೈನರ್ ವಿಷಯ (ಓದಿದ ನಂತರ ನಾನು ಸೇರಿದ್ದು ಬ್ಯಾಂಕ್, ಮಿತ್ರನ ವೃತ್ತಿ ಪ್ರಾಧ್ಯಾಪನ, ಓದಿಗೂ ದುಡಿಮೆಗೂ ಇರುವ ಅಜಗಜಾಂತರ ವ್ಯತ್ಯಾಸದ ತುಣುಕು ಇದು)

ಆಗ ನಮಗೆ ಶ್ರೀ ಸುಬ್ರಮಣ್ಯಂ ಎನ್ನುವವರು ಗಣಿತಶಾಸ್ತ್ರ ಹೇಳಿ ಕೊಡುತ್ತಿದ್ದರು. ಅವರ ಕ್ಲಾಸಿನಲ್ಲಿ ಹಿಂದಿನ ಬೆಂಚಿನಲ್ಲಿ ಕೂತು ದೊಡ್ಡರಂಗೇಗೌಡ ಪದ್ಯ ರಚನೆ ಮಾಡುತ್ತಾ ಕೂರುತ್ತಿದ್ದ.

ಕ್ಲಾಸ್ ಮುಗಿದ ನಂತರ ಈ ಚುಟುಕುಗಳ ವಾಚನ, ಮಿತ್ರಕೂಟಕ್ಕೊಂದು ಮನರಂಜನೆ ಕಗ್ಗಂಟಿನಿಂದ ಬಿಡುಗಡೆ.

ಮೊದಲನೆ ಹಾಗೂ ಎರಡನೇ ವರ್ಷದ ಪದವಿ ತರಗತಿಗಳಲ್ಲಿದ್ದ ಕನ್ನಡ ಮತ್ತು ಇಂಗ್ಲೀಷ್ ಭಾಷಾ ಬೋಧನೆಯ ಕ್ಲಾಸ್‌ಗಳೆಂದರೆ ದೊಡ್ಡರಂಗೇಗೌಡನಿಗೆ ಎಲ್ಲಿಲ್ಲದ ಉತ್ಸಾಹ ಈ ಕ್ಲಾಸ್‌ಗಳಿಗೆ ತಪ್ಪದೆ ಭಾಗವಹಿಸುತ್ತಿದ್ದ. ಈತ ಇತರೆ ತರಗತಿಗಳ ಭಾಷಾ ಬೋಧನೆ ಪದವಿ ಕ್ಲಾಸ್‌ಗಳಲ್ಲಿ ಶ್ರೀ ವೆಸ್ಲಿ ಎನ್ನುವ ಪ್ರಾಧ್ಯಾಪಕರು ಇಂಗ್ಲೀಷ್ ಡ್ರಾಮ ತರಗತಿಗಳನ್ನು ನಡೆಸುತ್ತಿದ್ದ ರೀತಿ ಎಲ್ಲರ ಮನಸೆಳೆದಿತ್ತು. ಆದರೆ ನಮ್ಮ ದುರಾದೃಷ್ಟಕ್ಕೆ ಅವರು ನಮ್ಮ ಬ್ಯಾಚ್‌ಗೆ ಕ್ಲಾಸ್ ತೆಗೆದುಕೊಳ್ಳಲಿಲ್ಲವೆಂಬ ಕೊರಗು ನಮಗಿನ್ನು ಇದೆ. ನಮಗೆ ಶ್ರೀ ಸುಂದರ ರಾಜಯ್ಯಂಗಾರ್ ಹಾಗೂ ಶ್ರೀ ಸಂಪತ್ ಅಯ್ಯಂಗಾರ್ ಈ ಇಬ್ಬರು ಇಂಗ್ಲಿಷ್ ಬೋಧಿಸುತ್ತಿದ್ದರು. ಶೇಕ್ಸ್‌ಪಿಯರ್‌ನ ಮ್ಯಾಕ್‌ಬೆತ್ ನಮಗೆ ಪಠ್ಯವಾಗಿತ್ತು. ನಮಗೆ ಗಣಿತಶಾಸ್ತ್ರ ಪೀರಿಯಡ್ ಸಂದರ್ಭದಲ್ಲಿ ಭೌತಶಾಸ್ತ್ರ ರಸಾಯನ ಶಾಸ್ತ್ರ ಮೇಜರ್ ಆಗಿ ತೆಗೆದುಕೊಂಡವರಿಗೆ ಇಂಗ್ಲೀಷ್ ಪೀರಿಯಡ್ ಇರುತ್ತಿತ್ತು. ದೊಡ್ಡರಂಗೇಗೌಡ ಕೆಲವೊಮ್ಮೆ ಗಣಿತಶಾಸ್ತ್ರದ ಕ್ಲಾಸಿಗೆ ಚಕ್ಕರ್ ಹೊಡೆದು ಈ ಇಂಗ್ಲೀಷ್ ಕ್ಲಾಸ್‌ಗಳಲ್ಲಿ ಕೂತಿರುತ್ತಿದ್ದ. (ಸಾಹಿತ್ಯದ ಆಕರ್ಷಣೆ)

ಕನ್ನಡ ಪ್ರಾಧ್ಯಾಪಕರಾಗಿ ನಮಗಿದ್ದವರು ಅಂದರೆ ಶ್ರೀ ಎಸ್. ಪ್ರಹ್ಲಾದರಾವ್, ಶ್ರೀ ಗುಂಡಣ್ಣ ಹಾಗೂ ಶ್ರೀ ಪರಶಿವಮೂರ್ತಿ ಮೂವರೂ ಒಂದೇ ರೀತಿಯ ಗಂಭೀರ ವ್ಯಕ್ತಿತ್ವ. ತರಗತಿಗಳಲ್ಲಿ ನಗುವಿನ ಹೊನಲನ್ನು ವಿದ್ಯಾರ್ಥಿಗಳಲ್ಲಿ ಹರಿಸುತ್ತಿದ್ದರೂ ಪ್ರಾಧ್ಯಪಕರ ಮುಖ ಮಾತ್ರ ಗಂಭೀರವಾಗೇ ಇರುತ್ತಿತ್ತು "ನಗುತ ನಗಿಸುತ ನಗಿಸಿ ನಗುವ ಗುಣ ಅವರಿಗೆ ಮಂಕುತಿಮ್ಮನಿಂದ ಲಭ್ಯವಾಗಿರಲಿಲ್ಲ! ಯುವಕರಾಗಿದ್ದ ಪರಶಿವಮೂರ್ತಿಯವರ "ಮಹಾಶ್ವೇತೆ" ಪಾಠ ತುಂಬಾ ರಮಣೀಯವಾಗಿ ಉತ್ಸಾಹಪೂರಿತವಾಗಿ ನಡೆಯುತ್ತಿತ್ತು.

ದೊಡ್ಡರಂಗೇಗೌಡ ಈಗ ನಾಡಿನ ಪ್ರಮುಖ ಕವಿಯಾಗಿ ಹೆಸರು ಮಾಡಿದ್ದಾನೆ. ಅನೇಕ ಚಿತ್ರಗಳಿಗೆ ಗೀತೆಗಳನ್ನು ರಚಿಸಿ, ಆ ಗೀತೆಗಳು ಚಿತ್ರಪ್ರೇಮಿಗಳ ಹೃದಯವನ್ನು ಗೆದ್ದಿವೆ. ಪತ್ನಿ ಶ್ರೀಮತಿ ಕೆ. ರಾಜೇಶ್ವರಿ ಅವರೂ ಒಬ್ಬ ಲೇಖಕಿ, ಸಾಹಿತಿ ಎಂದು ಕೇಳಿದ್ದೇನೆ. ವೃತ್ತಿಯಲ್ಲಿ ದಂಪತಿ ಇಬ್ಬರೂ ಪ್ರಾಧ್ಯಾಪಕರು, ಪ್ರವೃತ್ತಿಯಲ್ಲಿ ಸಾಹಿತ್ಯಸೇವೆ. ಎಂತಹ ಸಾಮ್ಯತೆ. ನಾಡುನುಡಿಯ ಸೇವೆಯಲ್ಲಿ ಇಬ್ಬರಿಗೂ ಉತ್ತಮ ಅಭ್ಯುದಯವನ್ನು ಹಾರೈಸುತ್ತೇನೆ. ಇಂತಹ ಕವಿಯ ಸಹಪಾಠಿಯಾಗಿ, ಒಂದೇ ಬೆಂಚಿನಲ್ಲಿ ಕೂತು ಕಾಲೇಜ್ ಮುಗಿಸಿದ್ದು ನನಗೊಂದು ಹೆಮ್ಮೆಯ ಸಂಗತಿ.

## ವಿವೇಕ ಜನ್ಯ ಕವಿತಾ ಜೀವಾತುಗಳು

✍ ಸಂತೋಷಕುಮಾರ ಗುಲ್ವಾಡಿ

ದೊಡ್ಡರಂಗೇಗೌಡರ "ಮಣ್ಣಿನ ಮಾತುಗಳು" ಒಂದು ವಿಶಿಷ್ಟ ಕೃತಿ; ನಿಜಕ್ಕೂ ಅಪೂರ್ವಕೃತಿ; ಓದುತ್ತಾ ಹೋದಂತೆ ಅವರ ಮುಕ್ತಕಗಳು ನಮ್ಮ ಮನಸ್ಸು-ಹೃದಯಗಳನ್ನಾವರಿಸಿ ಬಿಡುತ್ತವೆ.

ಜೀವನಾನುಭವ ಪಾಕವನ್ನು ಕವಿ ಬಲು ಸೊಗಸಾಗಿ ಸೆರೆಹಿಡಿದ್ದಾರೆ. "ಮಣ್ಣಿನ ಮಾತುಗಳು" ಕೃತಿಯನ್ನು ಸುಭಾಷಿತ ರತ್ನಭಾಂಡಾಗಾರ, ಮಂಕುತಿಮ್ಮನ ಕಗ್ಗ, ರತ್ನನ ಪದಗಳು, ಬಸವಣ್ಣ ಅಕ್ಕಮಹಾದೇವಿ, ಸರ್ವಜ್ಞ ವಚನ ಸಂಗ್ರಹಗಳ ಹತ್ತಿರ ಗ್ರಂಥಾಲಯದಲ್ಲಿ ಇರಬೇಕಾದ ಪುಸ್ತಕ.

ಆಗಾಗ ಓದಿ ಮನನ ಮಾಡಬೇಕಾದ ಎಷ್ಟೋ ವಿಷಯ-ವಿಚಾರಗಳು ತುಂಬಿವೆ. ಈ ಬಗೆಯ ಇನ್ನಷ್ಟು ವಿವೇಕಜನ್ಯ ಜೀವಾತುಗಳು ದೊರಂಗೌ ಲೇಖನಿಯಿಂದ ಹೊರಬರಲಿ ಎಂದು ಹಾರೈಕೆ.

# ದೊರಂಗೌ - ಕವಿ, ಕಾವ್ಯ ಮತ್ತು ವ್ಯಕ್ತಿ

✍ ಪ್ರೊ|| ನೆ. ಬ. ಚಂದ್ರಮೋಹನ್
ಪ್ರಾಧ್ಯಾಪಕರು

೧೯೬೭-೬೮ ರ ದಿನಗಳಲ್ಲಿ ಸೆಂಟ್ರಲ್ ಕಾಲೇಜಿನ ಕೆಲವು ಆನರ್ಸ್ ವಿದ್ಯಾರ್ಥಿಗಳು ಎದುರಿಗಿದ್ದ ಕಲಾ ಕಾಲೇಜಿನಲ್ಲಿ ಕನ್ನಡ ಐಚ್ಛಿಕ ವಿಷಯವನ್ನು ತೆಗೆದುಕೊಂಡು ಓದುತ್ತಿದ್ದ ಬಿ.ಎ. ವಿದ್ಯಾರ್ಥಿಗಳಾಗಿ ನಾವು ಕೆಲವರು ದಿನ ನಿತ್ಯ ಎಂಬಂತೆ ಸೆಂಟ್ರಲ್ ಕಾಲೇಜಿನ ಹುಲ್ಲುಹಾಸಿನ ಮೇಲೆ ಠಿಕಾಣಿ ಹೂಡುವುದು ವಾಡಿಕೆಯಾಗಿತ್ತು. ಪಡ್ಡೆ ವಯಸ್ಸಿನ ನಮಗೆಲ್ಲ ಸಮಾನ ಆಸಕ್ತಿಯ ವಿಷಯ ಸಾಹಿತ್ಯ. ಕಾವ್ಯದ ಬಗ್ಗೆ ಬಿಸಿ ಬಿಸಿ ಚರ್ಚೆಗಳು ಮಾಮೂಲಾಗಿ ಇರುತ್ತಿದ್ದವು. ಜತೆಗೆ ಸ್ವಕವಿಗಳ ವಾಚನ ಟೀಕೆ, ಟಿಪ್ಪಣಿಗಳು. ಈ ಸಂದರ್ಭಗಳ ಸ್ಫೂರ್ತಿಯಿಂದ ಆಶು ಕವಿತೆಗಳನ್ನು ಸೃಷ್ಟಿಸುವವರು, ಕಿಡಿಗೇಡಿತನಕ್ಕಾಗಿ ಕವಿತೆ ಬರೆಯುವವರು ಕವಿಯಾಗಲು ಹೆಣಗಿ ಕಾವ್ಯವನ್ನು ದಿವಂಗತಗೊಳಿಸುವ ಧೀಮಂತರು ಈ ಎಲ್ಲ ಬಗೆಯ ಕಾವ್ಯ ದುರುಂಧರುಗಳು ಇದ್ದೆವು. ಆದರೆ ಈ ನಮ್ಮ ಎಲ್ಲಾ ಗಲಾಟೆಗಳ ನಡುವೆಯೂ ಕಾವ್ಯ ಕೃಷಿಯನ್ನು ಗಂಭೀರವಾಗಿ ತೆಗೆದುಕೊಂಡು ಪರಿಶ್ರಮ ವಹಿಸಿ ಸಾಧನೆ ಮಾಡುತ್ತಿದ್ದ ಒಬ್ಬಿಬ್ಬರಲ್ಲಿ ಗೆಳೆಯ ದೊರಂಗೌ ಒಬ್ಬರು.

ಕವಿ ಶ್ರೀ ದೊರಂಗೇಗೌಡರು ಆತ್ಮೀಯ ಸ್ನೇಹಿತರ ವಲಯದಲ್ಲಿ ದೊರಂಗೌ ಎಂದೇ ಪರಿಚಿತರು. ಸೆಂಟ್ರಲ್ ಕಾಲೇಜಿನ ಹುಲ್ಲು ಹಾಸಿನ ಮೇಲೆ ನಡೆಯುತ್ತಿದ್ದ ಅನೇಕ ಆವೇಶದ ಚರ್ಚೆಗಳಲ್ಲಿ ದೋರಂಗೌ ಬಹಳಷ್ಟು ವೇಳೆ ಮೌನ ಪೋಷಕರು ತಮ್ಮ ಅನಿಸಿಕೆಗಳನ್ನು ಹೇಳುವ ಸಂದರ್ಭಗಳಲ್ಲು ದನಿ ಉತ್ತರಿಸದ ರೀತಿಯಲ್ಲಿಯೇ ತಮ್ಮ ಟೀಕೆ, ಟಿಪ್ಪಣಿಗಳನ್ನು ದಾಖಲೆಗೊಳಿಸುತ್ತಿದ್ದರು. ಆದರೆ ಅದೇ ಬಳಗದ ಕವಿಗೋಷ್ಠಿಯಲ್ಲಿ ಮಾತ್ರ ತಪ್ಪದೆ ಅವರ ಒಂದೆರಡಾದರೂ ಹೊಸ ಕವನಗಳು ಪಠಿತವಾಗದೆ ಇರುತ್ತಿರಲಿಲ್ಲ. ಹೀಗಾಗೀ ನಮಗೆಲ್ಲ ಈ ಗೆಳೆಯ ಕವಿಯಾಗೇ ಬಳಕೆ ಕೆಲವೊಮ್ಮೆ ನಾವು ಕೆಲವರು ಆ ದಿನಗಳ ನಮ್ಮ ವಯಸ್ಸು ಮತ್ತು ತಿಳುವಳಿಕೆಗೆ ಅನುಗುಣವಾಗಿ ಅತ್ಯಂತ ಆವೇಶದಿಂದ ಆರ್ಭಟಿಸುತ್ತಾ ಚರ್ಚೆ ಮಾಡುತ್ತಿರುವಾಗಲೂ ಕೂಡ ಅವರು ಕೆಲವೊಮ್ಮೆ ವ್ಯವಹರಿಸುತ್ತಿದ್ದ ಮೌನ ಮತ್ತು ತೋರುತ್ತಿದ ಸಮಾಧಾನಗಳು ಉಳಿದವರಿಗೆ ಮುಜುಗರವನ್ನು ಉಂಟು ಮಾಡುತ್ತಿದ್ದುದು ನಿಜ. ಒಮ್ಮೆ ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘದಲ್ಲಿ ಯಾವುದೋ ಒಂದು ಕಾರ್ಯಕ್ರಮವನ್ನು ಮುಗಿಸಿಕೊಂಡು ಹೊರಟ ನಾವು ಮೂವರು ಗೆಳೆಯರಲ್ಲಿ ನವ್ಯ ಕಾವ್ಯದ ಬಗ್ಗೆ ಚರ್ಚೆ ಶುರುವಾಯಿತು. ಮಲ್ಲೇಶ್ವರಂನಿಂದ ರಾಜಾಜಿನಗರಕ್ಕೆ ನಡೆದು ಬರುತ್ತಿದ್ದ ನಾವು ಉದ್ದಕೂ ಮಾತಾಡಿಕೊಂಡೇ ಬಂದೆವು ಇಲ್ಲಿ ೭೦ರ ದಶಕದ ಆ ದಿನಗಳಲ್ಲಿ ಆ ರಸ್ತೆಗಳು

ಜನನಿಭಿಡತೆ ಎಂದರೆ ಏನೆಂಬುದನ್ನು ಅರಿಯದ ಬಿಡು ಬೀಸಾಗಿ ಇರುತ್ತಿದ್ದವು ಹೀಗಾಗಿ ನಮ್ಮ ಚರ್ಚೆಗೆ ಯಾವ ಅಡೆ ತಡೆಗಳೂ ಇರಲಿಲ್ಲ. ಜತೆಗಾರ ಕೋಶಿ ನವ್ಯ ಕಾವ್ಯದ ಬಗ್ಗೆ ಅತ್ಯಂತ ಶ್ರದ್ಧೆ, ಪ್ರೀತಿಗಳಿಂದ ಓದಿಕೊಂಡಿದ್ದವರು. ನಾನು ಮತ್ತು ಪ್ರಸಾದ ಕೆಲವು ಪೂರ್ವಾಗ್ರಹಳೊಂದಿಗೆ ನವ್ಯ ಕಾವ್ಯವನ್ನು ಖಂಡಿಸಬೇಕೆಂದೇ ಪಣ ತೊಟ್ಟು ಹಸಿ ಹಸಿಯಾದ ವಾದಗಳನ್ನ ಮಂಡಿಸುತ್ತಿದ್ದೆವು. ಹೀಗಾಗಿ ನಮ್ಮ ಚರ್ಚೆ ಸಾಕಷ್ಟು ಬಿಸಿಯಾಗಿಯೇ ಸಶಬ್ದವಾಗಿಯೇ ರಸ್ತೆಯಲ್ಲಿ ಮುಂದುವರೆದಿತ್ತು. ಆದರೆ ಇಷ್ಟೆಲ್ಲ ಚರ್ಚೆಗಳ ನಡುವೆ ನಮ್ಮ ಕವಿ ಒಂದು ಮಾತನ್ನು ಆಡಿಲ್ಲದೆ ಇದ್ದುದು ನಮ್ಮ ಗಮನಕ್ಕೆ ಬಂದಾಗ ನಿಜವಾಗಿಯೂ ನಮಗೆ ಆಶ್ಚರ್ಯವಷ್ಟೇ ಅಲ್ಲದೆ ಇರುಸು-ಮುರುಸಿನ ಭಾವನೆಯನ್ನು ಉಂಟುಮಾಡಿತ್ತು ಈ ವಿಷಯದಲ್ಲಿ ಮಾತ್ರ ನಾವು ವಾದಿ ಪ್ರತಿವಾದಿಗಳಲ್ಲಿಬ್ಬರಲ್ಲಿಯೂ ಸಹಾ ಮಾತ್ರ ಇದ್ದು ಅದನ್ನು ವ್ಯಾಖ್ಯಾನಿಸಿಯೂ ಆಯಿತು, ಆಗಲೂ ಅವರದು ಸ್ನೇಹದ ನಗೆಯ ಪ್ರತಿಕ್ರಿಯೆ ಮಾತ್ರ. ಇಂತಹ ಹಲವಾರು ವಿಷಯಗಳನ್ನು ನಾವೆಲ್ಲ ಗೆಳೆಯರು ಹತ್ತಿರ ಹತ್ತಿರ ಮೂರು ದಶಕಗಳ ನಮ್ಮ ಸ್ನೇಹದ ಜೀವನದಲ್ಲಿ ನೆನಪು ಮಾಡಿಕೊಳ್ಳುವಂತಾಗುತ್ತದೆ. ಪ್ರಾಯಶಃ ಇವರ ಇದೇ ವ್ಯಕ್ತಿತ್ವದ ರೀತಿಗಳನ್ನು ಅವರ ಕಾವ್ಯಗಳಲ್ಲೂ ಗುರುತಿಸುವಂತಾಗುತ್ತದೆ ಅವೇಶ ರಹಿತವಾದ ಅನ್ವೇಷಕ ಪ್ರವೃತ್ತಿಯನ್ನು ಬೆಳೆಸಿಕೊಂಡ ಕಾವ್ಯ ಇವರದು.

೧೯೬೯ ರಲ್ಲಿ ಇವರ ಪ್ರಥಮ ಸಂಕಲನ "ಜಗಲಿ ಹತ್ತಿಇಳಿದು" ಪ್ರಕಟವಾಯಿತು. ಆಗ ಮತ್ತು ಅದಕ್ಕೂ ಮುಂಚೆ ಇವರ ಕವಿತೆ ಪ್ರಜಾವಾಣಿ ಸಾಪ್ತಾಹಿಕದಲ್ಲಿ ಪ್ರಕಟವಾದಾಗ ನಾವೆಲ್ಲ ತುಂಬಾ ಸಂಭ್ರಮಪಟ್ಟ ನೆನಪು. ಅವರು ಪ್ರಥಮ ಸಂಕಲನದಿಂದ ಈಗಿನ "ಐವತ್ತರ ಐಸಿರಿ"ತನಕದ ಕಾವ್ಯ ಜೀವನವನ್ನು ಮತ್ತು ಕವಿತೆಗಳನ್ನು ಒಬ್ಬ ಗೆಳೆಯನಾಗಿ ಮತ್ತು ಕಾವ್ಯದ ಓದುಗನಾಗಿ ಕುತೂಹಲದಿಂದ ಓದುತ್ತಾ ಬಂದ ನನಗೆ ಅವರು ಕವಿತಾ ಸೃಷ್ಟಿಯ ಬಗೆಗೆ ಇಂದಿನತನಕವೂ ಉಳಿಸಿಕೊಂಡು ಬಂದಿರುವ ಉತ್ಸಾಹ ಹಾಗೂ ಹೊಸ ಹೊಸ ರೀತಿಯಲ್ಲಿ ಅಭಿವ್ಯಕ್ತಿ ಪಡಿಸಲು ಅವರು ತೋರುವ ಪರಿಶ್ರಮ ಅಚ್ಚರಿ ಹುಟ್ಟಿಸುತ್ತದೆ.

ಹಳ್ಳಿಯ ಬದುಕಿನ ಹಿನ್ನಲೆಯಿಂದ ನಗರಕ್ಕೆ ಬಂದು ನೆಲೆಯೂರಬೇಕಾದ ಈ ಕವಿಗೆ ಸ್ವಚ್ಛಂಧವಾದ ಹಳಿಯ ಬದಿನ ಸೊಗಡಿನಂತೆಯೇ ನಗರ ಜೀವನದ ಗೊಂದಲಗಳು ಮುತ್ತಿಗೆ ಹಾಕುತ್ತದೆ. ಮುಕ್ತ ಹಾಗೂ ಪ್ರಾಮಾಣಿಕ ಬದುಕನ್ನು ನಡೆಸುವ ಒತ್ತಾಸೆ ಇರುವ ಕವಿಗೆ ಅದನ್ನು ತಡೆಯಬಹುದಾದ ತೊಡರುಗಳು ಎದುರಾದಾಗ ಕಾವ್ಯ ಆ ವ್ಯಕ್ತಿತ್ವದ ಅಭಿವ್ಯಕ್ತಿ ಪಡಿದಿದೆ. ಈ ಕವಿಗೆ ಅತ್ಯಂತ ಪ್ರಿಯವಾದುದು ಪ್ರಕೃತಿ, ಪ್ರೇಮ ಹಾಗೆಯೇ ದಿನ ನಿತ್ಯದ ಬದುಕಿನಲ್ಲಿ ತಾನು ತಾನಾಗಿ ಉಳಿದು ತನ್ನತನವನ್ನ ಗುರುತಿಸಿಕೊಳ್ಳುವ ಬೆಳೆಸಿಕೊಳ್ಳುವ ತವಕ.

ಇವರ ಕವಿತೆಗಳ ಬಗ್ಗೆ ಬರೆಯುತ್ತಾ ವಿಮರ್ಶಕ ಗೆಳೆಯರೊಬ್ಬರು ಹೇಳಿದ ಮಾತುಗಳ ಅಭಿಪ್ರಾಯವನ್ನು ನೆನಪಿಸಿ ಕೊಳ್ಳುವುದಾದರೆ ತಾವು ಇಷ್ಟಪಡುವ ಮಾದರಿ ಕವಿತೆಗಳನ್ನು ಓದುತ್ತಾ ಹುಡುಕುವುದಕ್ಕಿಂತ ತಾವೇ ಬರೆಯುತ್ತಾ ಹುಡುಕಿಕೊಳ್ಳುವ ಬಗೆಗೆ ಇವರು ಸೇರುತ್ತಾರೆ, ಮೂರು ದಶಕಗಳ ಇವರ ಕಾವ್ಯ ಜೀವನದಲ್ಲಿ ಇವರು ಕನ್ನಡ ಕಾವ್ಯ ರೀತಿಗಳ ಹಲವಾರು ಘಟ್ಟಗಳನ್ನು ಹಾದು ಬಂದಿದ್ದಾರೆ. ಆದರೆ ಇವರ ಅನ್ವೇಷಣೆಯ ತೀವ್ರತೆ ಎಲ್ಲಿಯೂ ತಣಿದಂತೆ ತೋರುವುದಿಲ್ಲ ಆದ್ದರಿಂದಲೇ ನವ್ಯ ಶೈಲಿಯ ತಾಂತ್ರಿಕ ಸ್ವರೂಪಗಳಂತೆಯೇ

ಭಾವಾಗೀತಾತ್ಮಕತೆಯ ಮೋಡಿಯೂ ಇವರನ್ನು ಸೆಳೆಯುತ್ತದೆ. ಕಾವ್ಯ ಸ್ವರೂಪದ ದೃಷ್ಟಿಯಿಂದ ಇವರು ನಿರಂತರವಾಗಿ ನಡೆಸುತ್ತಾ ಬಂದಿರುವ ಪ್ರಯೋಗಗಳು ಇವರ ಈ ತೆರನ ತಣಿವಿಲ್ಲದ ತಹತಹಿಕೆಯ ಸೂಚನೆಗಳಾಗಿ ಭಾವಗೀತೆ, ಪ್ರಗಾಥ, ಮುಕ್ತಕ ಸಂಗೀತದ ಸಹಚರ್ಯವನ್ನು ಅವಿನಾಭಾವದಿಂದ ಒಪ್ಪಿಕೊಳ್ಳುವ ಚಿತ್ರಗೀತೆಗಳು. ಈ ಎಲ್ಲವೂ ಈ ಕವಿಯ ಅಭಿವ್ಯಕ್ತಿಯ ರೂಪಗಳಾಗುತ್ತಲೇ ಬಂದಿರುವುದು ಬಹುಶಃ ಇದೇ ಕಾರಣದಿಂದ.

ದೊರಂಗೌ ಅವರ ಕಾವ್ಯದ ಸ್ಥಾಯಿ ಭಾವ ಎಂಬಂತೆ ಕಂಡು ಬರುವ ಒಂದು ಅಂಶವೆಂದರೆ ತನ್ನನ್ನು ತಾನು ಗುರುತಿಸಿಕೊಳ್ಳುವ ಹಾಗು ತನ್ನ ಸುತ್ತಮುತ್ತಲಿನವರನ್ನ ಮತ್ತು ಪರಿಸರವನ್ನು ಅರ್ಥಮಾಡಿಕೊಳ್ಳುವ ಪ್ರಾಮಾಣಿಕ ಕಾಳಜಿ ಅವರ "ಜಗಲಿ ಹತ್ತಿ ಇಳಿದು" ಕವಿತೆಯಲ್ಲಿ

ಸ್ಲೇಟಿನ ತುಂಬಾ ಸೊನ್ನೆಗಳ ಸುತ್ತಿ
ಇದು ನಾಯಿ
ಅದು ಬೆಕ್ಕು
ಎಂದು ಕರೆದ ತುಂಟತನ
ಮಹಾ ಕಡಿಯ ಹೋಗಿ
ಬೆಳೆದು ಬದಲಾಗಿ
ಗೆಳೆಯರ ಕಣ್ಣು ಮೂಗು ಬಾಯನ್ನು
ಸೀಮೆ ಸುಣ್ಣದಲಿ ಬರೆದು
ಮಗ್ಗುಲಲಿ ಗಾಳಿಪಟವೊಂದನ್ನು ಹಾರಿ ಬಿಟ್ಟು
ವಕ್ರ ವಕ್ರಗೆರೆ ಗೀಚಿ
ಉದ್ದ ಗೀಟೆರಡರ ಮೇಲೊಂದು ಸೊನ್ನೆ ಸುತ್ತಿ
ಇವನಿರಬಹುದೆ ನಾನು?
ಇರಬಹುದೆ ನಾನು?
ಬಹುದೆ ನಾನು?

ಎಂದು ವ್ಯಕ್ತವಾಗುವ ಈ ಸಾಕ್ಷಾತ್ಕಾರದ ಅನ್ವೇಷಣೆಯ ಭಾವವೇ ಅವರ ಹಲವಾರು ಹತ್ತು ಕವಿತೆಗಳಲ್ಲಿ ಇಂದಿಗೂ ಅಭಿವ್ಯಕ್ತವಾಗುತ್ತಲೇ ಬಂದಿವೆ.

ಈ ತನ್ನತನದ ಪ್ರಜ್ಞೆ ಈ ಕವಿಗೆ ನಿರಂತರವಾದ ಸೃಜನ ಶೀಲತೆಯ ಪ್ರೇರಣೆಯಾಗಿಯೂ ಬರುತ್ತದೆ.

ನನ್ನದನ್ನು ಕಂಡು
ನನ್ನನುಭವ ಉಂಡು
ಇದು ನನ್ನದು, ನನ್ನದು ಇದೇ
ಎಂದು ತೇಗಿ ಶ್ರದ್ಧೆ ಗದ್ದೆಯಲಿ ಆ ಸುಖ ದುಃಖ ಕಟ್ಟಿಹಾಕುವಾಸೆ
ಕಡ್ಡಿ ಕಟ್ಟೆ ಇರುವೊರಟು ಗದ್ದೆಯಲಿ
ಇರುವಿಕೆ ಕಬ್ಬು ತೆಗೆದು
ತೆಗೆದ ಕಬ್ಬನೇ ಮುರಿದು
ಮೃದುವಾಗಿ ಬಗ್ಗಿಸಿ ನಿಲ್ಲಿಸಿ
ನನ್ನದೇ ದಾರವನ್ನು ಎರಡೂ ತುದಿಗೆ ಬಿಗಿ ಸುತ್ತಿ
ಎಲ್ಲರೂ ಕಂಡುಂಡು ತಳವೂರಿದೂರಿನ ನಡುವೆ

ಭಿನ್ನತೆಗೆ ಬೆಲೆಕೊಟ್ಟು
ಬದುಕುವ ಬಯಕೆ
ಅಲ್ಲಿ ಆ ಬಿಲ್ಲ ಎದೆಯೇರಿಸುವ ಹಂಬಲ ಮನಕೆ (ಆಸೆ ಅರ್ಜುನ)

ಈ ಮೇಲಿನ ಸಾಲುಗಳಲ್ಲಿ ವ್ಯಕ್ತವಾಗಿರುವ ಭಾವ ಕೂಡ ಅದೇ ಆಗಿದೆ, ಈ ಕವಿಯ ಮತ್ತೊಂದು ವೈಶಿಷ್ಟ್ಯವೆಂದರೆ ಇವರಷ್ಟು ಕಾವ್ಯದಲ್ಲಿನ ಈ ಲಹರಿ ಪ್ರಜ್ಞೆ ಎಂದಿಗೂ ಕೂಡ ಅಹಂಕಾರ ಆಗದೆ ವಿನಯವನ್ನ ಕಾಯ್ದುಕೊಳ್ಳುವ ಆರೋಗ್ಯಕರ ಮನೋಭಾವ.

ಬದುಕಿನ ಅನುಭವಗಳು ಮತ್ತು ಕಾಲ ತಾನಾಗಿಯೇ ಪಕ್ವವಾಗಿಸುತ್ತಿರುವ ವ್ಯಕ್ತಿತ್ವದ ಸೂಚನೆಗಳು ಅವರ ಕವನಗಳಲ್ಲಿ ಈಚೆಗೆ ಕಂಡು ಬರುತ್ತದೆ "ಐವತ್ತರ ಐಸಿರಿ" ಪದ್ಯದಲ್ಲಿ ಅವರು ಹೇಳಿರುವಂತೆ -

ಬಾಲ್ಯದಲ್ಲಿ ಬಲಮುರಿ, ಯೌವನದಲಿ ಎಡಮುರಿ
ಮುಂದೆ ವಿಷಾದವಲ್ಲರಿ, ಈಗ ವಿಶಾಲ ತತ್ವ ಝರಿ
ಮಿಂದು ಮೌನ ವ್ರತದಾರಿ ನನ್ನ ಐವತ್ತರ ಐಸಿರಿ;

ಇದು ಕವಿಯ ಈಚಿನ ಮನೋಭಾವ ಆಗಿರುವಂತೆಯೇ ಅದರ ಕಾವ್ಯ ದೃಷ್ಟಿಗೆ ಸೂಚನೆಯು ಆಗುತ್ತದೆ ಉನ್ಮಾದ ಉರಿವ ತೊಡೆಗಳಲ್ಲಿ, ನಗ್ನ ನಗರ ನಡುಗಳಲ್ಲಿ ಮೋಹದಲ್ಲಿ ಚದುರಿದ ವ್ಯಕ್ತಿತ್ವ "ಚಿಂತೆ ಚಿರತೆ" ನಖದಂಷ್ಟ್ರ ಊರಿ ವಾಸ್ತವದಲ್ಲಿ ತಲೆಗೂದಲು ಉದುರಿಯು ಮೂಗಿನ ಮುಖದ ಚೈತನ್ಯ ಚವರಿ ಬೀಸಿ ನೆಲದೊಡಲಿನಿಂದ ಮುಗಿಲಿಗೆ, ಮುಗಿಲೊಡಲಿನಿಂದ ಅನೂಹ್ಯಕ್ಕೆ ಸಂಚಾರಿಯಾಗುವ ಅಪೇಕ್ಷೆ ತೋರುತ್ತದೆ.

ಇವರ ಕಾವ್ಯದಲ್ಲಿ ಬೆಳವಣಿಗೆಯನ್ನು ತೋರುತ್ತಿರುವ ಈ ತನ್ನತನದ ಅರಿವು ಬೇರೆ ಬೇರೆ ಹಂತಗಳಲ್ಲಿ ಪರಿಪಕ್ವವಾಗುತ್ತಿರುವ ಬಗೆಯನ್ನು ನಾವು ಗುರುತಿಸಬಹುದು. ಆರಂಭದಿಂದಲೂ ಯಾವುದರ ಬಗೆಗೂ ಅಸಮಾಧಾನ ಆಕ್ರೋಶಗಳಲ್ಲಿ ವಿಜೃಂಭಿಸದೆಯೂ ತನ್ನ ಸದಾಶಯಗಳನ್ನು ಆಗ್ರಹ ಪೂರ್ವಕವಾಗಿ ದಾಖಲಿಸುತ್ತಾ ಬಂದ ಕವಿಗೆ ಈ ತೆರನ ಪರಿ ಪೂರ್ಣತೆಯ ತಿರುವು ಅತ್ಯಂತ ಪ್ರಮುಖವಾದ ಮಜಲಾಗುವ ಸಾಧ್ಯತೆಯಿದೆ.

ಇವರ ಕಾವ್ಯದ ಭಾಷೆಯ ಸ್ವರೂಪಗಳು ಕೂಡ ಆಶಯಗಳಿಗೆ ಪೂರಕವಾಗಿ ಬಳಕೆಯಾಗುತ್ತಾ ಬಂದಿವೆ. ಹೆಚ್ಚು ಹೆಚ್ಚಿನ ಸಮುದಾಯಿಕ ಸಂವಹನೆಯ ಹಂಬಲವೇ ಪ್ರಾಯಶಃ ಇವರನ್ನ ಪ್ರಯೋಗ ಶೀಲತೆಗೆ ಪ್ರೇರೇಪಿಸುತ್ತದೆ. ಇದೇ ಕಾರಣದಿಂದ ಇವರ ಸೃಜನ ಶೀಲತೆ ಗಂಭೀರ ಕಾವ್ಯ ಸೃಷ್ಟಿಗೆ ದುಡಿಯುವಂತೆಯೇ ಸಮಾನಾಂತರವಾಗಿ ಸಮೂಹ ಮಾಧ್ಯಮ ಪ್ರಕಾರದ ಚಿತ್ರಗೀತೆಗಳಲ್ಲಿಯೂ ದುಡಿಯುತ್ತದೆ.

ಈ ಸಂದರ್ಭದಲ್ಲಿ ಈ ಕವಿಯ "ಐವತ್ತರ ಐಸಿರಿ" ನೂರಕ್ಕೂ ಮೀರಿದ "ನರುಗಂಪು" ಹರಡುವ ಶುಭ ದಿನಗಳನ್ನು ನಾವು ಹಾರೈಸುತ್ತಿದ್ದೇವೆ.

# ಎಲೆಯ ಮರೆಯ ಕಾಯಿ

✍ ಡಾ|| ವಿ. ಎಸ್. ಕೃಷ್ಣಮೂರ್ತಿ

ಕರ್ನಾಟಕದಲ್ಲಿ ಶ್ರೀ ದೊಡ್ಡರಂಗೇಗೌಡರ ಹೆಸರು ಕೇಳದವರಾರು? ರಸ್ತೆಯಲ್ಲಿ ಶ್ರೀಸಾಮಾನ್ಯರಂತೆ ಓಡಾಡುತ್ತಿದ್ದರೆ ಅವರನ್ನು ಗುರುತಿಸದ ಜನ ಅವರ ಹೆಸರು ಹೇಳಿದರೆ 'ಗೊತ್ತಿಲ್ಲ' ಎನ್ನಲಾರರು.

ನನ್ನ ಅವರ ಪರಿಚಯ ಸುಮಾರು ೧೦-೧೨ ವರ್ಷಗಳಷ್ಟು ಹಳೆಯದು. ಬಹಳ ಹಿಂದೆ ಅವರ ಹೆಸರನ್ನು ಮೊದಲ ಬಾರಿಗೆ ಓದಿದ್ದು ಪ್ರಜಾವಾಣಿ ಸಾಪ್ತಾಹಿಕದಲ್ಲಿ, ಅವರ ಒಂದು ಕವನ ನನ್ನನ್ನು ಬಹಳ ಆಕರ್ಷಿಸಿತ್ತು.

ಅವರ ಕವನಗಳ ಬಗ್ಗೆ ಚರ್ಚಿಸುವಾಗ ನನಗಿದ್ದ ಆಸಕ್ತಿ ಕಂಡು ಅವರೇ ತಮ್ಮ ಕವನ ಸಂಕಲನ, ಕ್ಯಾಸೆಟುಗಳನ್ನು ತಂದುಕೊಡುತ್ತಿದ್ದರು. ಕವಿಯೊಬ್ಬರ ಪರಿಚಯವಾದದ್ದು ನನಗೂ ಹೆಮ್ಮೆಯ ವಿಷಯ. ನನ್ನ ಗೆಳೆಯರ, ಬಂಧುಗಳ ಗುಂಪಿನಲ್ಲಿ ಅವರ ಬಗ್ಗೆ ಚರ್ಚಿಸುವುದು ನನಗೆ ಕೋಡು ಮೂಡಿಸುತ್ತಿತ್ತು. ಸಾಂಸಾರಿಕ ಜೀವನದಲ್ಲಿ ಅವರಂತೂ ತುಂಬಾ ಅದೃಷ್ಟವಂತರು. ಶ್ರೀಮತಿ ರಾಜೇಶ್ವರಿಯವರು ಅವರಿಡುವ ಪ್ರತಿ ಹೆಜ್ಜೆಗೂ ಸ್ಪಂದಿಸಿ ಮಾರ್ಗದರ್ಶನ ನೀಡುವ ನವಚೇತನ 'ಜಖಯು ಬಥ ಒಟ ದಈಟಬಒಟ ಖಯಬಟಿಕ ಣಜಖ ಥ್ಖಯಥ ಈಗ ಖಥಖಡಾ ಟಬಒಟ' ಎನ್ನುವ ಮಾತು ಚೆನ್ನಾಗಿ ಅನ್ವಯಿಸುತ್ತದೆ. ಸಿನಿಮಾ ಹಾಡುಗಳೆಂದರೆ ಸಾಹಿತ್ಯದ ಬಗ್ಗೆ ಕೇಳುವುದೇ ಬೇಡ. ಇದಕ್ಕೆ ಅಪವಾದವೆಂಬಂತೆ ಗೌಡರ ಸಾಹಿತ್ಯವಿದ್ದರೆ ಮರುಭೂಮಿಯಲ್ಲಿ 'ಓಯಸಿಸ್' ಇದ್ದಂತೆ ಉದಾ: 'ನಮ್ಮೂರ ಮಂದಾರ ಹೂವೇ' ಹಾಡು ಕೇಳದವರಾರು? ಕೇಳಿ ಮೆಚ್ಚದವರಾರು?

ಅವರ ಇತ್ತೀಚಿನ 'ರಶ್ಮಿ' ಚಿತ್ರದ 'ಇಬ್ಬನಿ ತಬ್ಬಿದಾ ಇಳೆಯಲೀ ರವಿ ತೇಜಾ ... ಕಣ್ಣು ತೆರೆದು ಬಾನ...ಕೋಟಿ ಕಿರಣ ಇಳಿದು ಬಂತು ಭೂಮಿಗೆ' ಹಾಡಿನ ಸಾಹಿತ್ಯ ಎಷ್ಟು ಅರ್ಥಪೂರ್ಣವಾಗಿದೆ. ಈ ಚಿತ್ರ ನಾವು ನೋಡಲಾಗದಿದ್ದರೂ ನಮ್ಮ ಮನೆಯ ಮಕ್ಕಳು ಪದೇ ಪದೇ ಕೇಳಿ ಕಂಠ ಪಾಠ ಮಾಡಿಕೊಂಡಿದ್ದಾರೆ. ನನ್ನ ಶ್ರೀಮತಿಯಂತೂ ತನ್ನ ಪುಸ್ತಕದಲ್ಲಿ ಇದರ ಸಾಹಿತ್ಯ ಬರೆದುಕೊಂಡು ಅಮೂಲ್ಯ ನಿಧಿಯಂತೆ ರಕ್ಷಿಸಿಕೊಂಡಿದ್ದಾಳೆ. ಸರಿಯಾದ ಸಾಹಿತ್ಯವಿದ್ದರೆ ಸಂಗೀತವೂ ಸುಮಧುರವಾಗಿರುತ್ತದೆ ಎನ್ನುವುದಕ್ಕೆ ಈ ಹಾಡೇ ಸಾಕ್ಷಿ.

ಅವರ 'ಹೋಳಿ ಹುಣ್ಣಿಮೆ', ಪ್ರೀತಿ ಪ್ರಗಾಥ ಮುಂತಾದ ಕವನ ಸಂಕಲನಗಳನ್ನು ನಾನು ಓದಿದ್ದೇನೆ. 'ಸರಳತೆಯ ಸೊಬಗಿನಲಿ ಮಧುರತೆಯ ಮೆರುಗಿಡುವ' ಶೈಲಿ ಅವರದು. ವೈಯಕ್ತಿಕವಾಗಿ ಹೇಳಬೇಕೆಂದರೆ ಗೌಡರು ಅತ್ಯಂತ ಸರಳ ವ್ಯಕ್ತಿ. ನಿಗರ್ವಿ. ತಾವು ಎಷ್ಟು ಎತ್ತರದಲ್ಲಿದ್ದೇವೆಂದು ಬಹುಶಃ ಅವರಿಗೆ ಗೊತ್ತೇ ಇಲ್ಲ. ಯುವ ಪೀಳಿಗೆಯ ಕವಿಗಳಲ್ಲಿ ಅತ್ಯಂತ ಪ್ರಭಾವೀ ವ್ಯಕ್ತಿತ್ವ ಗೌಡರದು. ಕನ್ನಡ ಸಾರಸ್ವತ ಲೋಕಕ್ಕೆ ಅವರ ಕೊಡುಗೆ ಅಪಾರ.

# ಸರಳತೆ, ಸೃಜನತೆಯ ಸಾಗರ

✍ ಚಿತ್ಕಳಾ ಎಂ. ಬಿರಾದಾರ
ಆಂಗ್ಲ ಅಧ್ಯಾಪಕಿ

"ಡಿ. ಆರ್. ಜಿ." ಎಂದೇ ಕಾಲೇಜಿನ ಕ್ಯಾಂಪಸನಲ್ಲಿ ಮಿಂಚುತ್ತಿರುವ, ಎಲ್ಲರ ಹೆಮ್ಮೆಯ ಬೆಂಗಳೂರಿನ ಶ್ರೀ.ಲ.ನ. ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀಯುತ ದೊಡ್ಡರಂಗೇಗೌಡರು ಮೂಲತಃ ಕವಿಗಳು.

ನಾ ಕಂಡಂತೆ ಅವರು ತಮ್ಮ ಜೀವನದಲ್ಲಿ ಕಂಡು, ಅನುಭವಿಸಿದ ಪ್ರತಿ ಪ್ರಸಂಗಗಳನ್ನು, ಸನ್ನಿವೇಶಗಳನ್ನು ಹಾಗೆಯೇ ಬಿಡದೆ. ಅವುಗಳ ಬೆನ್ನಟ್ಟಿ, ತಮ್ಮ ಕಾಲ್ಪನಿಕ ದೀಪದಡಿ ಹಣೆದು ಕವನವಾಗಿ ಮಾರ್ಪಡಿಸುವವ ಮಾಟಗಾರರು ದೊಡ್ಡರಂಗೇಗೌಡರು.

ಸಮಾಜದ ಡೊಂಕನ್ನು, ಶೀಲ ಅಶ್ಲೀಲತೆಯನ್ನು, ಕುಂದು-ಕೊರತೆಯನ್ನು ತಮ್ಮ ಕಾವ್ಯಾತ್ಮಕ ಶಬ್ದಬೇಲಿಯಲ್ಲಿ ಸಿಲುಕಿಕೊಂಡು ಆಟವಾಡಿಸಿ ಅವುಗಳ ಮೈಮಾಟ ಹೊರಳಾಡಿಸಿ ಓದುಗನನ್ನು ಅದೇ ಬೇಲಿಯಲ್ಲಿ ಬೀಳಿಸಿ, ಯೋಚಿಸಲು ಅನುವು ಮಾಡುತ್ತಿರುವ ಇಂದಿನ ಕನ್ನಡ ಸಾಹಿತ್ಯದ ಹೆಮ್ಮೆಯ, ಸೃಜನ ಕವಿ ಶ್ರೀ.ದೊಡ್ಡರಂಗೇಗೌಡರು.

ಸರಳ ವ್ಯಕ್ತಿತ್ವ, ಸರಳ ಜೀವನ, ಸರಳ ಸ್ವಭಾವದ ದೊಡ್ಡರಂಗೇಗೌಡರ ಮಾತುಗಳೂ ಸಹ ನಿರರ್ಗಳವಾದ ಅಚ್ಚಕನ್ನಡ. ಅವರೊಬ್ಬ ಅಚ್ಚ ಕನ್ನಡ ಕವಿ.

ಅವರು ಬರೆದ ಕವನಗಳಲ್ಲಿ ಅವರು ಬಿಡದ ವಸ್ತು ವೇದನೆ, ವಯಸ್ಸು ಹಾಗೂ ವರ್ತನೆಗಳು ಇಲ್ಲದಿಲ್ಲ, ಆದರೂ ಕೆಲವು ವಿಷಯಗಳು ಅವರಿಗೆ ಅತೀ ಹೆಚ್ಚು- ಮೆಚ್ಚು. ಉದಾ -ಸೂರ್ಯೋದಯ, ಪ್ರೀತಿ - ಪ್ರೇಮಗಳು ಹಳ್ಳಿಯ ಬೆಡಗು ಮುಂತಾದವುಗಳು. ಅದರಲ್ಲಿಯೂ ಕೆಲವು ಕವನಗಳು ಅವರು ಮುಟ್ಟಬೇಕಿದ್ದ ಗುರಿ, ಅಥವಾ ತುದಿಯನ್ನು ಮುಟ್ಟಿಲ್ಲವೆಂಬ ಬೇಜಾರಿನ ಕವಿತೆಗಳೂ ಹಲವಾರು ಇವೆ.

ಸಂಗಾತಿಗಾಗಿ ಬರೆದ ರಸವತ್ತಾದ ಹಲವು ಕವನಗಳಲ್ಲಿ

'ಋತು-ವಸಂತ, ನೆಲ-ಮುಗಿಲ, ಮರ-ಗಿಡ
ಹೂ-ಬಳ್ಳಿಗಳ ಬದಲಿಸಿದ ರೀತಿ
ನನ್ನವಳ ಪ್ರೀತಿ - ನನಗೆ ಸಂಗಾತಿ' (ಸಂಗಾತಿ)

ಒಂದು ಉಲ್ಲೇಖ ಮಾತ್ರ.

ಯುವಕರ ಅಳಲು-ಕೊಳಲುಗಳನ್ನು ಚಿತ್ರಿಸುವ ಕವನಗಳಲ್ಲಿ

> 'ನಿರುದ್ಯೋಗಿ' ಯೂ ಒಂದು.
> "ಓದುವುದು ಮುಗಿದು ಓಡಾಟ ಬಂತು...
> ಹಗಲೆಲ್ಲ ಬವಣೆ ಇರುಳು ಜಾಗರಣೆ"

ಈ ಕವಿ ಸ್ವ-ಮೌಲ್ಯಮಾಪನ ಮಾಡಲು ಸಹ ಹಿಂಜರಿದಿಲ್ಲ,

> "ನಾವು ನಾವಾಗಿಲ್ಲ
> ಯಾರೋ ಆಗಿದ್ದೇವೆ
> ಆಗುತ್ತಿದ್ದೇವೆ
> ಆಗುವ ಸನ್ನಾಹದಲ್ಲಿ
> ತೊಡಗಿದ್ದೇವೆ ನಿರಂತರ;
> ..ಅವಮಾನಿಸಿದ್ದೇವೆ
> ತಾಯಿ ಭಾರತಿಯನ್ನ! (ನಾವು - ನಮ್ಮ ಅಪಚಾರ)

ದೊಡ್ಡರಂಗೇಗೌಡರ ನವ್ಯಕಾವ್ಯ ಹಾಗೂ ಭಾವಗೀತೆಗಳ ಒಟ್ಟು ಸಂಕಲನಗಳ ಸಂಖ್ಯೆ ಇಪ್ಪತ್ತಕ್ಕೂ ಹೆಚ್ಚು ಅದರಲ್ಲಿ, ಕಣ್ಣು ನಾಲಗೆ ಕಡಲು, ಮೌನಸ್ಪಂದನ; ಏಳು ಬೀಳಿನ ಹಾದಿ;ನಾಡಾಡಿ ಮುಖ್ಯವಾದವುಗಳು ಗೀತಗಾರುಡಿ, ಪ್ರೇಮಾಂಜಲಿ, ತಾಳ-ಮೇಳ ಎಂಬ ಇನ್ನು ಮುಂತಾದ ಭಾವಗೀತೆ ಸಂಗ್ರಹಗಳನ್ನು ಓದಿದವಗೆ ಮನ ಮುಟ್ಟದೆ ಇರುವು. ಅವರೊಬ್ಬ ಬರೀ ನವ್ಯ ಕಾವ್ಯ ಹಾಗೂ ಭಾವಗೀತೆಗಳನ್ನಷ್ಟೆ ಬರೆವ ಸೀಮಿತ ಕವಿಯಾಗದೆ ಅವರೊಬ್ಬ 'Full-Fledged poet' ಎಂಬದನ್ನು ಆಧರಿಸುತ್ತವೆ.

ದೊಡ್ಡರಂಗೇಗೌಡರು ಮೊದಮೊದಲಿಗೆ ಸಣ್ಣ ಕತೆಗಳನ್ನೂ ಸಹಾ ಬರೆದವರು. ಪ್ರಕಟಗೊಂಡ ಐವತ್ತರಿಂದ ಅರುವತ್ತು ಕತೆಗಳಲೆಲ್ಲಾ ಅವರು ಬಡ ಮತ್ತು ಮಧ್ಯಮವರ್ಗದವರ ಬವಣೆ, ಬಡಿದಾಟಗಳನ್ನು ಬಣ್ಣಿಸಿದ್ದಾರೆ ಅವರ ಕಥಾನಾಯಕರೆಲ್ಲ "We may break but will not bend"ಎಂಬಂತ ಸಿದ್ಧಾಂಥ ಎಂದೆಂದಿಗೂ ರೂಢಿಸಿಕೊಂಡವರು ಅವರ ಒಂದೆರಡು ಕಥೆಗಳು ಆಂಗ್ಲ ಭಾಷೆಗೂ ಭಾಷಾಂತರಿಸಲ್ಪಟ್ಟಿವೆ. ಕಥೆ ಬರೆಯುವುದನ್ನೇಕೆ ಬಿಟ್ಟಿರಿ ಎಂಬುದಕ್ಕೆ ಅವರ ಉತ್ತರ - "ನಾನು Jack of all trades but master of none" ಆಗಲು ಇಷ್ಟ ಪಡಲಿಲ್ಲಾ, ನನ್ನಲ್ಲಿ ಹರಿಯುತ್ತಿರುವ ಸಾಹಿತ್ಯ ಕಾರಂಜಿಗೆ ಒಮ್ಮುಖಿ ಕೊಡುವ ದೃಷ್ಟಿಯಿಂದ ಹಾಗೆ ಮಾಡಿದೆ ಎನ್ನುತ್ತಾರೆ.

ಗೀತರಚನೆಗಿಂತ ಕಾವ್ಯ ರಚನೆಯಲ್ಲೇ ಹೆಚ್ಚು ತೃಪ್ತಿ ಕಂಡಿರುವ ಇವರು, ಅದಕ್ಕೆ ಕೊಡುವ ಕಾರಣವೆಂದರೆ - "ಗೀತರಚನೆಲ್ಲಿ 'right word in a right place' ಆರಿಸುವುದು ಕಷ್ಟ. ಯಾರೋ ಕೊಟ್ಟ ಸನ್ನಿವೇಶ, ಭಾವನೆ ಹಾಗೂ ಸೀಮಿತವಾದ ವೇಳೆಯಲ್ಲಿ ಗೀತೆರಚಿಸಬೇಕಾಗುವುದರಿಂದ ಅದರಲ್ಲಿ ನನ್ನದೆಂಬುವುದರ ಪಾಲು ತುಂಬಾ ಕಡಿಮೆ. ಆದರೆ ಅದೇ ಒಂದು ಕವನ ಬರೆಯಲು ಬರೀ ಹದಿನೈದು - ಇಪ್ಪತ್ತು ನಿಮಿಷವೇ ಬೇಕಾದರೂ ಅದರ ಹಿಂದೆ ವಾರ-ತಿಂಗಳುಗಳ ಆಲೋಚನೆ ನನ್ನವೇ ಆದ ವಸ್ತು, ಶೈಲಿ, ಪ್ರಾಸಗಳು, ತೃಪ್ತಿಕೊಡದೆ ಇರದು ಎನ್ನುತ್ತಾರೆ.

ಅವರ ಇತ್ತಿಚಿನ 'ಮಣ್ಣಿನ ಮಾತುಗಳು' ಎಂಬ ಮುಕ್ತಕ, ನವೀನ ರೀತಿಯ ಭಾವ, ಅರ್ಥ ಹಾಗೂ ಶೈಲಿಯನ್ನು ಗರ್ಭೀಕರಿಸಿಕೊಂಡ ೭೮೬ ಚೌಪದಿಗಳ

ಪ್ರಸಿದ್ಧ ಕೃತಿ. ಈ ಲೋಕದ ಕಹಿ-ಸಿಹಿ ಎರಡನ್ನು ಹೆಕ್ಕಿ ಅರಗಿಸಿಕೊಂಡ ಕವಿ ಅವುಗಳಿಗೆ ಅಕ್ಷರಗಳ ಮೂರ್ತರೂಪ ಕೊಟ್ಟ ರೀತಿ ಶ್ಲಾಘನೀಯ. ಪ್ರೀತಿ, ಪ್ರೇಮ, ಮದುವೆ, ಅನ್ಯಾಯ, ದೌರ್ಜನ್ಯ, ಅಪ್ರಾಮಾಣಿಕತೆ, ಹಾಗೂ ಇಂದಿನ ಪೀಳಿಗೆಯಲ್ಲಿ ಕಣ್ಮರೆಯಾಗುತ್ತಿರುವ ಮಾನವೀಯ, ಮೌಲ್ಯಗಳ ಸ್ವಂತ ಪ್ರತಿಭೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಒಂದೊಂದು ಪದ್ಯವೂ ಒಂದೊಂದು ಸಾರವನ್ನು ಸಂಕ್ಷಿಪ್ತವಾಗಿ, ಸರಳವಾಗಿ, ನೇರವಾಗಿ ಸಾರುವ ಬಗೆ ವಿಸ್ಮಯ ಹುಟ್ಟಿಸುತ್ತದೆ. ಇಲ್ಲಿಯ ಅನೇಕ ಸಾಲುಗಳ ನುಡಿಮುತ್ತುಗಳಂತೆ ರೂಪ ಕೊಟ್ಟ ಬಗ್ಗೆ, ಇವರ ಇನ್ನೊಂದು ವಿಶೇಷತೆ. "ಹಾದಿ ತಪ್ಪಿದ ಬದುಕು ಗೂಟಾಡಿದ ಹಾಗೆ", "ಸುಳ್ಳು ಕಳ್ಳಿಯ ಹಾಗೆ - ಬಿದ್ದಲ್ಲಿ ಸಮೃದ್ಧ ಬೆಳೆ".

ಪ್ರೀತಿ ಪ್ರಗಾಥ, ಕವಿಯ ಜೀವನದಲ್ಲಿ ನಡೆದ ಪ್ರೀತಿಪರ ಹೋರಾಟವನ್ನು ಚಿತ್ರಿಸಿ, ಅಂದಿನ ಅವರ ಅಂತರ್ ಜಾತಿ ಪ್ರೇಮ ವಿವಾಹದ ಹಿಂದಿನ ನೋವು-ನರಳುವಿಕೆಯೊಡನೆ ಉಂಡ ಬೇವು - ಬೆಲ್ಲ ಮಾವು - ಬೇವುಗಳನ್ನು ಮುಂದಿಟ್ಟು ಆದರ್ಶ ದೀವಿಗೆಯಾದವರು. "ಮೆಚ್ಚಿದ ಮೇಲೆ ಮಾತು ಮೌನ, ಎಲ್ಲ ಬಂಗಾರ" ಎನ್ನುವ 'ಪ್ರೀತಿ ಪ್ರಗಾಥ', ವೇಣುಗೋಪಾಲ ಸೊರಬರು ಇದನ್ನೊಂದು "ದೊಡ್ಡರಂಗೇಗೌಡರ ಕಾವ್ಯ ಜೀವನದಲ್ಲಿಯ ಮೈಲಿಗಲ್ಲು" ಎಂದಿದ್ದಾರೆ.

"ಮೌನಸ್ಪಂದನ" ಸಂಕಲನದಲ್ಲಿ ತಾವು ಕಂಡ ಸತ್ಯವನ್ನು ಧೈರ್ಯವಾಗಿ ಪ್ರಾಮಾಣಿಕತೆಯಿಂದ, ಬಿಚ್ಚುಮನಸ್ಸಿನಿಂದ ಬರೆದು, ಬದುಕಿನ ಬೇರೆ-ಬೇರೆ ಬಣ್ಣಗಳಲ್ಲಿ ಅವರು ತೋರುವ ಅನನ್ಯ ಆಸಕ್ತಿ ಹಾಗೂ ನಿಷ್ಠೆಯನ್ನು ನಾವು ಗುರುತಿಸಬಹುದು.

ದೊಡ್ಡರಂಗೇಗೌಡರು ಸಮಾಜಕ್ಕೆ ತಮ್ಮ ಗೀತರಚನೆಯಿಂದ ತೃಪ್ತಿ ಕೊಟ್ಟರೂ ತಮಗೆ ಮಾತ್ರ ಕಾವ್ಯ ರಚನೆಯಲ್ಲಿ ಸಾಚಾ ಸಾಹಿತ್ಯದಲ್ಲಿ ತೃಪ್ತಿ ಸಿಕ್ಕಿರುವುದಾಗಿ ಹೇಳುತ್ತಾರೆ. ಅವರೊಬ್ಬ ಸ್ವಂತಿಕೆಯುಳ್ಳ ಸಾಹಿತ್ಯಲೋಕದಲ್ಲಿಂದು ಇಷ್ಟು ಬೆಟ್ಟದಷ್ಟು ಸೇವೆ ಮಾಡಿ ತಮ್ಮದೆ ಆದ ಒಂದು ಹಾದಿ ಕೊರೆದಿರುವ ಅಚ್ಚ ಸಾಹಿತ್ಯಕ ಕವಿ' ಎಂಬ ಪರಿಚಯದ ಕೊರತೆ ಇದೆ. ಗೀತೆರಚನೆಯಲ್ಲಿಯ ಇಷ್ಟು ಪ್ರಸಿದ್ಧಿ ಪಡೆದವರು, ತಾವೇ ಸ್ವತಃ ಆಯ್ದ ವಸ್ತುವಿನಿಂದ ಬರೆದ ಕವನಗಳಿಗೆ ಸಿಕ್ಕಬೇಕಾದ ಪುರಸ್ಕಾರ ಇನ್ನೂ ಸಿಕ್ಕಿಲ್ಲ.

"ನನ್ನದಲ್ಲದ ಬದುಕನ್ನು ನನ್ನದೆಂದು ಹೇಳಿಕೊಳ್ಳುವ, ಭ್ರಮೆ ನನಗಿಲ್ಲ" ಎನ್ನುವ ದೊಡ್ಡರಂಗೇಗೌಡರು 'Beauty is truth truth is beauty' ಎಂಬುದನ್ನು ನಂಬಿ, ನಡೆದ ಪ್ರಜ್ಞಾವಂತ ಕವಿ, ಅವರ ಒಟ್ಟಾರೆ ಕವನಗಳನ್ನು ಗಮನಿಸಿದಾಗ ಅವುಗಳಲ್ಲಿ ಅವಸರ, ಅತಿರೇಕಕ್ಕಿಂತ ಸರಳತೆ, ಸಾವಧಾನತೆಯೇ ಅವರ ಬರಹದ ಕೇಂದ್ರ ಬಿಂದು ಎನ್ನಿಸುತ್ತದೆ.

"ತಂಪಿನ ಗುಂಪಿನ ಕೇದಗೆ ವನವೇ/ತಂಪಿನ ಮಾಲೆಯ ಮಡಿದಿಹ ಮನವೆ/ ಮನಸನು ಕೇದಗೆ, ವನವನು ಮಾಡಿ/ ನೆರೆಹೊರೆಗೆಲ್ಲ ಪರಿಮಳ ಬೀರಿ/ಬದುಕುವುದಾಗಲಿ ನನ್ನಯ ಗುರಿ." ಇದು ಬಾಲಕನಾಗಿ ಬರೆದ ಪ್ರಥಮ ಕವಿತೆ, ಇಂದು ಅವರು ಕಾವ್ಯ ಕೇದಗೆಯ ವನದಲ್ಲಿ ಪರಿಮಳವಾಗಿ ಕನ್ನಡನಾಡ ತುಂಬೆಲ್ಲಾ ಪಸರಿಸಿದ್ದಾರೆ.

# ಬೆಳ್ಳಿ ತೆರೆಯ ಹಾಡಿಗೆ ಹಳ್ಳಿಯ ಸೊಗಡು

✍ ಜಿ. ಎನ್. ಮೋಹನ್.

"ನೋಟದಾಗೆ ನಗೆಯ ಮೀಟಿ ಮೋಜಿನಾಗೆ ಎಲ್ಲೆಯ ದಾಟಿ ಮೋಡಿಯ ಮಾಡಿದೋಳ ಪರಸಂಗ ಐತೆ; ಪರಸಂಗ ಐತೆ" ಅಥವಾ "ತೇರ ಏರಿ ಅಂಬರದಾಗೆ ನೇಸರ ನಗುತಾನೆ. ಮರಗಿಡ ತೂಗ್ಯಾವೆ ಚಿಲಿಪಿಲಿ ಹಕ್ಕಿ ಹಾಡ್ಯಾವೆ...." ಹಾಡು ಗೊತ್ತಿಲ್ಲದವರು ಯಾರು? ಪರಸಂಗದ ಗೆಂಡತಿಮ್ಮ ಎಂದ ತಕ್ಷಣ ಮೂವರ ಮುಖ ಕಣ್ಣ ಮುಂದೆ ನಿಲ್ಲುತ್ತವೆ. ಗೆಂಡತಿಮ್ಮನನ್ನು ಹುಟ್ಟುಹಾಕಿದ ಕೃಷ್ಣ ಆಲನಹಳ್ಳಿ, ಪುಸ್ತಕದ ಗೆಂಡತಿಮ್ಮನಿಗೆ ಜೀವಕೊಟ್ಟ ನಟ ಲೋಕೇಶ್. ಗೆಂಡತಿಮ್ಮನ ಪರಸಂಗಗಳಿಗೆ ತಮ್ಮ ಜೋಳಿಗೆಯಿಂದ ಹಾಡುಗಳನ್ನು ಮೊಗೆದು ಕೊಟ್ಟ ದೊಡ್ಡರಂಗೇಗೌಡ.

'ಮಾಗಿಯ ಕನಸು' ಚಿತ್ರಕ್ಕೆ ಗೀತೆ ರಚಿಸುವುದರ ಮೂಲಕ ಬೆಳ್ಳಿ ತೆರೆಗೆ ಲಗ್ಗೆ ಹಾಕಿದ ದೊಡ್ಡರಂಗೇಗೌಡರು ಜನಸಾಮಾನ್ಯರ ಮನಕ್ಕೆ ಮೋಡಿ ಹಾಕಿದ್ದು 'ಪರಸಂಗದ ಗೆಂಡತಿಮ್ಮ'ನ ಮೂಲಕ. ನಂತರ ಚಿತ್ರರಂಗದ ಅವಿಭಾಜ್ಯ ಅಂಗವಾಗಿ ಅರಳಿದ ಗೌಡರು ೨೦೦ ಚಿತ್ರಗಳ ಟೆಸ್ಟ್ ಕಣದಲ್ಲಿ ತ್ರಿಶತಕವನ್ನು ಯಶಸ್ವಿಯಾಗಿ ಬಾರಿಸಿದ್ದಾರೆ. ಬಾಲಿವುಡಿನ ಈಗಿನ ಕಣ್ಮಣಿ ಅನುರಾಧ ಪಡ್ವಾಲ್ ದೊಡ್ಡರಂಗೇಗೌಡರ ೩೨೫ನೇ ಗೀತೆಗೆ ತಮ್ಮ ಇನಿದನಿ ಕೂಡಿಸುವುದರ ಮೂಲಕ ಹೊಸ ಸಂಭ್ರಮ ಹರಡಿದ್ದಾರೆ.

ನನ್ನದು ಚಿತ್ರರಂಗದೊಂದಿಗೆ ಹದಿನೈದು ವರ್ಷದ ನಂಟು. ನನ್ನೊಳಗೆ ಉಕ್ಕಿಹರಿದ ಭಾವನೆಗಳೆಲ್ಲಾ ನಾನು ಚಿತ್ರರಂಗಕ್ಕೆ ನೀಡಿದ್ದೇನೆ. ಮನುಷ್ಯನ ಭಾವನೆಗಳಿಗೆ ಲಯವು ರೂಪು ನೀಡಿದರೆ ಅದು ಎಷ್ಟು ಹೃದಯಗಳಲ್ಲಿ ಭಾವನಾ ತರಂಗಗಳನ್ನು ಎಬ್ಬಿಸುತ್ತದೆ ಎಂದು ಆಶ್ಚರ್ಯ ಚಕಿತನಾಗಿದ್ದೇನೆ ಎನ್ನುವಾಗ ದೊಡ್ಡರಂಗೇಗೌಡರ ಮುಖದಲ್ಲಿ ಸಂತಸದ ಗೆರೆ ಚಿಮ್ಮುತ್ತದೆ.

ಯಶಸ್ಸಿನ ಗುಟ್ಟು: ದೊಡ್ಡರಂಗೇಗೌಡರ ಲೇಖನಿಗೆ ಹುಚ್ಚು ವೇಗವಿಲ್ಲ. ಪದಗಳ ಜೊತೆ ಗುದ್ದಾಡುವ ಸರ್ಕಸ್ ಗುಣವಿಲ್ಲ ಮನದಾಳದಲ್ಲಿ ಮೂಡುವ ಭಾವನೆಗಳ್ನು ಜನರೆದುರು ಬಿಚ್ಚಿಡುವ ಗೀತೆ ಇವರ ಯಶಸ್ಸಿನ ಹಿಂದಿರುವ ಗುಟ್ಟು ಜನರ ಸುಖದುಃಖ ಏಳು ಬೀಳುಗಳಿಗೆ ಕಾವ್ಯದ ಆಯಾಮ ನೀಡಿದೆ ದೊಡ್ಡರಂಗೇಗೌಡರು ಆ ಕಾರಣಕ್ಕಾಗಿಯೇ ಜನರಿಂದ ಹೆಚ್ಚು ಗುರುತಿಸಲ್ಪಟ್ಟ ಕವಿ.

ಹಾಡುಗಳಲೋಕಕ್ಕೆ : ದೊಡ್ಡರಂಗೇಗೌಡರು ಚಿತ್ರರಂಗಕ್ಕೆ ಧುಮುಕಿದ್ದು ಕೆ.ಎಸ್.ಎಲ್.ಸ್ವಾಮಿ (ರವಿ) ಮೂಲಕ, ಬೆಂಗಳೂರಿನ ಸೆನೆಟ್ ಹಾಲಿನಲ್ಲಿ ಬೇಂದ್ರೆಯವರ ಕಾವ್ಯದ ಬಗ್ಗೆ ಅತ್ಯುತ್ತಮ ಪ್ರಬಂಧ ಮಂಡಿಸಿರುವ

ದೊಡ್ಡರಂಗೇಗೌಡರನ್ನು ಪ್ರೇಕ್ಷಕ ವರ್ಗದಲ್ಲಿ ಕೆ.ಎಸ್.ಎಲ್. ಸ್ವಾಮಿ ಬಂದು ಕೈಕುಲುಕಿ ವಿಳಾಸ ಪಡೆದರು ಎರಡೂವರೆ ವರ್ಷಗಳ ನಂತರ ಸ್ವಾಮಿಯವರಿಂದ ಕರೆ ಬಂತು. ಗೌಡರು ಮದ್ರಾಸಿಗೆ ಹಾರಿದರು ಮಾಗಿಯ ಕನಸು ಚಿತ್ರದ ನಾಯಕ ಕವಿ ಮನಸ್ಸಿನವ. ಈ ಚಿತ್ರಕ್ಕೆ ಗೀತೆ ಕವಿಯಿಂದಲೇ ಆಗಬೇಕು ಎನ್ನುವ ಹಂಬಲ ರವಿಯವರದ್ದು. ಮೂರು ದಿನ ರಜ ಹಾಕಿದ ಗೌಡರು ಅರ್ಧ ಗಂಟೆಯಲ್ಲೇ ಗೀತೆ ರಚಿಸಿ ಸಂಗೀತ ನಿರ್ದೇಶಕ ವಿಜಯಭಾಸ್ಕರ್ ಕೈಗಿಟ್ಟಾಗ ರವಿಗೆ ಸಂತೃಪ್ತಿಯ ನೆಮ್ಮದಿ. ಗೀತೆ ಓದಿದ ವಿಜಯಭಾಸ್ಕರ್ ದೊಡ್ಡರಂಗೇಗೌಡರ ಬೆನ್ನುತಟ್ಟಿ ನನ್ನ ಸಂಗೀತ ನಿರ್ದೇಶನದಲ್ಲಿ ಮೊದಲ ಗೀತೆ ಬರೆದವರೆಲ್ಲಾ ಇಂದು ಚಿತ್ರರಂಗದ ಸ್ಟಾರುಗಳಾಗಿದ್ದಾರೆ. ನೀವು ಹೀಗಾಗಬೇಕು ಎಂದರು. ಅದು ನಿಜವಾಯಿತು. ಗೌಡರು ತ್ರಿಶಕದ ಮಳೆಗೆರೆದರು.

ವೇದನೆ: ೧೭೫ ಚಿತ್ರಗಳಲ್ಲಿ ಮೆಲುಕು ಹಾಕುವ ಅಸಂಖ್ಯ ಹಾಡುಗಳನ್ನು ಕೊಟ್ಟ ದೊಡ್ಡರಂಗೇಗೌಡರಿಗೆ ಈಗಿನ ಚಿತ್ರಗೀತೆ ಎಂದರೆ ಮುಖಮುರಿಯುತ್ತಾರೆ. ಮೊದಲು ಕುಟುಂಬವೆಲ್ಲಾ ಕುಳಿತು ನೋಡಬಹುದಾದ ಚಿತ್ರ ಎನ್ನುವುದು ಇಲ್ಲವಾಗುತ್ತಾ ಬಂತು. ಈಗ ಕುಟುಂಬವೆಲ್ಲಾ ಕೇಳಬಹುದಾದ ನೋಡಬಹುದಾದ ಚಿತ್ರಗೀತೆಯೂ ಮಾಯವಾಗುತ್ತಾ ಬಂದಿದೆ. ದೂರದರ್ಶನದಲ್ಲಿ ಚಿತ್ರಮಂಜರಿ ಆರಂಭವಾದರೆ ಮಕ್ಕಳನ್ನು ಒಳಗೆ ಹೋಗಿ ಓದಿಕೊಳ್ಳಿ ಎನ್ನುವ ಸ್ಥಿತಿ ತಲುಪಿದ್ದೇವೆ ಎಂದು ವಿಷಾದ ವ್ಯಕ್ತಪಡಿಸುತ್ತಾರೆ.

ಕೆಟ್ಟ ವ್ಯಾಕರಣ : 'ಸಂಗೀತದ ವ್ಯಾಕರಣ ಈಗ ಕೆಟ್ಟು ಹೋಗಿದೆ. ಬದುಕಿನಲ್ಲಿ ಶೃಂಗಾರ ಇದೆ. ಅಶ್ಲೀಲತೆ ಎನ್ನುವುದು ಇಲ್ಲ. ಚಿತ್ರ ಗೀತೆ ಈಗ ಅಶ್ಲೀಲತೆಯತ್ತ ಜಾರುತ್ತಿದೆ.

ಪ್ರೀತಿಗೆ ಎಲ್ಲರೂ ತಲೆಬಾಗಬೇಕು ಅಶ್ಲೀಲಕ್ಕಲ್ಲ.

ನಮ್ಮ ಮನಸ್ಸನ್ನು ಕಾಯುವ ನ್ಯಾಯಾಧೀಶ, ಪೋಲೀಸ್ ಇಲ್ಲವಾದ ದಿನ ಇಂತಹ ಗೀತೆ ಹುಟ್ಟುತ್ತದೆ. ಮನಸ್ಸಿನ ನ್ಯಾಯಾಧೀಶನನ್ನ ಕೊಂದು ಮುಂದೆ ಹೋಗಲು ಹೇಗೆ ಸಾಧ್ಯ ? ಎಂದು ದೊಡ್ಡರಂಗೇಗೌಡರು ಪ್ರಶ್ನಿಸುತ್ತಾರೆ.

ಗೀತೆರಚನೆಕಾರನಿಗೆ ನೈತಿಕ ಹೊಣೆ ಇರಬೇಕು. ಸಿನಿಮಾದಲ್ಲಿ ಒಳ್ಳೆಯ ವೈಚಾರಿಕತೆ ಗೀತೆಗಳನ್ನು ನೀಡಲು ಸಾಧ್ಯ ಎನ್ನುವ ಗೌಡರಿಗೆ ತಾವು ಚಿತ್ರಗೀತೆಯ ಪದಕೋಶವನ್ನು ಬದಲು ಮಾಡಲು ಒಂದಿಷ್ಟಾದರೂ ಪ್ರಯತ್ನಿಸಿದ್ದೇನೆ ಎನ್ನುವ ತೃಪ್ತಿಯಿದೆ.

ಒಂದು ಹಾಡು ೧೫೦ಪದಗಳ ಸುತ್ತ ಮಾತ್ರ ಸುತ್ತುತ್ತದೆ ಎನ್ನುವ ಭಾವನೆ ಇತ್ತು, ಅದು ಈಗ ಬದಲಾಗಿದೆ. ಎನ್ನುವ ಭಾವನೆ ಇತ್ತು, ಅದು ಈಗ ಬದಲಾಗಿದೆ 'ಒಬ್ಬ ಉತ್ತಮ ಕವಿ ಪ್ರತಿಮೆಗಳ ಮೂಲಕ ಮಾತನಾಡುತ್ತಾನೆ' ಎಂಬುದನ್ನು ನಿಜವಾಗಿಸಲು ಪ್ರಯತ್ನಿಸಿದ್ದೇನೆ. ಚಿತ್ರಗೀತೆಗಳಿಗೆ ಗ್ರಾಮೀಣ ಸೊಗಡು ತುಂಬಿದ ಹೆಮ್ಮೆ ನನ್ನದು. ಅಂಟುಪುರ್ಲೆ, ಸೂಲಂಗಿ, ಹೊಂಬಾಳೆ, ಅಂಬರ, ಮುಂತಾದ ಎಷ್ಟೋ ನಿರ್ದೇಶಕರುಗಳು ಕೇಳದೇ ಇದ್ದ ಪದಗಳನ್ನು ನಾನು ನೀಡಿದ್ದೇನೆ.

ಚಿತ್ರಗೀತೆಯ ಮೂಲಕವೂ ಅತ್ಯುತ್ತಮ ಸಾಹಿತ್ಯವನ್ನು ನೀಡಬಹುದು ಎನ್ನುವ ದೊಡ್ಡರಂಗೇಗೌಡರು ಉತ್ತಮ ನಿರ್ದೇಶಕ ಚಿತ್ರಗೀತೆ ರಚನೆಕಾರರ ಸತ್ವವನ್ನು ದುಡಿಸಿಕೊಳ್ಳಬೇಕು ಎನ್ನುತ್ತಾರೆ.

ಲೇಖನಿ ಭ್ರಷ್ಟ ಮಾಡಿಕೊಳ್ಳಲು ನಾನು ಎಂದೂ ಸಿದ್ಧನಿಲ್ಲ ಎನ್ನುವ ಈ ಖಂಡಿತವಾದಿ ಚಿತ್ರಗೀತೆಗಳಿಗೆ ಹಳ್ಳಿಯ ಲಯವನ್ನು ಬೆಸೆದವರು. ತೂಗುವ ತಂಗಾಳಿ ಬಳುಕುವ ಗಿಡ. ಚಿಲಿಪಿಲಿಗುಟ್ಟುವ ಹಕ್ಕಿ ಹಾಡು ಮಾತ್ರವೇ ಅಲ್ಲದೆ ಚಿತ್ರಗೀತೆಗೆ ಪ್ರಪ್ರಥಮ ಬಾರಿಗೆ ಕಂಸಾಳೆ ಬಳಸಲು ಕಾರಣವಾದರು. ಪರಸಂಗದ ಗೆಂಡತಿಮ್ಮದ ಎಲ್ಲಾ ಹಾಡುಗಳನ್ನು ಮಾತ್ರವೇ ಅಲ್ಲದೆ ಸಾಂದರ್ಭಿಕವಾಗಿ ಆ ಚಿತ್ರಕ್ಕೆ ೨೫ ತ್ರಿಪದಿಗಳನ್ನು ಬರೆದ ಹೆಮ್ಮೆ ಅವರದು.

ಹಾಡಿನ ಕೆನೆ: ಪಲ್ಲವಿ ಹಾಡಿನ ಕೆನೆ ಎನ್ನುವ ಗೌಡರು ಒಂದು ಹಾಡು ಹೇಗೆ ಮುನ್ನಡೆಯುತ್ತದೆ ಎನ್ನುವುದನ್ನು ಪಲ್ಲವಿ ನಿರ್ಧರಿಸಿಬಿಡುತ್ತದೆ ಒಳ್ಳೆಯ ಪಲ್ಲವಿ ಸಿದ್ಧವಾಯಿತು ಎಂದರೆ ಒಳ್ಳೆಯ ಗೀತೆ ಹುಟ್ಟಿತು ಎಂದೇ ಅರ್ಥ. ಗೀತ ರಚನೆಕಾರನಿಗೆ ಏಕಾಂತದ ಅವಶ್ಯಕತೆಯೂ ಇದೆ. ಗೀತೆ ರಚಿಸುವಾಗ ವಾತಾವರಣವೂ ಮುಖ್ಯ ಎಂಬುದನ್ನು ಪುಟ್ಟಣ್ಣಕಣಗಾಲ್ ಮನಗಂಡಿದ್ದರು. ಗೀತ ರಚನೆಕಾರನ ಮನದೊಳಗೆ ಲಹರಿಗಳು ಹಾರಾಡಲು ಸಾಧ್ಯವಾಗುವಂತಹ ಸೆಟ್ ಪುಟ್ಟಣ್ಣ ನಿರ್ಮಾಣ ಮಾಡುತ್ತಿದ್ದರು ಎಂದು ನೆನೆಸುತ್ತಾರೆ.

ದೊಡ್ಡರಂಗೇಗೌಡರೊಳಗೆ ಇಬ್ಬರು ಕವಿಗಳಿದ್ದಾರೆ.ಒಬ್ಬಾತ ತನ್ನ ಮನದ ಹೊಯ್ದಾಟಕ್ಕೆ ರಾಗ ನೀಡುತ್ತಾನೆ. ಮತ್ತೊಬ್ಬಾತ ರಾಗಗಳಿಗೆ ಮನದ ಹೊಯ್ದಾಟ ಬಡಿಸುತ್ತಾನೆ.

ಗೌಡರೊಳಗೆ ಈ ಇಬ್ಬರೂ ಯಶಸ್ವಿಯಾಗಿದ್ದಾರೆ ಎನ್ನುವುದೇ ಇವರ ಹಿರಿಮೆಯನ್ನು ಸಾರುತ್ತದೆ. ದೊಡ್ಡರಂಗೇಗೌಡರ ಚಿತ್ರಗೀತೆಗಳು ಅದೆಷ್ಟೋ ಉತ್ತಮ ಕವನವಾಗಿಯೂ ಯಶಸ್ವಿಯಾಗಿವೆ. ಬಹುಶಃ ಚಿತ್ರರಂಗದಲ್ಲಿ ಸಿದ್ಧಪಡಿಸಿದ ರಾಗಕ್ಕೆ ಹೊರ ಹೊಮ್ಮಿದ ಕವನವೊಂದು ಪಠ್ಯದಲ್ಲೇ ಸೇರಿಸಲ್ಪಟ್ಟಿದ್ದರೆ ಅದು ದೊಡ್ಡರಂಗೇಗೌಡರೊಬ್ಬರದೇ ಅದೇ ಅವರ ಯಶಸ್ಸಿನ ಗುಟ್ಟೂ ಕೂಡಾ.

## ಸುಭಾಷಿತರು

✍ ಎಸ್. ಕೆ. ಕರೀಂಖಾನ್

ದೊಡ್ಡರಂಗೇಗೌಡರು ಕರ್ನಾಟಕದ ಮೂರ್ಧನ್ಯ ಕವಿಗಳಲ್ಲೊಬ್ಬರು, ಗದ್ಯ ಪದ್ಯಗಳೆರಡರಲ್ಲೂ ಪರಿಣತರು, ಸಾಹಿತ್ಯದ ಸರ್ವಪ್ರಾಕಾರಗಳಲ್ಲಿಯೂ ಅಭಿಜ್ಞತೆಯನ್ನು ಗಳಿಸಿದವರು. ಮೇಲಾಗಿ ಸುಭಾಷಿತರು.

೨೬೨ / ಸೃಜನ ಸಂಪನ್ನ



## ದೊರಂಗೌ ಅವರ ಧ್ವನಿಸುರಳಿಗಳು

೧) ಮಾವು ಬೇವು : ಸಂಗೀತ ನಿರ್ದೇಶಕ : ಸಿ. ಅಶ್ವತ್ಥ್

೨) ತಂಗಾಳಿ : ಸಂಗೀತ ನಿರ್ದೇಶಕರು : ಮಂಜುಳಾಗುರುರಾಜ್

೩) ಪ್ರೇಮಪಯಣ : ಸಂಗೀತ ನಿರ್ದೇಶಕರು : ಬಿ. ವಿ. ಶ್ರೀನಿವಾಸ್

೪) ಹೋಳಿ ಹುಣ್ಣಿಮೆ : ಸಂಗೀತ ನಿರ್ದೇಶಕರು : ಮನೋರಂಜನ್ ಪ್ರಭಾಕರ್

೫) ಗೀತ ವೈಭವ : ಸಂಗೀತ ನಿರ್ದೇಶಕರು : ದಾಮೋದರ್ ಆರ್.

೬) ಪ್ರಾಯ ಮೂಡೈತೆ : ಸಂಗೀತ ನಿರ್ದೇಶಕರು : ರವಿ ಶೆಣೈ

೭) ಸೋಬಾನೆ ಸೋಬಾನೆ : ಸಂಗೀತ ನಿರ್ದೇಶಕರು : ಆರ್. ದಾಮೋದರ್

೮) ಪ್ರೀತಿ ಹಕ್ಕಿ : ಸಂಗೀತ ನಿರ್ದೇಶಕರು : ಹೇಮಾಂತ

೯) ಶ್ರೀ ಸಿದ್ದೇಶ್ವರ ಸ್ತುತಿ : ಸಂಗೀತ ನಿರ್ದೇಶಕರು : ಆರ್ ದಾಮೋದರ್

೧೦) ಕಾವ್ಯಾಂಜಲಿ : ಸಂಗೀತ ನಿರ್ದೇಶಕರು : ಉಪೇಂದ್ರ ಕುಮಾರ್

೧೧) ಶ್ರೀ ಸನ್ನಿಧಿ : ಸಂಗೀತ ನಿರ್ದೇಶಕರು : ಬಿ. ವಿ. ಶ್ರೀನಿವಾಸ್

೧೨) ಸ್ವಾಮಿ ಅಯ್ಯಪ್ಪ ಭಕ್ತಿ ಗೀತಾಂಜಲಿ : ರವಿ ಶೈಣೈ

೧೩) ಶ್ರೀ ಮಲೆಯ ಮಹದೇಶ್ವರ : ಸಂಗೀತ ನಿರ್ದೇಶಕರು : ಜಿ.ವಿ. ಅತ್ರಿ

೧೪) ಶ್ರೀ ಆದಿ ಚುಂಚನಗಿರಿ : ಸಂಗೀತ ನಿರ್ದೇಶಕರು : ಉಪೇಂದ್ರಕುಮಾರ್

೧೫) ಗೊರವಂಕ : ಸಂಗೀತ ನಿರ್ದೇಶಕ : ಬಾಲು-ಶರ್ಮ

೧೬) ಸ್ನೇಹ ಸಂಪದ : ಸಂಗೀತ ನಿರ್ದೇಶಕ : ಆರ್. ದಾಮೋದರ್

# ದೊಡ್ಡರಂಗೇಗೌಡರ ಕೃತಿಗಳು

## ನವ್ಯ ಕಾವ್ಯ

ಜಗಲಿ ಹತ್ತಿ ಇಳಿದು
ಕಣ್ಣು ನಾಲಗೆ ಕಡಲು
ನಾಡಾಡಿ
ಮೌನ ಸ್ಪಂದನ
ಏಳು ಬೀಳಿನ ಹಾದಿ
ಚದುರಂಗದ ಕುದುರೆಗಳು
ಐವತ್ತರ ಐಸಿರಿ

## ಭಾವಗೀತೆಗಳು

ಗೀತ ಗಾರುಡಿ
ಹೋಳಿ ಹುಣ್ಣಿಮೆ
ಪ್ರೇಮಾಂಜಲಿ
ತೀರದ ತುಡಿತ
ಕಾವ್ಯ ಕಲ್ಯಾಣಿ
ಭಾವ ಭಾಗೀರಥಿ
ತಾಳ-ಮೇಳ
ಗೀತ ಗಂಗೋತ್ರಿ

## ಪ್ರಗಾಥ

ಪ್ರೀತಿ ಪ್ರಗಾಥ
ಹಳ್ಳಿ ಹುಡುಗಿ ಹಾಡುಪಾಡು

## ಮುಕ್ತಕಗಳು

ಮಣ್ಣಿನ ಮಾತುಗಳು
ಮಿಂಚಿನ ಗೊಂಚಲು

ಸಾಂಸ್ಕೃತಿಕ ಜಗತ್ತೇ ಒಂದು ವಿಶಿಷ್ಟ ಲೋಕ. ಎಲ್ಲರಿಗೂ ಮುಕ್ತ ಅವಕಾಶವಿದ್ದರೂ, ಪ್ರತಿಭಾವಂತರು ಮಾತ್ರ ತಮ್ಮ ಸ್ವೋಪಜ್ಞತೆ ಮೆರೆದು ಅಕ್ಷರ ಲೋಕದ ಅರಮನೆಯಲ್ಲಿ ಶಾಶ್ವತಸ್ಥಾನ ಗಳಿಸಿ ನೆಲೆ ನಿಂತುಬಿಡುತ್ತಾರೆ.

ಈ ಪರಂಪರೆಗೆ ಸೇರಿದ ಅಭಿಜಾತ ಕವಿ ದೊರಂಗೌ. ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕಳೆದ 30 ವರ್ಷದಿಂದಲೂ ಕಾವ್ಯಕೃಷಿಕನಾಗಿ ಬೆಳೆದಿರುವ ಅವರಿಗೆ ಐವತ್ತು ತುಂಬುತ್ತಿರುವ ಸಂದರ್ಭದಲ್ಲಿ ಅವರ ಅಭಿಮಾನಿಗಳು ಸೇರಿ ಅರ್ಪಿಸುತ್ತಿರುವ 'ಸೃಜನ ಸಂಪನ್ನ', ದೊರಂಗೌ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿ.

ಕೃತಿಯ ಸಂಪಾದಕನ ಹೊಣೆ ಹೊತ್ತು ಅಭಿನಂದನಾ ಗ್ರಂಥ ಪ್ರಕಟಣೆಯ ಪ್ರಯತ್ನಕ್ಕೆ ಕೈ ಹಾಕಿದ ತರುಣ, ಬುಕ್ಕಾಪಟ್ಣ ವಾಸು ಸಾಹಸ ಅಭಿನಂದನಾರ್ಹ. ಕನ್ನಡದ ಶ್ರೇಷ್ಠ ಕವಿಯೊಬ್ಬರಿಗೆ ಅರ್ಪಿತವಾಗುತ್ತಿರುವ ಈ ಕೃತಿ ಪ್ರಕಟಿಸುತ್ತಿರುವ ಸುಯೋಗವೇ ನಮ್ಮ ಹೆಮ್ಮೆ.

ಪ್ರಕಾಶಕರು

